|| ಶ್ರೀಃ ||

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೭

ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1947

ಶ್ರೀಶಿವಾಭ್ಯಾಂ ನಮಃ

# ಮುನ್ನುಡಿ

ಮನುಷ್ಯನಾಗಿ ಜನಿಸಿದವನು ದೇವರನ್ನು ಸಾಕ್ಷಾತ್ಕರಿಸಿಕೊಳ್ಳದಿದ್ದರೆ ಅವನ ಜೀವನ ವ್ಯರ್ಥವೆನಿಸುವುದು. ದೇವರನ್ನು ನೋಡುವುದಕ್ಕೆ ಊರೂರು ಸುತ್ತಬೇಕಿಲ್ಲ. ದೇವರ ದರ್ಶನಕ್ಕಾಗಿ ಅಲ್ಲಲ್ಲಿ ಅಲೆಯುವವರು, ಕೈಯಲ್ಲಿ ದೀಪ ಹಿಡಿದು ಅದರಿಂದ ಕೆಂಡವಮಾಡಿಕೊಳ್ಳಲಾರದೆ, ಮನೆಮನೆಗೆ ಬೆಂಕಿಗಾಗಿ ಹೋದಂತೆ ಅಶಕ್ತರೆನಿಸುವರು. ದೇವರು ಮನುಷ್ಯನ ಮನದಲ್ಲಿಯೇ ಇದ್ದಾನೆ. ಆದರೆ ಅವನನ್ನು ಸಾಕ್ಷಾತ್ಕರಿಸಿಕೊಳ್ಳಲು ಮಾನವನು ಬಾಲ್ಯದಿಂದಲೇ ಸಂಸ್ಕಾರಿಯಾಗಬೇಕು. ಜೀವನವನ್ನೆಲ್ಲಾ ಸಂಸಾರಕ್ಕೆ ತೆತ್ತು ಕೊನೆಕೊನೆಯ ವಯಸ್ಸಿನಲ್ಲಿ ದೇವರನ್ನು ಧ್ಯಾನಿಸುವೆನೆಂಬುದು ವಿವೇಕಿಗಳ ಮಾತಲ್ಲ. ದೇವರನ್ನು ಒಲಿಸಿಕೊಳ್ಳಲು ಮನುಷ್ಯನು ಮೊದಲಿನಿಂದಲೂ ತನ್ನ ದೇಹ, ಮನಸ್ಸು, ತನಗೆ ಸಂಬಂಧಿಸಿದ ಸಕಲ ವಸ್ತುಗಳು, ಇವೆಲ್ಲವನ್ನೂ ಸ್ವಾಮಿಗೆ ಸಮರ್ಪಿಸುತ್ತಿರಬೇಕು. ವಿವೇಕ, ವೈರಾಗ್ಯಗಳು ದೈವಸಾಕ್ಷಾತ್ಕಾರಕ್ಕೆ ಅತ್ಯಗತ್ಯ. ದೇವಾಲಯದಂತಿರುವ ನಮ್ಮ ದೇಹದಲ್ಲಿ ಕಶ್ಮಲಭಾವಗಳನ್ನು ಮೊದಲು ದೂರೀಕರಿಸಬೇಕು. ಸದ್ಗುರುವೊಬ್ಬನ ಉಪದೇಶವನ್ನು ಸ್ವೀಕರಿಸಿ, ಅನನ್ಯಭಾವನೆಯಿಂದ ಅದರಲ್ಲಿ ಮುಂದುವರಿದು ಸುಸಂಸ್ಕಾರಿಯಾಗಬೇಕು. ದೈವಾನುಗ್ರಹ ಪಡೆದಿರುವ ಮಹನೀಯರ ಚರಿತೆಗಳನ್ನು ಶ್ರವಣಮಾಡಬೇಕು. ಇಷ್ಟರಿಂದಲೇ ಸಾಮಾನ್ಯಮಾನವನು ಭಗವತ್ಪ್ರೀತಿಯನ್ನು ಸಂಪಾದಿಸಿ ಐಹಿಕಾಮುಷ್ಮಿಕಗಳ ಸ್ಥಿರಸುಖವನ್ನು ಪಡೆಯುವನೆಂಬುದರಲ್ಲಿ ಸಂಶಯವಿಲ್ಲ. ಪ್ರತಿ ಮಾನವನೂ, ಶ್ರೀಶಂಕರಾಚಾರ್ಯರಂತೆ ಸಂನ್ಯಾಸಿಗಳಾಗಿಯೋ, ವಸಿಷ್ಠವಾಮದೇವರಂತೆ ಬ್ರಹ್ಮರ್ಷಿಗಳಾಗಿಯೋ, ಪ್ರಹ್ಲಾದ ಹರಿಶ್ಚಂದ್ರರಂತೆ ಕಷ್ಟಸಹಿಷ್ಣುಗಳಾಗಿಯೋ ಇದ್ದು ಮುಕ್ತಿಯನ್ನು ಪಡೆಯಲಾಗುವುದಿಲ್ಲ. ಸಂಸಾರಿಗಳ ಮಧ್ಯೆ ಸಂಸಾರಿಗಳಾಗಿ, ಪ್ರಜೆಗಳಲ್ಲಿ ಒಬ್ಬರಾಗಿ, ಐಹಿಕಸುಖದಲ್ಲಿ ಬೆರೆತು, ವಿವೇಕಿಗಳೆನಿಸಿ ಆಮುಷ್ಮಿಕವನ್ನು ಸಾಧಿಸಲು ಇಂತಹ ಪುರಾಣೇತಿಹಾಸಗ್ರಂಥಗಳ ಪಠನೆಯು ಅತ್ಯಾವಶ್ಯಕ.

ಶಿವರಹಸ್ಯಗ್ರಂಥದ ಮೂರನೆಯ ಅಂಶದ ಉತ್ತರಾರ್ಧವು ಈ ಪ್ರತಿಯ ಮೂಲಕ ಪ್ರಕಾಶವಾಗುತ್ತಿದೆ. ಇದರಲ್ಲಿ ರಾಜಪುತ್ರನೊಬ್ಬನು ರಾಜ್ಯಭಾರದಲ್ಲಿ ಸಮರ್ಥನಾಗಿದ್ದು ರಾಜಭೋಗದಲ್ಲಿ ವೈರಾಗ್ಯತಾಳಿ, ಶಿವಲಿಂಗವಿರುವ ಪ್ರದೇಶವೇ

ಪುಣ್ಯಸ್ಥಳವೆಂದು ಭಾವಿಸಿ ಅಲ್ಲಿಗೆ ಏಕಾಕಿಯಾಗಿ ಬರುವನು. ಅಲ್ಲಿಯೂ ಬೇರೆ ರಾಜಪತ್ನಿಯೊಬ್ಬಳು ಅವನನ್ನು ಮೋಹಿಸುವಳು. ಅವನ್ನರಿತ ರಾಜಪುತ್ರನು ಶಿವಭಕ್ತಿಯುತವಾದ ಕೆಲವು ವೈರಾಗ್ಯದ ಮಾತುಗಳನ್ನಾಡುವನು. ಆ ಮಾತುಗಳು ಎಂತಹವನನ್ನಾದರೂ ವೈರಾಗ್ಯಮಾರ್ಗಕ್ಕೆ ಎಳೆಯದಿರಲಾರವು. ಶಿವಪಾರಮ್ಯ ಪ್ರತಿಪಾದನೆಯ ದೃಷ್ಟಿಯಿಂದ ಅಲ್ಲಲ್ಲಿ ಅನ್ಯದೇವತೆಗಳ ಶಕ್ತಿಸಾಮರ್ಥ್ಯಗಳನ್ನು ಕೀಳಾಗಿಯೇ ಪ್ರತಿಪಾದಿಸಿರುವರು. ಇದು ಪ್ರಾಚೀನ ಪುರಾಣೇತಿಹಾಸಗಳಲ್ಲಿ ಹೊಸವಿಷಯವಲ್ಲ. ಇಲ್ಲಿ ಬರುವ ಬಾಲಕನ ವೃತ್ತಾಂತ, ಆಯುರ್ಮೂರ್ತಿಯ ವಿಚಾರ, ಅಯೋನಿಜ ಕನ್ಯಾವರರ ಕಥೆ, ಇನ್ನೂ ಅಲ್ಲಲ್ಲಿ ಬರುವ ಜನ್ಮಾಂತರದಲ್ಲಿ ನಡೆದ ಸುಖದುಃಖಾನುಭವಗಳಿಗೆ ಸಂಬಂಧಿಸಿದ ಕಥೆಗಳು, ಇವು ಕೇವಲ ಭಕ್ತಿಮಾತ್ರಪ್ರಧಾನವಾಗಿ ಕಂಡು ಬರುವ ಸನ್ನಿವೇಶಗಳೆನಿಸುವುವು. ಶಿವಭಕ್ತಿಭಾವದಿಂದ ಓದುವ ವಾಚಕರಿಗೆ ಮಾತ್ರ ಇವುಗಳಲ್ಲಿ ಶ್ರದ್ಧೆಯುಂಟಾಗುವುದು ಗ್ರಂಥಕಾರರು ಶಿವಮೂರ್ತಿಧ್ಯಾನ, ಸ್ವಾಪರಾಧಕ್ಷಮಾಪಣ, ಶಿವದ್ವೇಷಕರಿಗೆ ಒದಗುವ ಕಷ್ಟಪರಂಪರೆಗಳು, ಇವುಗಳನ್ನು ವಿವರಿಸುವ ಸಂದರ್ಭದಲ್ಲಿ ಮೈಮರೆತು ತಲ್ಲೀನರಾಗಿ ಸರಸ್ವತಿಯ ಸಾರವನ್ನೇ ಗಂಗಾಪ್ರವಾಹದಂತೆ ಹರಿಸಿಬಿಡುವರು. ಒಂದೊಂದು ವೇಳೆ ಗ್ರಂಥಕಾರರು ಪ್ರಾಸದ ವೈಖರಿಯನ್ನು ಜನತೆಯ ಮುಂದಿಡಲು ಅದ್ಭುತವಾದ ಪದವಿನ್ಯಾಸಕ್ಕೆ ತೊಡಗುವರು. ಅಂತೂ ಭಕ್ತಿ, ತತ್ತ್ವ, ಕಾವ್ಯದ ಸೊಬಗು ಇಂತಹ ಅಮೂಲ್ಯವಿಷಯಗಳನ್ನು ತಿಳಿಸುವ ಗ್ರಂಥರತ್ನಗಳು ಈ ಶಿವರಹಸ್ಯಸಾಗರದಲ್ಲಿ ವಿರಾಜಿಸುತ್ತಿವೆ ಎಂಬುದನ್ನು ವಾಚಕರು ಸುಲಭವಾಗಿ ಅರಿಯಬೇಕು.

ಅತ್ಯಂತ ಗೂಢವಾಗಿದ್ದ ಈ ಸಾರಸ್ವತಸಂಪತ್ತನ್ನು ಪ್ರಜಾವರ್ಗಕ್ಕೆ ಸೂರೆ ಮಾಡಿ, ಪ್ರಜೆಗಳೊಡನೆ ತಾವೂ ಆನಂದವನ್ನು ಪಡೆಯುತ್ತಿರುವ ನಮ್ಮ ಶ್ರೀಮನ್ಮಹಾರಾಜರು **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ.,** ಮಹಾಪ್ರಭುಗಳು ಸರ್ವೇಶ್ವರನ ಅನುಗ್ರಹದಿಂದ ಚಿರಾಯುಷ್ಮಂತರಾಗಿ, ಕುಟುಂಬ ಪ್ರಜಾ ಪರಿವಾರಗಳೊಡನೆ ಸುಖದಿಂದ ಜಯಶೀಲರಾಗಲಿ ಎಂದು ನಾನು ಪರಮಾತ್ಮನನ್ನು ಸದಾ ಪ್ರಾರ್ಥಿಸುತ್ತೇನೆ.

ಸರ್ವಜಿನ್ನಾಮ ಸಂವತ್ಸರದ
ನಿಜಶ್ರಾವಣ ಕೃಷ್ಣ ಪಂಚಮೀ
ಶುಕ್ರವಾರ
5—9—1947.

ಇತಿ ಸಜ್ಜನವಿಧೇಯ,
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ,**
ಆಸ್ಥಾನವಿದ್ವಾನ್, ಮೈಸೂರು.

# ಶ್ರೀಶಿವರಹಸ್ಯದ ಹರನಾಮಕವಾದ ತೃತೀಯಾಂಶ ಉತ್ತರಾರ್ಧದ ವಿಷಯಾನುಕ್ರಮಣಿಕಾ

## (ಒಂದರಿಂದ ಹದಿನಾರು ಅಧ್ಯಾಯಗಳು ಪೂರ್ತಿಯಾಗಿ)

## ಏಳನೆಯ ಅಧ್ಯಾಯ



## ಎಂಟನೆಯ ಅಧ್ಯಾಯ



## ಒಂಬತ್ತನೆಯ ಅಧ್ಯಾಯ



## ಹತ್ತನೆಯ ಅಧ್ಯಾಯ

## ಹನ್ನೊಂದನೆಯ ಅಧ್ಯಾಯ



## ಹನ್ನೆರಡನೆಯ ಅಧ್ಯಾಯ



## ಹದಿಮೂರನೆಯ ಅಧ್ಯಾಯ



## ಹದಿನಾಲ್ಕನೆಯ ಅಧ್ಯಾಯ



## ಹದಿನೈದನೆಯ ಅಧ್ಯಾಯ



## ಹದಿನಾರನೆಯ ಅಧ್ಯಾಯ

|| ಶ್ರೀಃ ||

# ಅಥ ಶ್ರೀ ಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಪ್ರಥಮೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತಿ ತದ್ವಚನಂ ಶ್ರುತ್ವಾ ಸಾ ರಾಜ್ಞೀ ಭಯವಿಹ್ವಲಾ ।
ವೈರಾಗ್ಯಂ ಪರಮಂ ಪ್ರಾಪ್ಯ ತಮುವಾಚ ನೃಪೋತ್ತಮಂ ||೧||

ನ ಶಾನ್ತಿಮೇತಿ ಸಹಸಾ ಘೋರಸಂಸಾರವಾಸನಾ ।
ಕಥಂ ವಾ ತಸ್ಯ ಶಾನ್ತಿಸ್ಸ್ಯಾದುಪಾಯಃ ಕಸ್ತ್ವಯಾ ಮತಃ ||೨||

## ಶ್ರೀಶಿವರಹಸ್ಯ ತೃತೀಯಾಂಶದ ಉತ್ತರಾರ್ಧದಲ್ಲಿ ಒಂದನೆಯ ಅಧ್ಯಾಯ

ಶಿವರಾಜಪುತ್ರನು ಆಡಿದ ವೈರಾಗ್ಯಯುತವಾದ ಮಾತನ್ನು ಕೇಳಿ ಆ ರಾಣಿಯು ಭಯದಿಂದ ಕೂಡಿ, ಸ್ವಲ್ಪ ವಿವೇಕವನ್ನು ತಳೆದು ಆ ರಾಜನನ್ನು ಕುರಿತು ಹೀಗೆ ಹೇಳಿದಳು. ಎಂದು ಯಾಜ್ಞ್ಯವಲ್ಕ್ಯಋಷಿಯು ರಾಜನಿಗೆ ಶಿವ ಪೂಜಕನ ಮಹಿಮೆಯನ್ನು ವಿವರಿಸತೊಡಗಿದನು. ||೧||

ಬಹಳ ಮೋಹದಾಯಕವಾಗಿರುವ ಈ ಸಂಸಾರದ ದುಃಖವು ಸಾಮಾನ್ಯವಾದ ಉಪಾಯಗಳಿಂದ ಶಾಂತಿಯಾಗುವಂತಿಲ್ಲ. ಆದ್ದರಿಂದ ಇದಕ್ಕೆ ಸಾಧಕವಾದ ಉಪಾಯವು ಯಾವುದೆಂಬುದನ್ನು ತಿಳಿಸು. ||೨||

ಅಪಾರಘೋರಸಂಸಾರವಾಸನಾಚ್ಯುತಿಸಾಧನಂ ।
ಶಿವಾರ್ಚನಮಿತಿ ಜ್ಞಾತಂ ತತ್ಕರ್ತವ್ಯಂ ಕಥಂ ವದ ॥೩॥

ತ್ವಯಾ ತನೋಃ ಕುತ್ಸಿತತ್ವಂ ವಸ್ತುತಸ್ತು ನಿರೂಪಿತಂ ।
ತತ್ಕುತ್ಸಿತಂ ನ ಸಂದೇಹೋ ದೃಶ್ಯತೇ ಚ ತಥಾ ಖಲು ॥೪॥

ಅಸ್ಯ ದೇಹಸ್ಯ ಸೌಭಾಗ್ಯಮಿದಮೇತಾವದೇವ ಹಿ ।
ಶಿವಾರ್ಚನೋಪಯುಕ್ತತ್ವಂ ಶರೀರಸ್ಯಾವಧಾರಿತಂ ॥೫॥

ಅತಃ ಪರಂ ಪ್ರಯತ್ನೇನ ಶಿವಲಿಂಗಾರ್ಚನೇ ಯಥಾ ।
ದೇಹಸ್ಯಾಸ್ಯೋಪಯೋಗಸ್ಸ್ಯಾತ್ತಥಾ ಕಾರ್ಯಂ ಮಯಾ ನೃಪ ॥೬॥

ಶಿವಾರ್ಚನೇನ ಸಫಲಂ ಜೀವಿತಂ ಚ ಯಥಾ ಮಮ ।
ತಥೈವ ಯತ್ನಃ ಕರ್ತವ್ಯಃ ಸರ್ವಥಾಽಪಿ ಮಯಾ ನೃಪ ॥೭॥

ಸಂಸಾರದ ವಾಸನೆಯ ನಾಶಕ್ಕೆ ಶಿವಾರ್ಚನೆಯು ಒಂದು ಉಪಾಯವೆಂಬುದಾಗಿ ತಿಳಿಯಲ್ಪಟ್ಟಿದೆ. ಆ ಪೂಜೆಯನ್ನು ಹೇಗೆ ಮಾಡಬೇಕೆಂಬುದನ್ನು ದಯೆಯಿಂದ ಹೇಳು. ॥೩॥

ವಿವೇಕಿಯೇ! ನೀನು ಶರೀರವನ್ನು ಕುತ್ಸಿತವಾದುದೆಂದು ಬಹು ಚೆನ್ನಾಗಿ ನಿರೂಪಿಸಿದ್ದೀಯೆ. ಆ ವಿಚಾರದಲ್ಲಿ ಯಾವ ಸಂಶಯವೂ ಇಲ್ಲ. ಅದೇರೀತಿಯಾಗಿ ಕಂಡುಬರುತ್ತಲೂ ಇದೆ. ॥೪॥

ಈ ದೇಹಕ್ಕೆ ಎಷ್ಟು ಸೌಭಾಗ್ಯವಿದ್ದರೂ ಇದು ಕುತ್ಸಿತವೇ ಸರಿ. ಈ ಶರೀರಕ್ಕೆ ಶಿವಾರ್ಚನೆಯೇ ಮುಖ್ಯ ಪ್ರಯೋಜನವೆಂದು ನಿಶ್ಚಯಿಸಲ್ಪಟ್ಟಿದೆ. ॥೫॥

ಎಲೈ ರಾಜನೇ, ಮೇಲೆ ಹೇಳಿದಂತೆ ಈ ಶರೀರಕ್ಕೆ ಶಿವಲಿಂಗಾರ್ಚನೆಯಲ್ಲಿಯೇ ಉಪಯೋಗವಿರುವುದರಿಂದ ಅಲ್ಲಿಯೇ ವಿನಿಯೋಗವಾಗುವಂತೆ ಬಹು ಪ್ರಯತ್ನಮಾಡುತ್ತೇನೆ. ॥೬॥

ಶಿವಾರ್ಚನೆ ಮಾಡುವುದರಿಂದ ನನ್ನ ಜೀವನವು ಸಾರ್ಥಕವಾಗುವಂತೆ ನಾನು ಬಹು ಪ್ರಯತ್ನಪಡಬೇಕೆನಿಸಿದೆ. ॥೭॥

ಆಹಾರಂ ವಾ ಪರಿತ್ಯಜ್ಯ ವಯೋ ನೇಯಂ ಶಿವಾರ್ಚನೈಃ ।
ಶ್ರುತಾಽಪ್ಯಂತಕಭೀತಿ ಸ್ಸಾ ಸದ್ಯೋ ಹೃದಯಭೇಧಿನೀ ॥೮॥

ಯಥಾ ನ ಗರ್ಭವಾಸಸ್ಸ್ಯಾದ್ಗರ್ಭಕ್ಲೇಶೋಽಪಿ ಸರ್ವಥಾ ।
ತಥಾ ಪ್ರಯತ್ನಃ ಕರ್ತವ್ಯಃ ಶಿವಲಿಂಗಾರ್ಚನೈರ್ಮಯಾ ॥೯॥

ಶಿವಾರ್ಚನಪ್ರಕಾರಂ ಮೇ ಸಾಧನಾನ್ಯಪಿ ಸತ್ವರಂ ।
ವದ ತಾವದ್ಯಥಾಶಾಸ್ತ್ರಂ ಯೈಃ ಫಲಂ ಲಿಂಗಪೂಜನಾತ್ ॥೧೦॥

ಗುರುಸ್ತ್ವಮೇವ ಮೇ ಭೂಪ ಸಂಸಾರಭಯಮೋಚಕಃ ।
ಅನ್ಯೋ ಗುರುರ್ಭವೇತ್ಕೋ ವಾ ಶಿವಾಚಾರಪ್ರವರ್ತಕಾತ್ ॥೧೧॥

॥ ನೃಪ ಉವಾಚ ॥

ಕಾಲಾಂತಕಾರ್ಚನೇನೈವ ಕಾಲಾದ್ಭೀತಿರ್ವಿನಶ್ಯತಿ ।
ನಾನ್ಯಸ್ತನ್ನಾಶಕೋಪಾಯೋ ದೃಶ್ಯತೇ ಕ್ವಾಪಿ ಸರ್ವಥಾ ॥೧೨॥

ಅನ್ನಾಹಾರಾದಿಗಳನ್ನಾದರೂ ಬಿಟ್ಟು ಶಿವಾರ್ಚನೆಯಲ್ಲಿ ನಮ್ಮ ಆಯುಸ್ಸನ್ನು ಕಳೆಯಬೇಕು. ಅದು ಹೃದಯ ಭೇದಕವಾದ ಅಂತಕಭೀತಿಯನ್ನು ಸಹ ನಿವಾರಿಸ ಬಲ್ಲುದು. ಶಿವಲಿಂಗಾರ್ಚನೆಯಿಂದ ಗರ್ಭವಾಸವೂ ಅಥವಾ ಗರ್ಭದಲ್ಲಿ ಅನುಭವಿಸ ಬೇಕಾದ ತೊಂದರೆಗಳೂ ಒದಗಲಾರವು. ಅಂತಹ ಶಿವಾರ್ಚನೆಯಲ್ಲಿ ಪ್ರಯತ್ನ ವನ್ನು ಮಾಡುತ್ತೇನೆ. ॥೮-೯॥

ಎಲೈ ರಾಜನೇ, ನನಗೆ ನೀನೇ ಗುರು. ನೀನೇ ನನ್ನ ಸಂಸಾರವೆಂಬ ಭಯವನ್ನು ನಾಶಮಾಡತಕ್ಕವನು. ಶಿವಪೂಜಾ ವಿಚಾರದಲ್ಲಿ ಪ್ರವರ್ತಿಸಿರುವ ನಿನ್ನನ್ನು ಬಿಟ್ಟರೆ ಯಾರು ತಾನೇ ಗುರುವಾಗಬಲ್ಲರು ? ಆದ್ದರಿಂದ ಈಗ ನೀನು ಶಾಸ್ತ್ರಾನುಸಾರವಾಗಿ ಶಿವಾರ್ಚನ ವಿಧಾನವನ್ನೂ ಮತ್ತು ಶಿವಪೂಜಾ ಸಾಮಗ್ರಿಗಳನ್ನೂ ಸಹ ವಿವರವಾಗಿ ಹೇಳು ಎಂಬುದಾಗಿ ರಾಜಪುತ್ರನನ್ನು ಕುರಿತು ರಾಣಿಯು ಕೇಳಿಕೊಂಡಳು. ॥೧೦-೧೧॥

ಆಗ ಆ ರಾಜಪುತ್ರನು ಆಕೆಗೆ ಹೀಗೆ ಉಪದೇಶಿಸಿದನು " ಯಮನಿಗೂ ಸಹ ಯಮನಾಗಿರುವ ಶಿವನ ಅರ್ಚನೆಯಿಂದಲೇ ಯಮನಿಂದುಂಟಾಗುವ ಭಯವು ನಾಶ ವಾಗಬೇಕು. ಖಂಡಿತವಾಗಿಯೂ ಆ ಭೀತಿನಿವಾರಣೆಗೆ ಇದಕ್ಕಿಂತಲೂ ಬೇರೆಯಾದ ಉಪಾಯವು ಮತ್ತಾವುದೂ ಕಾಣುವುದಿಲ್ಲ. ॥೧೨॥

ತವಾಸ್ತಿ ಮಹದೈಶ್ವರ್ಯಮನೇನ ಕುರು ಪೂಜನಂ ।
ಐಶ್ವರ್ಯಮೇವ ಸಾಮಗ್ರೀ ಶಂಕರಾರಾಧನಸ್ಯ ತು ॥೧೩॥

ಯದ್ಯಪಿ ಶ್ರೀಮಹಾದೇವೋ ಜಲೇನಾಲ್ಪೇನ ವಾ ಸಕೃತ್ ।
ಮುಕ್ತಿದಸ್ಸ್ಯಾತ್ತಥಾಪ್ಯೇತದೈಶ್ವರ್ಯಂ ಸಫಲಂ ಕಥಂ ॥೧೪॥

ಇದಮಸ್ಥಿರಮೈಶ್ವರ್ಯಂ ವಯೋಽಪ್ಯಾಯುಸ್ತಥಾ ಸತಿ ।
ಉಪಯುಕ್ತಮಿದಂ ಸರ್ವಂ ಸ್ಯಾದತ್ರಾಶು ಶಿವಾರ್ಚನೇ ॥೧೫॥

ಧಿಗ್ಧಿಗ್ಧಿಗ್ಧಿಕ್ತದೈಶ್ವರ್ಯಂ ಯೇನ ನಾರಾಧಿತಃ ಶಿವಃ ।
ಸಫಲಂ ತತ್ತದೈಶ್ವರ್ಯಂ ಯೇನೈವಾರಾಧಿತಃ ಶಿವಃ ॥೧೬॥

ಶಿವಪೂಜನಮುತ್ಕೃಷ್ಟಂ ಸರ್ವಸಿದ್ಧಿಪ್ರದಾಯಕಂ ।
ತದ್ಯೇನ ನ ಕೃತಂ ತಸ್ಯ ಜನ್ಮ ತಾವನ್ನಿರರ್ಥಕಂ ॥೧೭॥

---

ನಿನಗೆ ಹೇಗೂ ಬಹಳ ಐಶ್ವರ್ಯವಿದೆ. ಈ ಐಶ್ವರ್ಯದಿಂದ ಶಿವನ ಪೂಜೆಯನ್ನು ಮಾಡು. ಶಿವನ ಅರ್ಚನೆಗೆ ಐಶ್ವರ್ಯವೇ ಮುಖ್ಯ ಸಾಮಗ್ರಿಯಾಗಿರುತ್ತದೆ. ॥೧೩॥

ಈಶ್ವರನು ಸ್ವಲ್ಪ ಜಲದಿಂದ ಅಭಿಷೇಕಮಾಡಿದರೂ ಮುಕ್ತಿಯನ್ನು ಕೊಡತಕ್ಕವನಾಗಿದ್ದಾನೆ. ಹಾಗಿದ್ದರೂ ನಿನ್ನ ಈ ಐಶ್ವರ್ಯವನ್ನು ಸಫಲಗೊಳಿಸುವ ಉದ್ದೇಶದಿಂದ ವೈಭವವಾಗಿ ಪೂಜಿಸು. ॥೧೪॥

ಈ ಐಶ್ವರ್ಯ, ಯೌವನ, ಮತ್ತು ಆಯುಸ್ಸು ಇವೆಲ್ಲವೂ ಸ್ಥಿರವಾದವುಗಳಲ್ಲ. ಆದುದರಿಂದ ಇವನ್ನು ಸಾರ್ಥಕಪಡಿಸುವ ಕಾರಣ ಇವುಗಳೆಲ್ಲವೂ ಶಿವಾರ್ಚನೆಯಲ್ಲಿ ಉಪಯೋಗಿಸಲ್ಪಡಲಿ. ॥೧೫॥

ಯಾವ ಮನುಷ್ಯನಿಂದ ಶಿವನು ಆರಾಧಿಸಲ್ಪಡನೋ ಅಂತಹ ಮನುಷ್ಯನ ಐಶ್ವರ್ಯವೆಲ್ಲಾ ನಿಷ್ಫಲ ಮತ್ತು ನಿಂದಾಯೋಗ್ಯವಾದವು. ಯಾವ ಮನುಷ್ಯನು ತನ್ನ ಐಶ್ವರ್ಯಗಳಿಂದ ಈಶ್ವರನನ್ನು ಪೂಜಿಸುತ್ತಾನೆಯೋ ಅಂತಹವನ ಐಶ್ವರ್ಯವು ಸಫಲವೆನಿಸುವುದು. ॥೧೬॥

ಮನುಷ್ಯನಿಗೆ ಸಕಲ ಸಿದ್ಧಿಗಳನ್ನೂ ಉಂಟುಮಾಡಿಕೊಡತಕ್ಕ ಶಿವಪೂಜೆಯು ಸರ್ವೋತ್ಕೃಷ್ಟವೆನಿಸಿರುವುದು. ಅಂತಹವನ ಪೂಜೆಯನ್ನು ಮಾಡದಿರುವವನ ಜನ್ಮವು ನಿರರ್ಥಕವಲ್ಲವೆ! ॥೧೭॥

ಶಿವಪ್ರಸಾದಲಬ್ಧಾನಿ ಧನಧಾನ್ಯಾದಿಕಾನ್ಯತಃ ।
ತೈರರ್ಚನಂ ಮಹೇಶಸ್ಯ ಕೃತ್ವಾ ಮುಕ್ತಿಮವಾಪ್ನುಯಾತ್ ॥೧೮॥

ತದೀಯಮೇವ ದತ್ವಾಽಪಿ ತಸ್ಮೈ ಸೌಭಾಗ್ಯಮುತ್ತಮಂ ।
ಪ್ರಾಪ್ತವ್ಯಮಿತಿ ಯತ್ನೇನ ಕರ್ತವ್ಯಂ ಶಿವಪೂಜನಂ ॥೧೯॥

ವಿನಾ ನ ಪುಣ್ಯಪುಂಜೇನ ಭಕ್ತಿರ್ನೃತ್ಯಂಜಯಾರ್ಚನೇ ।
ಅತಃ ಪುಣ್ಯಾತ್ಮನಾ ನಿತ್ಯಂ ಕ್ರಿಯತೇ ಶಿವಪೂಜನಂ ॥೨೦॥

ಶಿವಾರ್ಚನೇನ ವಿಜ್ಞೇಯಃ ಪುಣ್ಯವಾನಿತಿ ಮಾನವಃ ।
ತದಭಾವೇನ ವಿಜ್ಞೇಯೋ ಮಹಾಪಾತಕವಾನಿತಿ ॥೨೧॥

ಅತಃ ಸ ದೂರತಸ್ತ್ಯಾಜ್ಯೋ ಯೋ ನಾರ್ಚಯತಿ ಶಂಕರಂ ।
ತತ್ಸಂಯೋಗಾಭಿಲಾಪಾದ್ಯೈರ್ಮಾನವಃ ಪಾಪವಾನ್ಭವೇತ್ ॥೨೨॥

ಶಿವನ ಅನುಗ್ರಹದಿಂದ ಬರುವ ಧನಧಾನ್ಯಗಳಿಂದ, ಶಂಕರನ ಪೂಜೆಯನ್ನು ನೆರವೇರಿಸಿ ಸುಲಭವಾಗಿ ಮೋಕ್ಷವನ್ನು ಪಡೆಯಬಹುದು ॥೧೮॥

ಶಿವನ ಅನುಗ್ರಹದಿಂದಲೇ ಬಂದ ಧನಧಾನ್ಯಾದಿಗಳನ್ನು ಮತ್ತೆ ಅವನಿಗೇ ಸಮರ್ಪಿಸಿ ಉತ್ಕೃಷ್ಟವಾದ ಸೌಭಾಗ್ಯವನ್ನು ಪಡೆಯಬೇಕೆಂಬ ಪ್ರಯತ್ನದಿಂದಲಾದರೂ ಶಿವಪೂಜೆಯನ್ನು ಮಾಡಬೇಕು. ॥೧೯॥

ಪುಣ್ಯಸಮೂಹದಿಂದಲ್ಲದೇ, ಈಶ್ವರನ ಪೂಜೆಯಲ್ಲಿ ಭಕ್ತಿಯು ಸಾಧಾರಣವಾಗಿ ಉಂಟಾಗಲಾರದು. ಆದುದರಿಂದ ಪುಣ್ಯಾತ್ಮರಾದವರು ಮಾತ್ರವೇ ಈಶ್ವರಪೂಜೆಗೆ ಅರ್ಹರಾಗುವರು. ॥೨೦॥

ಶಿವಾರ್ಚನೆಯನ್ನು ಮಾಡತಕ್ಕ ಮನುಷ್ಯನನ್ನು ಪುಣ್ಯವಂತನೆಂದೂ ಶಿವಾರ್ಚನೆಯನ್ನು ಮಾಡದೇ ಇರತಕ್ಕ ಮನುಷ್ಯನನ್ನು ಮಹಾಪಾಪಿಷ್ಠನೆಂತಲೂ ತಿಳಿಯಬಹುದು. ॥೨೧॥

ಅಂತಹ ಪಾಪಿಷ್ಠರೊಡನೆ, ಸ್ನೇಹಮಾಡುವುದು, ಸಂಭಾಷಿಸುವುದು ಇತ್ಯಾದಿಗಳಿಂದ ಮಾನವನು ಪಾಪಿಯಾಗುತ್ತಾನೆ. ಆದುದರಿಂದ ಅಂತಹ ಶಂಕರಾರ್ಚನೆಯನ್ನು ಮಾಡದಿರುವ ಮನುಷ್ಯನನ್ನು ದೂರದಲ್ಲಿಯೇ ಇಟ್ಟಿರಬೇಕು. ಅಂತಹವನ ಜೊತೆ ಎಂದೂ ಸೇರಬಾರದು. ॥೨೨॥

ಶಿವಾರ್ಚನಪರೋ ಮರ್ತ್ಯಸ್ಸಂಸ್ಮೃತಃ ಪ್ರಣತಃ ಸ್ತುತಃ ।
ಹರತ್ಯಘಾನ್ಯನಂತಾನಿ ಘೋರಾಣಿ ವಿವಿಧಾನ್ಯಪಿ ॥೨೩॥

ಯೇನ ಕೇನಾಪಿ ರೂಪೇಣ ಶರೀರಂ ಪ್ರಾಪ್ಯ ಮಾನವಃ ।
ಶಿವಾರ್ಚನಪರೋ ಭೂಯಾತ್ಯಭೂಯಃ ಪುಣ್ಯವಾನ್ಭವೇತ್ ॥೨೪॥

ಘೋರಪಾಪವನಸ್ಯಾಯಂ ಕುಠಾರಃ ಶಂಕರಾರ್ಚಕಃ ।
ಅತಃ ಸರ್ವೈಃ ಪ್ರಯತ್ನೈಶ್ಚ ಕರ್ತವ್ಯಂ ಶಿವಪೂಜನಂ ॥೨೫॥

ಅತಃ ಪರಂ ತ್ವಯೋನ್ಮಾದಃ ಪರಿತ್ಯಾಜ್ಯಃ ಪ್ರಯತ್ನತಃ ।
ಶಿವಪೂಜಾಂ ಕುರು ಪ್ರೀತ್ಯಾ ತವ ಮುಕ್ತಿರ್ಭವಿಷ್ಯತಿ ॥೨೬॥

ಶರೀರಂ ಶಿವಪೂಜಾಯಾ ಯೌವನೇ ದಕ್ಷಮಿತ್ಯತಃ ।
ಪ್ರಯತ್ನೇನ ಮಹಾದೇವಂ ಪೂಜಯಸ್ವ ಯಥೋಚಿತಂ ॥೨೭॥

ಯಾವಾಗಲೂ ಈಶ್ವರನ ಪೂಜೆಯಲ್ಲಿಯೇ ಆಸಕ್ತನಾಗಿಯೂ ಅವನನ್ನೇ ಸ್ಮರಿಸುತ್ತಾ ಸ್ತುತಿಸುತ್ತಾ ಇರುವ ಮನುಷ್ಯರಿಗೆ ಎಂತಹ ಘೋರವಾದ ಪಾಪಗಳಾದರೂ ಸಹ ಅಂಟುವುದಿಲ್ಲ. ||೨೩||

ಮನುಷ್ಯನು ಯಾವ ಕಾರಣದಿಂದಲಾದರೂ, ಯಾವ ರೂಪದಿಂದಲಾದರೂ, ಶರೀರವನ್ನು ಹೊಂದಿ ಶಿವಾರ್ಚನೆಯಲ್ಲಿ ಆಸಕ್ತನಾಗಬೇಕು. ಹಾಗಾದರೆ ಅವನು ಪದೇಪದೇ ಪುಣ್ಯಶರೀರಿಯಾಗಿ ಜನಿಸುವನು. ||೨೪||

ಬಹಳ ಕಠೋರವಾದ ಪಾಪವೆಂಬ ಕಾನನಕ್ಕೆ ಈಶ್ವರ ಪೂಜೆಯನ್ನು ಮಾಡತಕ್ಕ ಮನುಷ್ಯನು ಕೊಡಲಿಯಂತೆ ನಾಶಕನಾಗುತ್ತಾನೆ. ಆದುದರಿಂದ ಬಹು ಪ್ರಯತ್ನ ಪಟ್ಟಾದರೂ ಶಿವಪೂಜೆಯಲ್ಲಿ ಮನಸ್ಸಿಡಬೇಕು. ||೨೫||

ಆದುದರಿಂದ ನೀನು ಸರ್ವಪ್ರಯತ್ನದಿಂದಲೂ ಉದಾಸೀನವನ್ನು ಬಿಟ್ಟು ಪ್ರೀತಿಯಿಂದ ಶಿವಪೂಜೆಯನ್ನು ಮಾಡು. ನಿನಗೆ ಮೋಕ್ಷವು ನಿಜವಾಗಿಯೂ ಉಂಟಾಗುವುದು. ||೨೬||

ಯೌವನದಲ್ಲಿರುವಾಗಲೇ ಶರೀರವು ಶಿವಪೂಜೆಯಲ್ಲಿಯೇ ಸಮರ್ಥವಾದುದಾಗಿ ವ್ರತದ ಕಷ್ಟವನ್ನು ಸಹಿಸುವುದು. ವಯಸ್ಸಾದ ನಂತರ ಅಷ್ಟು ಶಕ್ತಿಯನ್ನು ತಾಳಲಾರದು. ಆದ್ದರಿಂದ ತನ್ನ ಯೋಗ್ಯತಾನುಸಾರ ಈಗಲೇ ಶಿವನನ್ನು ಪೂಜಿಸು. ||೨೭||

ಸ್ನಾನಂ ಕುರು ಪ್ರಯತ್ನೇನ ಶಿವಕುಂಡೇ ಶಿವೋದಕೇ ।
ಉದ್ಧೂಳ್ಯ ಭಸ್ಮನಾಂಗಾನಿ ತ್ರಿಪುಂಡ್ರಂ ಚ ಪ್ರಯತ್ನತಃ ॥೨೮॥

ಶಿರೋಲಲಾಟವಕ್ಷಸ್ಸು ಸ್ಕಂಧೇ ಚ ಮಣಿಬಂಧಕೇ ।
ಕೂರ್ಪರೇ ನಾಭಿದೇಶೇ ಚ ಪಾರ್ಶ್ವಯೋರ್ಗಂಡಮಂಡಲೇ ॥೨೯॥

ಊರುಪ್ರದೇಶೇ ಗುಲ್ಫೇ ಚ ತ್ರಿಪುಂಡ್ರಂ ಧಾರಯೇನ್ಮುಹುಃ ।
ರುದ್ರಾಕ್ಷಧಾರಣಂ ಕಾರ್ಯಂ ದ್ವಾತ್ರಿಂಶತ್ಕಂಠಮಾಲಯಾ ॥೩೦॥

ಶಿಖಾಯಾಮೇಕ ಏವ ಸ್ಯಾದ್ದ್ವಿಚತ್ವಾರಿಂಶದುತ್ತಮಾಃ ।
ರುದ್ರಾಕ್ಷಾಃ ಶಿರಸಾ ಧಾರ್ಯಾಃ ಕರ್ಣಯೋರ್ದ್ವಾದಶ ದ್ವಯೋಃ॥೩೧॥

ಶತತ್ರಯಂ ತೂಪವೀತೇ ಬಾಹ್ವೋಃ ಷೋಡಶ ಷೋಡಶ ।
ಚತುರ್ವಿಂಶತಿರುದ್ರಾಕ್ಷಾ ದ್ವಯೋಸ್ತು ಮಣಿಬಂಧಯೋಃ ॥೩೨॥

ಶಿವಕುಂಡದಲ್ಲಿ ಶಿವತೀರ್ಥದಲ್ಲಿ ಸ್ನಾನಮಾಡು. ಅನಂತರ ತಲೆ, ಹಣೆ, ಎದೆ, ಸ್ಕಂದ. (ಭುಜಕ್ಕೂ ಮತ್ತು ತಲೆಗೂ ಮಧ್ಯದಲ್ಲಿ ಇರತಕ್ಕ ಭಾಗ) ಮಣಿಬಂಧ (ಭುಜದ ಮೇಲ್ಭಾಗ) ಕೂರ್ಪರ (ಮೊಳಕೈ ಮತ್ತು ಭುಜ ಇವೆರಡಕ್ಕೂ ಮಧ್ಯೆ ಇರತಕ್ಕ ಭಾಗ) ಹೊಕ್ಕಳು, ಮಗ್ಗುಲುಗಳು, ಕಪೋಲ, ಇವುಗಳಲ್ಲಿ ಭಸ್ಮವನ್ನು ಮೂರು ಎಳೆಗಳು ಬರುವಂತೆ ಹಚ್ಚಬೇಕು. ॥೨೮-೨೯॥

ಮತ್ತು ಅದೇ ರೀತಿ ಮೂರು ಎಳೆಗಳು ಬರುವಂತೆ ತೊಡೆಯಲ್ಲಿಯೂ, ಕಾಲಿನಮೇಲಿರುವ ಗಂಟಿನಲ್ಲಿಯೂ ಸಹ ಭಸ್ಮವನ್ನು ಧರಿಸಬೇಕು. ಮೂವತ್ತೆರಡು ರುದ್ರಾಕ್ಷಿಗಳಿಂದ ಕೂಡಿದ ಕಂಠಮಾಲೆಯ ಆಕಾರದಲ್ಲಿರುವ ರುದ್ರಾಕ್ಷಿಯ ಸರವನ್ನು ಕಂಠದಲ್ಲಿ ಧರಿಸಬೇಕು. ॥೩೦॥

ಜಟೆಯಲ್ಲಿ ಒಂದನ್ನೂ ತಲೆಯಲ್ಲಿ ನಲವತ್ತೆರಡು ರುದ್ರಾಕ್ಷಿಗಳನ್ನೂ, ಎರಡು ಕಿವಿಯಲ್ಲಿಯೂ ಹನ್ನೆರಡು, ಹನ್ನೆರಡು ರುದ್ರಾಕ್ಷಿಗಳನ್ನೂ ಧರಿಸಬೇಕು. ॥೩೧॥

ಯಜ್ಞೋಪವೀತಸ್ಥಾನದಲ್ಲಿ ಮುನ್ನೂರು ರುದ್ರಾಕ್ಷಿಗಳನ್ನೂ, ಎರಡು ಬಾಹುಗಳಲ್ಲಿಯೂ ಹದಿನಾರು ರುದ್ರಾಕ್ಷಿಗಳನ್ನೂ ಎರಡು ಮಣಿಬಂಧ (ಭುಜದ ಮೇಲ್ಭಾಗ) ದಲ್ಲಿ ಇಪ್ಪತ್ತನಾಲ್ಕು ರುದ್ರಾಕ್ಷಿಗಳನ್ನೂ ಮಾಲಾಕಾರವಾಗಿ ಧರಿಸಿರಬೇಕು. ॥೩೨॥

ಅಷ್ಟೋತ್ತರಶತೈರೇವ ರುದ್ರಾಕ್ಷೈರ್ಜಪಮಾಲಿಕಾ ।
ತಯಾ ಪಂಚಾಕ್ಷರಂ ಜಪ್ತ್ವಾ ಶೈವಂ ಶಿವಮವಾಪ್ನುಯಾತ್ ॥೩೩॥

ತ್ರಿಸ್ತ್ರಿರಾಚಮನಂ ಸ್ತ್ರೀಣಾಂ ಪುಂಸಾಮಿವ ಯಥಾವಿಧಿ ।
ಭವಾದ್ಯೈರ್ನಾಮಭಿರ್ಯದ್ವಾ ಶಿವಪಂಚಾಕ್ಷರೇಣ ವಾ ॥೩೪॥

ಪಶ್ಚಾತ್ಕುಶಾಸನೇ ಸ್ಥಿತ್ವಾ ಯದ್ವಾ ವ್ಯಾಘ್ರಾಜಿನಾದಿಷು ।
ಉದಙ್ಮುಖಃ ಪ್ರಾಙ್ಮುಖೋ ವಾ ಪೂಜಯೇದ್ಗಿರಿಜಾಪತಿಂ ॥೩೫॥

ಪಂಚಾಮೃತಾಭಿಷೇಕಾದ್ಯೈಃ ಕರ್ಪೂರಾದಿಸಮನ್ವಿತೈಃ ।
ಜಲೈಃ ಫಲೋದಕೈರೀಶಂ ಆಮ್ರಾದಿಕರಸೈರಪಿ ॥೩೬॥

ಶುದ್ಧೋದಕೈಃ ಕವೋಷ್ಣೈರ್ವಾ ಶೀತಲೈರ್ವಾ ಮನೋಹರೈಃ ।
ಪಶ್ಚಾದ್ದುಕೂಲವಸನೈಃ ಪೂಜಯಿತ್ವಾ ಸದಾಶಿವಂ ॥೩೭॥

ಸುಗಂಧಚಂದನೇನಾಪಿ ಪೂಜಯೇದ್ಗಿರಿಜಾಪತಿಂ ।
ಬಿಲ್ವಪತ್ರೈರಕ್ಷತೈಶ್ಚ ಪ್ರಫುಲ್ಲಕುಸುಮೈರಪಿ ॥೩೮॥

ನೂರೆಂಟು ರುದ್ರಾಕ್ಷಿಗಳಿಂದಲೇ ಜಪಮಾಲೆಯನ್ನು ತಯಾರಿಸಿ, ಅದರಿಂದ ಈಶ್ವರ ಪ್ರೀತಿಕರವಾದ ಶಿವಪಂಚಾಕ್ಷರೀ ಈ ಮಂತ್ರವನ್ನು (ನಮಃಶಿವಾಯ) ಜಪಿಸಿ ಶಿವನನ್ನು ತೃಪ್ತಿಪಡಿಸಬೇಕು. ॥೩೩॥

ಪುರುಷರು ಮೂರುಸಲ ಆಚಮನ ಮಾಡುವಂತೆ ಸ್ತ್ರೀಯರೂ ಸಹ, ಭವನೇ ಮೊದಲಾದ ಶಿವನಾಮಗಳಿಂದಾಗಲೀ, ಅಥವಾ ಶಿವಪಂಚಾಕ್ಷರ ಮಂತ್ರದಿಂದಾಗಲೀ ಮೂರು ಮೂರು ಸಲ ಆಚಮನವನ್ನು ಮಾಡಬೇಕು. ॥೩೪॥

ಆಚಮನಮಾಡಿದ ನಂತರ ದರ್ಭಾಸನದಲ್ಲಿಯಾಗಲೀ ಅಥವಾ ಹುಲಿಯ ಚರ್ಮದ ಮೇಲಾಗಲೀ, ಪೂರ್ವ ಅಥವಾ ಉತ್ತರಕ್ಕೆ ಅಭಿಮುಖನಾಗಿ ಕುಳಿತು ಈಶ್ವರನನ್ನು ಪೂಜಿಸಬೇಕು. ॥೩೫॥

ಈಶ್ವರನನ್ನು ಪಂಚಾಮೃತಾಭಿಷೇಕದಿಂದಲೂ ಮತ್ತು ಪಚ್ಚಕರ್ಪೂರ ದಿವ್ಯವಾದ ಏಲಕ್ಕಿ ಇವುಗಳಿಂದ ಮಿಶ್ರಿತವಾದ ನೀರಿನಿಂದಲೂ ಮಾವಿನಹಣ್ಣೇ ಮುಂತಾದ ಹಣ್ಣಿನ ರಸಗಳಿಂದಲೂ, ಬಿಸಿಯಾದ ಅಥವಾ ಶೀತಲವಾದ ನೀರಿನಿಂದಲೂ ಅಭಿಷೇಕಮಾಡಿ, ಅನಂತರ ವಸ್ತ್ರಧಾರಣೆಯಿಂದಲೂ ಪರಿಮಳಯುಕ್ತ

ಮಂದರಾದಿಪ್ರಸೂನಾನಾಂ ಮಾಲಿಕಾಭಿಃ ಸಮರ್ಚಯೇತ್ ।
ಪಶ್ಚಾದ್ಧೂಪೋತ್ಥಧೂಮ್ರೈಶ್ಚ ದೀಪೈಃ ಕರ್ಪೂರಸಂಭವೈಃ ॥೩೯॥

ಓದನೈರಾಜ್ಯಸಂಯುಕ್ತೈಃ ಶಾಕಸೂಪಸಮನ್ವಿತೈಃ ।
ಪರಮಾನ್ನೈರ್ಘೃತಯುತೈಃ ಶರ್ಕರಾರಾಶಿಸಂಯುತೈಃ ॥೪೦॥

ಲಡ್ಡುಕೈರ್ವಟಿಕೈಸ್ಸಾಜ್ಯೈರಪೂಪೈರ್ಮಂಡಕಾದಿಭಿಃ ।
ಭಕ್ಷ್ಯೈರ್ಲೇಹ್ಯೈಶ್ಚ ಚೋಷ್ಯೈಶ್ಚ ಪೇಯೈಶ್ಚ ವಿವಿಧೈರಪಿ ॥೪೧॥

ಕದಲೀನಾರಿಕೇಲಾದ್ಯೈರಸಾಢ್ಯೈಃ ಫಲಮಂಡಲೈಃ ।
ಇಕ್ಷುದಂಡೈಶ್ಚ ಮಂಡೈಶ್ಚ ದಧಿಕ್ಷೀರರಸೋದ್ಭವೈಃ ॥೪೨॥

ದಧ್ಯೋದನೈಶ್ಚ ಕ್ಷೀರೈಶ್ಚ ದಧಿಪೂರೈರ್ಮನೋಹರೈಃ ।
ಸುಗಂಧಜಲಪೂರೈಶ್ಚ ನವೇಕ್ಷುರಸಪೂರಕೈಃ ॥೪೩॥

ವಾದ ಗಂಧದಿಂದಲೂ ಮತ್ತು ಬಿಲ್ವಪತ್ರೆಗಳಿಂದಲೂ, ಮಂತ್ರಾಕ್ಷತೆಗಳಿಂದಲೂ, ಚೆನ್ನಾಗಿ ಅರಳಿದ ಹೂಗಳಿಂದಲೂ, ಈಶ್ವರನನ್ನು ಪೂಜಿಸಬೇಕು. ॥೩೬-೩೭-೩೮॥

ಮತ್ತು ಮಂದರ ಪುಷ್ಪವೇ ಮೊದಲಾದ ಹೂವುಗಳ ಮಾಲಿಕೆಗಳಿಂದ ಅಲಂಕರಿಸಬೇಕು. ಅನಂತರ ಸಾಂಬ್ರಾಣಿಯ ಧೂಪದಿಂದ ಉಂಟಾದ ಧೂಮದಿಂದ ಧೂಪವನ್ನೂ ಮತ್ತು ಕರ್ಪೂರದ ದೀಪವನ್ನೂ ಸಹ ಸಮರ್ಪಿಸಬೇಕು ॥೩೯॥

ಹಾಗೆಯೇ ತುಪ್ಪದಿಂದ ಬೆರಸಿದ ಅನ್ನವನ್ನೂ, ತರಕಾರಿಯಿಂದ ತಯಾರಿಸಿದ ತೊವ್ವೆಯನ್ನೂ, ಸಕ್ಕರೆ ಮತ್ತು ತುಪ್ಪದಿಂದ ಬೆರದಿರತಕ್ಕ ಪಾಯಸವನ್ನೂ, ಲಾಡುಗಳನ್ನೂ, ತುಪ್ಪದಿಂದ ತಯಾರಿಸಿದ ಒಡೆಗಳನ್ನೂ. ಮಂಡಿಗೆ, ಅಪ್ಪೂಪ, ಇನ್ನೂ ಇತರ ವಿಧವಾದ ತಿನ್ನಲು ಯೋಗ್ಯವಾದ ಪದಾರ್ಥಗಳನ್ನೂ, ನುಂಗಲು ಯೋಗ್ಯವಾದ (ಲೇಹ್ಯ) ಪದಾರ್ಥಗಳನ್ನೂ, ಚಪ್ಪರಿಸಿ ತಿನ್ನತಕ್ಕ ಪದಾರ್ಥಗಳನ್ನೂ ಇನ್ನೂ ನಾನಾತರಹವಾದ ಪಾನೀಯಗಳನ್ನೂ ಪರಶಿವನಿಗೆ ಅರ್ಪಿಸಬೇಕು. ॥೪೦-೪೧॥

ಬಾಳೆ, ತೆಂಗು, ಮೊದಲಾದ ರಸಭರಿತವಾದ ಹಣ್ಣುಗಳನ್ನೂ, ಕಬ್ಬು, ಹಾಲು, ಮೊಸರು, ಇವುಗಳಿಂದ ತಯಾರಿಸಿದ ರಸವಿಶೇಷಗಳನ್ನೂ ಸ್ವಾಮಿಗೆ ನಿವೇದಿಸಬೇಕು. ॥೪೨॥

ಮೊಸರನ್ನ, ಹಾಲು, ಮೊಸರು, ಇತ್ಯಾದಿಗಳನ್ನೂ, ಸುಗಂಧಯುಕ್ತವಾದ ಜಲಗಳಿಂದಲೂ, ಹೊಸದಾಗಿ ತೆಗೆದ ಕಬ್ಬಿನರಸದಿಂದಲೂ, ದ್ರಾಕ್ಷಿ, ಏಲಕ್ಕಿ,

ದ್ರಾಕ್ಷಾರಾತಿರಸ್ಯೈರೇಲಾಲವಂಗಪರಿವೇಷ್ಟಿತೈಃ ।
ಅನ್ಯೈರಪಿ ರಸದ್ರವ್ಯೈಃ ಪೂಜಯಿತ್ವಾ ಮಹೇಶ್ವರಂ ॥೪೪॥

ಪಶ್ಚಾದಾಭರಣಂ ದದ್ಯಾದ್ರತ್ನರಾಜಿವಿರಾಜಿತಂ ।
ಪುನರ್ವಸ್ತ್ರಾಣಿ ರಮ್ಯಾಣಿ ರತ್ನಚ್ಛತ್ರಾದಿಕಂ ತಥಾ ॥೪೫॥

ದರ್ಪಣಂ ವ್ಯಜನಂ ಚಾರು ಚಾಮೀಕರವಿರಾಜಿತಂ ।
ಚಾಮರಂ ಪುಷ್ಪಮಾಲಾಶ್ಚ ಪತಾಕಾಶ್ಚ ಮನೋಹರಾಃ ॥೪೬॥

ದೇಯಾಃ ಕರ್ಪೂರದೀಪಾನಾಂ ನೀರಾಜನಮನುತ್ತಮಂ ।
ಪಶ್ಚಾದಾಸ್ತೋಷಯೇದೀಶಾಯ ಪ್ರಣತ್ಯೈರ್ನರ್ತನೋತ್ಸವೈಃ ॥೪೭॥

ರುದ್ರಾಧ್ಯಾಯಾದಿಮಂತ್ರಾಣಾಂ ಸ್ತೋತ್ರೈಃ ಶಾಂಭವಭೋಜನೈಃ ।
ಪುಣ್ಯೈಃ ಶಿವಕಥಾಲಾಪೈಃ ಕಾಲೋ ನೇಯಃ ಪ್ರಯತ್ನತಃ ॥೪೮॥

ಲವಂಗ, ಇವುಗಳಿಂದಲೂ, ಇನ್ನೂ ಇದೇ ತರಹ ರಸದ್ರವ್ಯಗಳನ್ನೂ ಮಹೇಶ್ವರನಿಗೆ ನಿವೇದನೆ ಮಾಡಬೇಕು. ||೪೨-೪೪||

ಆ ರೀತಿಯಾಗಿ ನಿವೇದನಮಾಡಿ ಅನಂತರ ರತ್ನಗಳಿಂದ ಶೋಭಿಸುತ್ತಿರುವ ಆಭರಣವನ್ನೂ, ಪುನಃ ಮನೋಹರವಾದ ವಸ್ತ್ರಗಳನ್ನೂ, ರತ್ನದಿಂದ ತಯಾರಿಸಿದ ಛತ್ರಿಯನ್ನೂ, ಕನ್ನಡಿಯನ್ನೂ, ಬೀಸಣಿಗೆಯನ್ನೂ, ಚಾಮರವನ್ನೂ ಹೂವಿನ ಮಾಲೆಗಳನ್ನೂ ಮತ್ತು ಮನೋಹರವಾಗಿರುವ ಪತಾಕೆಗಳನ್ನೂ (ಧ್ವಜಗಳನ್ನೂ) ಉಪಚಾರರೂಪವಾಗಿ ಸಮರ್ಪಿಸಬೇಕು. ||೪೫-೪೬||

ಅನಂತರ ಸರ್ವಶ್ರೇಷ್ಠವಾದ ಕರ್ಪೂರದ ನೀರಾಜನವನ್ನೂ ಬೆಳಗಬೇಕು. ಆಮೇಲೆ ಸ್ತೋತ್ರ, ನರ್ತನ ಮೊದಲಾದ ಉತ್ಸವಗಳಿಂದ ಸ್ವಾಮಿಯನ್ನು ತೃಪ್ತಿಗೊಳಿಸಬೇಕು. ||೪೭||

ಶ್ರೀರುದ್ರವೇ ಮೊದಲಾದ ರುದ್ರಮಂತ್ರಗಳ ಸ್ತೋತ್ರಗಳಿಂದಲೂ ಶಿವನಿಗೆ ತೃಪ್ತಿಯಾಗತಕ್ಕ ಮತ್ತು ಪುಣ್ಯಕರಗಳಾಗಿರತಕ್ಕ ಶಿವಕಥೆಗಳಿಂದಲೂ ಕಾಲವನ್ನು ಕಳೆಯಬೇಕು. ||೪೮||

ಏವಮಾಸಾಯಮೀಶಾರ್ಚಾ ಕರ್ತವ್ಯಾ ಮುಕ್ತಿಕಾಂಕ್ಷಿಭಿಃ ।
ಸಾಯಂಕಾಲೇ ವಿಶೇಷೇಣ ಪುನಃ ಪೂಜಾಂ ಸಮಾಚರೇತ್ ॥೪೯॥

ಉಕ್ತೇನೈವ ಪ್ರಕಾರೇಣ ಮೋಕ್ಷದಂ ಶಿವಪೂಜನಂ ।
ಲಿಂಗರೂಪಿಣಮೀಶಾನಂ ಪ್ರದೋಷೇ ಯಸ್ತು ಪಶ್ಯತಿ ॥೫೦॥

ಸ ವಂಶಕೋಟಿಸಂಯುಕ್ತಃ ಶಿವಲೋಕಂ ಪ್ರಯಾಸ್ಯತಿ ।
ಬ್ರಹ್ಮಹತ್ಯಾದಿ ಪಾಪಾನಾಂ ಪ್ರಲಯಾಯ ಪ್ರಜಾಯತೇ ॥೫೧॥

ಶಿವಾರ್ಚನಂ ಪರಮಿದಂ ವೇದವೇದ್ಯಮಿತಿ ಶ್ರುತಂ ।
ಪ್ರದೋಷಕಾಲೇ ಸಂಪ್ರಾಪ್ತೇ ಯಃ ಶಿವಂ ನಾರ್ಚಯಿಷ್ಯತಿ ॥೫೨॥

ಸ ದುರ್ಭಗೋ ಭವತ್ಯೇವ ನರಕಂ ಚ ಗಮಿಷ್ಯತಿ ।
ಅಯಮರ್ಥಸ್ತು ವಿಜ್ಞಾತೋ ಕುಂಭಯೋನಿಮುಖಾನ್ಮಯಾ ॥೫೩॥

ತೇನ ವೇದ್ಯೈಃ ಪರಿಜ್ಞಾತಃ ಶಿವಾರ್ಚನಮಹೋತ್ಸವಃ ॥೫೪॥

ಮುಕ್ತಿಯನ್ನು ಅಪೇಕ್ಷಿಸತಕ್ಕ ಜನರು ಹೀಗೆ ಸಾಯಂಕಾಲದವರೆಗೂ ಶಿವಪೂಜೆಯನ್ನು ಮಾಡಿ ಸಾಯಂಕಾಲ ಪುನಃಪೂಜೆಯಿಂದ ಸಮಾಪ್ತಿಗೊಳಿಸಬೇಕು. ಇದಕ್ಕೆ ವಿಶೇಷ ಫಲವುಂಟು. ॥೪೯॥

ಮೇಲೆ ಹೇಳಿದ ರೀತಿಯಾಗಿ ಮೋಕ್ಷದಾಯಕವೂ ಲಿಂಗರೂಪವೂ ಆಗಿರುವ ಈಶ್ವರನ ಪೂಜೆಯನ್ನು ಪ್ರದೋಷಕಾಲದಲ್ಲಿ ಯಾವನು ಭಕ್ತಿಯಿಂದ ನೋಡುತ್ತಾನೆಯೋ, ॥೫೦॥

ಅಂತಹವನ ಬ್ರಹ್ಮಹತ್ಯೆಯೇ ಮೊದಲಾದ ಪಾಪಗಳು ನಿವಾರಣೆಯಾಗುವುವು. ಅಷ್ಟುಮಾತ್ರವಲ್ಲದೇ ಅವನ ಕೋಟಿವಂಶೀಯರು ಶಿವಲೋಕವನ್ನು ಪಡೆಯುವರು. ॥೫೧॥

ಈ ಶಿವಾರ್ಚನೆಯು ವೇದೋಕ್ತವಾದುದರಿಂದ ಬಹಳ ಉತ್ಕೃಷ್ಟವೆನಿಸಿದೆ. ಯಾವನು ಪ್ರದೋಷಕಾಲದಲ್ಲಿ ಈಶ್ವರನನ್ನು ಆರಾಧಿಸುವುದಿಲ್ಲವೋ, ಆ ಮನುಷ್ಯನು ಅದೃಷ್ಟಹೀನನಾಗುವನಲ್ಲದೇ ನರಕಕ್ಕೆ ಹೋಗುತ್ತಾನೆ, ಎಂಬ ವಿಚಾರವು ನನಗೆ ಅಗಸ್ತ್ಯ ಮಹರ್ಷಿಗಳಿಂದ ತಿಳಿಯಿತು. ॥೫೨-೫೩॥

ಅಗಸ್ತ್ಯ ಮಹರ್ಷಿಗಳಿಗೆ ಈ ಶಿವಾರ್ಚನ ಸಮಾರಂಭವು ವೇದಗಳಿಂದ ತಿಳಿಯಿತೆಂಬುದಾಗಿ ರಾಜನೊಡನೆ ಯಾಜ್ಞ್ಯವಲ್ಕ್ಯಮಹರ್ಷಿಯು ಹೇಳಿದನು. ॥೫೪॥

ಯಾಜ್ಞವಲ್ಕ್ಯ ಉವಾಚ

ಇತಿ ತಸ್ಯ ವಚನಂ ಶ್ರುತ್ವಾ ಸಾ ರಾಜಮಹಿಷೀ ತದಾ ।
ತಂ ಪ್ರಣಮ್ಯ ಗುರುಂ ಮತ್ವಾ ತ್ವಮಸ್ವೇತ್ಯಬ್ರವೀನ್ಮುಹುಃ ॥೫೫॥

ತ್ವಂ ಗುರುರ್ಮಮ ಭಾಗ್ಯೇನ ಸಂಸಾರಾಂಗಾರಸಾಗರಾತ್ ।
ಸಂಸಾರಾತ್ತಾರಯಾವೇಕ್ಷ್ಯ ಕಟಾಕ್ಷೈಃ ಪುಣ್ಯಪೂರಿತೈಃ ॥೫೬॥

ಇತ್ಯುಕ್ತಂ ತಸ್ಯಾಃ ಶ್ರುತ್ವಾ ತಾಂ ಪವರ್ತ ಸ ಭೂಪತಿಃ ।
ಸ್ವಸಾರಮಿವ ಸಂಸಾರಾದ್ವಿರತಃ ರಾಜಪುತ್ರಃ ಪರಃ ॥೫೭॥

ತಾಮುವಾಚ ಶನೈಃ ರಾಜಾ ಸ್ವತಂತ್ರಾ ನಾಸಿ ಭಾಮಿನಿ ।
ಇತೋ ಯಾಹಿ ಗೃಹಂ ಶರ್ವಂ ಸಮಭ್ಯರ್ಚ್ಯಾದ್ಯ ಸತ್ವರಂ ॥೫೮॥

ಸ್ತ್ರೀಣಾಂ ಪತಿವ್ರತಾನಾಂ ತು ಸರ್ವಧರ್ಮಾ ಭರ್ತುರನುಜ್ಞಯಾ ।
ವಿನಾ ನ ಧರ್ಮಾಚರಣಂ ತತ್ರಾಪಿ ಶಿವಪೂಜನಂ ॥೫೯॥

ಈ ಮಾತನ್ನು ಕೇಳಿ ಆ ಮಹಾರಾಣಿಯು ರಾಜಪುತ್ರನನ್ನೇ ನಿಜವಾದ ಗುರುವೆಂದು ಭಾವಿಸಿ, ನಮಸ್ಕರಿಸಿ ತನ್ನ ತಪ್ಪನ್ನು ಕ್ಷಮಿಸು, ಎಂಬುದಾಗಿ ಕೇಳಿಕೊಂಡಳು. ||೫೫||

ನನ್ನ ಅದೃಷ್ಟವಶದಿಂದ ನನಗೆ ನೀನು ಗುರುವಾಗಿದ್ದೀಯೆ. ನೀನು ಪುಣ್ಯಪ್ರದಗಳಾದ ಕಟಾಕ್ಷಗಳಿಂದ ನನ್ನನ್ನು ನೋಡಿ ಈ ಸಂಸಾರವೆಂಬ ಸಮುದ್ರದಿಂದ ದಾಟಿಸು. ||೫೬||

ಹೀಗೆ ವಿವೇಕವನ್ನು ಪಡೆದ ಆ ಮಹಾರಾಣಿಯನ್ನು ವೈರಾಗ್ಯಶಾಲಿಯಾದ ಶೈವರಾಜಪುತ್ರನು ತನ್ನ ತಂಗಿಯಂತೆ ಭಾವಿಸಿ, ಅವಳ ಕೋರಿಕೆಯಂತೆ ಸತ್ಸದುಪದೇಶ ಮಾಡತೊಡಗಿದನು. ||೫೭||

“ಎಲೌ ಭಾಮಿನಿಯೇ ನೀನು ಇನ್ನೂ ಸ್ವತಂತ್ರಳಾಗಿಲ್ಲ. ಆದುದರಿಂದ ಜಾಗ್ರತೆಯಾಗಿ ಈಶ್ವರನನ್ನು ಪೂಜಿಸಿ ಮನೆಗೆ ಹೋಗು. ||೫೮||

ಪತಿವ್ರತೆಯರಾದ ಸ್ತ್ರೀಯರಿಗೆ ಖಂಡಿತವಾಗಿಯೂ ತಮ್ಮ ತಮ್ಮ ಪತಿಗಳ ಅಪ್ಪಣೆಯಿಲ್ಲದೇ ಯಾವ ಧರ್ಮಾಚರಣೆಯಲ್ಲಿಯೂ ಅಧಿಕಾರವಿರುವುದಿಲ್ಲ. ಅವರಲ್ಲಿಯೂ ಶಿವಪೂಜೆಯಲ್ಲಿ ಎಂದಿಗೂ ಅಧಿಕಾರವು ಲಭಿಸಲಾರದು. ||೫೯||

ಏಕಾಕಿನಾ ಮಯಾ ಸಾಕಮತ್ರ ಸಂಭಾಷಣೇ ಸತಿ ।
ವಿಪರೀತಮತಿರ್ಲೋಕೇ ಲೋಕಾನಾಂ ತು ಭವಿಷ್ಯತಿ ॥೬೦॥

ನ ಚಾತ್ರ ಪುರುಷಾಃ ಸಂತಿ ನಾಂಗನಾ ಅಪಿ ಕೇವಲಂ ।
ಆವಯೋರಿಹ ಸಂಸ್ಥಾನಮಯೋಗ್ಯಮಿತಿ ಮೇ ಮತಿಃ ॥೬೧॥

ಯದ್ಯಪ್ಯೇತಸ್ಯ ನಾರೀಷು ತರುಣೀಷ್ವಪಿ ಮೇ ಮನಃ ।
ಸಂತಪ್ತಲೋಹಖಂಡತ್ವಬುದ್ಧ್ಯಾ ನೈವ ಪ್ರವರ್ತತೇ ॥೬೨॥

ತದಾ ತದ್ವಿಲಯೇ ದೈವಾನ್ಮಾಸ್ಸ ಯಾಮೀ ಯಮಯಾತನಂ ।
ಪರದಾರಶರೀರೇಷು ಯದಿ ಯಾತಿ ಮನಃ ಕ್ಷಣಂ ॥೬೩॥

ತದಾ ತು ಘೋರೇ ನರಕೇ ಯಾತನಾ ತು ಭವಿಷ್ಯತಿ ।
ಪರಮೇವ ಸುರಾಹಾರೋ ಗೋಮಾಂಸಾಹಾರಸಂಯುತಃ ॥೬೪॥

ಏಕಾಕಿಯಾದ (ಒಬ್ಬಂಟಿಗನಾದ) ನನ್ನೊಡನೆ ಹೀಗೆ ಸಂಭಾಷಣೆಯು ಜರುಗುತ್ತಿದ್ದರೆ, ಪ್ರಪಂಚದಲ್ಲಿ ಜನಗಳು ನಿನ್ನ ವಿಷಯದಲ್ಲಿ ಅನ್ಯಥಾ ಭಾವನೆ ಮಾಡುವರು. ॥೬೦॥

ಇಲ್ಲಿ ಯಾವ ಪುರುಷರಾಗಲಿ, ಸ್ತ್ರೀಯರಾಗಲೀ, ಕಾಣುವುದಿಲ್ಲ. ಆದುದರಿಂದ ನಾವಿಬ್ಬರೇ ಇಲ್ಲಿ ಇರುವುದು ಯೋಗ್ಯವಲ್ಲವೆಂದು ನನ್ನ ಅಭಿಪ್ರಾಯ. ॥೬೧॥

ನನ್ನ ಮನಸ್ಸು ಇಲ್ಲಿರುವ ಯುವತಿಯರಾದ ಸ್ತ್ರೀಯರಲ್ಲಿ, ಎಂದಿಗೂ ಪ್ರವರ್ತಿಸುವುದಿಲ್ಲ ಅವರನ್ನು ನಾನು ಬೆಂಕಿಯಿಂದ ಚೆನ್ನಾಗಿ ಕಾಯಿಸಿದ ಲೋಹಖಂಡದ ಬುದ್ಧಿಯಿಂದ ನೋಡುವೆನು ॥೬೨॥

ಹಾಗಾದರೂ ಒಂದುವೇಳೆ ನನ್ನ ಮನಸ್ಸು ಹಾಗೆ ಸ್ವೇಚ್ಛಾಚಾರಿಯಾದರೂ ಪರಸ್ತ್ರೀಯರ ವಿಷಯದಲ್ಲಿ ಅನ್ಯಥಾ ಪ್ರವರ್ತಿಸಿದರೇ ಆದರೆ, ಮುಂದೆ ಘೋರವ ಯಮಯಾತನೆಯು ನನಗೆ ಉಂಟಾಗುವುದು. ॥೬೩॥

ಅಂತಹವರಿಗೆ ಬಹಳ ಘೋರವಾಗಿರುವ ನರಕಯಾತನೆಯು ಉಚಿತವಾಗಿದೆ. ಸುರಾಪಾನ, ಗೋಮಾಂಸಭಕ್ಷಣ [illegible] ಸಂಬಂಧವಾದ ದುಃಖಕ್ಕಿಂತಲೂ ಕಠಿಣವಾದ ಯಾತನೆಯು ನನಗೇ ಲಭಿಸುವುದು. ॥೬೪॥

ಅಂಗಾರಸಾಗರೇ ಕೋ ವಾ ಪ್ರಚರಿಷ್ಯತಿ ಸಾದರಂ ।
ಕಿಂಚಿದತ್ರ ತಥಾ ದುಃಖಂ ಪ್ರಚಾರೇ ನ ಭವಿಷ್ಯತಿ ॥೬೫॥

ಯದಾ ಶರೀರಮಂಗಾರಸಾಗರಾಗಾರಸಂಯುತಂ ।
ಪರದಾರಾಭಿಗಮನಂ ನ ವರಂ ನ ವರಂ ಖಲು ॥೬೬॥

ಪರದಾರಾಭಿಗಮನೇ ಯಸ್ಯೇಚ್ಛಾ ಜಾಯತೇ ತದಾ ।
ತದೈವ ನರಕಾವಾಸೋ ಜಾತಸ್ತತ್ರ ನ ಸಂಶಯಃ ॥೬೭॥

ಭ್ರಾಂತಾನಾಂ ಪರದಾರೇಷು ರತಿರ್ಭವತಿ ಯದ್ಯಪಿ ।
ತಥಾಪಿ ಸಾ ರತಿಸ್ತಸ್ಯ ನರಕಾಯ ಪ್ರಜಾಯತೇ ॥೬೮॥

ಅಘೋರನರಕದ್ವಾರಂ ಪರದಾರಾಂಗಸಂಗಮಃ ।
ತತ್ರ ಯಸ್ಯಾಸ್ತಿ ವಿರತಿಃ ಸ ಏವ ಪುರುಷೋತ್ತಮಃ ॥೭೯॥

ಯಾವ ಮನುಷ್ಯನಾದರೂ ಆಸಕ್ತಿಯಿಂದ ಬೆಂಕಿಯ ಸಮೂಹದಲ್ಲಿ ಸಂಚರಿಸುವನೇ? ಅಲ್ಲಿಯ ದುಃಖವು ಹೇಗೋ ಹಾಗೆ ಈ ಸ್ತ್ರೀಚಿಂತನಾಭೋಗವು ಅನುಭವದಿಂದಲೇ ಕಷ್ಟವೆನಿಸುವುದು. ॥೬೫॥

ನರಕಲೋಕದಲ್ಲಿ ಯಾವಾಗ ಶರೀರವು ಬೆಂಕಿಯ ಸಮೂಹದಲ್ಲಿ ಯಮದೂತರಿಂದ ಬೀಳಿಸಲ್ಪಡುವುದೋ ಆಗ ಪರಸ್ತ್ರೀಗಮನವು ಖಂಡಿತವಾಗಿಯೂ ಒಳ್ಳೆಯದಲ್ಲವೆಂಬುದು ವ್ಯಕ್ತವಾಗುವುದು. ॥೬೬॥

ಯಾವಾಗ ಯಾವ ಮನುಷ್ಯನಿಗೆ ಪರಸ್ತ್ರೀ ಗಮನದಲ್ಲಿ ಆಸೆಯು ಹುಟ್ಟುವುದೋ, ಆಕ್ಷಣದಲ್ಲಿಯೇ ಆ ಮನುಷ್ಯನಿಗೆ ನರಕವಾಸವು ಉಂಟಾಯಿತೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ॥೬೭॥

ಪುರುಷರಿಗೆ ಭ್ರಾಂತಿಯಿಂದ ಪರಸ್ತ್ರೀಯರಲ್ಲಿ ರತಿಯುಂಟಾದರೂ ಕೂಡ ಆರತಿಯು ಅವನ ನರಕವಾಸಕ್ಕೆ ಕಾರಣವಾಗುತ್ತದೆ. ॥೬೮॥

ಪರಸ್ತ್ರೀಯರ ಅಂಗಸಮಾಗಮವು ಘೋರವಾದ ನರಕಕ್ಕೆ ಬಾಗಿಲಿನಂತೆ ಇರುವುದು. ಅದರಲ್ಲಿ ಯಾವ ಮನುಷ್ಯನಿಗೆ ವೈರಾಗ್ಯವು ಹುಟ್ಟುತ್ತದೆಯೋ ಆ ಮನುಷ್ಯನೇ ಶ್ರೇಷ್ಠನೆನಿಸುವನು. ॥೬೯॥

ಅವಿವೇಕೇನ ದುಷ್ಟಾನಾಂ ಪರದಾರರತಿರ್ಭವೇತ್ ।
ತೇ ನ ಜಾನಂತಿ ತಾಂ ದೀರ್ಘಾಂ ಘೋರಾಂ ನರಕಯಾತನಾಂ॥೮೦॥

ಪರದಾರಾಂಗಸಂಗೇನ ಮಹಾಪಾತಕಕೋಟಿಯಃ ।
ತುಲಾಂ ನ ಯಾತಿ ಸಹಸಾ ಯಸ್ಮಾದ್ಭಾರತರಸ್ತು ನಃ ॥೨೦॥

ಪರದಾರಾಂಗಸಂಗೇನ ಯಾವಂತೋ ವಾ ಕ್ಷಣಾ ಗತಾಃ ।
ದುಃಖಂ ತಾವತ್ಸು ಕಲ್ಪೇಷು ಕುಂಭೀಪಾಕಾದಿಪಾತನೇ ॥೨೧॥

ಪರದಾರಾಭಿಗಮನೇ ನ ಯಸ್ಯ ವಿರತಿರ್ಭವೇತ್ ।
ಸ ತಾವಜ್ಜಾರಜೋ ಜ್ಞೇಯೋ ನರಕಾಯ ಪ್ರಕಲ್ಪಿತಃ ॥೨೨॥

ಏವಂ ಚ ನ ಮಮ ಪ್ರೀತಿಃ ಪರದಾರೇಷು ಸರ್ವಥಾ ।
ತಥಾಪಿ ಸಂಗಸ್ಸಂತ್ಯಾಜ್ಯಃ ಸ್ತ್ರೀರೇಕಾನ್ತೇ ವಿಶೇಷತಃ ॥೨೪॥

ಕೆಲವು ದುಷ್ಟರಿಗೆ ಅವಿವೇಕದಿಂದ ಅನ್ಯಸ್ತ್ರೀಯರಲ್ಲಿ ರತಿಯು ಉಂಟಾಗುತ್ತದೆ. ಆದರೆ ಅವರಿಗೆ ಆ ಬಹು ಕಠಿಣವಾಗಿರುವ ನರಕಯಾತನೆಯು ತಿಳಿದಿರುವುದಿಲ್ಲ. ॥೨೦॥

ಪರಸ್ತ್ರೀಸಂಗವನ್ನೂ, ಕೋಟ್ಯಂತರ ಮಹಾಪಾತಕಗಳನ್ನು ನಹ ತೂಗಿದರೆ, ಪರಸ್ತ್ರೀಸಂಗವು ಕೋಟ್ಯಂತರ ಪಾಪಗಳಿಗಿಂತಲೂ ಹೆಚ್ಚು ಭಾರವಾಗಿರುವುದು. ॥೨೧॥

ಮನುಷ್ಯನು ಅನ್ಯಸ್ತ್ರೀ ಸಂಗದಲ್ಲಿ ಎಷ್ಟು ಕ್ಷಣಗಳನ್ನು ಕಳೆಯುತ್ತಾನೆಯೋ, ಅವನು ಅಷ್ಟು ಕಲ್ಪಗಳು ಕುಂಭೀ ಪಾಕವೇ ಮೊದಲಾದ ನರಕಗಳಲ್ಲಿ ಬಿದ್ದು ದುಃಖವನ್ನು ಅನುಭವಿಸುತ್ತಾನೆ. ॥೨೨॥

ಪರಸ್ತ್ರೀ ಗಮನದಲ್ಲಿ ಯಾವನಿಗೆ ವಿರಾಗ ಹುಟ್ಟುವುದಿಲ್ಲವೋ ಅವನನ್ನು ಜಾರಜನೆಂದು ತಿಳಿಯಬೇಕು ಅವನಿಗೆ ನರಕವಾಸವೇ ಸಿದ್ಧವೆಂತಲೂ ಭಾವಿಸಬೇಕು. ೨೩॥

ಇಷ್ಟಾದರೂ ನನ್ನ ಮನಸ್ಸು ಪರಸ್ತ್ರೀಯರಲ್ಲಿ ಎಂದಿಗೂ ಯಾವ ಪ್ರವರ್ತಿಸುವುದಿಲ್ಲ. ಆದರೂ ಸ್ತ್ರೀಸಂಗವನ್ನು, ಅದರಲ್ಲಿಯೂ ಏಕಾಂತ ವಾಸವನ್ನು ಬಿಡಬೇಕು. ॥೨೪॥

ಗುರುತ್ವಬುದ್ಧಿರ್ಮಯಿ ಚೇತ್ತವಾಸ್ತಿ
ತದಾ ವರಂ ಯಾಹಿ ಗೃಹಂ ಸ್ವಕಂ ಶುಭೇ ।
ಅತಃ ಪರಂ ನಾತ್ರ ತವೋಚಿತಂ ಸ್ಥಿತಿಃ
ಭರ್ತ್ರಾ ಸಹ ಸ್ಥೇಯಮಿತಿ ಪ್ರಯಾಹಿ ॥೭೫॥

ಕಾಲೋಽಪಿ ಭೂಯಾನಗಮದ್ವರೇಣ್ಯೇ
ಸಂಭಾಷಣೇನೈವ ನ ತೇ ಕ್ಷುಧಾ ಕಿಂ ।
ಮಮಾಪಿ ಕಾರ್ಯಂ ಶಿವಪೂಜನಂ ಹಿ
ವ್ಯರ್ಥಪ್ರಲಾಪೈರಲಮಿತ್ಯಲಂ ಮೇ ॥೭೬॥

ಪ್ರತಿಕ್ಷಣಂ ಕ್ಷೀಣಮಿದಂ ಕಿಲಾಯುಃ
ಯದ್ಯಪ್ಯಗತಂ ತದ್ಗತಮೇವ ಶೀವ್ರಂ ।
ನ ತತ್ಸಮಾಯಾಸ್ಯತಿ ರೋದನೇಽಪಿ
ದುರ್ವಾರ್ತಯಾ ಕಿಂ ಫಲಮಸ್ತಿ ಮಾತಃ ॥೭೭॥

ಎಲೌ ಮಂಗಳಾಂಗಿಯೇ, ನನ್ನಲ್ಲಿ ನಿನಗೆ ಗುರುವೆಂಬ ಬುದ್ಧಿಯು ಇರುವು ದಾದರೆ ನೀನು ಇಲ್ಲಿ ಇರುವುದು ಉಚಿತವಲ್ಲ. ಯಾವಾಗಲೂ ಭರ್ತೃವಿನೊಡ ನೆಯೇ ಇರಬೇಕೆಂಬ ಅಭಿಪ್ರಾಯದಿಂದ ನಿನ್ನ ಮನೆಗೆ ಈಗಲೇ ಹಿಂದಿರುಗು. ॥೭೫॥

ಎಲೌ ಕಲ್ಯಾಣಾಂಗಿಯೇ, ಈ ರೀತಿಯಾದ ಸಂಭಾಷಣೆಯಿಂದಲೇ ಬಹಳ ಕಾಲವು ಕಳೆದುಹೋಯಿತು. ನಿನಗೆ ಹಸಿವಾಗುವುದಿಲ್ಲವೇ? ನನಗೂ ಶಿವಪೂಜೆ ಮಾಡುವ ಕೆಲಸವು ಬಹಳವಾಗಿರುವುದು. ಸುಮ್ಮನೇ ಈ ಕೆಲಸಕ್ಕೆ ಬಾರದ ಪ್ರಲಾಪಗಳಿಂದ ಏನೂ ಪ್ರಯೋಜನವಿಲ್ಲ. ॥೭೬॥

ತಾಯಿಯೇ, ಈ ಆಯುಸ್ಸು ಎಂಬ ವಸ್ತುವು ಕ್ಷಣಕ್ಷಣದಲ್ಲಿಯೂ ನಾಶವಾಗು ತ್ತಿರುವುದು. ಕಳೆದ ಕಾಲವು ಕಳೆದು ಹೋದಂತೆಯೇ ಸರಿ. ಪುನಃ ಎಷ್ಟು ಅತ್ತರೂ ಸಹ ಆ ಕಾಲವನ್ನು ಹಿಂದಕ್ಕೆ ಪಡೆಯಲಾಗುವುದಿಲ್ಲ. ಈಗ ಈ ವ್ಯರ್ಥಾಲಾಪಗಳಿಂದ ಯಾವ ಪ್ರಯೋಜನವೂ ಇಲ್ಲ. ॥೭೭॥

ನಿರೀಕ್ಷಣಂ ಚಾಽಪಿ ನ ರೋಚತೇ ಮೇ
ಮಾತಃ ಶರೀರಸ್ಯ ಚ ಸುಂದರಸ್ಯ ।
ತವಾಽಪಿ ದೂರೇ ವಸತಿರ್ವರಂ ಮೇ
ಮಾತಃ ಪರಂ ಕ್ರೂರವರಃ ಕಿಶೋರಃ ॥೭೮॥

ವನಾನಿ ನಾನಾವಿಧಮಾರಸೇನಾ
ವ್ಯಾಪ್ತಾನಿ ಸರ್ವಾಣಿ ಮನೋಹರಾಣಿ ।
ಪಿಕಾಸ್ತ್ವಯಾ ಪಂಚಮಚಂಚುರಾಸ್ತೇ
ದೃಷ್ಟಾಃ ಪ್ರಹೃಷ್ಟಾಃ ಕಿಮನಾದರೇಣ ॥೭೯॥

ಕೇಕೈರ್ನರೇಕೈರ್ಮದನಾನುಕೂಲೈ
ರ್ಗಂಧಾನಿಲೈಃ ಚಂಪಕಸಂಯುತೈಸ್ತತಃ ।
ಕಿಂ ಕಿಂ ನ ಕಾರ್ಯಂ ಮದನಸ್ಯ ಕಾರ್ಯಂ
ಇದಂ ವನಂ ನೋಪವನಂ ವಿಷಸ್ಯ ॥೮೦॥

ತಾಯಿಯೇ, ಮನ್ಮಥನು ಬಹಳ ಕ್ರೂರನು. ವೇಗವಾಗಿ ಓಡುವ ಕುದುರೆಗೆ ಸಮಾನನಾಗಿದ್ದಾನೆ. ಆದುದರಿಂದ ನಿನ್ನ ಈ ಅತ್ಯಂತ ಸುಂದರವಾದ ಶರೀರವನ್ನು ಪದೇಪದೇ ನೋಡುವುದೂ ನನಗೆ ಉಚಿತವೆನಿಸುವುದಿಲ್ಲ. ಅದಕ್ಕಾಗಿ ನೀನು ಈಗ ನನಗಿಂತಲೂ ದೂರದಲ್ಲಿ ವಾಸಮಾಡುವುದು ಒಳ್ಳೆಯದು. ॥೭೮॥

ಈ ಮನೋಹರವಾದ ವನಗಳೆಲ್ಲವೂ ಅನೇಕ ವಿಧವಾದ ಮನ್ಮಥನ ಸೈನ್ಯಗಳಿಂದ ಆವೃತಗಳಾಗಿವೆ. ಮತ್ತು ಇಲ್ಲಿರತಕ್ಕ ಕೋಗಿಲೆಗಳೆಲ್ಲವೂ ಮನೋಹರವಾಗಿ ಪಂಚಮಧ್ವನಿಗೈಯುತ್ತಿರುವುವು. ಇವುಗಳೆಲ್ಲಾ ಮನ್ಮಥವಿಕಾರಕ್ಕೆ ಕಾರಣಗಳಾಗುವುವು. ॥೭೯॥

ಇಲ್ಲಿ ಸಂಪಿಗೆ ಹೂವಿನ ಪರಿಮಳದಿಂದಕೂಡಿ ಮನ್ಮಥನಿಗೆ ಅನುಕೂಲವಾಗಿ ಬೀಸುತ್ತಿರುವ ಸುಗಂಧವಾಯುವನ್ನೂ, ನವಿಲುಗಳ ಧ್ವನಿಗಳನ್ನೂ ಸಹ ಯಾರು ತಾನೇ ತಡೆಯಬಲ್ಲರು ? ಇಂತಹ ಕಾಮೋದ್ರೇಕ ಕರಗಳಾದ ವಸ್ತುಗಳಿಂದ ಕೂಡಿದ ಈ ಯುದ್ಯಾನವು ನಿಜವಾಗಿಯೂ ಸುಖಸಾಧನವಾದುದಲ್ಲ. ವಿಷಪೂರಿತವಾದುದೆಂದೇ ನನ್ನ ಅಭಿಪ್ರಾಯ. ॥೮೦॥

ಕುಂದಂ ಪ್ರಪಶ್ಯೇದಮಲಿಂದವೃಂದೈಃ
ಮರಂದಲೋಲೈಃ ಸಮಲಂಕೃತಂ ಹಿ ।
ಇದಂ ತು ನೂನಂ ಮದನೋತ್ಸವಾಯ
ಮುಹುರ್ಮುಹುಃ ಪ್ರೇರಯತಿ ಪ್ರಿಯಾಂಗೇ ॥೮೧॥

ಮಾಕಂದಕಂದಾನಿ ವಿಲೋಕಯಾಶು
ತಾನ್ಯೇವ ತಾವತ್ಶಿಖಸುಂದರೀಣಾಂ ।
ವಿಲಾಸಯೋಗ್ಯಾನಿ ವಿಲೋಕಯಂತಿ
ಪಿಕಾಶ್ಚ ಕೇಕಾರವಭೀತಚಿತ್ತಾಃ ॥೮೨॥

ಅನ್ಯಾನಿ ಪುಷ್ಪಾಣಿ ಮನೋಹರಾಣಿ
ತಾನ್ಯೇವ ತಾವನ್ಮದನಾಯುಧಾನಿ ।
ಇತಸ್ತತೋ ಯಾತಿ ಸುಗಂಧವಾಯುಃ
ಅತಃ ಸುತೇ ಸತ್ವರಮೇವ ಯಾಹಿ ॥೮೩॥

ಮಕರಂದದಿಂಲೂ, ಅದನ್ನು ಪಾನಮಾಡತೊಡಗಿರುವ ಮನೋಹರಗಳಾದ ಭ್ರಮರಗಳಿಂದಲೂ ಬಹುಸಂದರವಾಗಿ ಕಂಡುಬರುವ ಕೋಲು ಮಲ್ಲಿಗೆಯ ಹೂಗಳನ್ನು ನೋಡು. ಇದು ಮದನೋತ್ಸವಕ್ಕಾಗಿ ಪ್ರೇರಿಸುವಂತಿವೆ. ||೮೧||

ಈ ಸಿಹಿ ಮಾವಿನಮರದ ಪುಷ್ಪಗುಚ್ಛಗಳನ್ನೂ ನೋಡು. ತಮ್ಮಿಂವಲೇ ಕೂಗಲ್ಪಟ್ಟ ಕೇಕಾಧ್ವನಿಗೆ ತಾವುಗಳೇ ಬೆರಗಾಗಿ ಈ ಸುಂದರವಾದ ಸ್ತ್ರೀ ನವಿಲುಗಳು ಆ ಕಂದಗಳನ್ನೆಲ್ಲ ತಮ್ಮ ವಿಲಾಸಕ್ಕೆ ಯೋಗ್ಯವಾದುವುಗಳನ್ನಾಗಿ ಮಾಡಿಕೊಳ್ಳುತ್ತಿವೆ. ||೮೨||

ಮತ್ತು ಇನ್ನೂ ಮನಮೋಹಕಗಳಾದ ಹೂಗಳನ್ನು ನೋಡು. ಆ ಪುಷ್ಪಗಳೇ ಮನ್ಮಥನಿಗೆ ಆಯುಧಗಳಾಗಿರುತ್ತವೆ. ಇಲ್ಲಿಂದಲ್ಲಿಗೆ ಸುಗಂಧಮಯವಾದ ವಾಯುವು ಬೀಸುತ್ತಿರುವುದು. ಆದ್ದರಿಂದ ಜಾಗ್ರತೆಯಾಗಿ ನೀನು ಇಲ್ಲಿಂದ ಹೊರಡು. ||೮೩||

ಇತೋ ಯದಿ ಸ್ಯಾದ್ಗಮನಂ ತವಾದ್ಯ
ತದೈವ ತಾವದ್ವನಮಿತ್ಯವೈಮಿ ।
ಮಹೇಶಪೂಜಾಪ್ರತಿಬಂಧಕಸ್ಯ
ನಿವೃತ್ತಿರಸ್ಮಾಕಮಪೇಕ್ಷಿತಂ ಹಿ ॥೮೪॥

ಮಹೇಶಪೂಜಾಪ್ರತಿಬಂಧಕತ್ವಂ
ಮಹಾಘಕೂಟಸ್ಯ ಫಲಂ ತದೇವ ।
ಹೇತುರ್ಯಮಾವಾಸಜದುಃಖಭೋಗ
ಸಂಮೋಹಮಾತ್ರಸ್ಯ ನ ಸಂಶಯೋಽತ್ರ ॥೮೫॥

ಮಹೇಶ್ವರಾರಾಧನಸಾಧನಾನಾಂ
ಸಂಪಾದನೇ ಯಃ ಪ್ರತಿಬಂಧಮಾತ್ರಂ ।
ಕರೋತಿ ತದ್ವಂಶಹುತಾಶನಸ್ಯ
ಸ ಏವ ಯತ್ನಃ ಪ್ರತಿಬಂಧರೂಪಃ ॥೮೬॥

ನೀನು ಈ ಕೂಡಲೇ ಇಲ್ಲಿಂದ ಹೊರಟೆಯಾದರೆ ಆಗ ನಾನು ಇದನ್ನು ನಿಜವಾದ ಉದ್ಯಾನವೆಂದು ತಿಳಿಯುತ್ತೇನೆ. ನಮಗೆ ಬೇಕಾಗಿರುವುದು ಮಹೇಶ್ವರನ ಪೂಜೆಗೆ ನಿರ್ವಿಘ್ನತೆಯು. ನಿನ್ನ ಗಮನದಿಂದ ಈಶ್ವರಪೂಜೆಯು ಸುಲಭವಾಗಿ ಮುಂದುವರಿಯುವುದು. ||೮೪||

ಮಹೇಶಪೂಜೆಗೆ ಪ್ರತಿಬಂಧಕವಾಗುವುದು ಮಹಾಪಾಪಗಳ ಫಲವೆಂದು ತಿಳಿ. ಅಲ್ಲದೆ ಈರೀತಿ ಶಿವಪೂಜೆಗೆ ಅಡ್ಡಿಮಾಡುವುದು ಯಮನ ನರಕದುಃಖಾನುಭವಕ್ಕೆ ಮುಖ್ಯಕಾರಣವಾಗುವುದೆಂದೂ ಅರಿಯಬೇಕು. ||೮೫||

ಯಾರು ಈಶ್ವರಪೂಜೆಗೆ ಸಾಧಕಗಳಾದ ಸಾಮಗ್ರಿಗಳನ್ನು ಸಂಪಾದನೆ ಮಾಡುವುದರಲ್ಲಿ ಪ್ರತಿಬಂಧಕವನ್ನು ಹೂಡುವರೋ, ಅವರು ತಮ್ಮ ವಂಶಕ್ಕೆ ತಾವೇ ಬೆಂಕಿಯನ್ನಿಡಲು ಪ್ರಯತ್ನಿಸಿದಂತಾಗುವರು. ||೮೬||

ಶಿವಾರ್ಚನೇ ಕಃ ಪ್ರತಿಬಂಧಮದ್ಯ
ಕರೋತಿ ಸಾಪಿಷ್ಠವರಂ ವಿನಾ ತು ।
ಸ ಕಾಕಯೋನಿಂ ಶುನಕಸ್ಯ ಯೋನಿಂ
ಪ್ರಯಾತಿ ಯಸ್ತತ್ಪ್ರತಿಬಂಧಕಸ್ಸ್ಯಾತ್ ॥೮೭॥

ಇದಂ ಶಿವಸ್ಥಾನಮತಿಪ್ರಶಸ್ತಂ
ಲಿಂಗಂ ಚ ತುಂಗಂ ಶಿವಲೀಲಯಾಽಪಿ ।
ಸಂಕೀರ್ಣಮೇತಸ್ಯ ತು ಪೂಜನೇನ
ಮುಕ್ತಿಃ ಕರಸ್ಥಾ ಭವತೀತಿ ಮನ್ಯೇ ॥೮೮॥

ಅಹೋ ಕಥಂ ಲಿಂಗಮಿದಂ ಮನೋಜ್ಞಂ
ಮುಕ್ತಿಪ್ರಪಾರೂಪಮಿತಿ ಸ್ಮರಂತಿ ।
ತಾವನ್ಮಹಾದೇವಸದಾರ್ಚಕಾಸ್ತು
ಬುಧ್ಯಾ ತಯಾ ಶಂಕರಮಾವಿಶಂತಿ ॥೮೯॥

ಪತ್ರಂ ಫಲಂ ವಾ ಜಲಮತ್ರ ದತ್ತಂ
ಅನಂತಪಾಪೌಘವಿನಾಶಕಂ ಹಿ ।

ಈ ರೀತಿ ಶಿವಾರ್ಚನೆಯಲ್ಲಿ ಪ್ರತಿಬಂಧಕವನ್ನು ಉಂಟುಮಾಡತಕ್ಕ ಮನುಷ್ಯನು ಪರಮಪಾಪಿಯಲ್ಲದೆ ಮತ್ತೇನು. ಅಂತಹ ಮನುಜನು ಕಾಕಯೋನಿಯಲ್ಲಿಯೋ, ಅಥವಾ ನಾಯಿಯ ಜನ್ಮದಲ್ಲಿಯೋ ಅವತರಿಸುವನು. ॥೮೭॥

ಈ ಸ್ಥಳದಲ್ಲಿ ದೊಡ್ಡದಾಗಿರುವ ಶಿವಲಿಂಗವಿದೆ. ಆದುದರಿಂದ ಇದನ್ನು ಶಿವಸ್ಥಾನವೆಂದೇ ತಿಳಿಯಬಹುದು. ಇಲ್ಲಿ ಮಾಡುವ ಶಿವಲಿಂಗಪೂಜೆಯಿಂದ ಮುಕ್ತಿಯು ಕೈಯಲ್ಲಿಯೇ ಇದೆ ಎಂಬುದಾಗಿ ತಿಳಿದಿರುತ್ತೇನೆ. ॥೮೮॥

ಮನೋಹರವಾಗಿರತಕ್ಕ ಈ ಶಿವಲಿಂಗವು ಮೋಕ್ಷಮಾರ್ಗದ ಅರವಟ್ಟಿಗೆಯೆಂದು ಹೇಳುವರು. ಆದ್ದರಿಂದ ಮಹಾದೇವಾರ್ಚಕರಾದವರು ಬುದ್ಧಿಪೂರ್ವಕವಾಗಿ ಈ ಲಿಂಗವನ್ನು ದರ್ಶನಮಾಡಿಯೇ ಹೋಗುವರು. ॥೮೯॥

ಎಲೌ ತಾಯಿಯೇ, ಪತ್ರ, ಫಲ ಅಥವಾ ನೀರು ಇವುಗಳಲ್ಲಿ ಯಾವುದನ್ನು ಇಲ್ಲಿ ಕೊಟ್ಟರೂ ಅದು ಅನಂತ ಪಾಪಗಳನ್ನು ನಾಶಮಾಡುತ್ತದೆ. ಆದುದರಿಂದ

ಅತಃ ಪರಂ ಮಾತರಯಂ ವಿಲಂಬಃ
ಸೋಢುಂ ನ ಶಕ್ಯಃ ಶಿವಪೂಜನಾಯ ॥೯೦॥

ವನಾನಿ ತಾವದ್ವನಜಾನ್ವಿತಾನಿ
ವನಾನಿ ಸಂತ್ಯತ್ರ ಮನೋಹರಾಣಿ ।
ತೈರಸ್ಯ ಲಿಂಗಾನಿ ವಿಶೇಷತೋಽದ್ಯ
ಕಾರ್ಯಂ ಮಯಾ ಪೂಜನಮಂಬ ಯಾಹಿ ॥೯೧॥

ಆಯುಃ ಕ್ಷೀಣಮಿದಂ ಪ್ರತಿಕ್ಷಣಮಹೋ ಮೃತ್ಯುಃ ಶಿರಸ್ಯಸ್ತ್ಯಯಂ
ಕುರ್ವನ್ನೇವ ಕೃತಾಘಸಂಘಗಣನಾಂ ನಾಯಾತಿ ಚಾಯುರ್ಗತಂ ।
ಶಂಭುರ್ನಾರ್ಚಿತ ಏವ ನಾಪಿ ಸ ಮನಾಗಾರಾಧಿತಃ ಶೈಲಜಾ
ವಕ್ಷೋಜಾಂಚಿತಕುಂಕುಮಾಂಕಿತಪದಾಂಭೋಜಃ ಕ್ಷಣಂ ವಾ ಮಯಾ
॥೯೨॥

ಇನ್ನೂ ಶಿವಪೂಜೆಯನ್ನು ಮಾಡುವುದಕ್ಕೆ ಈ ವಿಲಂಬವನ್ನು ನಾನು ಸಹಿಸಲಾರೆನು. ॥೯೦॥

ಎಲೌ ತಾಯಿಯೇ, ಕಮಲಗಳಿಂದ ಕೂಡಿದುದಾಗಿಯೂ ಮನೋಹರವಾಗಿಯೂ ಇರತಕ್ಕ ವನಗಳು ಬಹಳವಾಗಿವೆ. ಆ ವನಗಳಲ್ಲಿರತಕ್ಕ ಕಮಲಗಳಿಂದ ನಾನು ಈಗ ಶಿವಲಿಂಗಪೂಜೆಯನ್ನು ಮಾಡಬೇಕಾಗಿದೆ. ಆದುದರಿಂದ ನೀನು ಇಲ್ಲಿಂದ ಹೊರಟುಹೋಗು. ॥೯೧॥

ಈ ಆಯುಸ್ಸು ಕ್ಷಣಕ್ಷಣಕ್ಕೂ ಕ್ಷೀಣವಾಗುತ್ತಿರುವುದು. ತಲೆಯ ಮೇಲೆ ಮೃತ್ಯುದೇವತೆಯು, ಮನುಷ್ಯನು ಮಾಡತಕ್ಕ ಪಾಪರಾಶಿಗಳನ್ನೇ ಗಣನ ಮಾಡುತ್ತಾ ಇರುವಳು. ಕಳೆದ ಆಯುಸ್ಸು ಮತ್ತೆ ಬರುವಂತಿಲ್ಲ. ಹಾಗಾದರೂ ಪಾರ್ವತಿಯ ಆಲಿಂಗನದಿಂದ ಈಶ್ವರನ ಅವಯವವೂ ಸಹ ಕುಂಕುಮಯುಕ್ತವಾಗಿದೆಯೆಂದು ಧ್ಯಾನಿಸಿ ಅಂತಹ ಈಶ್ವರನ ಚರಣಕಮಲಗಳನ್ನು ಸಹ ನಾನು ಪೂಜಿಸಲಿಲ್ಲ. ॥೯೨॥

ಆಯುಃ ಶಂಕರಪೂಜಯಾ ಯದಿ ಭವೇತ್ ಕ್ಷೀಣಂ ತದಾ ತತ್ಪರಂ
ಧನ್ಯಂ ಧನ್ಯತಮಂ ಚ ಯದ್ಯಪಿ ಭವೇದ್ವ್ಯರ್ಥಂ ತದಾ ಕುತ್ಸಿತಂ ।
ತಸ್ಮಾದಾಶು ಮಹೇಶಪೂಜನಮನೇನೈವಾಯುಷಾ ಸರ್ವದಾ
ಕರ್ತವ್ಯಂ ತದುಮಾಸಹಾಯಚರಣಾಂಭೋಜಪ್ರಸೂನಾಯ ಮೇ ॥೯೩॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಯಾಜ್ಞವಲ್ಕ್ಯ ಜನಕಸಂವಾದೇ ರಾಜಪುತ್ರ ರಾಜಪತ್ನ್ಯುಪದೇಶವರ್ಣನಂ
ನಾಮ ಪ್ರಥಮೋಽಧ್ಯಾಯಃ

ಆಯುಸ್ಸು ಎಂಬುದು ವ್ಯರ್ಥವೂ, ಕುತ್ಸಿತವೂ ಆಗಿದ್ದರೂ, ಅದು ಶಂಕರ ಪೂಜೆಮಾಡುವುದರಿಂದಲೇ ಕ್ಷೀಣವಾಗುವುದಾದರೆ ಅಂತಹ ಆಯುಸ್ಸು ಶ್ರೇಷ್ಠವೆನಿಸುವುದು. ಆದುದರಿಂದ ಪಾರ್ವತೀಸಹಿತನಾಗಿರುವ ಈಶ್ವರನ ಚರಣ ಕಮಲವೇ ನನ್ನ ಪೂಜೆಗೂ ಆಯುಸ್ಸಿಗೂ ಫಲವಾಗಬೇಕೆಂಬ ಅಭಿಲಾಷೆಯಿಂದ ಮಹೇಶಪೂಜೆಯಲ್ಲಿಯೇ ಮನಸ್ಸಿಟ್ಟು ಯಾವಾಗಲೂ ಆಯುಸ್ಸನ್ನು ಹಿಸಿಯೋಗಿಸು ವೆನು." ಎಂದು ರಾಜಪುತ್ರನು, ರಾಜಪತ್ನಿಗೆ ಉಪದೇಶಿಸಿದನು. ॥೯೩॥

ಇಲ್ಲಿಗೆ ಶಿವರಹಸ್ಯದಲ್ಲಿ ಹರನಾಮಕವಾದ ಮೂರನೆಯ ಅಂಶದ ಉತ್ತರಾರ್ಧದಲ್ಲಿ
ಯಾಜ್ಞ್ಯವಲ್ಕ್ಯ, ಜನಕ ಇವರ ಸಂವಾದ ರೂಪವಾಗಿ ರಾಜಪುತ್ರನು,
ರಾಜಪತ್ನಿಗೆ ಉಪದೇಶಮಾಡಿದ್ದನ್ನು ತಿಳಿಸುವ
ಮೊದಲನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ದ್ವಿತೀಯೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತಿ ತಸ್ಮಿನ್ವದತ್ಯೇವ ನಾರೀರತ್ನಂ ಸಖೀಜನಃ ।
ಸಾ ರಾಜ್ಞೀ ಕ್ವ ಗತೇತ್ಯಾಶು ಶಿವಾಲಯಮುಪಾಗತಃ ||೧||

ತಂ ದೃಷ್ಟ್ವಾ ದೂರತೋ ಭೂಪಂ ಮದನಾಪರವಿಗ್ರಹಂ ।
ಮದನೋನ್ಮಾದಸಂವೀತಃ ಸ ತು ರಂತುಂ ಮನೋ ದಧೇ ||೨||

ತತಃ ಕಾಚಿತ್ಕರಾಗ್ರೇಣ ತಮಾಕೃಷ್ಯ ಮುದಾನ್ವಿತಾ ।
ಅಯಂ ಮಮೇತಿ ಮನುತೇ ಮಮೇತ್ಯನ್ಯಾ ಮಮೇತಿ ಚ ||೩||

---

### ಎರಡನೆಯ ಅಧ್ಯಾಯ

ರಾಜನು ಹಿಂದೆ ಹೇಳಿದಂತೆ ಆ ನಾರೀಮಣಿಯನ್ನು ಕುರಿತು ಹಾಗೆ ಹೇಳುತ್ತಿರಲಾಗಿ, ಆಕೆಯ ಸಖೀಜನರು ಮಹಾರಾಣಿಯನ್ನು ಹುಡುಕಿಕೊಂಡು ಶಿವಾಲಯಕ್ಕೆ ಬಂದರು. ||೧||

ಅಲ್ಲಿ ಮನ್ಮಥನ ಅಪರಾವತಾರವೋ ಎಂಬಂತೆ ಸೌಂದರ್ಯಶಾಲಿಯಾಗಿರುವ ಆ ರಾಜನನ್ನು ದೂರದಿಂದಲೇ ಕಂಡು ಕಾಮೋದ್ರಿಕ್ತರಾಗಿ ಆ ಸಖೀಜನರು ಆ ರಾಜನೊಡನೆ ರಮಿಸಲು ಮನಸ್ಸುಳ್ಳವರಾದರು. ||೨||

ಮತ್ತು ಆತನನ್ನು ಕೈಯಿಂದ ತೋರಿಸುತ್ತಾ ಈತನು ನನಗೆ ಪತಿಯಾಗುವನು ಎಂದು ಕೆಲವರೂ, ಈತನು ನನ್ನ ಒಡೆಯನು ಎಂದು ಮತ್ತೆ ಕೆಲವರೂ, ತಿಳಿಯುತ್ತಿದ್ದರು. ||೩||

ಏವಂ ಸಖೀಜನಸ್ಸರ್ವಃ ಸಮಾವೃತ್ಯ ಸ್ಥಿತಸ್ಸದಾ ।
ತದಾ ರಾಜಾಽಪಿ ನಿರ್ವಿಣ್ಣಃ ತರುಣೀಕರಸಂವೃತಃ ॥೪॥

ಕಾಚಿದಾಲಿಂಗ್ಯ ತಂ ಭೂಪಂ ತುಷ್ಟಾ ಭವತಿ ಕಾಚನ ।
ತಾಂ ದೂರೀಕೃತ್ಯ ಕಾಪ್ಯನ್ಯಾ ತಮಾಲಿಂಗ್ಯಾಧಿತಿಷ್ಠತಿ ॥೫॥

ನಿರಾಕೃತಾ ಸಾ ಕಯಾಪಿ ಸಾ ಕಯಾಽಪಿ ನಿರಾಕೃತಾ ।
ಏವಂ ತದಂಗಸಂಗೇನ ತಾಃ ಸರ್ವಾಃ ಮದವಿಹ್ವಲಾಃ ॥೬॥

ಮದನೋಽಯಂ ಸಮಾಗತ್ಯ ವನೇ ಕ್ರೀಡತಿ ಸಾದರಂ ।
ನಾಯಂ ತ್ಯಾಜ್ಯ ಇತಿ ಪ್ರಾಹುಸ್ತರುಣ್ಯಸ್ತಾಃ ಸಹಸ್ರಶಃ ॥೭॥

ಸ ರಾಜಾ ಕಷ್ಟಮೇತಾವತ್ಕಥಮಾಗತಮಿತ್ಯಪಿ ।
ಚಿಂತಯಾ ವ್ಯಾಕುಲಸ್ತತ್ರ ಚಿಂತಯಾ ಕಿಂ ತಯಾ ತಯಾ ॥೮॥

ಈ ರೀತಿಯಾಗಿ ತಿಳಿಯುತ್ತಾ ಆ ಸಖೀಜನರು ರಾಜನನ್ನು ಸುತ್ತುವರಿದರು. ಅವರೆಲ್ಲರ ಮಧ್ಯದಲ್ಲಿ ವೈರಾಗ್ಯಶಿಖಾಮಣಿಯಾದ ರಾಜನು ಸಿಕ್ಕಿಬಿದ್ದನು. ||೪||

ಆ ರಾಣಿಯ ಸಖಿಯರ ಪೈಕಿ ಒಬ್ಬಳು, ಆ ರಾಜನನ್ನು ಮೊದಲು ಆಲಿಂಗಿಸಿಕೊಂಡಳು. ಇನ್ನೊಬ್ಬಳು ಅವಳನ್ನು ಒಂದು ಕಡೆಗೆ ನೂಕಿ ತಾನು ಆ ರಾಜನನ್ನು ಅನಂತರ ಆಲಿಂಗಿಸಿಕೊಂಡಳು. ಇನ್ನೊಬ್ಬಳು ಅವಳನ್ನು ಒಂದು ಕಡೆಗೆ ನೂಕಿ ತಾನು ಆ ರಾಜನನ್ನು ಆಲಿಂಗಿಸಿದಳು. ||೫||

ಅವಳನ್ನೂ ಸಹ ನಿರಾಕರಿಸಿ ಇನ್ನೊಬ್ಬಳೂ, ಅವಳನ್ನು ತಳ್ಳಿ ಮತ್ತೊಬ್ಬಳೂ ಈ ರೀತಿಯಾಗಿ ಕಾಮೋದ್ರಿಕ್ತರಾಗಿರತಕ್ಕ ಆ ತರುಣಿಯರು ಅವನನ್ನು ಬಾರಿ ಬಾರಿಗೂ ಆಲಿಂಗಿಸುತ್ತಾ, "ಇವನು ಸಾಕ್ಷಾನ್ಮದನನೇ ಇರಬೇಕು. ಈ ಕಾಡಿನಲ್ಲಿ ಆಟವಾಡಲು ಬಂದಿರುವನು. ಈತನನ್ನು ಬಿಡಬಾರದು" ಎಂದು ಹೇಳುತ್ತಿದ್ದರು. ||೬-೭||

ಆ ರಾಜನು ಈ ವಿಧದ ಕಷ್ಟವು ತನಗೆ ಏತಕ್ಕೆ ಬಂದಿತೆಂದು ಬಹಳ ಆಲೋಚಿಸಿ ಪುನಃ ಪುನಃ ಆಲೋಚಿಸುತ್ತಾ ವ್ಯಾಕುಲಿತನಾದನು. ||೮||

ಅಪರಾಧಃ ಕೃತಃ ಕೋ ವಾ ಮದನಾರೇಃ ಪುರಾ ಮಯಾ ।
ನಾರೀಶರೀರರೂಪೋಽಯಮಾಯಾತ್ಯಂಗಾರಸಾಗರಃ ॥೯॥

ಅಹೋ ಕಿಂ ದುರದೃಷ್ಟಂ ಮೇ ಶಿಪಿವಿಷ್ಟ ಮಹಾಪ್ರಭೋ ।
ನಾರೀಶರೀರರೂಪೋಽಯಮಾಯಾತ್ಯಂಗಾರಸಾಗರಃ ॥೧೦॥

ಮಯಾ ಕಸ್ಯ ಮುಖಂ ದೃಷ್ಟಮಶ್ವೈವಸ್ಯಾದ್ಯ ಸತ್ವರಂ ।
ನಾರೀಶರೀರರೂಪೋಽಯಮಾಯಾತ್ಯಂಗಾರಸಾಗರಃ ॥೧೧॥

ಭಸ್ಮನೋದ್ಧೂಳನಂ ಪ್ರಾಯಃ ಪ್ರಾತರ್ನಕೃತಮಿತ್ಯತಃ ।
ನಾರೀಶರೀರರೂಪೋಽಯಮಾಯಾತ್ಯಂಗಾರಸಾಗರಃ ॥೧೨॥

ತ್ರಿಪುಂಡ್ರಧಾರಣಂ ಪ್ರಾಯಃ ಪ್ರಾತರ್ನ ಕೃತಮಿತ್ಯತಃ ।
ನಾರೀಶರೀರರೂಪೋಽಯಮಾಯಾತ್ಯಂಗಾರಸಾಗರಃ ॥೧೩॥

ರುದ್ರಾಕ್ಷಧಾರಣಂ ಪ್ರಾಯಃ ಪ್ರಾತರ್ನ ಕೃತಮಿತ್ಯತಃ ।
ನಾರೀಶರೀರರೂಪೋಽಯಮಾಯಾತ್ಯಂಗಾರಸಾಗರಃ ॥೧೪॥

ಶಿವಲಿಂಗಾರ್ಚನಂ ಪ್ರಾಯಃ ಪ್ರಾತರ್ನಕೃತಮಿತ್ಯತಃ ।
ನಾರೀಶರೀರರೂಪೋಽಯಮಾಯಾತ್ಯಂಗಾರಸಾಗರಃ ॥೧೫॥

ಬಿಲ್ವಪತ್ರೈರ್ಮಹಾದೇವಃ ಪ್ರಾತರ್ನಾಭ್ಯರ್ಚಿತಸ್ತತಃ ।
ನಾರೀಶರೀರರೂಪೋಽಯಮಾಯಾತ್ಯಂಗಾರಸಾಗರಃ ॥೧೬॥

ಮತ್ತು ಈ ರಾಣಿಯ ಸಖೀಜನರನ್ನು ಕಂಡು ಇದು ಮಹೇಶ್ವರನ ಪೂಜೆಗೆ ಸಂಪೂರ್ಣ ವಿಘ್ನಕಾರಿಯಾದುದು. ಆ ವಿಘ್ನವೇ ಈ ನಾರೀಶರೀರವನ್ನು ಧರಿಸಿ ಕೊಂಡು ಬಂದಿರಬಹುದು. ಎಂದು ಭಾವಿಸಿದವನಾಗಿ ಅದಕ್ಕೆ ಕಾರಣವನ್ನು ಸಹ ಯೋಚಿಸಲಾರಂಭಿಸಿದನು. ಈ ನಾರೀಶರೀರವು ನನಗೆ ಬೆಂಕಿಯ ರಾಶಿಯಂತೆ ಕಾಣುತ್ತಿದೆ. ಇದು ಯಾವ ಪಾಪದಿಂದ ಬಂದಿರಬಹುದು. ಪರಮೇಶ್ವರನಲ್ಲಿ ನಾನು ಏನೋ ಅಪರಾಧವೆಸಗಿರಬೇಕು. ಪರಶಿವನೇ, ಇದು ನನ್ನ ಎಂತಹ ದುರದೃಷ್ಟ? ನಾನು ನಿನ್ನ ಭಕ್ತನಲ್ಲದ ಯಾವುದೋ ಪಾಪಿಯ ಮುಖವನ್ನಾದರೂ ನೋಡಿದೆನೇ?

ಶಿವಲಿಂಗೇ ನಿರಾಧಾರಾ ನ ಮಯಾ ಕಲ್ಪಿತಾ ತತಃ ।
ನಾರೀಶರೀರರೂಪೋಽಯಂ ಮಾಯಯಾತ್ಯಂಗಾರಸಾಗರಃ ॥೧೭॥

ನ ಧೂಪದೀಪೌ ದತ್ತೌ ಚ ಲಿಂಗರೂಪಾಯ ಶಂಭವೇ ।
ನಾರೀಶರೀರರೂಪೋಽಯಂ ಮಾಯಯಾತ್ಯಂಗಾರಸಾಗರಃ ॥೧೮॥

ನೈವೇದ್ಯಂ ನ ಮಯಾ ದತ್ತಂ ಪ್ರಾತಃ ಶರ್ವಾಯ ಸಾದರಂ ।
ನಾರೀಶರೀರರೂಪೋಽಯಂ ಮಾಯಯಾತ್ಯಂಗಾರಸಾಗರಃ ॥೧೯॥

ಪ್ರಾಯೋ ನ ಪ್ರಣತಃ ಶಂಭುಃ ಪ್ರದಕ್ಷಿಣಪುರಸ್ಸರಂ ।
ನಾರೀಶರೀರರೂಪೋಽಯಂ ಮಾಯಯಾತ್ಯಂಗಾರಸಾಗರಃ ॥೨೦॥

ನ ಧ್ಯಾತಃ ಪ್ರಾಯಶಃ ಶಂಭುರ್ಗಣನಾಯಕವಂದಿತಃ ।
ನಾರೀಶರೀರರೂಪೋಽಯಂ ಮಾಯಯಾತ್ಯಂಗಾರಸಾಗರಃ ॥೨೧॥

ಪ್ರಾಯಃ ಶಾಂಭವಪೂಜಾಪ್ಯ ನ ಕೃತಾನೇನ ಸತ್ವರಂ ।
ನಾರೀಶರೀರರೂಪೋಽಯಂ ಮಾಯಯಾತ್ಯಂಗಾರಸಾಗರಃ ॥೨೨॥

ಮಹೇಶಾರ್ಚನವಿಘ್ನೋಽಯಂ ಕಥಮದ್ಯ ಸಮಾಗತಃ ।
ನಾರೀಶರೀರರೂಪೋಽಯಂ ಮಾಯಯಾತ್ಯಂಗಾರಸಾಗರಃ ॥೨೩॥

ಅಥವಾ ಪ್ರಾತಃಕಾಲ ನಾನು ಭಸ್ಮೋದ್ಧೂಳನ ಮಾಡದಿದ್ದುದೇ ಇದಕ್ಕೆ ಕಾರಣವಿರಬಹುದೇ? ಒಂದುವೇಳೆ ತ್ರಿಪುಂಡ್ರಧಾರಣೆಯನ್ನು ಮರೆತುಬಿಟ್ಟನೇ! ಅಥವಾ ರುದ್ರಾಕ್ಷಧಾರಣ, ಶಿವಲಿಂಗಾರ್ಚನ ಇವುಗಳೆಲ್ಲವನ್ನೂ ಮಾಡಲಿಲ್ಲವೇ? ಅಥವಾ ನಾನು ಈಶ್ವರನನ್ನು ಬಿಲ್ವಪತ್ರೆಗಳಿಂದ ಆರಾಧಿಸಲಿಲ್ಲವೋ ಏನೋ! ಶಿವಲಿಂಗದಲ್ಲಿ ನೀರನ್ನು ಧಾರಾಕಾರವಾಗಿ ಅಭಿಷೇಕಮಾಡಲಿಲ್ಲವೆಂದು ತೋರುವುದು. ಮತ್ತು ಆ ಲಿಂಗರೂಪದಲ್ಲಿರುವ ಶಂಭುವಿಗೆ ಧೂಪ, ದೀಪಗಳನ್ನು ಸಮರ್ಪಿಸಲಿಲ್ಲವೆ! ನಾನು ಆದರದಿಂದ ಶಿವನಿಗೆ ನೈವೇದ್ಯವನ್ನು ಕೊಟ್ಟಂತಿಲ್ಲ. ಪ್ರದಕ್ಷಿಣಪುರಸ್ಸರನಾಗಿ ಶಂಭುವನ್ನು ನಮಸ್ಕರಿಸದೆ ಇರಬಹುದು. ಎಂತೆಂತಹ ಗಣನಾಯಕರೂ ಸಹ ಈಶ್ವರನನ್ನು ವಂದಿಸುತ್ತಾರೆ. ಅಂತಹ ಈಶ್ವರನನ್ನು ನಾನು ಧ್ಯಾನಿಸದಿರುವುದು ಅಥವಾ ಈಶ್ವರಪೂಜೆಯನ್ನು ಅಲಕ್ಷ್ಯವಾಗಿ ಕಾಣುವುದು ನನಗೆ ಧರ್ಮವೇ? ಪ್ರಾಯಶಃ ಭಕ್ತಿ ಮತ್ತು ಶ್ರದ್ಧೆಗಳಿಂದ ಈಶ್ವರ ಕಥೆಯನ್ನು ಕೇಳದಿರಬಹುದು. ಈ ನನ್ನ

ಪ್ರಾಯಃ ಶಿವಕಥಾಽಪ್ಯದ್ಯ ನ ಶ್ರುತಾ ಭಕ್ತಿಪೂರ್ವಕಂ ।
ನಾರೀಶರೀರರೂಪೋಽಯಮಾಯಾತ್ಯಂಗಾರಸಾಗರಃ ॥೨೪॥

ನಾರೀಶರೀರರೂಪೇಣ ಕಿಂ ವಿಧೇಯಮಿತಃಪರಂ ।
ಕರೈರಾಕರ್ಷಯಂತ್ಯೇತಾಃ ಸರ್ವಾಸ್ತಾವನ್ಮಮೇತ್ಯಯಂ ॥೨೫॥

ಪತಂತ್ಯಂಗೇ ಮಮೋತ್ಸಂಗೇ ತುಂಗಾಂಗಾರನಿಭಪ್ರಭಾಃ ।
ಅಹೋ ಕಿಮಿದಮಾಶ್ಚರ್ಯಂ ಸೃಷ್ಟಮೀಶ ತ್ವಯಾಧುನಾ ॥೨೬॥

ಕೋಪಸೃಷ್ಟಿರಿಯಂ ಪ್ರಾಯೋ ನಾಂಗನಾಸೃಷ್ಟಿರಿಷ್ಟದಾ ।
ಏತಾಸಾಂ ಮಾರಥೀರ್ಜಾತಾ ಮಯಿ ಸುಂದರವಿಗ್ರಹೇ ॥೨೭॥

ನ ಮೇ ಮಾರದಶಾಮೇವಂ ಪ್ರಾಪಯಾಮೇಯ ಶಂಕರ ।
ನಿವಾರಯ ಮಹತ್ಕಷ್ಟಮಿದಮೇತಾದೃಶಂ ಪ್ರಭೋ ॥೨೮॥

ಕರ್ತವ್ಯಲೋಪದಿಂದಲೇ ಅಗ್ನಿಸಾಗರದಂತಿರುವ ಈ ನಾರೀಶರೀರವು ಮಹೇಶ್ವರನಪೂಜೆಗೆ ವಿಘ್ನವಾಗಿ ಒದಗಿಬಂದಿದೆ ಎಂದು ರಾಜನು ಯೋಚಿಸಿದನು. ||೯-೧೦-೧೧-೧೨-೧೩-೧೪-೧೫-೧೬-೧೭-೧೮-೧೯-೨೦-೨೧-೨೨-೨೩-೨೪||

ಮತ್ತು ಈ ಎಲ್ಲಾ ಸ್ತ್ರೀಯರೂ ಇವನು ನನ್ನವನು ಎಂಬುದಾಗಿ ಕೈಗಳಿಂದ ನನ್ನನ್ನು ಎಳೆಯುತ್ತಲಿದ್ದಾರೆ. ಈಗ ಏನನ್ನು ತಾನೇ ಮಾಡಲು ಸಾಧ್ಯವಾದೀತು ? ||೨೫||

ಎಲೈ ಈಶ್ವರನೇ, ಇದೇನಾಶ್ಚರ್ಯ! ನೀನು ಪ್ರಪಂಚದಲ್ಲಿ ಎಂತಹ ವೈಚಿತ್ರ್ಯವನ್ನು ಸೃಷ್ಟಿಸಿದ್ದೀಯೋ? ಈ ಸ್ತ್ರೀಯರು ನನ್ನ ಅಂಗಗಳಲ್ಲಿಯೂ ಉತ್ಸಂಗದಲ್ಲಿಯೂ ಸಹ ಬೀಳುತ್ತಿರುವರು. ಇವರು ನನಗೆ ಉರಿಯುವ ಕೆಂಡಗಳಂತಿರುವರು. ||೨೬||

ನಾನು ಸುಂದರಾಕಾರವುಳ್ಳವನಾಗಿದ್ದ ಮಾತ್ರಕ್ಕೆ, ಈ ಸ್ತ್ರೀಯರಿಗೆ ಮನ್ಮಥ ವಿಕಾರವು ಉಂಟಾಯಿತು. ಇದು ನ್ಯಾಯವೇ ? ಇದನ್ನು ನೋಡಿದರೆ "ಶಂಕರನೇ, ನೀನು ಕೋಪಯುಕ್ತನಾಗಿ ಈ ಸ್ತ್ರೀಸೃಷ್ಟಿಯನ್ನು ಮಾಡಿದ್ದೀಯೆ" ಎಂಬುದಾಗಿ ತೋರುತ್ತದೆ. ||೨೭||

ಎಲೈ ಅತಿಶಯಗುಣಸ್ವರೂಪನಾದ ಶಂಕರನೇ? ನನಗೆ ಮಾತ್ರ ಅಂತಹ

ವಿಘ್ನಃ ಕೋಽಯಂ ಸಮುತ್ಪನ್ನೋ ನಾರೀರೂಪೇಣ ಶಂಕರ ।
ನಾರೀಗಣಶ್ಚೇದೇತಸ್ಯ ಸ ಲಜ್ಜಾ ಜಲಮಜ್ಜನಂ ॥೨೯॥

ಕಿಮತೋ ವಿಘ್ನ ಏವಾಯಂ ನಾರಿರೂಪಮುಪಾಗತಃ ।
ಶಿವಾರ್ಚನೇನ ವಿಜ್ಞಾತಮಮಿತಂ ಫಲಮಿತ್ಯತಃ ॥೩೦॥

ಅಸ್ಯ ವಿಘ್ನಃ ಸಮುತ್ಪನ್ನಃ ಸವಿಘ್ನಂ ಹಿ ಮಹತ್ಫಲಂ ।
ಅವಿಘ್ನಾನಿ ಭವಂತ್ಯೇವ ಬಹೂನ್ಯಲ್ಪಫಲಾನಿ ತು ॥೩೧॥

ಮಹಾಫಲಾನಿ ಧರ್ಮಾಣಿ ಸವಿಘ್ನಾನೀತಿ ನಿಶ್ಚಯಃ ।
ಅತಃ ಪರಂ ಕ್ವ ಗಂತವ್ಯಂ ಕಿಂ ಕರ್ತವ್ಯಮತಃಪರಂ ॥೩೨॥

---

ಕಾಮವಿಕಾರಗಳನ್ನು ತಂದೊಡ್ಡಬೇಡ. ಅದು ನನಗೆ ಮಹಾಕಷ್ಟರೂಪವಾಗಿ ತೋರುತ್ತಿರುವುದು. ಬಂದಿರುವ ಇದನ್ನು ಈಗ ನಿವಾರಿಸು. ||೨೮||

ಎಲೈ ಶಂಕರನೇ, ಇಂತಹ ನಾರೀರೂಪವಾಗಿರತಕ್ಕ ವಿಘ್ನವು ನನಗೆ ಎಲ್ಲಿಂದ ಒದಗಿತು. ಅಥವಾ ಇದು ವಿಘ್ನವಲ್ಲದೇ ನಾರೀಗಣವೇ ನಿಶ್ಚಯವಾಗಿದ್ದಲ್ಲಿ ಇದಕ್ಕೆ ಲಜ್ಜೆಯು ಇರುತ್ತಿರಲಿಲ್ಲವೇ? ||೨೯||

ಆದುದರಿಂದ ಇದು ನಾರೀರೂಪವನ್ನು ಧರಿಸಿರುವ ವಿಘ್ನವೇ ನಿಜ. ಶಿವಾರ್ಚನೆಯಿಂದ ಅಮಿತವಾದ ಫಲವು ಲಭಿಸುವುದೆಂಬುದು ಸುಳ್ಳಾದೀತೇ? ||೩೦||

ಯಾವಾಗಲೂ ಅತಿಯಾದ ಫಲವುಂಟಾಗಬೇಕಾದರೆ ಅದಕ್ಕೆ ವಿಘ್ನಗಳೇ ಹೆಚ್ಚು. ಅಲ್ಪಫಲಪ್ರದಗಳಿಗೆ ವಿಘ್ನಗಳಿರುವುದಿಲ್ಲ. ಆದುದರಿಂದ ಈಗ ನನಗೆ ವಿಘ್ನವು ಉಂಟಾಗಿರುವುದನ್ನು ನೋಡಿದರೆ ಮುಂದೆ ಯಾವುದೋ ಮಹಾಫಲವಿರುವುದೆಂದು ಊಹಿಸುವೆನು. ||೩೧||

ಯಾವಾಗಲೂ ಮಹತ್ಫಲಗಳಿಗೆ ವಿಘ್ನಗಳು ಉಂಟೇ ಉಂಟು ಎಂಬುದು ಸ್ವತಃ ಸಿದ್ಧವಾದ ವಿಚಾರ. ಆದುದರಿಂದ ಈಗ ಎಲ್ಲಿಗೆ ಹೋಗುವುದು? ಏನು ಮಾಡುವುದು? ||೩೨||

ಏತದ್ವಿಘ್ನಾಪಹರಣಂ ಕರ್ತುಂ ಶಕ್ತಿಶ್ಚ ಕಸ್ಯ ವಾ ।
ಶಂಕರೇಣೈವ ಸೃಷ್ಟಾ ಚೇದಿಯಂ ವಿಘ್ನಪರಂಪರಾ ||೩೩||

ತದಾ ನಿವಾರಕಃ ಕಸ್ಸ್ಯಾತ್ ತತ್ಸೃಷ್ಟಿಃ ಪ್ರಬಲಾ ಖಲು ।
ಆಪತ್ಕಾಲ ಇವಾಭಾತಿ ಸೋಽಯಮುದ್ವೇಗಸಾಧನಂ ||೩೪||

ಕದಾಪ್ಯೇತಾದೃಶೋ ವಿಘ್ನೋ ನ ಜಾತಃ ಸರ್ವಥಾ ಖಲು ।
ತ್ಯಕ್ತಮುದ್ಯೈವಾಂಗನಾಂಗಸಂಗಭೀತ್ಯಾ ಗೃಹಾದಿಕಂ ||೩೫||

ಪುನರಪ್ಯಾಗತಃ ಸೋಽಯಮಂತರಾಯಸ್ತದಾತ್ಮಕಃ ।
ಏವಂ ವ್ಯಾಕುಲಚಿತ್ತಸ್ಯ ತಸ್ಯ ಧೀರಸ್ಯ ಸರ್ವಥಾ ||೩೬||

ವಿಕಾರೋ ನಾಭವದ್ದೇಹೇ ಕಾಷ್ಠಸ್ಯೇವ ಮಹಾತ್ಮನಃ ।
ತತಃ ಪರಂ ವಿವಸನಂ ಕೃತ್ವಾ ರೂಪಂ ಕುಚೇಷ್ಟಯಾ ||೩೭||

ನಗ್ನಾಶ್ಚ ತಾಸ್ತಮಾರುಹ್ಯ ಸ್ಕಂಧಾದೌ ನನೃತುರ್ನೃಪ ।
ತಥಾಽಪಿ ನಿರ್ವಿಕಾರಸ್ಯ ತಸ್ಯ ಭೂಪಸ್ಯ ತಾಸ್ವಪಿ ||೩೮||

ಈ ವಿಘ್ನಗಳನ್ನು ನಿವಾರಿಸಲು ಯಾರುತಾನೆ ಸಮರ್ಥರಾಗಿದ್ದಾರೆ? ಒಂದುವೇಳೆ ಇವುಗಳನ್ನು ಶಂಕರನೇ ಸೃಷ್ಟಿಸಿದುದಾದರೆ ಅವನ ಸೃಷ್ಟಿಯು ಬಹಳ ಪ್ರಬಲವಾದ ಕಾರಣ, ಅದನ್ನು ನಿವಾರಿಸಲು ಯಾರುತಾನೆ ಸಮರ್ಥರಾದಾರು? ಒಟ್ಟಿನಲ್ಲಿ ನನಗೆ ಆಪತ್ಕಾಲ ಒದಗಿದಂತೆಯೇ ಭಾಸವಾಗುತ್ತದೆ. ||೩೩-೩೪||

ಯಾವಾಗಲೂ ಕೂಡ ಈ ವಿಧವ ವಿಘ್ನವು ಉಂಟಾಗಬಾರದೆಂಬ ಅಭಿಲಾಷೆಯಿಂದಲೂ, ಅಂಗನೆಯರ ಅಂಗಸಂಗದಲ್ಲಿ ಅಭಿಲಾಷೆಯುಂಟಾದೀತೆಂಬ ಭಯದಿಂದಲೂ, ಮನೆಯೇ ಮೊದಲಾದುವುಗಳನ್ನೆಲ್ಲಾ ಬಿಟ್ಟುಬಂದೆನು. ಆದರೂ ಈಗ ನನಗೆ ಅಂತಹ ತೊಂದರೆಯೇ ಒದಗಿತಲ್ಲಾ ಎಂದು ಆ ರಾಜನು ಯೋಚಿಸುತ್ತಾ ಕುಳಿತನು. ||೩೫-೩೬||

ಸ್ತ್ರೀಯರೆಲ್ಲರೂ ಹಾಗೆ ಅವನನ್ನು ಆಲಿಂಗಿಸಿಕೊಂಡರೂ ಅವನ ದೇಹದಲ್ಲಿ ಮಾತ್ರ ಯಾವ ಕಾಮವಿಕಾರವೂ ಕಂಡುಬರಲಿಲ್ಲ. ದೇಹವು ಮಾತ್ರ ಕಾಷ್ಠದಂತೆಯೇ ನಿಶ್ಚಲವಾಗಿತ್ತು. ಎಲೈ ರಾಜನೇ, ಅನಂತರ ಆ ಸ್ತ್ರೀಯರು ಕುಚೇಷ್ಟೆಯಿಂದ ಬಟ್ಟೆಗಳನ್ನೂ ಬಿಚ್ಚಿ ನಗ್ನರಾಗಿ ಆ ರಾಜನ ಭುಜಮೂಲಾದಿಗಳನ್ನೂ

ಪತಂಗಧೀಃ ಸಮುತ್ಪನ್ನಾ ಧೃತವೈರಾಗ್ಯಭಾಗ್ಯತಃ ।
ತತಃ ಪರಂ ತು ತಾ ಏವ ಸ ನಪುಂಸಕ ಇತ್ಯಪಿ ॥೩೯॥

ನಿಶ್ಚಿತ್ಯ ನಿರ್ಯಯುಸ್ತಸ್ಮಾಚ್ಛ್ರೀಮಹಾದೇವಮಂದಿರಾತ್ ।
ತತಃ ಪರಂ ರಾಜಪತ್ನೀ ಸಾ ವಿಲೋಕ್ಯ ತದದ್ಭುತಂ ॥೪೦॥

ವಿಸ್ಮಯಾವಿಷ್ಟಹೃದಯಾ ಚಿಂತಯಾಮಾಸ ಚೇತಸಿ ।
ಅಯಂ ನಪುಂಸಕಃ ಪ್ರಾಯೋ ನಗ್ನಸ್ತ್ರೀದರ್ಶನಾದಪಿ ॥೪೧॥

ನ ಚ ಚಾಲನಚೇಷ್ಟಾಂ ಚ ಚಕಾರಾಂಗವಿಶೇಷತಃ ।
ಯದ್ವಾ ವಿರಕ್ತ ಏವಾಯಂ ಕುತ್ಸಿತತ್ವಾವಬೋಧನಾತ್ ॥೪೨॥

ಕೋ ವಾನುರಾಗಸಹಿತಃ ಶುನೀಯೋನಿವಿಲೋಕನಾತ್ ।

ಸಹ ಪತ್ನಿ ನರ್ತನಮಾಡತೊಡಗಿದರು. ಅಷ್ಟಾದರೂ ಆ ರಾಜನ ಮನಸ್ಸು ಕಾಮದಿಂದ ಕಲಕಿಹೋಗಲಿಲ್ಲ. ॥೩೭-೩೮॥

ಅವನಿಗೆ ಅವರಲ್ಲಿ ಹುಳುಗಳ ಬುದ್ಧಿಯುಂಟಾಯಿತು. ಇದಕ್ಕೆ ಅವನ ದೃಢವಾದ ವೈರಾಗ್ಯವೇ ಕಾರಣ. ಕೊನೆಗೆ ಆ ಸ್ತ್ರೀಯರೇ ಅವನನ್ನು ನಪುಂಸಕನೆಂಬುದಾಗಿ ತಿಳಿದು, ಅದನ್ನೇ ದೃಢನಿಶ್ಚಯ ಮಾಡಿಕೊಂಡು, ಶಿವಾಲಯದಿಂದ ಹೊರಟುಹೋದರು. ॥೩೯-೪೦॥

ಅಲ್ಲಿಯೇ ಮರೆಯಲ್ಲಿ ನಿಂತಿದ್ದ ಆ ರಾಜಪತ್ನಿಯು ಈ ಅದ್ಭುತಗಳನ್ನೆಲ್ಲಾ ನೋಡಿ ಮನಸ್ಸಿನಲ್ಲಿಯೇ " ನಗ್ನರಾಗಿರತಕ್ಕ ಸ್ತ್ರೀಯರನ್ನು ನೋಡಿಯೂ ಕೂಡ ಈತನ ಮನಸ್ಸು ಚಲಿಸಲಿಲ್ಲವಲ್ಲಾ! ಮತ್ತು ಯಾವ ಅಂಗವಿಕಾರವನ್ನು ಸಹ ಪಡೆಯಲಿಲ್ಲ. ಆದುದರಿಂದ ಈತನು ನಪುಂಸಕನೇ ಆಗಿರಬೇಕು. ಅಥವಾ ಹಿಂದೆ ಹೇಳಿದಂತೆ ಇವುಗಳನ್ನೆಲ್ಲಾ ಕುತ್ಸಿತವಾದುದೆಂದು ತಿಳಿದು ವೈರಾಗ್ಯಶಾಲಿಯೇ ಆಗಿರುವನೋ " ಎಂಬುದಾಗಿ ಶಂಕಿಸಿದಳು. ॥೪೧-೪೨॥

ಅನುರಾಗಸಹಿತನಾದ ಮನುಷ್ಯನಾಗಿದ್ದರೆ ಆತನು ಸ್ತ್ರೀ ನಾಯಿಯ ಯೋನಿ ಸಂದರ್ಶನದಿಂದಲೂ ಸಹ ಕೆಲವುವೇಳೆ ಮೋಹಿತನಾಗುವ ಸಂಭವ ಉಂಟು.

ಅಂಗೇಷು ಪುಷ್ಟಿಃ ಸೌಂದರ್ಯಮಪಾರಮಿದಮಸ್ಯ ತು ॥೪೩॥

ಅಸ್ಯ ಪುಂಸ್ತ್ವೇ ನ ಸಂದೇಹೋ ವಿರಕ್ತಃ ಕೇವಲಂ ನೃಪಃ ।
ಏತಾದೃಶಸ್ತು ಪುರುಷೋ ನ ದೃಷ್ಟೋ ನ ಶ್ರುತೋಽಪಿ ಹಿ ॥೪೪॥

ಭಾಗ್ಯವಾನಯಮೇವೈಕೋ ಲೋಕೋತ್ತರಗುಣಾಶ್ರಯಃ ।
ಏತಸ್ಯ ದರ್ಶನಾದದ್ಯ ಮಮಾಪಿ ಮದನಜ್ವರಃ ॥೪೫॥

ಸಮುತ್ಪನ್ನಃ ಪ್ರಶಾಂತೋಽಪಿ ತತ್ಕಥಾಶ್ರವಣಾದಿಹ ।
ಏತಸ್ಮಿನ್ನಂತರೇ ಕಾಲೇ ತತ್ಕಲತ್ರಾಣಿ ಕೋಟಿಶಃ ॥೪೬॥

ಸಮಾಗತಾನಿ ತತ್ರಾಸ್ತೀತ್ಯಾಕರ್ಣ್ಯ ಸ ನೃಪೋತ್ತಮಃ ।
ಸಮಾಗತಾಶ್ಚ ತತ್ರೈವ ಗಜಾಶ್ವರಥಕೋಟಯಃ ॥೪೭॥

ಮಂತ್ರಿಕೋಟಿಸಮಾಕೀರ್ಣಾ ಪತ್ತಿಕೋಟಿಸಮಾಶ್ರಿತಾಃ ।
ತತಃ ಕೋಲಾಹಲೋ ಜಾತಃ ಸಂಪೂರ್ಣೋ ಪೃಥಿವೀತಲೇ ॥೪೮॥

ಈತನ ಅಂಗಗಳು ಅಪಾರವಾದ ಸೌಂದರ್ಯವುಳ್ಳವುಗಳಾಗಿಯೂ ಪುಷ್ಟವಾದುವುಗಳಾಗಿಯೂ ಇವೆ. ಅವುಗಳನ್ನು ನೋಡಿದರೆ ಆತನಲ್ಲಿ ಪುಂಸ್ತ್ವವು ಇರುತ್ತದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಈ ರಾಜನು ವಿರಕ್ತನೇ ಇರಬೇಕು. ಅದು ಹೇಗಾದರೂ ಆಗಲಿ. ಇಂತಹ ಪುರುಷನನ್ನು ನಾನು ಹಿಂದೆ ಕಂಡೂ ಇಲ್ಲ ಕೇಳಿಯೂ ಇಲ್ಲ. ಎಂಬುದಾಗಿ ಆ ರಾಜಪತ್ನಿಯು ಚಿಂತಿಸಿದಳು. ಮತ್ತು ॥೪೩-೪೪॥

ಸರ್ವ ಶ್ರೇಷ್ಠ ಗುಣಗಳಿಗೆ ಆಶ್ರಯಸ್ಥಾನನಂತಿರುವ ಈತನೇ ಲೋಕದಲ್ಲಿ ಭಾಗ್ಯಶಾಲಿಯು. ಈತನ ದರ್ಶನದಿಂದ ನನಗೂ ಸಹ ಉಂಟಾಗಿದ್ದ ಮದನ ಜ್ವರವು ನಾಶವಾಯಿತು. ಎಂದು ಹರ್ಷಿಸಿದಳು. ॥೪೫॥

ಈ ಮಧ್ಯದಲ್ಲಿ ಅನ್ನಪೋತ್ತಮನು ಆ ಅರಣ್ಯದಲ್ಲಿಯೇ ಇರುವನೆಂಬುದನ್ನು ಕೇಳಿ ಅಲ್ಲಿಗೇ ಆತನ ಅನೇಕ ಪತ್ನಿಯರೂ, ಕೋಟ್ಯಂತರ ಆನೆ, ಕುದುರೆ, ರಥ ಮೊದಲಾದ ಸೈನ್ಯಗಳೂ ಬಂದುವು. ॥೪೬-೪೭॥

ಮತ್ತು ಆ ರಾಜನ ಅಸಂಖ್ಯಾತ ಮಂತ್ರಿಗಳೂ, ಕೋಟ್ಯಂತರ ಕಾಲಾಳುಗಳೊಡನೆ ಅಲ್ಲಿಗೆ ಬಂದರು. ಆಗ ಪ್ರದೇಶವೆಲ್ಲಾ ಬಹಳ ಕೋಲಾಹಲದಿಂದ ಕೂಡಿತು. ॥೪೮॥

ನಗರಂ ತತ್ಸಮಾವೇಷ್ಟ್ಯ ತೇ ಸರ್ವೇ ಮಂತ್ರಿಸತ್ತಮಾಃ ।
ಶಿವಾಲಯಸ್ಯ ಪ್ರಾಸಾದಂ ದದೃಶುಸ್ತುಂಗಮುತ್ತಮಂ ॥೪೯॥

ಸೌನ್ದರ್ಯನಿಧಿರತ್ರೈವ ಸ್ಥಾಸ್ಯತೀತ್ಯೇವ ಮೇನಿರೇ ।
ತತಃ ಪರಮಯಂ ರಾಜಾ ಸೌನ್ದರ್ಯನಿಧಿನಾಮಕಃ ॥೫೦॥

ತತ್ರಾಸ್ತೀತಿ ವಿನಿಶ್ಚಿತ್ಯ ಯಯುರುದ್ಯಾನಮುತ್ತಮಂ ।
ತತ್ರಾಪಿ ಚಿಂತಯಾಮಾಸುರುದ್ಯಾನಮಿದಮುತ್ತಮಂ ॥೫೧॥

ಕಥಂ ಸ್ಥಾಸ್ಯತಿ ರಾಜಾಸ್ಮಿನ್ನಯಂ ಪುಷ್ಪಫಲಾಕುಲೇ ।
ಅಯಂ ವಿರಕ್ತೋ ನ ಸ್ಥಾಸ್ಯತ್ಯತ್ರ ತಾವದ್ವನೇ ಶುಭೇ ॥೫೨॥

ಕಿಂ ಚಾವಸ್ಥಾನಬೀಜಂ ಚ ಶಿವಸ್ಥಾನಮಿದಂ ಖಲು ।
ತಸ್ಯ ರಾಜ್ಞಃ ಶಿವಸ್ಥಾನೇ ಕೇವಲಂ ಸ್ಥಿತಿರಿತ್ಯತಃ ॥೫೩॥

ಅನ್ಯತ್ರ ಗಮನಂ ತಸ್ಯ ನೈವ ಸಂಭಾವಿತಂ ಖಲು ।
ಅಸ್ಮಾಕಂ ಯದಿ ಭಾಗ್ಯಂ ಸ್ಯಾದತ್ರ ಸ್ಥಾಸ್ಯತ್ಯಯಂ ನೃಪಃ ॥೫೪॥

ಆ ಮಂತ್ರಿ ಶ್ರೇಷ್ಠರೆಲ್ಲರೂ ಆ ನಗರವನ್ನು ಸುತ್ತುಗಟ್ಟಿ, ಬಹು ಎತ್ತರವಾಗಿಯೂ, ಉತ್ತಮವಾಗಿಯೂ ಇರುವ ಶಿವಾಲಯ ಪ್ರಾಸಾದವನ್ನು ಕಂಡರು. ॥೪೯॥

ಅನಂತರ "ಸೌಂದರ್ಯ ನಿಧಿ" ಎಂಬ ಹೆಸರುಳ್ಳ ಆ ರಾಜನು ಈ ಉದ್ಯಾನ ವನದಲ್ಲಿರುವನೆಂಬ ನಿಶ್ಚಯದಿಂದ ಆ ಉದ್ಯಾನವನಕ್ಕೆ ಹೋದರು. ॥೫೦॥

ಅಲ್ಲಿಗೆ ಹೋಗಿ ಈ ಉದ್ಯಾನವನವು ಬಹು ಉತ್ತಮವಾದುದಾಗಿ ಪುಷ್ಪಗಳು, ಫಲಗಳು ಇವುಗಳಿಂದ ಮನೋಹರವಾಗಿದೆ. ಇಂತಹ ಉದ್ಯಾನವನದಲ್ಲಿ ಈ ವಿರಕ್ತನಾದ ರಾಜನು ಹೇಗೆ ಇದ್ದಾನು? ಇರಲಾರನು. ॥೫೧-೫೨॥

ಆದರೆ ಆ ರಾಜನು ಯಾವಾಗಲೂ ಶಿವಸ್ಥಾನದಲ್ಲಿಯೇ ಆಸಕ್ತನಾಗಿರುವುದರಿಂದಲೂ ಇಲ್ಲಿ ಈ ಶಿವಸ್ಥಾನವಿರುವುದರಿಂದಲೂ ಒಂದುವೇಳೆ ಆ ರಾಜನು ಇದ್ದರೂ ಇರಬಹುದು. ॥೫೩॥

ಆ ನೃಪನು ಈ ಸ್ಥಳವನ್ನು ಬಿಟ್ಟು ಇನ್ನೊಂದು ಕಡೆ ಹೋಗುವುದು ಅಸಂಭಾವನೀಯವಾದುದು. ನಮಗೆ ಆತನನ್ನು ಕಾಣುವ ಸುಯೋಗವಿದ್ದರೆ ಆ ರಾಜನು ಇಲ್ಲಿಯೇ ಇರುವನು. ॥೫೪॥

ಶಿವಸ್ಥಾನಂ ವಿಹಾಯಾಯಮೀದೃಶಂ ನೈವ ಯಾಸ್ಯತಿ ।
ಪೂರ್ವೇದ್ಯುರ್ನಿರ್ಗತೋ ಗೇಹಾದ್ದೂರದೇಶಂ ನ ಯಾಸ್ಯತಿ ॥೫೫॥

ಅದೂರೇಣ ಶಿವಸ್ಥಾನಮೀದೃಶಂ ದೃಶ್ಯತೇಽಪಿ ಚ ।
ಏತಾದೃಶಂ ಶಿವಸ್ಥಾನಪ್ರಾಸಾದಮವಲೋಕಯೇತ್ ॥೫೬॥

ಸಹರ್ಮ್ಯಶಿಖರೇ ತಾವನ್ನೃಪಃ ಖಲು ಪುರಾಸ್ಥಿತಃ ।
ಏವಂ ನಿಶ್ಚಿತ್ಯ ತೇ ಸರ್ವೇ ತದುದ್ಯಾನಾವಲೋಕನಂ ॥೫೭॥

ಕರ್ತುಂ ಸಮುದ್ಯತಾಸ್ತತ್ರ ಸ್ತ್ರೀಗಣಂ ದದೃಶುರ್ನೃಪ ।
ತತಃ ಪರಂ ತು ತೇ ಸರ್ವೇ ಸಂಶಯಾವಿಷ್ಟಮಾನಸಾಃ ॥೫೮॥

ಸ್ತ್ರೀಸಂಕುಲವನೇ ನೂನಂ ನ ಸ್ಥಾಸ್ಯತಿ ನೃಪೋತ್ತಮಃ ।
ಪರಾಂಗನಾಮಯಂ ದೃಷ್ಟ್ವಾ ನೃಪಸ್ತ್ವಾವಪರಾಙ್ಮುಖಃ ॥೫೯॥

ಸ ಕಥಂ ವಾ ವನೇ ಸ್ಥಾಸ್ಯತ್ಯನಂತವನಿತಾವೃತೇ ।
ಋತುಕಾಲೇಽಪಿ ರಾಜಾಯಂ ಸ್ವನಾರೀಸಂಗಮೋ ವಿಧೇಃ ॥೬೦॥

ಈತನು ಇಂತಹ ಶಿವಸ್ಥಾನವನ್ನು ಬಿಟ್ಟು ಇನ್ನೆಲ್ಲಿಯೂ ಹೋಗಿರಲಾರನು. ಏತಕ್ಕೆಂದರೆ ನಿನ್ನೆಯದಿವಸ ಮನೆಯಿಂದ ಹೊರಟ ರಾಜನು ಇನ್ನೂ ದೂರದೇಶಕ್ಕೆ ಹೋಗಲು ಸಾಧ್ಯವಾದೀತೇ ? ಎಂದು ||೫೫||

ಹತ್ತಿರದಲ್ಲಿಯೇ ಇರತಕ್ಕ ಈ ಶಿವಸ್ಥಾನವನ್ನೂ ಅದರ ಪ್ರಾಸಾದವನ್ನೂ ನೋಡಿ, ಅಲ್ಲಿ ಹುಡುಕೋಣ ಎಂದು ಅವರು ಅಲ್ಲಿಗೆ ಬಂದು ಸೇರಿದರು. ||೫೬||

ರಾಜನು ಹಿಂದೆಯೂ ಕೂಡ ಇಂತಹ ಹರ್ಮ್ಯಶಿಖರದಲ್ಲಿಯೇ ಇದ್ದನು ಎಂದೂ ಊಹಿಸಿದರು. ಎಲೈ ಜನಕಮಹಾರಾಜನೇ, ಈ ರೀತಿ ನಿಶ್ಚಯಿಸಿ ಅವರೆಲ್ಲರೂ ಆ ಉದ್ಯಾನವನ್ನು ನೋಡಲುದ್ಯುಕ್ತರಾದರು. ಅಷ್ಟರಲ್ಲಿ ಅಲ್ಲಿಗೆ ಬಂದಿದ್ದ ನಾರೀಗಣವು ಇವರ ಕಣ್ಣಿಗೆ ಬಿದ್ದಿತು. ಅನಂತರ ಸ್ತ್ರೀಯರಿಂದ ಕೂಡಿರತಕ್ಕ ಈ ವನದಲ್ಲಿ ಆ ನೃಪೋತ್ತಮನು ಖಂಡಿತ ಇರಲಾರನೆಂದು ನಿಶ್ಚಯಮಾಡಿಕೊಂಡರು. ರಾಜನು ಪರಸ್ತ್ರೀಯರನ್ನು ಕಂಡರೆ ಮುಖವನ್ನು ಬಗ್ಗಿಸಿಕೊಳ್ಳುತ್ತಾನೆ. ||೫೭-೫೮-೫೯||

ಅಂತಹ ರಾಜನು ಅನಂತ ಸ್ತ್ರೀಸಮೂಹದಿಂದ ವ್ಯಾಪ್ತವಾಗಿರತಕ್ಕ ಈ ಕಾಡಿನಲ್ಲಿ ಹೇಗೆತಾನೆ ಇದ್ದಾನು ? ಈ ರಾಜನು ಸ್ವನಾರಿಯ ಋತು ಕಾಲದಲ್ಲಿ ಮಾತ್ರ

ಪ್ರವೃತ್ತಸ್ತೇನ ಸಂಜಾತಾಃ ಕುಮಾರಾಃ ಪುಣ್ಯಯೋಗತಃ ।
ತಸ್ಯ ನಾರೀಷು ನ ಸ್ನೇಹೋ ನ ಭೋಗೇ ಸುತರಾಮಪಿ ॥೬೦॥

ರಾಜ್ಯೇಽಪಿ ತಸ್ಯ ನ ಪ್ರೀತಿಃ ಯಥಾ ಶಂಕರಪೂಜನೇ ।
ಶಿವಧ್ಯಾನರತೋ ನಿತ್ಯಂ ನ ನಾರೀಮಭಿಪಶ್ಯತಿ ॥೬೨॥

ಶಿವಲಿಂಗಾಲೋಕನೇಚ್ಛಾ ತಸ್ಯ ಸರ್ವಾತ್ಮನಾ ಖಲು ।
ಇದಂ ತು ತದವಸ್ಥಾನಸ್ಥಲಮೇವ ನ ಸರ್ವಥಾ ॥೬೩॥

ಕೃತಾಪಿ ನಾರೀ ಸಹಸಾ ನ ದೃಷ್ಟಾ ತೇನ ಸತ್ವರಂ ।
ತರುಣೀ ಮಸ್ತಣಾರಣ್ಯಮಿದಮುದ್ಯಾನಮೇವ ಚ ॥೬೪॥

ವನಿತಾವನಮೇವೇದಂ ಅತ್ರ ತಸ್ಯ ಸ್ಥಿತಿಃ ಕಥಂ ।
ಏಕೈಕಂ ತರುಮಾರುಹ್ಯ ನೃತ್ಯಂತೀ ತರುಣೀಗಣಾಃ ॥೬೫॥

ವಿಧಿ ಇರುವುದರಿಂದ (ವಿಧಿ ಮೀರಿತೆಂಬ ಭಯದಿಂದ) ಭೋಗಿಸುತ್ತಿದ್ದನು. ಅದರಿಂದಲೇ ಪುಣ್ಯವಶಾತ್ ಕುಮಾರರು ಉತ್ಪನ್ನರಾದರು. ಆತನಿಗೆ ನಾರಿಯರಲ್ಲಿ ನಿರಂತರ ಸ್ನೇಹವೇ ಆಗಲಿ, ಅವರ ಭೋಗದಲ್ಲಿ ಸ್ವಲ್ಪವಾದರೂ ಆಸಕ್ತಿಯೇ ಆಗಲಿ ಇಲ್ಲ. ॥೬೦-೬೧॥

ಶಂಕರ ಪೂಜೆಯಲ್ಲಿರುವಷ್ಟು ಪ್ರೀತಿಯು ಆತನಿಗೆ ರಾಜ್ಯದಲ್ಲಿಯೂ ಸಹ ಇಲ್ಲ. ಯಾವಾಗಲೂ ಶಿವಧ್ಯಾನದಲ್ಲಿಯೇ ಆಸಕ್ತನಾಗಿ ನಾರೀಗಣವನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ॥೬೨॥

ಆ ರಾಜನಿಗೆ ಯಾವಾಗಲೂ ಶಿವಲಿಂಗ ದರ್ಶನದಲ್ಲಿಯೇ ಇಚ್ಛೆಯು ಬಹಳವಾಗಿರುತ್ತದೆ. ಈ ಪ್ರದೇಶವಾದರೋ ಆತನಿಗೆ ಇರಲುಯೋಗ್ಯವಾದ ಸ್ಥಲವಾಗಿಲ್ಲ. ॥೬೩॥

ನಾರಿಯು ಎಷ್ಟು ಸಾಹಸಮಾಡಿದರೂ ಅವನನ್ನು ಕಣ್ಣೆತ್ತಿ ನೋಡುವುದಿಲ್ಲ. ತರುಣಿಯರಿಂದ ವ್ಯಾಪ್ತವಾಗಿರತಕ್ಕ ಉದ್ಯಾನವೇ ಇದು. ॥೬೪॥

ಇಲ್ಲಿ ಒಂದೊಂದು ಮರವನ್ನೂ ಒಬ್ಬೊಬ್ಬ ತರುಣಿಯರುಹತ್ತಿ ನರ್ತನ ಮಾಡುತ್ತಿದ್ದಾರೆ. ಇಂತಹ ರಮಣೀಯವಾಗಿರುವ ಇದು ವನಿತಾವನವೇ ನಿಶ್ಚಯ. ಆದುದರಿಂದ ಇಲ್ಲಿ ಆತನು ಹೇಗೆ ಇದ್ದಾನು? ೬೫॥

ಅತ್ರ ತಸ್ಯಾಽಪಿ ಭೂಪಸ್ಯ ಶಂಕಿತಾ ಕಿಮುವಸ್ಥಿತಿಃ ।
ಯದ್ವಾ ಪ್ರಾತಃ ಸಮಾಗತ್ಯ ಪ್ರವಿಷ್ಟಃ ಶಿವಮಂದಿರಂ ॥೬೬॥

ಶಿವಧ್ಯಾನಸಮಾಕ್ರಾಂತಃ ಪ್ರಾಯಃ ಸ್ಥಾಸ್ಯತಿ ಭೂಪತಿಃ ।
ಸೂರ್ಯೋದಯೋತ್ತರಂ ತಾವದ್ವನಿತಾಸ್ತಾಸ್ಸಮಾಗತಾಃ ॥೬೭॥

ತದುದ್ಯಾನವನಕ್ರೀಡಾಂ ಕುರ್ವನ್ತ್ಯತ್ರ ತು ಕೋಟಿಶಃ ।
ಅವಿವೇಕಸ್ವಭಾವಾಸ್ತಾಸ್ತರುಣ್ಯಃ ಶಿವದರ್ಶನೇ ॥೬೮॥

ಅತ್ಯುತ್ಸುಕಾಸ್ತರುಷ್ವೇವ ಕ್ರೀಡಂತಿ ಫಲಿತೇಷ್ವಿಹ ।
ಏವಂ ಸತಿ ಶಿವಾಗಾರೇ ಸ್ಥಾತುಮರ್ಹತಿ ಭೂಪತಿಃ ॥೬೯॥

ಏತಾದೃಶಂ ಶಿವಸ್ಥಾನಂ ನ ತ್ಯಕ್ಷ್ಯತಿ ಮಹೀಪತಿಃ ।
ಅಸ್ಮಾಕಮತ್ರ ಸಹಸಾ ತರುಣೀಗಣಸಂಕುಲೇ ॥೭೦॥

ವನೇ ಪ್ರವೇಶೋಽಪ್ಯುಚಿತೋ ನ ಭವತ್ಯೇವ ಸರ್ವಥಾ ।
ವನಿತಾಸಂಕುಲೇ ದೇಶೇ ವನಿತಾನಾಂ ಗತಿರ್ಮತಾ ॥೭೧॥

ಇಲ್ಲಿ ಆ ರಾಜನು ಇರುವುದರಲ್ಲಿ ಸಂದೇಹ. ಅಥವಾ ಪ್ರಾತಃಕಾಲದಲ್ಲಿಯೇ ಬಂದು ಶಿವಮಂದಿರವನ್ನು ಪ್ರವೇಶಿಸಿದ್ದರೂ ಇರಬಹುದು. ॥೬೬॥

ಈ ವನಿತೆಯರು ಸೂರ್ಯೋದಯಾನಂತರದಲ್ಲಿ ಇಲ್ಲಿಗೆ ಬಂದಿರುತ್ತಾರಾದುದರಿಂದ ಆ ರಾಜನು ಪ್ರಾಯಶಃ ಮುಂಜಾನೆಯಲ್ಲಿಯೇ ಶಿವಧ್ಯಾನದಲ್ಲಿ ಆಸಕ್ತನಾಗಿ ಇರಬಹುದು. ॥೬೭॥

ಇಲ್ಲಿರತಕ್ಕ ಈ ತರುಣಿಯರು ಶಿವದರ್ಶನದಲ್ಲಿ ಗಮನವಿಡದೆ ಅನೇಕ ರೀತಿಯಲ್ಲಿ ಉದ್ಯಾನವನದಲ್ಲಿ ಕ್ರೀಡಿಸುತ್ತಿರುವರು. ॥೬೮॥

ಫಲಭರಿತವಾಗಿರತಕ್ಕ ಮರಗಳಲ್ಲಿ ಅತ್ಯಂತ ಆಸಕ್ತಿಯುಳ್ಳವರಾಗಿ ಅವುಗಳನ್ನೇ ಹುಡುಕಿಕೊಂಡು ಓಡಾಡುತ್ತಿರುವರು. ಹಾಗಿರುವಾಗ ಇಂತಹ ಶಿವಾಗಾರದಲ್ಲಿ ರಾಜನಿಗೆ ಇವರಿಂದ ತೊಂದರೆ ಹೇಗೆ ಬಂದೀತು? ॥೬೯॥

ರಾಜನು ಇಂತಹ ಸ್ಥಾನದಲ್ಲಿರುವ ಶಿವಸ್ಥಾನವನ್ನು ಬಿಡುವುದಿಲ್ಲ. ಈ ತರುಣೀ ಗಣಗಳಿಂದ ಕೂಡಿರತಕ್ಕ ಈ ವನದಲ್ಲಿ ನಾವು ಪ್ರವೇಶಿಸುವುದು ಉಚಿತ

ತತಃ ಪ್ರಯಾಂತು ವನಿತಾಃ ಪ್ರವಿಶಂತು ಶಿವಾಲಯಂ ।
ತತ್ರ ಚೇನ್ನ ಭವೇದ್ರಾಜಾ ಸುಂದರೇ ಶಿವಮಂದಿರೇ ॥೭೨॥

ಬಿಲ್ವಮೂಲಾನಿ ಪಶ್ಯಂತು ಶಿವಲಿಂಗಾವೃತಾನ್ಯಪಿ ।
ಪ್ರವಿಶಂತ್ವಿತಿ ತೀವ್ರೇಣ ತತ್ಪತ್ನ್ಯೋ ಬಾಲಕೈರ್ಯುತಾಃ ॥೭೩॥

ಅನ್ಯಾಸಾಂ ತತ್ರ ಗಮನಂ ನಾರೀಣಾಂ ನಾತ್ರ ಸರ್ವಥಾ ।
ಇತ್ಯಾಲೋಚ್ಯ ಪ್ರಧಾನಾಸ್ತೇ ತತ್ಕಲತ್ರಾನುಮೋದಕಾಃ ॥೭೪॥

ತಾಸಾಂ ತತ್ರ ಪ್ರವೇಶಾರ್ಥಮುದ್ಯೋಗಂ ಚಕ್ರುರಾದರಾತ್ ।
ಪ್ರವಿಷ್ಟಾಸ್ತತ್ರ ತಾಸ್ಸರ್ವಾಃ ಗೃಹೀತ್ವಾ ಬಾಲಕಾನಪಿ ॥೭೫॥

ಶಿವಮಂದಿರಮಾವಿಶ್ಯ ಪ್ರಣತಾಸ್ತಾಸ್ಸದಾಶಿವಂ ।
ರತ್ನೈರ್ಮನೋಹರೈಸ್ತಾಸ್ತು ಭಸ್ಮೋದ್ಧೂಳಿತವಿಗ್ರಹಾಃ ॥೭೬॥

ತ್ರಿಪುಂಡ್ರರುದ್ರಾಕ್ಷಯುತಾಃ ಪೂಜಯಾಮಾಸುರೀಶ್ವರಂ ।
ಸ್ತನಂಧಯಾನ್ ಬಾಹುಮಧ್ಯೇ ಗೃಹೀತ್ವಾ ವಕ್ಷಸಾಯುತಾನ್ ॥೭೭॥

---

ವಲ್ಲ. ವನಿತೆಯರಿಂದ ಪ್ರಾಪ್ತವಾಗಿರತಕ್ಕ ಈ ಪ್ರದೇಶದಲ್ಲಿ ವನಿತೆಯರ ಪ್ರವೇಶವೇ ಯೋಗ್ಯವಾದುದು. ॥೭೦-೭೧॥

ಆದುದರಿಂದ ಈ ವನಿತೆಯರೆಲ್ಲ ಅಲ್ಲಿ ಹೋಗಿ ಶಿವಮಂದಿರವನ್ನು ಪ್ರವೇಶಿಸಿ ಅಲ್ಲಿ ರಾಜನು ಇಲ್ಲದಿದ್ದರೆ ಶಿವಲಿಂಗದಿಂದ ಆವೃತಗಳಾಗಿರತಕ್ಕ ಬಿಲ್ವಮೂಲಾದಿಗಳನ್ನೂ ನೋಡಿಬರಲಿ. ಅಲ್ಲದೆ ಈ ರಾಜನ ಪತ್ನಿಯರು ತಮ್ಮ ತಮ್ಮ ಬಾಲಕರೊಡಗೂಡಿ ಪ್ರವೇಶಿಸಲಿ. ॥೭೨-೭೩॥

ಇಲ್ಲಿಗೆ ಅನ್ಯಸ್ತ್ರೀಯರು ಹೋಗುವುದು ಯೋಗ್ಯವಾದುದಲ್ಲ. ಆದುದರಿಂದ ನಮ್ಮ ರಾಜನ ಪತ್ನಿಯರೇ ಹೋಗಲಿ ಎಂಬುದಾಗಿ ಆಲೋಚಿಸಿದರು. ॥೭೪॥

ಆ ಮಂತ್ರಿಯೇ ಮೊದಲಾದವರು ರಾಜಪತ್ನಿಯರು ಅಲ್ಲಿಗೆ ಪ್ರವೇಶಿಸುವಂತೆ ಸಕಲ ಪ್ರಯತ್ನವನ್ನು ಮಾಡಿದರು. ಮತ್ತು ಆ ಸ್ತ್ರೀಯರು ತಮ್ಮ ತಮ್ಮ ಬಾಲಕರೊಡನೆ ಅದೇರೀತಿ ಪ್ರವೇಶಮಾಡಿಯೂ ಮಾಡಿದರು. ॥೭೫॥

ಮನೋಹರವಾದ ರತ್ನಾಭರಣಗಳಿಂದಲಂಕೃತರಾಗಿ, ಶರೀರಕ್ಕೆಲ್ಲಾ ಭಸ್ಮಧಾರಣೆಮಾಡಿಕೊಂಡವರಾಗಿ, ತ್ರಿಪುಂಡ್ರ ಮತ್ತು ರುದ್ರಾಕ್ಷಿಗಳನ್ನು ಧರಿಸಿ, ಕಂಕುಳ

ಸ್ತನ್ಯಂ ಚ ಪಾಯಯಂತ್ಯಸ್ತಾಸ್ ಪ್ರವಿಷ್ಟಾಃ ಕಾಶ್ಚಿದಾದರಾತ್ ।
ಸಗರ್ಭಾಃ ಕಾಶ್ಚಿದುತ್ಕೃಷ್ಟಾ ಪೂರ್ಣಗರ್ಭಾಶ್ಚ ಕಾಚನ ॥೭೮॥

ಅಜಾತಯೌವನಾಃ ಕಾಶ್ಚಿತ್ಕಾಶ್ಚಿತ್ಸಂಪೂರ್ಣಯೌವನಾಃ ।
ಸೌನ್ದರ್ಯಧಾರಾರೂಪಾಸ್ತಾಸ್ಸರ್ವಾಶ್ಚ ರತಿಸುಂದರಾಃ ॥೭೯॥

ರಮಾ ಮನೋಹರಾಃ ಸರ್ವಾ ರೂಪರಾಶಿವಿರಾಜಿತಾಃ ।
ತಾಃ ಸರ್ವಾ ಅಪಿ ತಂ ದೃಷ್ಟ್ವಾ ಸೋಽಯಂ ಭರ್ತಾ ಮಮೇತ್ಯಪಿ॥೮೦॥

ಪ್ರಹೃಷ್ಟವದನಾ ಏವ ಸ್ಮೇರಾಂಚಿತಮುಖಾಂಬುಜಾಃ ।
ಶಿವಧ್ಯಾನರತಂ ಧೀರಂ ವಿನಿಮೀಲಿತಲೋಚನಂ ॥೮೧॥

ದೃಷ್ಟ್ವಾ ವಿನಿರ್ಗತಾಃ ಸರ್ವಾ ಮಂದಭಾಷಣವರ್ಜಿತಾಃ ।
ತ್ವಯಾ ದೃಷ್ಟಸ್ತ್ವಯಾದೃಷ್ಟಸ್ತ್ವಯೇತ್ಯನ್ಯೋನ್ಯಮಾದರಾತ್ ॥೮೨॥

ಗಳಲ್ಲಿ ತಮ್ಮ ತಮ್ಮ ಎಳೆಯ ಮಕ್ಕಳನ್ನು ಎತ್ತಿಕೊಂಡಿದ್ದ ಆ ವನಿತೆಯರು ಶಿವಮಂದಿರವನ್ನು ಪ್ರವೇಶಿಸಿ ಈಶ್ವರನನ್ನು ನಮಸ್ಕರಿಸಿ ಪೂಜಿಸಿದರು. ||೭೬-೭೭||

ಅವರಲ್ಲಿ ಕೆಲವರು ಆದರದಿಂದ ಮಕ್ಕಳಿಗೆ ಸ್ತನ್ಯಪಾನಮಾಡಿಸುತ್ತಿದ್ದರು. ಕೆಲವರು ಗರ್ಭಚಿಹ್ನಿತರಾಗಿದ್ದರು. ಮತ್ತೆ ಕೆಲವರು ಪೂರ್ಣ ಗರ್ಭಿಣಿಯರು. ಹಲವರು ಇನ್ನು ಯೌವನವನ್ನು ಪಡೆಯುದವರಾಗಿದ್ದರು. ಅನೇಕರು ಸಂಪೂರ್ಣ ಯೌವನವನ್ನು ಪಡೆದವರಾಗಿದ್ದರು. ಕೆಲವರು ಸೌಂದರ್ಯವತಿಯರಾಗಿಯೂ ಮತ್ತೆಕೆಲವರು ರತಿಯೋಗ್ಯರಾಗಿಯೂ, ||೭೮-೭೯||

ಕೆಲವರು ಸಾಕ್ಷಾಲ್ಲಕ್ಷ್ಮೀದೇವಿಯಂತೆ ಮನೋಹರರಾಗಿಯೂ, ಮತ್ತೂ ರೂಪವತಿಯರಾಗಿಯೂ ಇದ್ದರು. ಎಲ್ಲರೂ ಅಲ್ಲಿ ಬಂದು ಆ ರಾಜನನ್ನು ಕಂಡು ಇವನು ನನ್ನ ಭರ್ತೃ ನನ್ನ ಪತಿ ಎಂಬುದಾಗಿ ಹೇಳುತ್ತಿದ್ದರು. ||೮೦||

ಹಾಗೆ ಅನ್ಯೋನ್ಯವಾಗಿ ಸಂತೋಷಚಿತ್ತವುಳ್ಳವರಾಗಿಯೇ ಎಲ್ಲರೂ ಮೆಲ್ಲ ಮೆಲ್ಲನೆ ಮಾತಾಡುತ್ತಾ, ನೀನು ಕಂಡೆಯಾ ? ನೀನು ನೋಡಿದೆಯಾ ? ಎಂಬುದಾಗಿ ಪರಸ್ಪರ ಪಿಸುಮಾತುಗಳಾಡುತ್ತಾ ಆ ಶಿವಧ್ಯಾನದಲ್ಲಿಯೇ ಆಸಕ್ತನಾಗಿರತಕ್ಕ ರಾಜನನ್ನು ಕಂಡು ಹಿಂತಿರುಗಿದರು. ರಾಜನಾದರೋ ಕಣ್ಣುಗಳನ್ನು ಮುಚ್ಚಿಕೊಂಡು, ಶಿವಧ್ಯಾನಾಸಕ್ತನಾಗಿಯೇ ಕುಳಿತಿದ್ದನು. ||೮೧-೮೨||

ಮಂದಮಾಭಾಷಣಂ ಕೃತ್ವಾ ಸೋತ್ಸಾಹಾಸ್ತರುಣೀಜನಾಃ ।
ಅಪರಾ ಮಾರಸೇನೇವ ತಸ್ಥಾರೀ ಮಾಲಿಕಾ ಮುದಾ ॥೮೩॥

ದೃಷ್ಟ್ವಾ ತದ್ರಾಜಪತ್ನ್ಯಾ ಸಾ ಸರ್ವಾಭರಣಭೂಷಿತಾ ।
ಸಾಪಿ ತತ್ತರುಣೀಸಂಘಂ ವಿಸ್ಮಯೇನ ಸಮಾಕುಲಾ ॥೮೪॥

ಕುತಃ ಸಮಾಗತಂ ಕಸ್ಯ ಕಲತ್ರಾಣೀತಿ ಸಾದರಂ ।
ಪಪ್ರಚ್ಛ ವಿನಯಾ ನಮ್ರಾ ತತ್ಸೌಂದರ್ಯಪರಾಜಿತಾ ॥೮೫॥

ತಾಸ್ತಂ ಧ್ಯಾನಸಮಾವಿಷ್ಟಂ ರಾಜಾನಂ ವೀಕ್ಷ್ಯ ಲಜ್ಜಯಾ ।
ಮಂದಮಾಹುಃ ಪ್ರಯತ್ನೇನ ಸಂಜ್ಞಯಾನ್ಯತ್ರ ತಾಂ ವದ ॥೮೬॥

ನೀತ್ವಾ ಸ್ಮರಸಮಾಯುಕ್ತಾಂ ಪ್ರಫುಲ್ಲವದನಾಂಬುಜಾಃ ।
ಕಲತ್ರಾಣಿ ವಯಂ ರಾಜ್ಞಶ್ಯಾಂಭವಸ್ಯಾಸ್ಯ ಶೋಭನೇ ॥೮೭॥

ಆ ಸಮಯದಲ್ಲಿ ಹಿಂದೆ ಬಂದಿದ್ದ ಪರರಾಜಪತ್ನಿಯೂ ಕೂಡ ಆ ಸ್ಥಲದಲ್ಲಿಯೇ ಇದನ್ನೆಲ್ಲಾ ನೋಡುತ್ತಾ ನಿಂತಿದ್ದಳು. ಆಗ ಆ ರಾಜಪತ್ನಿಯು ಇನ್ನೊಂದು ಮನ್ಮಥಸೇನೆಯೋ ಎಂಬಂತೆ ಸರ್ವಾಭರಣಗಳಿಂದ ಅಲಂಕೃತರಾಗಿರುವ ಆ ಸ್ತ್ರೀಸಂಕುಲವನ್ನು ಕಂಡು ವಿಸ್ಮಿತಳಾದಳು. ||೮೩||

ಸ್ತ್ರೀಸಮೂಹವು ಎಲ್ಲಿಂದ ಬಂತು? ಮತ್ತು ಇವರು ಯಾರ ಪತ್ನಿಯರು? ಎಂಬುದಾಗಿ ತನಗಿಂತಲೂ ಹೆಚ್ಚು ಸೌಂದರ್ಯವತಿಯರಾದ ಅವರನ್ನು ಕುರಿತು ನೀವು ಯಾರೆಂದು ಕೇಳಿದಳು. ||೮೪-೮೫||

ಆ ಸ್ತ್ರೀಯರು ಹತ್ತಿರದಲ್ಲಿಯೇ ಧ್ಯಾನಾಸಕ್ತನಾಗಿ ಕುಳಿತಿರತಕ್ಕ ರಾಜನನ್ನು ಕಂಡು ಲಜ್ಜಿತರಾಗಿ, ಮೆಲ್ಲಮೆಲ್ಲನೆ ಪ್ರಯತ್ನಪೂರ್ವಕವಾಗಿ ಪಿಸುಮಾತಿನಿಂದ,||೮೬||

ನಗುಮುಖದಿಂದ ಕೂಡಿದ ಆ ರಾಣಿಯು ಸಮೀಪಕ್ಕೆ ಹೋಗಿ, ಅರಳಿದ ಕಮಲಗಳಂತೆ ಸುಂದರವಾದ ಮುಖಗಳಿಂದ ಹೀಗೆ ಹೇಳಿದರು. ಎಲೌ ಮಂಗಳಾಂಗಿಯೇ— ನಾವು ಶಿವಪೂಜಾಸಕ್ತನಾಗಿ ಕುಳಿತಿರತಕ್ಕ ಈ ರಾಜನ ಪತ್ನಿಯರು.||೮೭||

ವೈರಾಗ್ಯೇಣ ಗೃಹಂ ತ್ಯಕ್ತ್ವಮನೇನೈವ ಮಹಾತ್ಮನಾ ।
ಸರ್ವದಾ ಶಿವಪೂಜಾಯಾಂ ನಿರತಃ ಸೋಽಯಮಾಸ್ತಿಕಃ ॥೮೮॥

ಅನೇನ ನಾರೀವದನಂ ಸೋತ್ಸಾಹಂ ನೈವ ದೃಶ್ಯತೇ ।
ಋತುಕಾಲೇಷ್ವಯಂ ನಾರೀಪ್ರತ್ಯವಾಯಭಿಯಾ ಪರಂ ॥೮೯॥

ಭುಂಕ್ತೇ ತದ್ಭೋಗಕಾಲೇಽಪಿ ಶಿವಧ್ಯಾನಪರಾಯಣಃ ।
ನಿತ್ಯನಕ್ತವ್ರತೀ ಸೋಽಯಂ ಸಾಯಂಕಾಲೇ ಶಿವಾರ್ಚನಂ ॥೯೦॥

ಕೃತ್ವಾ ಭುಂಕ್ತೇ ನಿಶಿ ಸದಾ ಶಾಂಭವೈಃ ಸಹ ಸಾದರಂ ।
ಅರುಣೋದಯಮಾರಭ್ಯ ಮಧ್ಯರಾತ್ರಾವಧಿ ಸ್ವಯಂ ॥೯೧॥

ಕಾಲಂ ಶಿವಾರ್ಚನೇನೈವ ನಯತಿ ಪ್ರತಿವಾಸರಂ ।
ಏತೇಷು ಬಾಲಕೇಷ್ವಸ್ಯ ಬಾಲಕತ್ವೇನ ಸರ್ವಥಾ ॥೯೨॥

ಈ ಮಹಾತ್ಮನು ಯಾವಾಗಲೂ ಶಿವಪೂಜೆಯಲ್ಲಿಯೇ ಆಸಕ್ತನಾಗಿ ಆಸ್ತಿಕನಾಗಿಯೇ ಇದ್ದು ವೈರಾಗ್ಯದಿಂದ ಮನೆಯನ್ನು ದೂರಮಾಡಿ ಇಲ್ಲಿಗೆ ಬಂದಿರುವನು. ॥೮೮॥

ಇವನು ಸ್ತ್ರೀಯರ ಮುಖವನ್ನು ಯಾವಾಗಲೂ ಉತ್ಸಾಹದಿಂದ ನೋಡಿದವನಲ್ಲ. ಋತುಕಾಲದಲ್ಲಿ ಸ್ತ್ರೀಗಮನ ಮಾಡದಿದ್ದರೆ ದೋಷಬಂದೀತೆಂಬ ಭಯದಿಂದ ಆಗ ಮಾತ್ರ ಸ್ತ್ರೀಲೋಲನಾಗುತ್ತಿದ್ದನು. ॥೮೯॥

ಆ ಭೋಗಕಾಲದಲ್ಲಿಯೂ ಕೂಡ ಶಿವಧ್ಯಾನಪರಾಯಣನಾಗಿಯೇ ಇರುತ್ತಿದ್ದನು. ಈತನು ನಿತ್ಯವೂ ನಕ್ತವ್ರತಿ (ಸಾಯಂಕಾಲದಲ್ಲಿ ಶಿವವ್ರತವನ್ನು ಆಚರಿಸತಕ್ಕವನು) ಯಾಗಿದ್ದಾನೆ. ಆದುದರಿಂದ ಸಾಯಂಕಾಲದಲ್ಲಿಯೂ ಶಿವಾರ್ಚನೆ ಮಾಡಿ, ॥೯೦॥

ಅನಂತರ ನಿತ್ಯವೂ ಶಾಂಭವರೊಡಗೂಡಿ ಭೋಜನಮಾಡುತ್ತಿದ್ದನು. ತಾನು ಅರುಣೋದಯದಿಂದಾರಂಭವಾಗಿ ಮಧ್ಯರಾತ್ರಿಯ ವರೆಗೂ ॥೯೧॥

ಕಾಲವನ್ನು ಪ್ರತಿದಿನವೂ ಶಿವಾರ್ಚನೆಯಲ್ಲಿಯೇ ಕಳೆಯುತ್ತಾನೆ. ಮತ್ತು ಈ ಮಕ್ಕಳಲ್ಲಿಯೂ ಸಹ ಈತನಿಗೆ ತನ್ನ ಮಕ್ಕಳೆಂಬ ಬುದ್ಧಿಯು ನಿಜವಾಗಿಯೂ ಇಲ್ಲ. ॥೯೨॥

ನ ಪ್ರೀತಿಃ ಕಿಂ ತು ಶೈವಷ್ವಬುದ್ಧ್ಯಾ ಪ್ರೀತಿಃ ಕದಾಚನ ।
ಭಸ್ಮೋದ್ಧೂಲಿತಸರ್ವಾಂಗಸ್ತ್ರಿಪುಂಡ್ರಾಂಕಿತಮಸ್ತಕಃ ॥೯೩॥

ರುದ್ರಾಕ್ಷಮಾಲಾಭರಣಃ ಸರ್ವದಾಪ್ಯಯಮಾಸ್ತಿಕಃ ।
ನ ಚಂದನಾನುಲಿಪ್ತಾಂಗೋ ನ ವಾ ರತ್ನವಿಭೂಷಣಃ ॥೯೪॥

ನವಾಂಗನಾಂಗಸಂತುಷ್ಟೋ ನ ವಾ ರಾಜ್ಯರತಃ ಸದಾ ।
ಅತ್ಯುಷ್ಣಕಾಲೇ ಬಾಲಾನಾಂ ಅಂಗಶೈತ್ಯಾರ್ಥಮಾದರಾತ್ ॥೯೫॥

ಅಸ್ಮಾಭಿಶ್ಚಂದನೇ ದತ್ತೇ ಸಹತೇ ನ ಭೂಪತಿಃ ।
ಪ್ರಕ್ಷಾಲ್ಯ ಶಿವತೀರ್ಥೇನ ಬಾಲಪುತ್ರಾಂಗಮಾದರಾತ್ ॥೯೬॥

ಉದ್ಧೂಳನತ್ರಿಪುಂಡ್ರಾಭ್ಯಾಂ ಭೂಷಿತಂ ತಂ ಚಕಾರ ಹಿ
ಕದಾಚಿದಸ್ಯ ಬಾಲಸ್ಯ ರತ್ನಕಂಚುಕವೇಷ್ಟಿತಂ ॥೯೭।

ಮತ್ತೆ ಇವರಲ್ಲಿ ಈಶ್ವರಭಕ್ತರೆಂಬ ಭಾವದಿಂದ ಪ್ರೀತಿಯನ್ನಿಟ್ಟಿರುತ್ತಾನೆ ಯಾವಾಗಲೂ ಈತನು ತನ್ನ ಅವಯವಗಳಿಗೆಲ್ಲಾ ಭಸ್ಮಧಾರಣೆಮಾಡಿರುತ್ತಾನೆ. ಮತ್ತು ಹಣೆಯಲ್ಲಿ ತ್ರಿಪುಂಡ್ರಚಿನ್ಹೆಯನ್ನಿಟ್ಟಿರುತ್ತಾನೆ. ಈತನಿಗೆ ಯಾವಾಗಲೂ ರುದ್ರಾಕ್ಷಮಾಲೆಯೇ ಆಭರಣವಾಗಿರುತ್ತದೆ. ಮತ್ತು ಅಂಗಗಳಿಗೆ ಚಂದನಾನುಲೇಪನಮಾಡುವುದಿಲ್ಲ. ಮತ್ತು ರತ್ನಾದ್ಯಾಭರಣಗಳಿಂದ ಅಲಂಕರಿಸುವುದಿಲ್ಲ. ||೯೩-೯೪||

ಈತನು ಹೊಸ ಸ್ತ್ರೀಯ ಅಂಗಸ್ಪರ್ಶದಿಂದ ಸಂತುಷ್ಟನಾಗುವುದಿಲ್ಲ. ರಾಜ್ಯಭಾರವಲ್ಲಿಯೂ ಆಸಕ್ತನಲ್ಲ. ಮಕ್ಕಳಿಗೆ ಅತ್ಯುಷ್ಣಕಾಲದಲ್ಲಿ ಅಂಗಗಳಿಗೆ ತಂಪನ್ನುಂಟುಮಾಡಲೋಸುಗ ಲೇಪಿಸಿದ ಚಂದನವನ್ನು ನೋಡಿ ಈತನು ಸಹಿಸಲಾರನು. ||೯೫||

ನಾವು ಚಂದನಾನುಲೇಪನಮಾಡಿಕೊಂಡರೂ ಕೂಡ ಈ ರಾಜನಿಗೆ ಸಹಿಸುವುದಿಲ್ಲ. ಹಾಗೆಮಾಡಿದೊಡನೆ ಈತನು ಬಂದು ಬಾಲಕರ ಅಂಗಾಂಗಗಳನ್ನು ಶಿವತೀರ್ಥದಿಂದ ತೊಳೆಯುವನು. ||೯೬||

ಆ ಬಾಲಕರಿಗೆ ಭಸ್ಮದಿಂದ ಉದ್ಧೂಳನವನ್ನೂ, ತ್ರಿಪುಂಡ್ರದಿಂದ ಅಲಂಕಾರವನ್ನೂ ಮಾಡುವನು. ಒಂದುಸಲ ಈ ಬಾಲಕನಿಗೆ ರತ್ನಮಯವಾದ ಕಂಚುಕದಿಂದ ಅಲಂಕಾರಮಾಡಿದ್ದೆವು. ||೯೭||

ರತ್ನಾಭರಣಸಂಯುಕ್ತಾಂ ದದರ್ಶ ಸ ತನುಂ ನೃಪಃ ।
ತತಃ ಪರಂ ಕಂಚುಕಂ ಚ ಸರತ್ನಾಭರಣಾನ್ಯಪಿ ॥೯೮॥

ದೂರೀಚಕಾರ ಯತ್ನೇನ ಮುಕುಟಂ ಚಾಸ್ಯ ಭೂಪತಿಃ ।
ಭಸ್ಮನಾಲಂಕೃತಂ ಕೃತ್ವಾ ದದೌ ರುದ್ರಾಕ್ಷಕಂಚುಕಂ ॥೯೯॥

ರುದ್ರಾಕ್ಷಮುಕುಟಂ ಚೈತದ್ದದೌ ರುದ್ರಾಕ್ಷಮಾಲಿಕಾಂ ।
ಏವಂ ಶಿಶೂನಾಂ ಸರ್ವೇಷಾಂ ಕನ್ಯಕಾನಾಂ ಚ ಭೂಪತಿಃ ॥೧೦೦॥

ಪ್ರಯಚ್ಛತಿ ಪ್ರಯತ್ನೇನ ರುದ್ರಾಕ್ಷಾಭರಣಾನ್ಯಪಿ ।
ಶಿವಾರ್ಚನೇನ ಕಾಲೋಽಯಂ ನೀಯತೇ ತೇನ ಸಾದರಂ ॥೧೦೧॥

ಪೂರ್ವೇದ್ಯುರ್ನಿರ್ಗತೋ ಗೇಹಾದ್ರಾಜಾ ತೀರ್ಥಾಟನೋತ್ಸುಕಃ ।
ದೈವಾದತ್ರಾಗತೋ ರಾಜ್ಞೀ ರಾಜವೇಷಂ ವಿಹಾಯ ತು ॥೧೦೨॥

ರತ್ನಮಂದಿರಮೇತೇನ ಕಾರಿತಂ ಶಂಕರಾಯ ಚ ।
ಅಂಬಿಕಾಯೈ ಗಣೇಶಾಯ ಕುಮಾರಾಯ ಚ ಸಾದರಂ ॥೧೦೩॥

---

ಆಗ ಈತನು ಆ ಬಾಲಕನ ರತ್ನಾಭರಣಗಳಿಂದ ಕೂಡಿದ್ದ ಆ ಶರೀರವನ್ನು ನೋಡಿದನು. ಒಡನೆಯೇ ಆ ಕಂಚುಕವನ್ನೂ, ಆಭರಣಗಳನ್ನೂ, ಕಿರೀಟವನ್ನೂ ಕೂಡ ದೂರೀಕರಿಸಿ, ಅವನನ್ನು ಭಸ್ಮದಿಂದ ಅಲಂಕರಿಸಿದನು. ರುದ್ರಾಕ್ಷಿಯಿಂದ ತಯಾರಾದ ಕಂಚುಕವನ್ನು ತೊಡಿಸಿದನು. ॥೯೮॥

ಅದೇ ರೀತಿ ಕಿರೀಟವನ್ನೂ, ರುದ್ರಾಕ್ಷಮಾಲೆಯನ್ನೂ, ಎಲ್ಲಾ ಶಿಶುಗಳಿಗೂ, ಹೆಣ್ಣುಮಕ್ಕಳಿಗೂ ಸಹ ಧರಿಸುವಂತೆ ಆಜ್ಞೆಮಾಡಿದನು. ॥೧೦೦॥

ಮತ್ತು ಪ್ರಯತ್ನಪೂರ್ವಕವಾಗಿ ಆಭರಣಗಳೆಲ್ಲವನ್ನೂ ರುದ್ರಾಕ್ಷಿಯದನ್ನಾಗಿಯೇ ಮಾಡಿಸುತ್ತಾನೆ. ಆತನು ಆದರಪೂರ್ವಕವಾಗಿ ಶಿವಾರ್ಚನೆಯಲ್ಲಿಯೇ ಕಾಲವನ್ನು ಕಳೆಯುತ್ತಾನೆ. ॥೧೦೧॥

ರಾಜನು ತೀರ್ಥಯಾತ್ರೆಯಲ್ಲಿ ಆಸಕ್ತನಾಗಿ ರಾಜವೇಷವನ್ನು ಬಿಟ್ಟು ನಿನ್ನೆಯ ದಿವಸ ಮನೆಯಿಂದ ಹೊರಟು ಇಲ್ಲಿಗೆ ಬಂದಿರುತ್ತಾನೆ. ॥೧೦೨॥

ಈತನು ಶಂಕರನಿಗೂ, ದೇವಿಗೂ, ಗಣೇಶನಿಗೂ, ಷಣ್ಮುಖನಿಗೂ, ಪ್ರತ್ಯೇಕ ಪ್ರತ್ಯೇಕವಾಗಿ ರತ್ನದಿಂದ ಮಂದಿರವನ್ನು ನಿರ್ಮಿಸಿರುತ್ತಾನೆ. ॥೧೦೩॥

ರತ್ನಪ್ರಾಕಾರಸಂಯುಕ್ತಂ ರತ್ನಪ್ರಾಸಾದವೇಷ್ಟಿತಂ ।
ರತ್ನಪರ್ವತಸಂಕಾಶಾಃ ಪ್ರಾಸಾದಾಃ ಕೋಟಿಶೋ ನವಾಃ ॥೧೦೪॥

ಸುಧಾಕರಕರಾಕಾರತಾರಹಾರವಿರಾಜಿತಾಃ ।
ಕಾರಿತಾಸ್ತ್ವ ಶರತ್ಪ್ರಾಕಾನಂಯಕಪ್ರತಿಮಾಃ ಪ್ರಿಯಾಃ ॥೧೦೫॥

ಕಾರಿತಾನಿ ಮನೋಜ್ಞಾನಿ ರಾಜ್ಞಾ ಪುಷ್ಪವನಾನ್ಯಪಿ ।
ಅಯಂ ಭೋಜನಕಾಲೇಽಪಿ ನಾನ್ಯವಾರ್ತಾಂ ವದತ್ಯಪಿ ॥೧೦೬॥

ವ್ಯವಹಾರಾಸ್ತು ಸರ್ವೇಽಪಿ ಶಿವನಾಮ್ನಾ ಪರಂ ಪ್ರಭೋಃ ।
ಮುಕೋಲಶಯ್ಯಾ ಸಂತ್ಯಕ್ತಾ ತೇನ ರಾಜ್ಞಾ ಮಹಾತ್ಮನಾ ॥೧೦೭॥

ನಿದ್ರಾಪಿ ಭಸ್ಮಶಯ್ಯಾಯಾಂ ಕ್ಷಣಮಾತ್ರಂ ಮಹಾನಿಶಿ ।
ಶಿವಾರ್ಚನೇನ ಸರ್ವೋಽಪಿ ನೀಯತೇ ಸಮಯಾಃ ಖಲು ॥೧೦೮॥

---

ಹೊಸಹೊಸದಾದ ಆ ದೇವಾಲಯಗಳನ್ನು ರತ್ನಮಯವಾದ ಪ್ರಾಕಾರವುಳ್ಳವನ್ನಾಗಿಯೂ, ರತ್ನಮಯವಾದ ಉಪ್ಪರಿಗೆಗಳಿಂದ ಅಲಂಕೃತವಾದುದನ್ನಾಗಿಯೂ, ರತ್ನಪರ್ವತಗಳಂತೆ ಹೊಳೆಯುತ್ತಿರುವ ಪ್ರಾಸಾದಗಳಿಂದ ಅಲಂಕೃತವಾದುದನ್ನಾಗಿಯೂ ಮಾಡಿರುತ್ತಾನೆ. ಮತ್ತು, ॥೧೦೪॥

ತನ್ನ ಪತ್ನಿಯರನ್ನು ಶರದೃತುವಿನ ಪೂರ್ಣಿಮಾಚಂದ್ರನ ಕಿರಣಗಳಂತೆ ತೇಜಸ್ಸನ್ನು ಎರಚುವ ಹಾರಗಳಿಂದ ಪ್ರಕಾಶವುಳ್ಳವರನ್ನಾಗಿ ಮಾಡುತ್ತಾನೆ. ॥೧೦೫॥

ರಾಜನು ಪುಷ್ಪವನಗಳನ್ನು ಸುಂದರವಾದುದನ್ನಾಗಿ ಮಾಡಿದನು. ಈತನು ಊಟಮಾಡುವ ಕಾಲದಲ್ಲಿಯೂ ಬೇರೊಂದು ಮಾತನ್ನೇ ಆಡುವುದಿಲ್ಲ. ॥೧೦೬॥

ಈ ರಾಜನ ಎಲ್ಲಾ ವ್ಯವಹಾರಗಳೂ ಶಿವನಾಮಪರವಾಗಿಯೇ ಇರುತ್ತವೆ. ಕೊನೆಕೊನೆಗೆ ಬಟ್ಟೆಯ ಹಾಸಿಗೆಯನ್ನೂ ಸಹ ವಿಸರ್ಜಿಸಿರುವನು. ॥೧೦೭॥

ಮಧ್ಯರಾತ್ರಿಯಲ್ಲಿ ಕ್ಷಣಕಾಲಮಾತ್ರ ನಿದ್ರೆಯನ್ನು ಭಸ್ಮಶಯ್ಯೆಯಲ್ಲಿಯೇ ಮಾಡುತ್ತಾನೆ. ಹೀಗೆ ತನ್ನ ಸಮಯವನ್ನೆಲ್ಲಾ ಶಿವಾರ್ಚನೆಯಲ್ಲಿಯೇ ಕಳೆಯುತ್ತಾನೆ. ॥೧೦೮॥

ಭಸ್ಮರುದ್ರಾಕ್ಷಪೂತಾಂಗಾನ್ ರಾಜಾ ಪಶ್ಯತಿ ಸಾದರಂ ।
ಅಸ್ಮಾಕಂ ರತ್ನರಮ್ಯಾಣಾಂ ಭೂಷಣಾನಾಂ ತು ಕೋಟಯಃ॥೧೦೯॥

ಸಂತ್ಯಥಾಽಪಿ ನ ತೈರ್ನಿತ್ಯಂ ಕ್ರಿಯತೇ ತನುಭೂಷಣಂ ।
ಸೂಕ್ಷ್ಮರುದ್ರಾಕ್ಷಯುಕ್ತಾನಿ ಸುವರ್ಣಾಭರಣಾನ್ಯಪಿ ॥೧೧೦॥

ಕೋಟಿಶಃ ಸಂತಿ ತೈರಂಗಂ ನಾಸ್ಮಾಭಿರ್ಭೂಷಿತಂ ವಪುಃ ।
ಭಸ್ಮನೋದ್ಧೂಲನಂ ಕೃತ್ವಾ ತ್ರಿಪುಂಡ್ರಂ ನಿಟಿಲಾದಿಷು ॥೧೧೧॥

ಶುದ್ಧರುದ್ರಾಕ್ಷಮಾಲಾನಾಂ ಭೂಷಣೈರಂಗಮಂಚಿತಂ ।
ಏತಾಃ ಸಪತ್ನ್ಯಃ ಸರ್ವಾಶ್ಚ ರುದ್ರಾಕ್ಷಾಭರಣಾಂಕಿತಾಃ ॥೧೧೨॥

ಉದ್ಧೂಲನತ್ರಿಪುಂಡ್ರಾಭ್ಯಾಂ ಸರ್ವದಾ ಸಮಲಂಕೃತಾಃ ।
ವಿಭೂತ್ಯಪಗಮೇಽಸ್ವೇದೈರ್ಭಸ್ಮನಾಲಂಕೃತಾ ತನುಃ ॥೧೧೩॥

ರಾಜನು ಯಾವಾಗಲೂ ಭಸ್ಮ ಮತ್ತು ರುದ್ರಾಕ್ಷಿ ಇವುಗಳಿಂದ ಪೂತವಾದ ಅಂಗಗಳನ್ನೇ ನೋಡುವನು. ನಮ್ಮಲ್ಲಿ ರತ್ನದಿಂದ ರಮ್ಯವಾದ ಆಭರಣಗಳು ಕೋಟ್ಯಂತರಗಳಿವೆ. ಮತ್ತು ಸೂಕ್ಷ್ಮವಾದ ರುದ್ರಾಕ್ಷಿಗಳಿಂತಿರುವ ಸುವರ್ಣಾಭರಣಗಳೂ ಸಹ ಅನೇಕವಿವೆ. ಆದರೂ ಅವುಗಳಿಂದ ನಾವು ಶರೀರವನ್ನು ಅಲಂಕರಿಸುವುದಿಲ್ಲ. ॥೧೦೯-೧೧೦॥

ಹಣೆಯೇ ಮೊದಲಾದ ಅಂಗಗಳಲ್ಲಿ ತ್ರಿಪುಂಡ್ರಾಕಾರವಾಗಿ ಭಸ್ಮೋದ್ಧೂಲನ ಮಾಡಿಕೊಳ್ಳುತ್ತೇವೆ. ರತ್ನಾಭರಣಗಳನ್ನು ಎಂದಿಗೂ ಬಳಸುವುದಿಲ್ಲ. ॥೧೧೧॥

ನಮ್ಮ ಅಂಗಗಳು ಶುದ್ಧವಾಗಿಯೂ, ರುದ್ರಾಕ್ಷಮಾಲೆಗಳೆಂಬ ಒಡವೆಗಳಿಂದ ಅಲಂಕೃತವಾಗಿಯೂ ಇರುತ್ತವೆ. ಈ ನನ್ನ ಸಪತ್ನಿಯರೂ ಕೂಡ ರುದ್ರಾಕ್ಷಿಯ ಆಭರಣಗಳಿಂದ ಕೂಡಿದವರಾಗಿರುತ್ತಾರೆ. ॥೧೧೨॥

ಯಾವಾಗಲೂ ಭಸ್ಮತ್ರಿಪುಂಡ್ರಗಳಿಂದಲೇ ದೇಹವು ಅಲಂಕೃತವಾಗಿರುವುದು. ಅಕಸ್ಮಾತ್ ಬೆವರಿನಿಂದ ವಿಭೂತಿಯು ಅಳಿಸಿಹೋದುದಾದರೆ ಪುನಃ ಭಸ್ಮದಿಂದ ಅವಯವಗಳನ್ನು ಅಲಂಕರಿಸಿಕೊಳ್ಳುತ್ತೇವೆ. ॥೧೧೩॥

ಕ್ರಿಯತೇ ಘರ್ಮಕಾಲೇಷು ಪುನಃ ಪುನರನುಕ್ಷಣಂ ।
ಭಸ್ಮತ್ರಿಪುಂಡ್ರರುದ್ರಾಕ್ಷಮಾಲಿಕಾಸಮಲಂಕೃತಾಃ ॥೧೧೪॥

ನಾಟ್ಯಂ ಕುರ್ಮೋ ಮಹೇಶಸ್ಯ ಪುರತೋ ರತ್ನಮಂಡಪೇ ।
ಶಿವಗಾಯನಮುಖ್ಯೈಸ್ತುಮಸ್ಮಾಭಿಸ್ತದನುಜ್ಞಯಾ ॥೧೧೫॥

ಕ್ರಿಯತೇ ಗಾನಮಸ್ಮಾಭಿಃ ಸರ್ವದಾ ಶಿವಮಂದಿರೇ ।
ಬಾಲಕೈರಪಿ ಗೌರೀಶಪೂಜನಂ ಕ್ರಿಯತೇ ಗೃಹೇ ॥೧೧೬॥

ಸ್ತನಂಧಯೋಽಪ್ಯಂತತೋಽಪಿ ಕುರುತೇ ಶಿವಪೂಜನಂ ।
ಕೋಟಿಶಃ ಶಾಂಭವಾಃ ಸಂತಿ ಪಂಚಾಕ್ಷರಪರಾಯಣಾಃ ॥೧೧೭॥

ಹಾರೋಪಹಾರೈಸ್ತೇ ಸರ್ವೇ ಜೀವಂತಿ ಶಿವಮಂದಿರೇ ।
ಗಂಧರ್ವರಾಜತನಯಾ ಸರ್ವಾ ಏವ ವಯಂ ಪ್ರಿಯಾಃ ॥೧೧೮॥

ಅಸ್ಯ ರಾಜ್ಞೋಽಪಿ ಶೂರಸ್ಯ ಸ್ವಯಂಪರಸಮಾವೃತಾಃ ॥೧೧೯॥

ಬೇಸಿಗೆಯ ಕಾಲದಲ್ಲಿ ಬಾಲಬಾಲಿಗೂ ಭಸ್ಮ, ತ್ರಿಪುಂಡ್ರ, ರುದ್ರಾಕ್ಷಿ ಇವುಗಳಿಂದ ನಮ್ಮ ದೇಹಗಳನ್ನು ಅಲಂಕರಿಸಿಕೊಳ್ಳುತ್ತೇವೆ. ॥೧೧೪॥

ಆ ರೀತಿ ಶೃಂಗರಿಸಿಕೊಂಡು ರತ್ನಖಚಿತವಾದ ಮಂಟಪದಲ್ಲಿ ಈಶ್ವರನ ಮುಂದೆ ನಾವು ನಾಟ್ಯವಾಡುತ್ತೇವೆ. ಮತ್ತು ರಾಜನ ಆಜ್ಞೆಯನ್ನು ಪಡೆದು ಅಭ್ಯಾಸಮಾಡಿರತಕ್ಕ ಆ ಶಿವಕೀರ್ತನೆಗಳನ್ನು ಹಾಡುತ್ತೇವೆ. ॥೧೧೫॥

ಆ ಶಿವಮಂದಿರದಲ್ಲಿ ಇಂಪಾಗಿ ಗಾನಮಾಡುತ್ತೆ ಮನೆಯಲ್ಲಿ ಬಾಲಕರೂ ಸಹ ಈ ಶಿವಪೂಜೆಯನ್ನು ಬಿಡದೆ ನಡೆಸುವರು. ॥೧೧೬॥

ಒಟ್ಟಿನಲ್ಲಿ ಹೇಳುವುದಾದರೆ, ಸ್ತನ್ಯಪಾನಮಾಡತಕ್ಕ ಮಕ್ಕಳೂ ಸಹ ಶಿವಪೂಜೆಯನ್ನು ಬಿಡುವುದಿಲ್ಲ. ಕೋಟ್ಯಂತರ ಶಾಂಭವರು ಯಾವಾಗಲೂ ಶಿವಪಂಚಾಕ್ಷರಮಂತ್ರವನ್ನು ಜಪಿಸತಕ್ಕವರಾಗಿ, ಆರಮನೆಯಲ್ಲಿರುವರು. ॥೧೧೭॥

ಅವರು ಶಿವಮಂತ್ರವನ್ನು ಜಪಿಸುತ್ತಾ ಆ ಶಿವಮಂದಿರದಲ್ಲಿಯೇ ಕಾಲಕಳೆಯುತ್ತಿರುವರು. ಉಪಹಾರಾದಿಗಳಿಂದ ಜೀವಿಸುವರು. ನಾವೆಲ್ಲರೂ ಗಂಧರ್ವರಾಜನ ಮಕ್ಕಳು. ಈ ಶೂರನಾದ ರಾಜನ ಪತ್ನಿಯರಾಗಿದ್ದೇವೆ. ಸ್ವಯಂವರದಲ್ಲಿ ಈತನು ತನ್ನ ಶೌರ್ಯಾದಿಗುಣಗಳಿಂದ ನಮ್ಮನ್ನು ಗೆದ್ದಿರುವನು. ॥೧೧೮-೧೧೯॥

**ರಾಜಾ ಶಾಂಭವಪುಂಗವೋಯಮಮರಾರಾಧ್ಯಂ ಮಹೇಶಂ ಸದಾ ।
ಲಿಂಗಾಕಾರಮಪಾರಸಾಧನವರೈರಭ್ಯರ್ಚಯತ್ಯಾದರಾತ್ ।
ಏತದ್ದರ್ಶನವಾಂಛಯಾ ಸುರಗಣೈಃ ಸರ್ವೈಃ ಸಮಾಗಮ್ಯತೇ
ಗಂಧರ್ವೈರಪಿ ಕಿಂನರೈರಪಿ ಮುಹುರ್ಭೂಚಕ್ರವರ್ತೀ ನೃಪಃ ॥೧೨೦॥**

**ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಸೌಂದರ್ಯನಿಧಿನಾಮಕ ರಾಜವೈರಾಗ್ಯ, ಶಿವಭಕ್ತ್ಯುತ್ಕರ್ಷ
ವರ್ಣನಂ ನಾಮ ದ್ವಿತೀಯೋಽಧ್ಯಾಯಃ**

ಶಾಂಭವರಿಗೆಲ್ಲಾ ಶಿರೋಮಣಿಯಂತಿರತಕ್ಕ ಈ ರಾಜನು ಯಾವಾಗಲೂ ಶ್ರೇಷ್ಠವಾದ ಸಾಧನಗಳನ್ನು ಸಂಪಾದಿಸಿ, ದೇವತೆಗಳಿಂದಲೂ ಪೂಜಿಸಲ್ಪಡತಕ್ಕ ಲಿಂಗಾಕಾರವಾಗಿರುವ ಈಶ್ವರನನ್ನು ಬಹು ಆಸಕ್ತಿಯಿಂದ ಪೂಜಿಸುವನು. ಇಂತಹ ರಾಜನ ದರ್ಶನಾಕಾಂಕ್ಷೆಯಿಂದ ಸುರಗಣಗಳು, ಗಂಧರ್ವರು, ಕಿಂನರರು, ಕಾದು ನಿಂತಿರುವರು. ಅಂತಹ ಶಾಂಭವವೀರನಾದ ಈ ರಾಜನನ್ನು ದರ್ಶನಮಾಡಲು ನಾವು ಬಂದಿರುವೆವು. ಎಂದು ಆ ವನಿತೆಯರು ಆ ಮಹಾರಾಣಿಯನ್ನು ಕುರಿತು ಹೇಳಿದರೆಂಬುದಾಗಿ ಯಾಜ್ಞ್ಯವಲ್ಕ್ಯನು ಹೇಳಿದನು. ॥೧೨೦॥

ಇಲ್ಲಿಗೆ ಶಿವರಹಸ್ಯದ ಹರನಾಮಕವಾದ ತೃತೀಯಾಂಶದ ಉತ್ತರಾರ್ಧದಲ್ಲಿ
ಸೌಂದರ್ಯನಿಧಿ ಎಂಬ ಹೆಸರುಳ್ಳ ರಾಜನ ವೈರಾಗ್ಯ ವರ್ಣನೆ ಮತ್ತು
ಶಿವಭಕ್ತಿಯು ಸರ್ವಶ್ರೇಷ್ಠವಾದುದು ಎಂಬಿವುಗಳ ವರ್ಣನೆಯೆಂಬ
ಎರಡನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ತೃತೀಯೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತಿ ತದ್ವಚನಂ ಶ್ರುತ್ವಾ ರಾಜ್ಞೀ ವಿಸ್ಮಿತಮಾನಸಾ ।
ಸ್ವಯಂವರಸ್ಯ ವೃತ್ತಾಂತಂ ಶ್ರೋತುಮಾಹ ವಿಚಕ್ಷಣಾ ||೧||

ಗಂಧರ್ವರಾಜನಗರೇ ನೀಹಾರಗಿರಿಕಂಧರೇ ।
ಸ್ವಯಂವರಂ ಕಥಂ ತತ್ರ ಭೂಪತೇರಿದಮದ್ಭುತಂ ||೨||

ಕೇನ ಪುಣ್ಯಪ್ರಭಾವೇನ ಭೂಪಾಲಸ್ಯ ಸ್ವಯಂವರಂ ।
ಇದಂ ಸರ್ವಂ ವಿಶೇಷೇಣ ಜ್ಞೇಯಮಿತ್ಯಾಹ ತಾಃ ಪ್ರತಿ ||೩||

## ಮೂರನೆಯ ಅಧ್ಯಾಯ

ಹಾಗೆ ಆ ಅರಸನ ವನಿತೆಯರು ಹೇಳಿದ ಮಾತನ್ನು ಕೇಳಿ ರಾಣಿಯು ಆಶ್ಚರ್ಯಗೊಂಡವಳಾಗಿ, ಆತನ ಸ್ವಯಂವರ ವೃತ್ತಾಂತವನ್ನು ತಿಳಿಯಲಪೇಕ್ಷಿಸಿದಳು. ಎಂದು ಯಾಜ್ಞವಲ್ಕ್ಯಋಷಿಯು ಮುಂದಿನ ಕಥೆಯನ್ನು ಜನಕಮಹಾರಾಜನಿಗೆ ವಿವರಿಸಲಾರಂಭಿಸಿದನು. ||೧||

ಆ ರಾಣಿಯು ಆ ರಾಜವನಿತೆಯರನ್ನೂ ಕುರಿತು "ಎಲೌ ಮಹಿಷಿಯರೇ, ಇಂತಹ ವೈರಾಗ್ಯಶಾಲಿಯಾದ ರಾಜನಿಗೆ ಯಾವ ಪುಣ್ಯವಿಶೇಷದಿಂದ ಗಂಧರ್ವನಗರದಲ್ಲಿ ಸ್ವಯಂವರವು ಒದಗಿತು ? ಈ ಎಲ್ಲವನ್ನು ದಯೆಯಿಂದ ತಿಳಿಸಿರಿ ಎಂದು ಕೇಳಿಕೊಂಡಳು. ||೨-೩||

ತಾಸು ಪದ್ಮಾವತೀನಾಮ ಪ್ರೌಢಾ ಗಂಧರ್ವಕನ್ಯಕಾ ।
ತಾಮುವಾಚ ಪ್ರಯತ್ನೇನ ಸ್ವಯಂವರಮಹೋತ್ಸವಂ ॥೪॥

ಅಯಂ ಪೂರ್ವಭವೇ ವಿಪ್ರೋ ಭಿಕ್ಷುಕೋಽಪ್ಯತಿಯಾಚಕಃ ।
ಪ್ರತಿಗ್ರಹಣಕಾಲೋಽಪಿ ನೀತಸ್ತೇನ ತದಾ ಮುಹುಃ ॥೫॥

ದುರಾನ್ನಭಕ್ಷಣೋದ್ಯುಕ್ತೋ ದುಷ್ಪ್ರತಿಗ್ರಹಲೋಲುಪಃ ।
ಆಸಾಯಂ ಯಾಚ್ಞಯಾ ಕಾಲಂ ನಯತಿ ಪ್ರತಿವಾಸರಂ ॥೬॥

ಯಾಚ್ಞಯಾ ಜೀವನಂ ಕೃತ್ವಾ ಸಾಯಂಕಾಲೇ ಪ್ರಯತ್ನತಃ ।
ಚಿದಂಬರೇಶ್ವರಂ ದೃಷ್ಟ್ವಾ ನತ್ವಾ ಯಾತಿ ಪ್ರಯತ್ನತಃ ॥೭॥

ದೀಪಮಾಲಾಂ ಮಹಾಪೂಜಾಂ ದೃಷ್ಟ್ವಾ ನತ್ವಾ ಮುಹುರ್ಮುಹುಃ ।
ಸಮ್ಯಕ್ಸಮ್ಯಗಿದಂ ಸಮ್ಯಗಿತ್ಯುದೀರ್ಯಾತಿವಿಸ್ಮಿತಃ ॥೮॥

ಅವರ ಪೈಕಿ ಪ್ರೌಢಾಂಗನೆಯೂ, ಗಂಧರ್ವ ಕನ್ಯಕೆಯೂ ಆಗಿದ್ದ ಪದ್ಮಾವತಿ ಎಂಬುವಳು ಆ ಮಹಾರಾಣಿಯನ್ನು ಕುರಿತು ಸ್ವಯಂವರಮಹೋತ್ಸವವಿಷಯವನ್ನು ಹೇಳತೊಡಗಿದಳು. ॥೪॥

ಈತನು ಪೂರ್ವಜನ್ಮದಲ್ಲಿ ಬ್ರಾಹ್ಮಣನಾಗಿಯೂ, ಭಿಕ್ಷುಕನಾಗಿಯೂ, ಅತ್ಯಂತ ಯಾಚನಾವೃತ್ತಿಯಲ್ಲಿ ನಿರತನಾಗಿದ್ದು, ಯಾವಾಗಲೂ ದಾನಪ್ರತಿಗ್ರಹಣ ಸ್ವಭಾವವುಳ್ಳವನಾಗಿಯೇ ಇದ್ದನು. ॥೫॥

ಮತ್ತು ದುರಾನ್ನಭಕ್ಷಣೆಯಲ್ಲಿ ಆಸಕ್ತನಾಗಿಯೂ, ದುರ್ದಾನ ತೆಗೆದುಕೊಳ್ಳುವುದರಲ್ಲಿ ನಿರತನಾಗಿಯೂ, ಸಾಯಂಕಾಲದವರೆಗೂ ಯಾಚನೆಯಲ್ಲಿಯೇ ಕಾಲಯಾಪನೆ ಮಾಡುತ್ತಲೂ ಇದ್ದನು. ॥೬॥

ಈ ರೀತಿ ಯಾಚನಾವೃತ್ತಿಯಿಂದ ಜೀವನವನ್ನು ಮಾಡಿ ಸಾಯಂಕಾಲದಲ್ಲಿ ಮಾತ್ರ ಪ್ರಯತ್ನಪೂರ್ವಕವಾಗಿ ಚಿದಂಬರೇಶ್ವರನ ದರ್ಶನವನ್ನು ಮಾಡಿ ಹೋಗುತ್ತಿದ್ದನು. ॥೭॥

ಅಲ್ಲಿ ದೇವರ ಮುಂದೆ ಇರಿಸಿದ್ದ ದೀಪಗಳ ಮಾಲೆಯನ್ನೂ ಆ ರೀತಿಯಾದ ಪೂಜೆಯನ್ನೂ ಸಹ ಕಂಡು ಬಾರಿಬಾರಿಗೂ ನಮಸ್ಕರಿಸುತ್ತಾ "ಬಹು ಚೆನ್ನಾಗಿದೆ" "ಬಹು ರಮಣೀಯವಾಗಿದೆ" ಎಂಬುದಾಗಿ ಹೇಳುತ್ತಿದ್ದನು. ॥೮॥

ಧೂಪಭಸ್ಮ ಸಮಾದಾಯ ಸ್ವಾಂಗಾನಿ ಪರಿಮೃಜ್ಯ ಚ ।
ಪ್ರಯಾತಿ ಭವನಂ ಪಶ್ಚಾದ್ಭುಂಕ್ತೇ ಪೂಜಾಮನುಸ್ಮರನ್ ॥೯॥

ಏವಂ ಸ್ಥಿತೋ ದೈವಯೋಗಾಜ್ಜಹೌ ಪ್ರಾಣಾನನಾತುರಃ ।
ತತೋ ನೀತೋ ಯಮಭಟೈರ್ಯಮೇನಾಪಿ ಸವೀಕ್ಷಿತಃ ॥೧೦॥

॥ ಚಿತ್ರಗುಪ್ತ ಉವಾಚ ॥

ಚಿತ್ರಗುಪ್ತಮುವಾಚಾಯಂ ಕಃ ಪುಣ್ಯಂ ಕಿಂ ಕೃತಂ ಪುರಾ ।
ಅನೇನೇತ್ಯಾಹ ತಂ ಪ್ರಾಹ ಚಿತ್ರಗುಪ್ತೋಽತಿವಿಸ್ಮಿತಃ ॥೧೧॥

ದುರಾನ್ನಭಕ್ಷಣೈರ್ನೀತಃ ಕಾಲೋಽನೇನ ದುರಾತ್ಮನಾ ।
ನ ಸಂಧ್ಯಾವಂದಿತಾನೇನ ಹೋಮವಾರ್ತಾಽಪಿ ದೂರತಃ ॥೧೨॥

ಸ್ನಾನಂ ಕರ್ತುಂ ನ ಜಾನಾತಿ ಸ ಕೃತಂ ಭಸ್ಮಧಾರಣಂ ।
ರುದ್ರಾಕ್ಷಧಾರಣಂ ತೇನ ನ ಕೃತಂ ದುಷ್ಟಚೇತಸಾ ॥೧೩॥

ಆ ಧೂಪದ ಭಸ್ಮವನ್ನು ತೆಗೆದುಕೊಂಡು ಅಂಗಗಳಿಗೆಲ್ಲಾ ಹಚ್ಚಿಸಿಕೊಳ್ಳು ತ್ತಿದ್ದನು. ಮನೆಗೆ ಹೋಗಿ ಆ ಪೂಜೆಯನ್ನೇ ಸ್ಮರಿಸಿಕೊಳ್ಳುತ್ತಾ ಭೋಜನವನ್ನು ಮಾಡುತ್ತಿದ್ದನು. ॥೯॥

ಹೀಗಿರಲು ಆತನು ಅದೃಷ್ಟವಶದಿಂದ ರೋಗಗ್ರಸ್ತನಾಗದೆ ಪ್ರಾಣಗಳನ್ನು ಬಿಟ್ಟನು. ಅನಂತರ ಈತನನ್ನು ಯಮದೂತರು ಯಮನ ಬಳಿಗೆ ಕರೆದೊಯ್ದರು. ॥೧೦॥

ಯಮನು ಕೂಡಲೇ ಚಿತ್ರಗುಪ್ತನನ್ನು ಕುರಿತು ಈತನು ಯಾರು? ಈ ಮನುಷ್ಯನು ಪೂರ್ವದಲ್ಲಿ ಏನಾದರೂ ಪುಣ್ಯಕರ್ಮವನ್ನು ಮಾಡಿರುತ್ತಾನೆಯೇ? ಎಂಬುದಾಗಿ ಪ್ರಶ್ನಿಸಿದನು. ಚಿತ್ರಗುಪ್ತನು ಇದಕ್ಕೆ ಉತ್ತರವಾಗಿ ಹೀಗೆಂದನು. ॥೧೧॥

" ಈತನು ಬಹುದುರಾತ್ಮನಾಗಿ ತನ್ನ ಕಾಲವನ್ನು ದುರಾನ್ನಭಕ್ಷಣದಿಂದ ಕಳೆದನು. ದೂರದಿಂದಲೂ ಸಹ ಹೋಮವಾರ್ತೆಯನ್ನು ಕೇಳಲಿಲ್ಲ. ಮತ್ತು ಸಂಧ್ಯಾವಂದನಾದಿಗಳನ್ನು ಸಹ ಕಾಲಕ್ಕೆ ಸರಿಯಾಗಿ ನಡೆಸಲಿಲ್ಲ. ॥೧೨॥

ಮತ್ತು ಸ್ನಾನವನ್ನು ಹೇಗೆ ಮಾಡಬೇಕೆಂಬ ವಿಧಾನವನ್ನು ಸಹ ಈತನು ಅರಿಯನು. ವಿಧಿವತ್ತಾಗಿ ಭಸ್ಮಧಾರಣೆಯನ್ನು ಮಾಡಲಿಲ್ಲ. ಕೇವಲ ದುಷ್ಟಸ್ವಭಾ

ಲಿಂಗಾರ್ಚನಂ ಚ ನ ಗೃಹೇ ಶಿವನಾಮಾಪಿ ನ ಶ್ರುತಂ ।
ಅಯಂ ಶಿವಕಥಾಲಾಪಂ ನ ಜಾನಾತ್ಯೇವ ಸರ್ವಥಾ ॥೧೪॥

ನಾನಾಜಾತಿಗೃಹಾನ್ ಗತ್ವಾ ಯಾಚ್ಞಾಂ ಕೃತ್ವಾ ಪ್ರಯತ್ನತಃ ।
ಆಸಾಯಂ ದುಷ್ಟವಾರ್ತಾಭಿಃ ಕಾಲಂ ನಯತಿ ದುರ್ಮತಿಃ ॥೧೫॥

ಪರಾಂಗನಾಭಿಸಂಗೇಽಪಿ ನಿರತಃ ಪಾಪಕೃತ್ತಮಃ ।
ನ ಸ್ಮಾರ್ತಕರ್ಮನಿರತಃ ಶ್ರೌತಕರ್ಮಪರಾಙ್ಮುಖಃ ॥೧೬॥

ಅಯಂ ತು ಮರಣಾತ್ಪೂರ್ವಂ ಮಾಸಮಾತ್ರಂ ನಿಶಾಮುಖೇ ।
ಶಿವಪೂಜಾಂ ವಿಲೋಕ್ಯೈವ ಚಕಾರ ನಿಶಿ ಭೋಜನಂ ॥೧೭॥

ವದವನಾಗಿ ರುದ್ರಾಕ್ಷಧಾರಣೆಯನ್ನು ಮಾಡಲಿಲ್ಲ. ಕೇವಲ ದುಷ್ಟಸ್ವಭಾವದವನಾಗಿ ಭಸ್ಮಧಾರಣೆಯನ್ನೂ ಮಾಡಲಿಲ್ಲ. ||೧೩||

ಈತನು ಮನೆಯಲ್ಲಿ ಭಕ್ತಿಯಿಂದ ಲಿಂಗಾರ್ಚನೆಯನ್ನೂ ಮಾಡಲಿಲ್ಲ. ಶಿವ ನಾಮವನ್ನು ಸಹ ಕೇಳಲಿಲ್ಲ. ಶಿವಕಥೆಯನ್ನು ಆಲಿಸಲಿಲ್ಲ. ಒಟ್ಟಿನಲ್ಲಿ ಶಿವಸಂಬಂಧ ವಾದ ಯಾವ ಪುಣ್ಯಕಾರ್ಯಗಳಿಗೂ ಗಮನಕೊಡಲಿಲ್ಲ. ||೧೪||

ಈತನು ಜಾತಿಭೇದಗಳನ್ನು ಲೆಕ್ಕಿಸದೆ ಎಲ್ಲಾ ಜಾತಿಯ ಮನೆಗಳಿಗೂ ಹೋಗಿ ಯಾಚನೆ ಮಾಡುತ್ತಿದ್ದನು. ಸಾಯಂಕಾಲದವರೆಗೂ ದುರಾಲಾಪಗಳನ್ನು ಮಾಡುತ್ತಲೂ ಕಾಲವನ್ನು ಕಳೆದಿರುವನು. ||೧೫||

ಈತನು ಬಹು ಪಾಪಕಾರಿಯಾಗಿ ಅನ್ಯಸ್ತ್ರೀಗಮನದಲ್ಲಿಯೂ ಆಸಕ್ತನಾಗಿ ದ್ದನು. ಸ್ಮಾರ್ತಕರ್ಮಗಳಲ್ಲಿಯೂ ಶ್ರೌತಕರ್ಮಗಳಲ್ಲಿಯೂ ಈತನಿಗೆ ಆಸಕ್ತಿಯೇ ಇರಲಿಲ್ಲ. ||೧೬||

ಆದರೆ ಸಾಯುವುದಕ್ಕೆ ಒಂದು ತಿಂಗಳು ಮುಂಚೆ ಒಂದು ದಿನ ಸಾಯಂಕಾಲ ದಲ್ಲಿ ಶಿವಪೂಜೆಯನ್ನು ನೋಡಿದನಂತರ ಊಟವನ್ನು ಮಾಡಿದನು. ||೧೭||

ಪೂಜಾಂ ದೃಷ್ಟ್ವಾ ಪ್ರಮೋದೋಽಪಿ ಕೃತೋಽನೇನ ಮುಹುರ್ಮುಹುಃ ।
ಧೂಪಭಸ್ಮ ಸಮಾದಾಯ ಸ್ವಗಾತ್ರಂ ಚ ಪವಿತ್ರಿತಂ ॥೧೮॥

ತತಃ ಪರಂ ಮೃತಃ ಸೋಽಯಮಿತಿ ಶ್ರುತ್ವಾ ವಚೋ ಯಮಃ ।
ತ್ವರಯಾ ಪ್ರಣತಸ್ತಸ್ಮೈ ರತ್ನಸಿಂಹಾಸನಂ ದದೌ ॥೧೯॥

ಪೂಜಯಾಮಾಸ ತಂ ವಿಪ್ರಂ ತತಃ ಪ್ರಾಹಾತಿವಿಸ್ಮಿತಃ ।
ಭಾಗ್ಯವಾನಸಿ ಧನ್ಯೋಽಸಿ ಮಾನ್ಯೋಽಸೀತಿ ಮುಹುರ್ಮುಹುಃ ॥೨೦॥

ಧನ್ಯಂ ಧನ್ಯಂ ಮನುಷ್ಯಾಣಾಂ ಜೀವನಂ ರಜನೀಮುಖೇ ।
ದೃಷ್ಟ್ವಾಪಿ ಪೂಜಿತಂ ಲಿಂಗಂ ಭವಂತಿ ಸುರವಂದಿತಾಃ ॥೨೧॥

ಅನಾಯಾಸೇನ ಭಾಗ್ಯಾನಿ ಪ್ರಾಪ್ನುವಂತಿ ಮುಹುರ್ನರಾಃ ।
ದೃಷ್ಟ್ವಾಪಿ ಪೂಜಿತಂ ಲಿಂಗಂ ಸಾಯಂಕಾಲೇ ವಿಶೇಷತಃ ॥೨೨॥

---

ಆ ಪೂಜೆಯನ್ನು ನೋಡಿ ಬಾರಿಬಾರಿಗೂ ಸ್ಮರಿಸಿಕೊಂಡು ಸಂತೋಷಪಡುತ್ತಿದ್ದನು. ಮತ್ತು ಧೂಪದ ಭಸ್ಮದಿಂದ ತನ್ನ ಅವಯವಗಳನ್ನು ಪವಿತ್ರವಾದವುಗಳನ್ನಾಗಿಮಾಡಿಕೊಳ್ಳುತ್ತಿದ್ದನು. ಹಾಗೆಯೇ ಮೃತನೂ ಆದನು.'' ॥೧೮॥

ಎಂಬೀ ಚಿತ್ರಗುಪ್ತನು ಹೇಳಿದ ಮಾತುಗಳನ್ನು ಯಮನು ಕೇಳಿ, ಜಗ್ಗನೆದ್ದು ಈತನಿಗೆ ನಮಸ್ಕರಿಸಿದನು. ಮತ್ತು ರತ್ನಖಚಿತವಾದ ಸಿಂಹಾಸನದಲ್ಲಿ ಇವನನ್ನು ಕುಳ್ಳಿರಿಸಿದನು. ॥೧೯॥

ಮತ್ತು ಆತನನ್ನು ಕುರಿತು "ನೀನೇ ಭಾಗ್ಯಶಾಲಿ, ನೀನೇ ಧನ್ಯ, ನೀನೇ ಮಾನ್ಯನು" ಎಂಬುದಾಗಿ ಬಾರಿಬಾರಿಗೂ ಹೇಳುತ್ತಾ ಪೂಜೆಮಾಡತೊಡಗಿದನು. ॥೨೦॥

ಮತ್ತು ಯಾವ ಮನುಷ್ಯರು ಸಾಯಂಕಾಲಗಳಲ್ಲಿ ಶಿವಲಿಂಗವನ್ನು ನೋಡುವುದು ಮಾತ್ರವೇ ಅಲ್ಲದೆ ಪೂಜೆಯನ್ನೂ ಮಾಡುತ್ತಾರೆಯೋ, ಅಂತಹವರು ದೇವತೆಗಳಿಂದಲೂ ನಮಸ್ಕರಿಸಲ್ಪಡುತ್ತಾರೆ. ಅಂತಹವರ ಜೀವನವೇ ಬಹಳ ಧನ್ಯವಾದುದು. ॥೨೧॥

ಯಾರು ಪೂಜಿತವಾದ ಶಿವಲಿಂಗವನ್ನು ದರ್ಶನಮಾಡುತ್ತಾರೆಯೋ, ಅದರಲ್ಲಿಯೂ ಸಾಯಂಕಾಲಗಳಲ್ಲಿ ವಿಶೇಷವಾಗಿ ಶಿವದರ್ಶನ ಮಾಡುವರೋ, ಅಂತಹವರಿಗೆ ಯಾವ ಆಯಾಸವೂ ಇಲ್ಲದೆ ಸಕಲ ಭಾಗ್ಯಗಳೂ ಉಂಟಾಗುತ್ತವೆ. ॥೨೨॥

ಶಿವಾರ್ಚನೋಪಕರಣಂ ಸಾಯಂಕಾಲೇ ವಿಶೇಷತಃ ।
ಅಂಚಿತಂ ಲಿಂಗಮಾಲೋಕ್ಯ ಮುಚ್ಯತೇ ಪಾಪಕೋಟಿಭಿಃ ॥೨೩॥

ವೃಷಸ್ಯಾಂಡಮುಪಸ್ಪೃಶ್ಯ ವೃಷಶೃಂಗಾಂತರಾಂತರಃ ।
ಶಿವಲಿಂಗಂ ಸಮಾಲೋಕ್ಯ ಮುಚ್ಯಂತೇ ಪಾಪಕೋಟಿಭಿಃ ॥೨೪॥

ಧೃತ್ವಾ ಭಸ್ಮ ಪ್ರಯತ್ನೇನ ಸಾಯಂ ಪಶ್ಯತಿ ಯಃ ಶಿವಂ ।
ತಸ್ಯ ಪುಣ್ಯಫಲಂ ವಕ್ತುಂ ಶೇಷೇಣಾಪಿ ನ ಶಕ್ಯತೇ ॥೨೫॥

ಮಯಾ ಕಥಂ ವಾ ತತ್ಪುಣ್ಯಂ ವಕ್ತವ್ಯಮಿಯದಿತ್ಯಪಿ ।
ವೇದೈರಪಿ ನ ತಚ್ಛಕ್ಯಂ ವಕ್ತುಮಿತ್ಯೇವ ಮನ್ಮಹೇ ॥೨೬॥

ಪ್ರದೋಷಕಾಲೇ ಶಿವಲಿಂಗಪೂಜಾಂ
ದೃಷ್ಟ್ವಾ ಸಕೃದ್ವಾ ಶಿವಮೇವ ಯಾತಿ ।

ಸಾಯಂಕಾಲದಲ್ಲಿ ಮುಖ್ಯವಾಗಿ ಶಿವಾರ್ಚನೆಗಾಗಿ ಅಣಿಮಾಡಲ್ಪಡುತ್ತಿರುವ ಪೂಜಾಸಾಮಗ್ರಿಗಳನ್ನು ನೋಡಿದರೆ ಅಂತಹ ಮನುಜರು ಕೋಟ್ಯಂತರ ಪಾಪಗಳಿಂದ ಮುಕ್ತರಾಗುತ್ತಾರೆ. ಅಂತಹವರಿಗೆ ಯಾವ ಪಾಪಗಳೂ ಅಂಟುವುದಿಲ್ಲ. ||೨೩||

ಶಿವನ ವಾಹನವಾದ ಬಸವನ ಅಂಡವನ್ನು ಸ್ಪರ್ಶಮಾಡಿ, ಅಂತಹ ವೃಷಭದ ಶೃಂಗಮಧ್ಯದಿಂದ ಆ ಶಿವಲಿಂಗದರ್ಶನ ಮಾಡಿದವರು, ಕೋಟ್ಯಂತರ ಪಾಪಗಳಿಂದ ಮುಕ್ತರಾಗುತ್ತಾರೆ. ||೨೪||

ಯಾವ ಮನುಷ್ಯನು ಪ್ರಯತ್ನಪೂರ್ವಕವಾಗಿ ಭಸ್ಮವನ್ನು ಧರಿಸಿಕೊಂಡು ಸಾಯಂಕಾಲದಲ್ಲಿ ಶಿವದರ್ಶನವನ್ನು ಮಾಡುತ್ತಾನೆಯೋ, ಅಂತಹವನಿಗೆ ಉಂಟಾಗತಕ್ಕ ಪುಣ್ಯಫಲಗಳನ್ನು ಹೇಳಲು ಸಾವಿರ ಮುಖಗಳುಳ್ಳ ಆದಿಶೇಷನೂ ಸಹ ಶಕ್ತನಾಗಲಾರನು. ||೨೫||

ವೇದಗಳೂ ಕೂಡ ಅಂತಹವನಿಗೆ ದೊರಕತಕ್ಕ ಫಲವು ಇಷ್ಟೇ ಎಂಬುದಾಗಿ ಹೇಳಲು ಅಸಮರ್ಥವಾಗುವುವು. ಅಂತಹುದರಲ್ಲಿ ನಾನು ಹೇಗೆತಾನೇ ಈತನ ಪುಣ್ಯವನ್ನು ಇಷ್ಟು ಎಂದು ಹೇಳಲು ಸಮರ್ಥನಾದೇನು ? ||೨೬||

ಪ್ರದೋಷಕಾಲದಲ್ಲಿ ಮಾಡತಕ್ಕ ಶಿವಲಿಂಗಪೂಜೆಯನ್ನು ಒಂದಾವರ್ತಿಯಾದರೂ ಯಾವನು ನೋಡುತ್ತಾನೆಯೋ, ಅಂತಹವನು ಸಾಕ್ಷಾಚ್ಛಿವನೇ ಆಗುತ್ತಾನೆ.

ಭುಕ್ತ್ವಾsಪಿ ಭೋಗಾನ್ವಿಪುಲಾನಪಾರಾ
ನನಶ್ವರಾನಿತ್ಯಪಿ ಮೇ ಮತಿರ್ಹಿ ॥೨೭॥

ಅಹೋ ನ ಜಾನಂತಿ ಶಿವಪ್ರಭಾವಂ
ಪ್ರದೋಷಕಾಲೀನ ಶಿವಾರ್ಚನಸ್ಯ ।
ಫಲಂ ನ ಜಾನಂತಿ ವಿಮೂಢಚಿತ್ತಾಃ
ಸಂಸಾರಪಾಶಾತಿನಿಬದ್ಧಗಾತ್ರಾಃ ॥೨೮॥

ಕೃತ್ವಾ ಮಹೀಮಂಡಲಮರ್ತ್ಯದೇಹ
ಸಂರಕ್ಷಣಂ ಪುಣ್ಯನಿಶಾಮುಖೇಷು ।
ಲಿಂಗಾರ್ಚನಾರ್ಥಂ ಕೃತಕೃತ್ಯ ಏವ
ತೇನೈವ ತಾವನ್ಮನುಜೋ ಮಹಾನ್ಹಿ ॥೨೯॥

ಮರ್ತ್ಯತ್ವಂ ಖಲು ದುರ್ಲಭಂ ದ್ವಿಜಜನಿಸ್ತತ್ರಾಪಿ ಸಾ ದುರ್ಲಭಾ
ಬ್ರಾಹ್ಮಣ್ಯಂ ಖಲು ತತ್ರ ದುರ್ಲಭಮಭಿಜ್ಞತ್ವಂ ಚ ಭಕ್ತಿಃ ಶಿವೇ ।

ಅವನಿಗೆ ಶಿವಲೋಕಪ್ರಾಪ್ತಿಯಾಗುವುದು ? ಮತ್ತು ಆತನು ತನ್ನ ಭಾಗ್ಯಗಳನ್ನು ಎಷ್ಟು ಅನುಭವಿಸಿದರೂ ಸಹ ಅಪಾರಗಳಾಗಿಯೂ ಶಾಶ್ವತವಾಗಿಯೂ ಇರುತ್ತವೆ ಎಂಬುದಾಗಿ ನಾನು ತಿಳಿದಿದ್ದೇನೆ ಎಂದು ಹೇಳಿದನು. ॥೨೭॥

ಸಂಸಾರವೆಂಬ ಹಗ್ಗದಿಂದ ಕಟ್ಟಲ್ಪಟ್ಟ ಮೂಢರು ಸಂಸಾರದಲ್ಲಿಯೇ ಆಸಕ್ತರಾಗಿ, ಸಂಸಾರಸುಖದುಃಖಗಳನ್ನೇ ಅನುಭವಿಸುತ್ತಿರುವರು. ಅಂತಹವರಿಗೆ ಶಿವನ ಮಹಿಮೆಯಾಗಲಿ ಅಥವಾ ಪ್ರದೋಷಕಾಲದಲ್ಲಿ ಮಾಡತಕ್ಕ ಶಿವಪೂಜಾಪ್ರಭಾವವಾಗಲಿ ಗೊತ್ತಾಗುವುದೇ ? ॥೨೮॥

ಲೋಕದಲ್ಲಿ ಯಾರು ಸಾಯಂಕಾಲದಲ್ಲಿ ಶಿವಪೂಜೆಯನ್ನು ಮಾಡುವ ಉದ್ದೇಶದಿಂದಲೇ ತಮ್ಮ ತಮ್ಮ ದೇಹಗಳನ್ನು ಸಂರಕ್ಷಿಸಿಕೊಳ್ಳುತ್ತಾರೆಯೋ, ಅಂತಹವರು ಕೃತಕೃತ್ಯರೆನಿಸುವರು. ಅಂತಹವರೇ ದೊಡ್ಡವರೆಂದೂ ಪ್ರಸಿದ್ಧಿಹೊಂದುವರು. ॥೨೯॥

ಲೋಕದಲ್ಲಿ ಮನುಷ್ಯ ಜನ್ಮವು ಬರುವುದೇ ಬಹು ದುರ್ಲಭ. ಅದರಲ್ಲಿ ದ್ವಿಜನಾಗಿ ಹುಟ್ಟುವುದಂತೂ ಬಹಳ ವಿರಳ. ಅದರಲ್ಲಿಯೂ ಬ್ರಾಹ್ಮಣನಾಗಿ ಹುಟ್ಟು

ಸಾ ಚೇದವ್ಯಭಿಚಾರಿಣೀ ಯದಿ ತಯಾ ಲಿಂಗಾರ್ಚನಾತ್ಸ್ಯಾದರೋ
ತರ್ಹಿ ಪ್ರಾಪ್ತಮುಮಾಸಹಾಯಚರಣಾಂಭೋಜಪ್ರಭಾಮಂಡಲಂ ॥೩೦॥

ಧನ್ಯಃ ಕೋಪಿ ಶಿವಾರ್ಚಕಃ ಕಲಿಯುಗೇ ಭಸ್ಮತ್ರಿಪುಂಡ್ರಾಧರೋ
ರುದ್ರಾಕ್ಷಾಭರಣಪ್ರಿಯಃ ಶಿವಮನುವ್ಯಾಹಾರಮಾತ್ರಾದರಃ ।
ಲಿಂಗಾರಾಧನಪುಣ್ಯಪೂರ್ವವಿಭವೋ ಭಾವೋ ಭವಾನೀಪತಿ
ಧ್ಯಾನಾನಂದಸಮುದ್ರಮಗ್ನಹೃದಯಸ್ತಸ್ಮೈ ನಮಃ ಕೋಟಿಶಃ ॥೩೧॥

ಧನ್ಯಃ ಶಾಂಭವಪುಂಗವಃ ಕಲಿಯುಗೇ ಕಶ್ಚಿದ್ಧವಿಷ್ಯತ್ಯಹೋ
ಕಾಶೀವಾಸವಿನೀತಯೌವನಮುದೋ ವೀರೇಶ್ವರಾರಾಧಕಃ ।
ತೇನಾಪಾರಮಹೇಶ್ವರಾಮೃತಕಥಾಸಿಂಧುಃ ಪ್ರವೃದ್ಧೋ ಭವೇ
ತ್ತತ್ಕೀರ್ತಿಶ್ರವಣೇನ ಯಾಸ್ಯತಿ ಶಿವಂ ಯಃ ಕೋಽಪಿ ರಂಕೋಽಪಿ ವಾ॥೩೨॥

ವುದೂ ಆಗ ಶಿವನಲ್ಲಿ ಭಕ್ತಿಹುಟ್ಟುವುದಂತೂ ಬಹಳ ಕಷ್ಟವೆಂದೇ ತಿಳಿಯಬೇಕು. ಇಷ್ಟು ಕಷ್ಟಸಾಧ್ಯವಾದ ಬ್ರಾಹ್ಮಣ್ಯವನ್ನು ಹೊಂದಿ ಶಿವಭಕ್ತಿಯನ್ನು ಸಂಪಾದಿಸಿ, ಅದನ್ನು ನಿರರ್ಥಕವಮಾಡದೆ ಲಿಂಗಾರ್ಚನೆಯಲ್ಲಿಯೇ ಬಹುವಾಗಿ ಸಾರ್ಥಕಪಡಿಸಿ ಕೊಂಡರೆ ಅಂತಹವನಿಗೆ ಪಾರ್ವತೀಸಹಿತನಾದ ಈಶ್ವರನ ಕಾಂತಿಯುಕ್ತವಾದ ಶಿವಲೋಕವು ಪ್ರಾಪ್ತವಾದಂತೆಯೇ ಸರಿ. ॥೩೦॥

ಕಲಿಯುಗದಲ್ಲಿ ಭಸ್ಮವನ್ನೂ ತ್ರಿಪುಂಡ್ರವನ್ನೂ ಸಹ ಧರಿಸಿ, ಶಿವಾರ್ಚನೆ ಯನ್ನು ಮಾಡಿದಂತಹವನೇ ಧನ್ಯನು. ರುದ್ರಾಕ್ಷಿಯನ್ನೇ ಆಭರಣವನ್ನಾಗಿ ಮಾಡಿ ಕೊಂಡು, ಶಿವಮಂತ್ರಗಳನ್ನು ಜಪಿಸುತ್ತಾ ಶಿವಕಥಾವ್ಯವಹಾರದಲ್ಲಿ ಆಸಕ್ತನಾಗಿರು ವವನು ಲಿಂಗಾರಾಧನೆಯಿಂದ ಉಂಟಾದ ಪುಣ್ಯಗಳಿಂದ ನಿಖಿಲ ಸಂಪತ್ತುಗಳ ನ್ನೆಲ್ಲಾ ಪಡೆಯುವನು. ಮತ್ತು ಆತನು ಈಶ್ವರನಧ್ಯಾನವೆಂಬ ಆನಂದಸಮುದ್ರ ದಲ್ಲಿಯೇ ಮುಳುಗುವನು. ಅಂತಹವನಿಗೆ ಅನೇಕಸಲ ನಮಸ್ಕಾರ ಮಾಡುವೆನು. ॥೩೧॥

ಕಲಿಯುಗದಲ್ಲಿ ಯಾವ ಮನುಷ್ಯನು ಕಾಶೀವಾಸದಿಂದ ತನ್ನ ಯೌವನ ಕಾಲವನ್ನು ನ್ಯಾಯಮಾರ್ಗದಲ್ಲಿ ಕಳೆಯುತ್ತಾನೆಯೋ, ಮತ್ತು ವೀರೇಶ್ವರನನ್ನು ಆರಾಧಿಸುತ್ತಾ, ಶಿವಪ್ರೀತಿಕರನಾಗುವನೋ, ಅಂತಹವನೇ ಶಾಂಭವಪುಂಗವನೆಂದೂ ಧನ್ಯನೆಂದೂ ಹೇಳಿಸಿಕೊಳ್ಳುವನು. ಅವನಿಗೆ ಅನಂತವಾದ ಮಹೇಶ್ವರನ ಕಥಾ

ಧನ್ಯಾ ತಜ್ಜನನೀ ಪಿತಾ ಚ ಸುತರಾಂ ಧನ್ಯೋಽಸ್ಯ ಧನ್ಯಂ ಕುಲಂ
ತದ್ಭೃತ್ಯೋಽಪಿ ಸ ಧನ್ಯ ಏವ ಹಿ ಮುಹುಃ ಶ್ರೀಕಾಲಕಾಲಾರ್ಚಕಃ ।
ಸರ್ವಾನಪ್ಯನುರಾನಪಾಸ್ಯ ವಿಧಿವದ್ಭಸ್ಮತ್ರಿಪುಂಡ್ರಾಂಕಿತೋ
ರುದ್ರಾಕ್ಷಾಭರಣಃ ಶಿವೈಕಶರಣಃ ಶ್ರೇಷ್ಠೋತಿಮಾನ್ಯಃ ಸದಾ ॥೩೩॥

ಭೂಪಾಲೋಽಪಿ ಭವಿಷ್ಯತಿ ಪ್ರಭುರಯಂ ದಾತಾ ಶಿವಾರಾಧನೇ
ರಮ್ಯಾಪಾರಕುಮಾರವರ್ಗಸಹಿತೋ ಗಂಧರ್ವನಾರೀಪತಿಃ ।
ವೈರಾಗ್ಯೈಕನಿಧಿಃ ಶಿವಾರ್ಚಕನಿಧಿಃ ನೂನಂ ಪ್ರದೋಷಾರ್ಚಿತಂ
ಲಿಂಗಂ ದೃಷ್ಟಮಿತಿ ಪ್ರಸೂನನಿಕರವ್ಯಾಪ್ತಂ ಮುಹುಃ ಸಾದರಂ ॥೩೪॥

ಇತ್ಯುಕ್ತಂ ತದ್ವಚಃ ಶ್ರುತ್ವಾ ಸರ್ವೇ ಯಮಸಭಾಸದಃ ।
ತಮೂಚುರ್ವಿಸ್ಮಿತಾಃ ಸಂತೋ ವಿನಯಾನತಕಂಧರಾಃ ॥೩೫॥

---

ಸ್ವರೂಪದ ರಸಾನುಭವವು ಆನಂದವನ್ನು ಹೆಚ್ಚಿಸುತ್ತದೆ. ಮತ್ತು ಅದರಿಂದ ಸದ್ಗತಿರೂಪವಾದ ಶಿವಸಾಯುಜ್ಯವನ್ನು ಪಡೆಯುತ್ತಾನೆ. ॥೩೨॥

ಅವನ ತಾಯಿ, ತಂದೆ, ಆತನ ಕುಲ, ಮತ್ತು ಆತನ ಸೇವಕರೂ ಸಹ ಎಲ್ಲರೂ ಧನ್ಯರೆನಿಸುತ್ತಾರೆ. ಮತ್ತು ಅವರು ಪ್ರತಿಜನ್ಮದಲ್ಲಿಯೂ ಈಶ್ವರಾರ್ಚಕರಾಗುತ್ತಾರೆ. ಅಲ್ಲದೆ ವಿಧಿಗನುಸಾರವಾಗಿ ಆತನು ಭಸ್ಮತ್ರಿಪುಂಡ್ರಾದಿಗಳನ್ನು ಧರಿಸಿ ರುದ್ರಾಕ್ಷಾಭರಣವುಳ್ಳವನಾಗಿ ಎಂತೆಂತಹ ದೇವಾದಿದೇವತೆಗಳಿಗೂ ಅಸಾಧ್ಯವಾದಂತಹ ಶಿವರಕ್ಷಣೆಯನ್ನು ಪಡೆಯುತ್ತಾನೆ. ಅವನೇ ಶ್ರೇಷ್ಠನೂ, ಪೂಜ್ಯನೂ ಎನಿಸುವನು. ॥೩೩॥

ಅಲ್ಲದೇ ಆತನು ರಾಜಾಧಿರಾಜನಾಗಿಯೂ, ದಾತೃವಾಗಿಯೂ, ಶಿವಾರ್ಚನೆಯಲ್ಲಿ ತತ್ಪರನಾಗಿಯೂ, ಮನೋಹರಗಳಾದ ಕುಮಾರರನ್ನು ಹೊಂದುವವನಾಗಿಯೂ, ಮತ್ತು ಗಂಧರ್ವಸ್ತ್ರೀಯರಿಗೆ ಪತಿಯಾಗಿಯೂ ಆಗುವನು. ವೈರಾಗ್ಯಶಾಲಿಗಳಲ್ಲಿ ಮುಖ್ಯನೂ, ಶಿವಾರ್ಚನೆಯಲ್ಲಿ ಪ್ರಮುಖನೂ ಎನಿಸುವನಲ್ಲದೆ, ಪುಷ್ಪರಾಶಿಯಿಂದ ಪೂಜಿಸಲು ಯೋಗ್ಯನೆನಿಸುವನು. ಇದೇ ಪ್ರದೋಷಕಾಲದಲ್ಲಿ ಅರ್ಚಿತವಾದ ಶಿವಲಿಂಗದರ್ಶನಮಹಿಮೆ. ಆದ್ದರಿಂದ ಈತನು ನಿಜವಾಗಿಯೂ ನಮಗೆ ಈಗ ಮಾನ್ಯನೆನಿಸಿರುವನು. ॥೩೪॥

ಈ ರೀತಿಯಾದ ಯಮನ ಮಾತನ್ನು ಯಮನ ಸಭಾಸದರೆಲ್ಲರೂ ಕೇಳಿ ವಿನಯಾನ್ವಿತರಾಗಿ ಯಮನೊಡನೆ ಇಂತೆಂದರು. ॥೩೫॥

|| ಸಭಾಸದ ಊಚುಃ ||

ಯಮ ನಾಮ ತವಾನರ್ಘ್ಯಂ ಧರ್ಮರಾಜ ಇತಿ ಪ್ರಥಾ ।
ತವ ಯಾ ಸ್ವರ್ಗಲೋಕಾದೌ ಸ್ವರ್ಧುನೀವ ಪ್ರವರ್ಧತೇ ॥೩೬॥

ಶೌಚಸ್ನಾನಾದಿಕರ್ಮಾಣಿ ಸ್ಮಾರ್ತಾನಿ ವಿವಿಧಾನ್ಯಪಿ ।
ತೇಷು ಕೋಽಪಿ ಕೃತೋ ಧರ್ಮೋ ನಾನೇನೇತಿ ಶ್ರುತಂ ಮುಹುಃ ॥೩೭॥

ಜ್ಯೋತಿಷ್ಟೋಮಾದಯೋ ಯಾಗಾಸ್ತಾವದ್ದೂರತ ಏವ ಹಿ ।
ಅಸ್ಯಾದ್ಯ ದಾನವಾರ್ತಾಽಪಿ ಯಸ್ಮಾದತ್ಯಂತದೂರತಃ ॥೩೮॥

ಅತಿಕುತ್ಸಿತವೃತ್ತಿಶ್ಚ ಶ್ರುತೋ ತಾವದಯಂ ಖಲು ।
ನೀಚಸೇವಾರತೋಽಪ್ಯಸ್ಯ ಪುಣ್ಯಧೀರಪಿ ನ ಧ್ರುವಂ ॥೩೯॥

ಪ್ರದೋಷೇ ಪೂಜಿತಂ ಲಿಂಗಂ ದೃಷ್ಟವ್ಯಂ ಪಾಪನಾಶಕಂ ।
ಇತಿ ನಾಯಂ ಪ್ರಜಾನಾತಿ ವಿವೇಕರಹಿತೋ ಯತಃ ॥೪೦॥

---

"ಎಲೈ ಯಮನೇ, ನಿನಗೆ ಧರ್ಮರಾಜನೆಂದು ಲೋಕದಲ್ಲಿ ಕೀರ್ತಿಯು ಬಳಕೆಯಾಗಿರುತ್ತದೆ. ಅಲ್ಲದೆ ಈ ಕೀರ್ತಿಯು ಸ್ವರ್ಗಲೋಕವೇ ಮೊದಲಾದ ಕಡೆಗಳಲ್ಲಿ ಸ್ವರ್ಗಂಗೆಯಂತೆ ಪ್ರಸರಿಸಿರುವುದು. ||೩೬||

ಈತನು ಶೌಚಸ್ನಾನಾದಿ ಕ್ರಿಯೆಗಳಲ್ಲಾಗಲಿ, ಅಥವಾ ಸ್ಮೃತ್ಯುಕ್ತವಾದ ಕರ್ಮಗಳಲ್ಲಾಗಲಿ ಆಸಕ್ತಿವಹಿಸದೆ ಕಾಲಕಳೆದೆನೆಂದು ಕೇಳಿದ್ದೇನೆ. ||೩೭||

ಜ್ಯೋತಿಷ್ಟೋಮವೇ ಮೊದಲಾದ ಯಾವ ಯಾಗಗಳೂ ಈತನಿಂದ ಆಚರಿಸಲ್ಪಡಲಿಲ್ಲ. ಮತ್ತು ಈತನು ದಾನಮಾಡಿದನು ಎಂಬ ವಾರ್ತೆಯೂ ನಹ ಕೇಳಿಬಂದಿಲ್ಲ. ||೩೮||

ಈತನು ಬಹು ಕುತ್ಸಿತವಾದ ನಡವಳಿಕೆಯುಳ್ಳವನೆಂದೂ, ಬಹಳ ನೀಚವಾದ ಸೇವೆಗಳಲ್ಲಿಯೇ ಆಸಕ್ತನಾದವನೆಂತಲೂ, ಪುಣ್ಯಬುದ್ಧಿಯು ಈತನಿಗೆ ಲೇಶವೂ ಉಂಟಾಗಲಿಲ್ಲವೆಂದೂ ನಹ ಕೇಳಿದ್ದೇವೆ. ||೩೯||

ಅಲ್ಲದೆ ಇವನು ಪ್ರದೋಷಕಾಲದಲ್ಲಿ ಪೂಜೆಮಾಡಿದ ಲಿಂಗದರ್ಶನದಿಂದ ಪಾಪಪರಿಹಾರವಾಗುತ್ತದೆಂಬುದನ್ನೂ ತಿಳಿಯನು. ||೪೦||

ಏವಂ ಸತಿ ತ್ವಯಾ ಪೂಜಾ ಕಥಮಸ್ಯ ವಿಶೇಷತಃ ।
ಸ್ವಸಿಂಹಾಸನಮಾರೂಢಃ ಕಥಂ ತಿಷ್ಠತಿ ಶೈವವತ್ ॥೪೧॥

ಶಿವಾರ್ಚಕಾಃ ಸಮಾಯಾಂತಿ ಮಾರ್ಗೇಣಾನೇನ ಶಾಂಭವಾಃ ।
ಲೋಕಂ ಗಂತುಂ ತದಾ ತಾವತ್ತಿಷ್ಠಂತ್ಯತ್ರಾಸನೇ ಕ್ಷಣಂ ॥೪೨॥

ಅನ್ಯೇಷಾಮುಪಕಾತೋತ್ರ ದುರ್ಲಭಃ ಖಲು ವಸ್ತುತಃ ।
ಕ್ವ ಸಿಂಹಾಸನಮುತ್ಕೃಷ್ಟಂ ಕ್ವಾಯಂ ಧರ್ಮವಿವರ್ಜಿತಃ ॥೪೩॥

ಏತಾವತ್ಕಾಲಪರ್ಯಂತಂ ನ ದೃಷ್ಟಮಿದಮೀದೃಶಂ ।
ಅದ್ಭುತಂ ದೃಷ್ಟಮಧುನಾ ಯಮ ಸಿಂಹಾಸನಾಧಿಪ ॥೪೪॥

ಧರ್ಮಸೂಕ್ಷ್ಮಂ ನ ಜಾನಂತಿ ವಾನರಾ ಇವ ಪಾಮರಾಃ ।
ಅಶಾಂಕರಾಃ ಪರಂ ಕ್ರೂರಾಸ್ತ್ವಾಪಧ್ವಾನಪರಸ್ಪೃತ್ತಯಃ ॥೪೫॥

---

ಹೀಗಿರಲಾಗಿ ನೀನು ಈತನಿಗೆ ವಿಶೇಷವಾಗಿ ಪೂಜೆಯನ್ನು ಹೇಗೆ ಮಾಡಿದೆ? ನಿನ್ನ ಸಿಂಹಾಸನದ ಮೇಲೆ ಈತನು ಸಾಕ್ಷಾತ್ ಈಶ್ವರಭಕ್ತನಂತೆ ಹೇಗೆತಾನೆ ಕುಳಿತುಕೊಳ್ಳಲು ಸಮರ್ಥನೆನಿಸುವನು? ॥೪೧॥

ಈಶ್ವರಭಕ್ತರಾದವರೆಲ್ಲರೂ ಇದೇ ಮಾರ್ಗದಿಂದಲೇ ಶಿವಲೋಕಕ್ಕೆ ಹೋಗುವುದಕ್ಕೆ ಬರುವರು. ಮತ್ತು ಅವರು ಈ ನಿನ್ನ ಆಸನದಲ್ಲಿ ಕ್ಷಣಕಾಲ ಕುಳಿತು ಮುಂದುವರಿಯುವರು. ॥೪೨॥

ಅಂತಹ ಪರಶಿವಭಕ್ತರಿಗಲ್ಲದೆ ಇತರರಿಗೆ ಎಂಥತವರಾದರೂ ಈ ಸದವಕಾಶವು ದೊರೆಯಲಾರದು. ಈ ನಿನ್ನ ಉತ್ಕೃಷ್ಟವಾದ ಸಿಂಹಾಸನದ ಯೋಗ್ಯತೆ ಏನು? ಈ ಧರ್ಮಬಾಹಿರನಾದ ಈತನ ಸ್ವಭಾವವೇನು? ಇವೆರಡಕ್ಕೂ ಬಹು ಅಂತರವಲ್ಲವೆ? ॥೪೩॥

ಎಲೈ ಸಿಂಹಾಸನಾಧಿಪತಿಯಾದ ಯಮಧರ್ಮರಾಜನೇ, ಇಷ್ಟರವರೆಗೂ ಇಂತಹ ಸನ್ನಿವೇಶವನ್ನು ನೋಡಲಿಲ್ಲ. ಈಗಲಾದರೋ ಅದ್ಭುತವಾದುದನ್ನು ಕಾಣುತ್ತಿದ್ದೇವೆ" ಎಂದು ಅಲ್ಲಿದ್ದ ಸಭ್ಯರೆಲ್ಲಾ ಯಮನನ್ನು ಕುರಿತು ಹೇಳಿದರು. ॥೪೪॥

ಆಗ ಯಮನು ಅವರೊಡನೆ ಹೀಗೆಂದನು. "ನೀವುಗಳು ಕೇವಲ ಪಾಮರರು. ಅಜ್ಞಾನಿಗಳಾದ ಕಪಿಗಳಂತಿರುವಿರಿ. ನಿಮ್ಮ ಸ್ವಭಾವವು ಬಹುಕ್ರೂರವಾಗಿದೆ.

ಕಿಮೇತದ್ವಿಷಯೇ ಜಾತಾ ಕಠೋರೋಕ್ತಿಃ ಕುಠಾರವತ್ ।
ಪೂಜ್ಯೇಷು ನ ಕುಠಾರೋಕ್ತಿಃ ಮರಣೇಪ್ಯುಚಿತಾ ಯತಃ ॥೪೬॥

ಕಿಂ ಧರ್ಮೈರಿತರೈಃ ಸ್ಮಾರ್ತೈಃ ವೈದಿಕೈರ್ವಾ ವಿಶೇಷತಃ ।
ಲೌಕಿಕೈರ್ವಾ ಧರ್ಮವಾರ್ತಾ ಭವದ್ಭಿರ್ನ ಶ್ರುತಾ ಯತಃ ॥೪೭॥

ಪ್ರದೋಷೇ ಪೂಜಿತಂ ಲಿಂಗಂ ಯಃ ಕ್ಷಣಾರ್ಧಾರ್ಧಮೇವ ವಾ ।
ವಿಲೋಕಯತಿ ತತ್ಪುಣ್ಯಮನಂತಂ ವಿಭವೇತ್ಫಲಂ ॥೪೮॥

ಪ್ರದೋಷಕಾಲೀನಮಹೇಶಪೂಜಾಂ ವಿಲೋಕನಾಸಕ್ತಮತಿರ್ನ ಯಸ್ಮಾತ್
ಸ ಪಾತಕಾಕಾರ ಇತಿ ಪ್ರಸಿದ್ಧಃ ಸ್ವಬೋಧ ಏವೇತಿ ಮಯಾಪಿ ಬುದ್ಧಃ॥೪೯॥

ಪ್ರದೋಷಲಿಂಗಪೂಜಾಯಾಂ ದೃಷ್ಟಾಯಾಂ ಪಾಪಸಂಕ್ಷಯಃ ।
ಅಕ್ಷಯಾ ಮೋಕ್ಷಲಕ್ಷ್ಮೀಶ್ಚ ಭವಿಷ್ಯತ್ಯಧಮಸ್ಯ ಚ ॥೫೦॥

ಶಂಕರ ವಿಚಾರರಹಿತರಾಗಿಯೂ, ಧರ್ಮಸೂಕ್ಷ್ಮವನ್ನು ತಿಳಿಯದವರೂ ಆಗಿದ್ದೀರಿ. ॥೪೫॥

ಎಂತಹ ಮರಣಕಾಲ ಸಂಭವಿಸಿದರೂ ಸಹ ಪೂಜ್ಯರ ವಿಚಾರದಲ್ಲಿ ಕಠಿಣವಾದ ಮಾತುಗಳನ್ನಾಡಬಾರದು. ಹಾಗಿರುವಾಗ ಈ ಪೂಜ್ಯನ ವಿಷಯದಲ್ಲಿ ಕೊಡಲಿಯ ಏಟಿನಂತೆ ಕಠೋರವಾದ ಮಾತುಗಳನ್ನು ಏತಕ್ಕೆ ಹೇಳುವಿರಿ ? ॥೪೬॥

ವೈದಿಕವಾದ, ಮತ್ತು ಸ್ಮೃತ್ಯುಕ್ತಗಳಾದ, ಯಾವ ಧರ್ಮ ವಿಶೇಷಗಳನ್ನೂ ನೀವು ಅರಿತಿಲ್ಲ. ಮತ್ತು ಲೌಕಿಕ ವಾರ್ತೆಗಳ ಅನುಭವವೂ ನಿಮಗಿರುವಂತೆ ಕಾಣುವುದಿಲ್ಲ. ॥೪೭॥

ಪ್ರದೋಷಕಾಲದಲ್ಲಿ ಪೂಜೆಮಾಡಿದ ಲಿಂಗವನ್ನು ಯಾವ ಮನುಜನು ಒಂದು ಕ್ಷಣಕಾಲ, ಅಥವಾ, ಅರ್ಧಕ್ಷಣವಾದರೂ ಸಹ ಭಕ್ತಿಯಿಂದ ನೋಡುತ್ತಾನೆಯೋ ಅಂತಹವನ ಪುಣ್ಯವು ಅನಂತವಾದುದಾಗಿ ತಿಳಿಯಬೇಕು. ॥೪೮॥

ಪ್ರದೋಷಕಾಲದಲ್ಲಿ ನಡೆಯುತ್ತಿರುವ ಮಹೇಶ್ವರನ ಪೂಜೆಯನ್ನು ನೋಡುವ ಬುದ್ಧಿಯು ಯಾರಿಗೆ ಉಂಟಾಗುವುದಿಲ್ಲವೋ, ಅಂತಹವರು ಸಾಕ್ಷಾತ್ಪಾಪ ಮೂರ್ತಿಗಳಂತಾಗುವರು. ಇದು ನನ್ನ ತಿಳಿವಳಿಕೆ. ॥೪೯॥

ಎಂತಹ ಅಧಮನಾದರೂ ಪ್ರದೋಷಕಾಲದಲ್ಲಿ ಶಿವಲಿಂಗಪೂಜೆಯನ್ನು

ಜನ್ಮ ತಸ್ಯೈವ ಸಫಲಂ ಯೇನ ಲಿಂಗಂ ಸಮರ್ಚಿತಂ ।
ಸಾಂಗಂ ಸಕೃದಪಿಯತ್ನೇನಾಪ್ಯಾಲಸ್ಯಾದ್ವಾಪ್ರಸಂಗತಃ ॥೫೧॥

ಆಯಾಸಮಾತ್ರಫಲಕೈಃ ಧರ್ಮಾಭಾಸೈಃ ಕುತಃ ಫಲಂ ।
ಸ್ಮಾರ್ತೈರ್ವಾ ವೈದಿಕೈರ್ವಾಽಪಿ ಶಿವಲಿಂಗಾರ್ಚನಂ ವಿನಾ ॥೫೨॥

ಸ್ಮಾರ್ತವೈದಿಕಧರ್ಮಾಣಾಂ ಅನುಷ್ಠಾನೇಽಪಿ ಕೋಟಿಶಃ ।
ಲಿಂಗಾರ್ಚನೇನ ಯತ್ಪ್ರಾಪ್ಯಂ ತತ್ಪ್ರಾಪ್ಯಂ ಕೈರ್ನ ಸರ್ವದಾ ॥೫೩॥

ಧರ್ಮಾಂತರಾಣಾಂ ಕರಣಂ ಧನನಾಶಾಯ ಕೇವಲಂ ।
ಶಿವಾರ್ಚನಪರೋ ಧರ್ಮಃ ಪರಮಾನಂದಸಾಧನಂ ॥೫೪॥

ಪಾಪರಾಶಿವಿನಾಶಾಯ ಶಿವಲಿಂಗಾವಲೋಕನಂ ।
ಕಲ್ಪಿತಂ ಗಿರಿಶೇನೈವ ನ ಜಾನಾತ್ಯೇವ ನಾರಕೀ ॥೫೫॥

---

ನೋಡುತ್ತಾನೆಯೋ, ಅವನ ಪಾಪಗಳೆಲ್ಲವೂ ನಾಶವಾಗುವುದಲ್ಲದೇ ಅನಂತವಾದ ಮೋಕ್ಷಲಕ್ಷ್ಮಿಗೆ ಆತನು ಒಡೆಯನಾಗುವನು. ||೫೦||

ಯಾವನು ಶಿವಲಿಂಗವನ್ನು ಅರ್ಚಿಸುತ್ತಾನೆಯೋ, ಅಥವಾ ಪ್ರಾಸಂಗಿಕವಾಗಿಯೋ, ಆಲಸ್ಯದಿಂದಲೋ, ಅಕಸ್ಮಾತ್ತಾಗಿಯೋ, ಶಿವಲಿಂಗದರ್ಶನ ಮಾಡುತ್ತಾನೆಯೋ, ಅಂತಹವನ ಜನ್ಮವೇ ಸಾರ್ಥಕವೆನಿಸುವುದು. ||೫೧||

ಶ್ರೌತಸ್ಮಾರ್ತ ಕರ್ಮಗಳು ಧರ್ಮಕಾರ್ಯಗಳಂತೆ ಕಂಡುಬರುವುವು. ಆದರೆ ಅವು ಬಹು ಆಯಾಸಕರಗಳು. ಅವುಗಳ ಆಚರಣೆಯಿಂದ ಬರುವ ಸುಕೃತರಾಶಿಯು ಮಾತ್ರ ಅತ್ಯಲ್ಪ. ಆದರಿಂದಲೇ ಶಿವಾರ್ಚನೆಗೆ ಅವು ಸದೃಶವೆನಿಸಲಾರವು. ||೫೨||

ಕೋಟ್ಯಂತರ ಸ್ಮೃತ್ಯುಕ್ತವಾದ ಮತ್ತು ವೇದೋಕ್ತಗಳಾದ ಕರ್ಮಗಳನ್ನು ಅನುಷ್ಠಾನಮಾಡಿದರೂ, ಲಿಂಗಾರ್ಚನದಿಂದ ಬರುವ ಫಲಗಳು ಖಂಡಿತವಾಗಿಯೂ ಲಭಿಸಲಾರವು. ||೫೩||

ಅಂತಹ ಧರ್ಮಗಳನ್ನು ಮಾಡುವುದರಿಂದ ವೆಚ್ಚವಾದ ಧನನಾಶವೇ ಹೊರತು, ಶಿವಾರ್ಚನೆಯಿಂದ ಲಭಿಸುವ ಆನಂದವು ಮಾತ್ರ ದೊರಕಲಾರದು. ||೫೪||

ಪಾಪರಾಶಿಗಳನ್ನು ನಾಶಮಾಡಿಕೊಳ್ಳಬೇಕಾದರೆ ಶಿವಲಿಂಗವನ್ನು ನೋಡಬೇಕೆಂಬುದಾಗಿ ಶಂಕರನೇ ಹೇಳಿರುವನು. ಆದಕ್ಕಾಗಿಯೇ ಆ ವ್ರತವನ್ನು ಕಲ್ಪಿಸಿರುವನು. ಇದನ್ನು ಜನರು ತಿಳಿದಿಲ್ಲ. ||೫೫||

ಲೋಕೋಪಕಾರಕಂ ಸೃಷ್ಟಂ ಶಿವಲಿಂಗಾವಲೋಕನಂ ।
ತನ್ನ ಕುರ್ವಂತಿ ಪಾಪಿಷ್ಠಾಃ ಪತಂತಿ ನರಕೇಷ್ವಹೋ ॥೫೬॥

ಅನಾಥನಾಥಂ ಶ್ರೀನಾಥನಯನಾರ್ಚಿತಪಾದುಕಂ ।
ನ ಜಾನಂತಿ ಮಹಾದೇವಂ ನರಕೇಷು ಪತಂತ್ಯಹೋ ॥೫೭॥

ಶ್ರೀಮಹಾದೇವಮಹಿಮಾ ದುಜ್ಞೇಯೋ ದುರ್ಜನೈರತಃ ।
ಪತಂತಿ ನರಕೇ ಘೋರೇ ಪಿತೃಭಿಃ ಸಹ ಸರ್ವಥಾ ॥೫೮॥

ಪಿತಾ ಪಿತಾಮಹಾದೀನಾಂ ಯಃ ಶಂಭುರ್ಮೋಕ್ಷದಃ ಪ್ರಭುಃ ।
ತಂ ನ ಜಾನಂತಿ ದುರ್ವೃತ್ತಾಃ ಪತಂತಿ ನರಕೇಷ್ವಹೋ ॥೫೯॥

ಶಿವಧರ್ಮೇಷ್ವವಿಶ್ವಾಸಾದನ್ಯಧರ್ಮರತಾ ನರಾಃ ।
ಪತಂತಿ ನರಕೇ ಘೋರೇ ಕ್ರೂರಾಃ ಶಂಕರನಿಂದಕಾಃ ॥೬೦॥

ಶಿವಲಿಂಗದರ್ಶನವು ಲೋಕೋಪಕಾರಕ್ಕಾಗಿಯೇ ಕಲ್ಪಿತವಾಗಿದೆ. ಅದನ್ನು ಪಾಪಿಗಳಾದ ಜನರು, ನಡೆಸದೇ ನರಕದಲ್ಲಿ ಬೀಳುತ್ತಾರೆ ॥೫೬॥

ಅನಾಥರಕ್ಷಕನೂ, ವಿಷ್ಣುವಿನ ನೇತ್ರಕಮಲಗಳಿಂದ ಅರ್ಚಿತನೂ ಆದ ಪರಶಿವನ ದರ್ಶನ ಲಾಭವನ್ನು ಪಡೆಯದೆ ಜನರು ಪಾಪಿಗಳಂತೆ ನರಕದಲ್ಲಿ ಬೀಳುವರು. ॥೫೭॥

ದುರ್ಜನರು ಶ್ರೀಮಹಾದೇವನ ಮಹಿಮೆಯನ್ನು ಅರಿಯದವರಾಗಿ ತಮ್ಮ ಪಿತೃಗಳನ್ನು ಸಹ ನರಕಕ್ಕೆ ಎಳೆದು, ತಾವೂ ನರಕಕ್ಕೆ ಭಾಗಿಗಳಾಗುವರು. ॥೫೮॥

ಪಿತೃ, ಪಿತಾಮಹ, ಇತ್ಯಾದಿ ದೇವತೆಗಳಿಗೂ ಮೋಕ್ಷಪ್ರದನಾದ ಶಿವನ ಮಹಿಮೆಯನ್ನು ಅರಿಯದೆ ಜನರು ಕೆಟ್ಟ ನಡವಳಿಕೆಯಿಂದ ನರಕದಲ್ಲಿ ತಾವೂ ಪಿತೃಗಳೊಡನೆ ಬೀಳುವರು. ॥೫೯॥

ಶಿವಧರ್ಮಗಳಲ್ಲಿ ನಂಬಿಕೆಯನ್ನಿಡದೆ ಇತರ ಧರ್ಮಗಳಲ್ಲಿ ಆಸಕ್ತರಾದ ಜನರು ಶಂಕರನಿಂದಕರಾಗಿ ಘೋರವಾದ ನರಕದಲ್ಲಿ ಬೀಳುವರು. ॥೬೦॥

ತದರ್ಥಂ ನರಕಾಃ ಸೃಷ್ಟಾಃ ಸರ್ವದಾ ದುಃಖಹೇತವಃ ।
ಯೈರ್ಮಹಾದೇವಲಿಂಗಾರ್ಚಾಫಲಂ ನ ಜ್ಞಾತಮಾದರಾತ್ ॥೬೧॥

ನ ಜಾನಾತಿ ಮಹಾದೇವಲಿಂಗಪೂಜಾಫಲಾನಿ ಯಃ ।
ಸ ಸೂಕರಃ ಖರೋ ಯದ್ವಾ ಶುನಕಃ ಕಾಕ ಏವ ವಾ ॥೬೨॥

ದುರ್ಭಗಾ ಏವ ತೇ ಸರ್ವೇ ಭರ್ಗಾರ್ಚನಪರಾಙ್ಮುಖಾಃ ।
ತನ್ಮುಖಾನಿ ಪ್ರದಗ್ಧಾನಿ ಶಿವದ್ವೇಷಾಗ್ನಿಕೋಟಿಭಿಃ ॥೬೩॥

ಸುಲಭಂ ನ ವಿಜಾನಂತಿ ಮಹಾದೇವಾರ್ಚನಂ ಜನಾಃ ।
ಶುದ್ಧದೂರ್ವಾಂಕುರೇಣಾಪಿ ಲಿಂಗಪೂಜಾ ವಿಮುಕ್ತಿದಾ ॥೬೪॥

ಕ್ಷೀರಂ ವಾ ನೀರಮುತ್ಸೃಜ್ಯ ಭಕ್ತ್ಯಾ ಲಿಂಗೇ ಶಿವಾತ್ಮಕೇ ।
ವಿಧೂತಪಾತಕಾ ಏವ ಪ್ರಯಾಂತಿ ಶಿವಮವ್ಯಯಂ ॥೬೫॥

ಯಾವ ಮನುಷ್ಯರು ಆದರದಿಂದ ಮಹಾದೇವನ ಲಿಂಗಾರ್ಚನೆಯಿಂದುಂಟಾಗತಕ್ಕ ಫಲವನ್ನು ತಿಳಿಯುವುದಿಲ್ಲವೋ, ಅಂತಹವರಿಗೆ ಯಾವಾಗಲೂ ದುಃಖವನ್ನೇ ಕೊಡಬೇಕೆಂದಿರುವ ಉದ್ದೇಶದಿಂದಲೇ ನರಕಗಳು ಸೃಷ್ಟಿಸಲ್ಪಟ್ಟಿವೆ. ॥೬೧॥

ಯಾವ ಮನುಜನು ಶಿವಲಿಂಗಪೂಜೆಯಿಂದುಂಟಾಗತಕ್ಕ ಫಲಗಳನ್ನು ತಿಳಿಯುವುದಿಲ್ಲವೋ ಅಂತಹವನು, ಹಂದಿ, ಕತ್ತೆ, ನಾಯಿ, ಅಥವಾ ಕಾಗೆ ಎಂಬುದಾಗಿ ತಿಳಿಯಲ್ಪಡುವನು. ॥೬೨॥

ಯಾರು ಈಶ್ವರನನ್ನು ಪೂಜಿಸುವುದಿಲ್ಲವೋ, ಅಂತಹವರು ದುರದೃಷ್ಟಶಾಲಿಗಳು. ಅಂತಹವರ ಮೇಲೆ ಈಶ್ವರನಿಗೆ ಬಹಳ ಕೋಪ ಉಂಟಾಗುತ್ತದೆ. ಅವರು ಶಿವದ್ವೇಷವೆಂಬ ಅಗ್ನಿಯಿಂದ ಭಸ್ಮನಾಗುವರು. ॥೬೩॥

ಪರಿಶುದ್ಧವಾದ ದೂರ್ವಾಂಕುರದಿಂದ ಶಿವಲಿಂಗವನ್ನು ಪೂಜಿಸಿದರೂ ಮೋಕ್ಷವು ಲಭಿಸುತ್ತದೆಂಬ ಶಿವಪೂಜಾಸೌಲಭ್ಯದ ವಿಚಾರವನ್ನು ಜನಗಳು ತಿಳಿಯಲಾರರು. ॥೬೪॥

ಭಕ್ತಿಯಿಂದ ಶಿವರೂಪವಾದ ಲಿಂಗದಲ್ಲಿ, ಹಾಲನ್ನೇ ಆಗಲಿ, ನೀರನ್ನೇ ಆಗಲಿ ಅಭಿಷೇಚನಮಾಡುವುದರಿಂದ ಪಾಪಗಳೆಲ್ಲಾ ನಾಶವಾಗುತ್ತವೆ. ಮತ್ತು ನಾಶವಿಲ್ಲದ ಸಾಕ್ಷಾಚ್ಛಿವಸ್ಥಾನವನ್ನು ಹೊಂದುತ್ತಾರೆ. ॥೬೫॥

ಶುಷ್ಕೇಣ ಬಿಲ್ವಪತ್ರೇಣ ತಚ್ಚೂರ್ಣೇನಾಪಿ ಯಃ ಶಿವಂ ।
ಪೂಜಯಿಷ್ಯತಿ ತಸ್ಯಾಽಪಿ ಮುಕ್ತಿಕಾಂತಾ ನ ದುರ್ಲಭಾ ॥೬೬॥

ವ್ಯಾಸಂಗೇನಾಪಿ ಯಃ ಶೈವಂ ಲಿಂಗಂ ಮಂಗಳದಾಯಕಂ ।
ಸಾಯಂ ಪಶ್ಯತಿ ಪುಣ್ಯಾತ್ಮಾ ನಮಸ್ತಸ್ಮೈ ನಮೋ ನಮಃ ॥೬೭॥

ಅನಾರಾಧ್ಯ ಮಹಾದೇವಂ ಅನಾಯಾಸೇನ ವಾ ಪುನಃ ।
ಪ್ರಯಾಂತಿ ದುರ್ಗಮಂ ಘೋರಂ ನರಕಾಲಯಮನ್ವಹಂ ॥೬೮॥

ವನೇ ವನಾನಿ ರಮ್ಯಾಣಿ ವನಜಾನ್ಯಪಿ ಕೈಃ ಶಿವಃ ।
ನಾರಾಧ್ಯತೇ ದುರ್ಭಗೇಣ ನರಕಾವಾಸಮಿಚ್ಛತಾ ॥೬೯॥

ಅನಿಚ್ಛಯಾಪ್ಯನಾಕಾನ್ತಂ ಲಿಂಗಂ ಪಶ್ಯತಿ ಯೋ ನರಃ ।
ಸಾಯಂ ಸ ದೋಷನಿರ್ಮುಕ್ತೋ ಮುಕ್ತೋ ಭವತಿ ಸರ್ವಥಾ ॥೭೦॥

ಬಿಲ್ವಪತ್ರೆಯು ಒಣಗಿದ್ದರೂ ಸರಿಯೆ, ಅಥವಾ ಚೂರ್ಣಚೂರ್ಣವಾಗಿದ್ದರೂ ಸರಿಯೇ, ಅಂತಹ ಬಿಲ್ವಪತ್ರೆಗಳಿಂದಲಾದರೂ ಯಾವನು ಭಕ್ತಿಯಿಂದ ಪೂಜಿಸುವನೋ ಅಂತಹವನಿಗೂ ಸಹ ಮುಕ್ತಿಯು ಸುಲಭ. ॥೬೬॥

ಯಾರ ಸಹವಾಸದಿಂದಲಾದರೂ ಸಾಯಂಕಾಲದಲ್ಲಿ ಮಂಗಳದಾಯಕವಾದ ಶಿವಲಿಂಗವನ್ನು ದರ್ಶನಮಾಡುವ ಮಹಾತ್ಮನಿಗೆ ಅನಂತಾನಂತ ನಮಸ್ಕಾರಗಳು. ॥೬೭॥

ಯಾವ ಪಾಪಿಗಳು ಆಯಾಸವಿಲ್ಲದೆ ಇದ್ದರೂ ಮಹಾದೇವನನ್ನು ಪೂಜಿಸುವುದಿಲ್ಲವೋ, ಅಂತಹವರು ಯಾವಾಗಲೂ ಘೋರವಾಗಿರತಕ್ಕ ನರಕವನ್ನು ಪ್ರವೇಶಿಸುತ್ತಾರೆ. ॥೬೮॥

ವನದಲ್ಲಿದ್ದೂ ಕೂಡ ಯಾವನು ಅಲ್ಲಿ ಬೆಳೆದ ಪುಷ್ಪಾದಿಗಳಿಂದ ಶಿವನನ್ನು ಪೂಜಿಸನೋ ಅಂತಹವನಿಗೆ ನರಕವಾಸವು ಖಂಡಿತ. ॥೬೯॥

ಸಾಯಂಕಾಲದಲ್ಲಿ ಯಾವ ಮನುಜನು ಅಕಸ್ಮಾತ್ತಾಗಿಯಾದರೂ ಶಿವಲಿಂಗ ದರ್ಶನ ಮಾಡುತ್ತಾನೆಯೋ, ಅಂತಹವನ ಪಾಪಗಳೆಲ್ಲವೂ ನಾಶವಾಗಿ ಮುಕ್ತಿಯನ್ನು ಪಡೆಯುವನು. ॥೭೦॥

ತೃಣೈರಪಿ ಕ್ಷಣಂ ಮೂರ್ಖಾಃ ಕಥಂ ನಾರಾಧಯಂತ್ಯಹೋ ।
ಮಹಾದೇವಂ ಮಹಾಮೋಹೋ ಮಹಾನರಕಸಾಧನಂ ॥೭೦॥

ಶಿವಲಿಂಗಾರ್ಚಕಾಂಗಾನಿ ದೃಷ್ಟ್ವಾಪಿ ರಜನೀಮುಖೇ ।
ಪ್ರಯಾಂತಿ ಬ್ರಹ್ಮಸದನಂ ತತ್ಕಿಲಾತ್ಯಂತಮದ್ಭುತಂ ॥೭೨॥

ಸುಲಭತ್ವೇನ ವಿಜ್ಞಾತಂ ಶಾಂಗಾಂಗಸ್ಯ ವಿಲೋಕನಂ ।
ತದಭಾಗ್ಯಾಗ್ನಿದಗ್ಧಾನಾಮತಿದುರ್ಲಭಮೇವ ಹಿ ॥೭೩॥

ಲಿಂಗಾರ್ಚನೇನ ಕಿಂ ಪುಣ್ಯಮಿತ್ಯುಪೇಕ್ಷ್ಯಾಪಿ ಚೇತ್ಕ್ಷಣಂ ।
ತದ್ವಂಶಕ್ಷಯ ಏವ ಸ್ಯಾತ್ಪಕ್ಷಪಾತೇನ ನೋಚ್ಯತೇ ॥೭೪॥

ಅಹೋ ಮಹದಿದಂ ಭಾಗ್ಯಂ ಶಿವಲಿಂಗಾರ್ಚನೇ ಮತಿಃ ।
ತದೇವ ಹಿ ಮಹದ್ಭಾಗ್ಯಂ ಮಹದ್ಭಾಗ್ಯಮಿತಿ ಸ್ಮೃತಂ ॥೭೫॥

ಕೆಲವರು ತಮ್ಮ ಮೂರ್ಖತನದಿಂದ ತೃಣಗಳಿಂದಲೂ ಸಹ ಮಹಾದೇವನನ್ನು ಪೂಜಿಸುವುದಿಲ್ಲ. ಅಂತಹವರು ಇನ್ನೂ ಮೋಹಗೊಂಡವರಾಗಿ ಮಹಾನರಕಕ್ಕೆ ದಾರಿಮಾಡಿಕೊಂಡಂತಾಗುತ್ತದೆ. ॥೭೧॥

ಪ್ರದೋಷಕಾಲದಲ್ಲಿ ಶಿವಲಿಂಗಪೂಜೆಮಾಡತಕ್ಕವನ ಅವಯವಗಳನ್ನಾದರೂ ಯಾವನು ನೋಡುತ್ತಾನೆಯೋ ಅಂತಹವನು ಬ್ರಹ್ಮಲೋಕವನ್ನು ಹೊಂದುತ್ತಾನೆ. ಇದೊಂದು ಅದ್ಭುತವಾದುದು. ॥೭೨॥

ಈಶ್ವರಭಕ್ತನ ಅಂಗಾಂಗಗಳ ದರ್ಶನವು ಅತಿ ಸುಲಭವೇ ತಾನೇ. ದುರದೃಷ್ಟಶಾಲಿಗಳಿಗೆ ಅಂತಹ ಈಶ್ವರಭಕ್ತರ ಅಂಗಗಳೂ ಸಹ ಗೋಚರಿಸಲಾರವು. ॥೭೩॥

ಲಿಂಗಾರ್ಚನೆಯಿಂದ ಯಾವ ಪುಣ್ಯವು ಲಭಿಸುವುದು ಎಂದು ಒಂದು ಕ್ಷಣಕಾಲವಾದರೂ ಉಪೇಕ್ಷೆಯಿಂದ ಶಿವಪೂಜೆಯನ್ನು ನಿಂದಿಸಿದರೆ, ಅಂತಹವನ ವಂಶವೇ ನಾಶವಾಗುತ್ತದೆ. ಇದರಲ್ಲಿ ಯಾವ ಪಕ್ಷಪಾತವೂ ಇಲ್ಲ. ॥೭೪॥

ಶಿವಲಿಂಗಾರ್ಚನೆ ಮಾಡುವುದರಲ್ಲಿ ಬುದ್ಧಿಯುಂಟಾಗುವುದೇ ಒಂದು ದೊಡ್ಡ ಭಾಗ್ಯವು. ಇದನ್ನೇ ಮಹದ್ಭಾಗ್ಯವೆಂದೆನ್ನುತ್ತಾರೆ. ॥೭೫॥

ಲೋಕೇ ದುರಾಚಾರರತಾಃ ಶಿವಾರ್ಚಾಂ
ವಿಹಾಯ ತಿಷ್ಠಂತ್ಯಪಿನಿಷ್ಠಯಾ ತೇ ।
ಲಿಪ್ತಾ ಭವಿಷ್ಯಂತಿ ನ ಸಂಶಯೋಽತ್ರ
ಶಿವಾಪದಾಂಭೋಜಯುಗೇ ಶಪಾಮಿ ॥೭೬॥

ಯಃ ಕರ್ಮಣಾ ವಾ ಮನಸಾಪಿ ವಾಗ್ಭಿಃ ।
ನಿತ್ಯಂ ತ್ರಿಭಿರ್ವಾ ತ್ರಿಪುರಾಂತಕಾರ್ಚಾಂ ।
ಕರೋತಿ ತತ್ಪಾದರಜಃಪ್ರಸಾದಂ ।
ವಾಂಛತ್ಯಪೇಂದ್ರೋಽಪಿ ಚತುರ್ಮುಖೋಽಪಿ ॥೭೭॥

ಕಿಂ ವಕ್ತವ್ಯಮುಮಾಸಹಾಯಚರಣಾಂಭೋಜಾರ್ಚಕಾರಾಧಕಾ
ಪಾರೈಶ್ವರ್ಯಪರಂ ಹರಿಃ ಪ್ರತಿದಿನಂ ತತ್ಸೇವಕಾರಾಧಕಃ ।
ಶ್ರೀವಾಣೀರಮಣಾದಯೋಽಪಿ ಮುನಯಃ ಸಿದ್ಧಾಃ ಸಮುಗ್ಧಾಸ್ಥಥಾ
ಗಂಧರ್ವಾ ಅಪಿ ಕಿನ್ನರಾ ಅಪಿ ತಥಾ ಶೇಷಾದಯಃ ಸೇವಕಾಃ ॥೭೮॥

---

ಲೋಕದಲ್ಲಿ ದುರ್ನಡತೆಗಳಲ್ಲಿಯೇ ಆಸಕ್ತರಾಗಿ, ದುರಾಚಾರಪ್ರವರ್ತಕರಾದವರು ಶಿವಪೂಜೆಯಲ್ಲಿ ಉದಾಸೀನರಾಗಿರುತ್ತಾರೆ. ಅಂತಹವರು ಈಶ್ವರನ ಚರಣಕಮಲಗಳಿಂದ ಸದಾ ದೂರವಾಗಿಯೇ ಇರುವರೆಂಬುದು ಈಶ್ವರಪಾದದಾಣೆಗೂ ನಿಜ. ॥೭೬॥

ವಿಧ್ಯುಕ್ತವಾದಕರ್ಮ, ಸ್ಥಿರಮನಸ್ಸು, ಸ್ತುತಿವಚನ ಈ ಮೂರರಿಂದ ಯಾರು ಪ್ರತಿನಿತ್ಯವೂ ತ್ರಿಪುರಾಸುರನನ್ನು ಸಂಹರಿಸಿದ ಶಿವಪೂಜೆಯನ್ನು ಮಾಡುತ್ತಾ ಕಾಲಕಳೆಯುವರೋ, ಅಂತಹವರನ್ನು ಬ್ರಹ್ಮಾವಿಷ್ಣ್ವಾದಿಗಳೂ ಸಹ ಸೇವಿಸುವರು. ಅವರ ಪಾದಧೂಳಿಯನ್ನು ಸಹ ಬ್ರಹ್ಮಾದಿಗಳು ಗೌರವಿಸುವರು. ॥೭೭॥

ಪಾರ್ವತೀಸಮೇತನಾದ ಈಶ್ವರನನ್ನು ಅರ್ಚಿಸತಕ್ಕವರೂ ಮತ್ತು ಧ್ಯಾನಿಸತಕ್ಕವರೂ ಪ್ರತಿದಿನವೂ ಅಪಾರವಾದ ಐಶ್ವರ್ಯವನ್ನು ಹೊಂದುವರು. ಅಷ್ಟೇ ಅಲ್ಲ. ಶ್ರೀಪತಿ, ಬ್ರಹ್ಮ, ಇವರೇ ಮೊದಲಾದ ದೇವಶ್ರೇಷ್ಠರೂ, ಮಹರ್ಷಿಗಳೂ, ಸಿದ್ಧರೂ, ಗಂಧರ್ವರೂ, ಕಿನ್ನರರು ಮತ್ತು ಆದಿಶೇಷನೇ ಮೊದಲಾದವರೂ ಸಹ ಶಿವಸೇವಕರೆನಿಸಿ, ಶಿವನನ್ನು ಸೇವಿಸಿ ಮುಕ್ತರಾಗುತ್ತಾರೆಂಬುದರಲ್ಲಿ ಸಂದೇಹವಿಲ್ಲ. ॥೭೮॥

ಶಂಭುಸ್ಸರ್ವಜಗತ್ಪ್ರಭುರ್ವಿಭುರಿತಿ ಜ್ಞಾತ್ವಾ ಪರಂ ಶಾಂಭವಾಃ
ತತ್ಪೂಜಾನಿರತಾಃ ಪರಾತ್ಪರತರಂ ತೇಜಃ ಪರಂ ಶಾಂಭವಮ್ ।
ಪ್ರಾಪ್ಸ್ಯಂತೇ ಪರಮೋತ್ಸವಾದ್ಧೃತನಿಜವ್ಯಾಪಾರಪಾರಂಗತಾಃ
ಪಾರಾವಾರಾವಿಹಾರಪೂಜಿತಪದಾಂಭೋಜಾಃ ಪ್ರಸನ್ನಾಃ ಸದಾ ॥೭೯॥

ಕಸ್ತೂರೀರಸರಾಜಸಹಿತಃ ಕರ್ಪೂರಗಂಧಾ ಯಥಾ
ನ ಜ್ಞಾತಃ ಶುನಕೈಸ್ತಥಾ ಶಿವಶಿವಾಚಾರವ್ರತಾನಾದರೈಃ ।
ನ ಜ್ಞಾತಂ ಶಿವಲಿಂಗಪೂಜನಫಲಂ ತತ್ಕಾಲಕಾಲಾರ್ಚಕೈಃ
ಜ್ಞೇಯಂ ಕೇವಲಮಿತ್ಯಲೌಕಿಕಮಿದಂ ಜ್ಞೇಯಂ ಕಥಂ ಪಾಮರೈಃ ॥೮೦॥

ಕಿಮನ್ಯದ್ವಕ್ತವ್ಯಂ ಸ್ಮರಹರಕಥಾಸಾಗರರಸೋ
ನ ವಿಜ್ಞಾತೋ ಲೋಕೈರಮಿತಮಹಿಮಾ ತೇನ ಸಹಸಾ ।
ನ ಬುದ್ಧಿರ್ಮಂದಾನಾಂ ಶಿವಚರಣಸೇವಾನುಕರಣೇ
ಕ್ಷಣಂ ಕಿಂ ನ ಕ್ಷೀಣಂ ಯದಿ ಮರಣಕಾಲೇಪ್ಯಘಕುಲಂ ॥೮೧॥

ಪರಮೇಶ್ವರಭಕ್ತರಾದವರು ಶಂಭುವನ್ನು ಸಕಲ ಜಗತ್ತುಗಳಿಗೂ ರಾಜನೆಂತಲೂ ಸಕಲ ಜಗತ್ತನ್ನು ವ್ಯಾಪಿಸಿಕೊಂಡಿರುವನೆಂತಲೂ ತಿಳಿದು ಶಂಕರನ ಪರಾತ್ಪರವಾದ ತೇಜಸ್ಸನ್ನು ಪೂಜಿಸುವುದರಲ್ಲಿಯೇ ಆಸಕ್ತರಾಗುತ್ತಾರೆ. ಮತ್ತು ಅದೇ ರೀತಿ ಧ್ಯಾನಿಸುತ್ತಾ ತಮ್ಮ ಸಂಸಾರವ್ಯಾಪಾರಗಳಿಂದ ಮುಕ್ತರಾಗಿ ಯಾವಾಗಲೂ ಆನಂದಾಂಬುನಿಧಿಯ ಪಾರವನ್ನು ಹೊಂದಿ, ಕೊನೆಗೆ ಶಿವಸಾಯುಜ್ಯವನ್ನು ನಿಜವಾಗಿಯೂ ಪಡೆಯುವರು. ॥೭೯॥

ನಾಯಿಗಳಿಗೆ ಕಸ್ತೂರೀಗಂಧಸಹಿತವಾದ ಧೂಪವೂ, ಪಚ್ಚಕರ್ಪೂರದ ಸುವಾಸನೆಯೂ ಯಾವ ರೀತಿ ತಿಳಿಯುವುದಿಲ್ಲವೋ, ವ್ರತದಲ್ಲಿ ಅನಾಸಕ್ತರಾದ ಪಾಮರರಿಗೆ ಆಯಾಯಾ ಕಾಲದಲ್ಲಿ ಶಿವಲಿಂಗಾರ್ಚನೆಯನ್ನು ಮಾಡುವುದರಿಂದ ಉಂಟಾಗತಕ್ಕ ಅಲೌಕಿಕವಾದ ಫಲವು ಮನಸ್ಸಿಗೆ ಸ್ಫುರಿಸಲಾರದು. ॥೮೦॥

ಅಪಾರವಾದ ಮಹಿಮೆಯುಳ್ಳ ಈಶ್ವರನ ಕಥಾಸಮುದ್ರವು ಲೋಕದಲ್ಲಿ ಎಲ್ಲರಿಗೂ ತಿಳಿಯುವುದಿಲ್ಲವೆಂದು ಪುನಃ ಹೇಳಬೇಕೆ? ಅಜ್ಞರಿಗೆ ಶಿವನ ಚರಣ ಸೇವೆ ಮಾಡುವುದರಲ್ಲಿ ಬುದ್ಧಿಯು ಉತ್ಪನ್ನವಾಗುವುದಿಲ್ಲ. ಈ ವಿಧದ ಬುದ್ಧಿಯು

ಬಲಾದೇತೇ ಲೋಕಾಃ ಖಲಜನರತಾ ಏವ ನಿತರಾಂ
ನ ಜಾನಂತ್ಯೇವಾಲಂ ಬತ ಬತ ನ ಕಾಲಾಂತಕಮತಂ ।
ಅತೋಽಂತೇ ಸಂತಪ್ತಾಃ ಪ್ರತಿಪದಮಘೋರೇಷು ನರಕೇ
ಷ್ವಸಂತೋಷೈರ್ದೋಷಪ್ರಲಪನವಿಷಾದಾತಿ ಸವಿಷಾಃ ॥೮೨॥

ಅಹೋ ಮೋಹಃ ಕೋ ವಾ ಜಗತಿ ನ ಮಹಾದೇವಭಜನೇ
ಮತಿರ್ಭಕ್ತಿಶ್ರದ್ಧಾ ಕಥಮಪಿ ನ ತತ್ಪೂಜನರತಿಃ ।
ನ ತದ್ಭಕ್ತಾಲಾಪೇ ಷ್ವಭಿರುಚಿರತೋ ಯಾ ನರಕೇ
ಷ್ವಘೋರೇಷು ಭ್ರಷ್ಟಾಃ ಶಿವರುಚಿರಮಾರ್ಗಾದತಿಶಠಾಃ ॥೮೩॥

ಲಲಾಟೇ ಕಿಂಚಿದ್ವಾ ಸಿತಭಸಿತಮಾಲಿಪ್ಯ ಶಿರಸಾ
ಮುಹುರ್ಗತ್ವಾ ಯದ್ವಾ ಸಕೃದಪಿ ಸರುದ್ರಾಕ್ಷವಪುಷಾ ।

ಮರಣಕಾಲದಲ್ಲಿ ಒಂದು ಕ್ಷಣಕಾಲವಾದರೂ ಉಂಟಾಗುವುದಾದರೆ ಅವರ ಪಾಪಗಳ ಕುಲವೇ ನಾಶವಾಗುವುದಿಲ್ಲವೇ ? ॥೮೧॥

ಈ ಜನರು ಬಲಾತ್ಕಾರವಾಗಿಯಾದರೂ ದುರ್ಜನರ ಸಹವಾಸದಲ್ಲಿಯೇ ಸುತರಾಂ ನಿರತರಾಗಿ, ಯಮನಿಗೂ ಯಮಸ್ವರೂಪನಾಗಿರತಕ್ಕ ಆ ಶಿವನನ್ನು ತಿಳಿಯುವುದಿಲ್ಲ. ಇದರಿಂದ ಅವರು ಕೊನೆಯಲ್ಲಿ ಹೆಜ್ಜೆಹೆಜ್ಜೆಗೂ ಬಹು ಕಠಿಣವಾಗಿರುವ ನರಕಗಳಲ್ಲಿ ಬಿದ್ದು ಕೇವಲ ದುಃಖಾನುಭವದಿಂದ ನರಳುತ್ತಾರೆ. ॥೮೨॥

ಜಗತ್ತಿನಲ್ಲಿ ಈಶ್ವರನ ಭಜನೆಯಲ್ಲಿಯೇ ಆಗಲಿ, ಪೂಜೆಯಲ್ಲಿಯೇ ಆಗಲಿ ಪಾಮರರಿಗೆ ಬುದ್ಧಿ, ಭಕ್ತಿ, ಶ್ರದ್ಧೆ, ಆಸಕ್ತಿ ಯಾವುವೂ ಜನಿಸುವುದಿಲ್ಲ. ಅಥವಾ ಆತನ ಭಕ್ತರೊಡನೆ ಆಲಾಪಮಾಡುವುದರಲ್ಲಿಯೂ ಅಭಿರುಚಿ ಇಲ್ಲ. ಆದುದರಿಂದಲೇ ಶಿವನಿಗೆ ವಿರೋಧಗಾಮಿಗಳಾಗಿ ಭೀಕರವಾದ ನರಕಗಳಲ್ಲಿ ಬೀಳುತ್ತಾರೆ. ॥೮೩॥

ಕಲಿಯುಗದಲ್ಲಿ ಯಾರೂ ಕೂಡ ಭಯಭಕ್ತಿಯಿಂದ ಲಲಾಟದಲ್ಲಿ ಬೆಳಗಿರುವ ಧೂಪ ಭಸ್ಮವನ್ನು ಹಚ್ಚಿ, ದೇಹಗಳಲ್ಲಿ ರುದ್ರಾಕ್ಷಿಗಳನ್ನು ಧರಿಸಿ ಪರಶಿವನಿಗೆ ನಮಸ್ಕರಿಸುವುದಿಲ್ಲ. ಮತ್ತು ಸಾಯಂಕಾಲದಲ್ಲಿ ಶುದ್ಧವಾದ ನೀರನ್ನಾದರೂ

ಶಿವಂ ದೃಷ್ಟ್ವಾ ಸಾಯಂ ಜಲಮಪಿ ವಿನಿಕ್ಷಿಪ್ಯ ವಿಮಲಂ
ಕಲೌ ಲಿಂಗೇ ಶಾಂಗೇ ಶಿವಪದಸರೋಜೇ ಪ್ರವಿಶತಿ ॥೮೪॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಯಮಸದಸ್ಯಸಂವಾದೇ ಪ್ರದೋಷಕಾಲಶಿವದರ್ಶನ ಪೂಜಾಮಹಿಮ
ವರ್ಣನಂ ನಾಮ ತೃತೀಯೋಽಧ್ಯಾಯಃ

ಶಿವಲಿಂಗದಮೇಲೆ ಅಭಿಷೇಕಮಾಡಿ ದರ್ಶನಮಾಡುವುದಿಲ್ಲ. ಹೀಗಾಗಿ ಯಾರೂ ಕೂಡ ಆ ಪರಮ ಶಿವನ ಚರಣ ಕಮಲಗಳನ್ನು ಸ್ಪರ್ಶಿಸದೆ ಪರಮ ಪಾಪಿಗಳೆನಿಸುವರು. ||೮೪||

ಇಲ್ಲಿಗೆ ಶ್ರೀಯುಕ್ತವಾದ "ಹರ" ಎಂಬ ಹೆಸರುಳ್ಳ ಶಿವರಹಸ್ಯದ ಮೂರನೆಯ
ಅಂಶದ ಉತ್ತರಾರ್ಧದಲ್ಲಿ ಯಮನ ಮತ್ತು ಯಮ ಸದಸ್ಯರ ಸಂವಾದದಲ್ಲಿ
ಪ್ರದೋಷಕಾಲದ ಶಿವದರ್ಶನ ಮತ್ತು ಪೂಜಾ ಮಹಿಮೆಯ ವರ್ಣನ
ವೆಂಬ ಮೂರನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಚತುರ್ಥೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತಿ ತದ್ವಚನಂ ಶ್ರುತ್ವಾ ಕಂಪಮಾನಃ ಸಭಾಸದೈಃ ।
ಪ್ರಣತಾಸ್ತಂ ಯಮಂ ವಿಪ್ರಂ ಶಿವಧ್ಯಾನಪುರಸ್ಸರಂ ||೧||

ತತಃ ಪರಂ ಸ್ವರ್ಗಲೋಕಂ ಯಮೇನಾಭ್ಯರ್ಚಿತೋ ಯಯೌ
ಸ ವಿಪ್ರಃ ಸ್ವರ್ಗಲೋಕೇಽಪಿ ಶಚೀನಾಥೇನ ಪೂಜಿತಃ ||೨||

ವಿಮಾನವರಮಾರುಹ್ಯ ಬ್ರಹ್ಮಲೋಕಂ ಯಯೌ ತತಃ ।
ಬ್ರಹ್ಮಲೋಕೇ ಯಥಾಕಾಮಮುವಾಸಾಭ್ಯರ್ಚಿತಃ ಸುರೈಃ ||೩||

---

## ನಾಲ್ಕನೆಯ ಅಧ್ಯಾಯ

ಹಾಗೆ ಹೇಳಿದ ಯಮನ ಮಾತನ್ನು ಕೇಳಿ ಅಲ್ಲಿಯ ಸಭಾಸದರೆಲ್ಲರೂ ಭಯದಿಂದ ನಡುಗುತ್ತಾ, ಶಿವಧ್ಯಾನಮಾಡುತ್ತಾ ಆ ವಿಪ್ರನಿಗೆ ನಮಸ್ಕರಿಸಿ ಸತ್ಕರಿಸಲಾರಂಭಿಸಿದರು. ||೧||

ಅನಂತರ ಆ ವಿಪ್ರನು ಯಮನಿಂದಲೂ ಪೂಜಿಸಲ್ಪಟ್ಟವನಾಗಿ ಸ್ವರ್ಗ ಲೋಕಕ್ಕೆ ಹೋದನು. ಅಲ್ಲಿ ಇಂದ್ರನೂ ಇವನನ್ನು ಬಹುವಾಗಿ ಪೂಜಿಸಿದನು.||೨||

ಅಲ್ಲಿಂದ ಸರ್ವಶ್ರೇಷ್ಠವಾದ ವಿಮಾನವನ್ನು ಹತ್ತಿ ಬ್ರಹ್ಮಲೋಕಕ್ಕೆ ಹೋದನು. ಅಲ್ಲಿಯೂ ದೇವತೆಗಳು ಈತನನ್ನು ತಮಗೆ ಮನಬಂದಂತೆ ಪೂಜಿಸಿ ಸತ್ಕರಿಸಿದರು. ||೩||

ತತಃ ಪರಂ ಸ ವಿಪ್ರಾಭೂದ್ವಿಪ್ರಾಹ್ವಾ ಭೂಸುತಃ ಸ್ವಯಂ ।
ಯೋಗಮಾರ್ಗಂ ಸಮಾಸಾದ್ಯ ವಾಮದೇವ ಇವಾಪರಃ ॥೪॥

ಗರ್ಭೇಷ್ವವಸ್ಥಿತ್ವಾ ಬಹುಧಾ ಸ್ತುತ್ವಾ ಶಂಕರಮವ್ಯಯಂ ।
ಯೋನಿಮಾರ್ಗೇಣ ಗಮನಂ ಮಾಸ್ತ್ವಿತ್ಯುಕ್ತ್ವಾ ತತಃ ಪುರಾ ॥೫॥

ತತಃ ಪರಂ ಸುರಾಸ್ಸರ್ವೇ ತಂ ದ್ವಿಜಂ ಗರ್ಭಸಂಸ್ಥಿತಂ ।
ತುಷ್ಟುವುರ್ವಿನಯಾ ನಮ್ರಾಃ ಕೃತಾಂಜಲಿಪುಟಾ ಅಪಿ ॥೬॥

ಅನೂಚಿತಃ ಪುರಾಣೋಯಂ ಪಂಥಾಸ್ತೇನೈವ ಭೂಸುರ ।
ಪ್ರವೃತ್ತಾ ಋಷಯಃ ಸಾಧ್ಯಾಃ ಸಿದ್ಧಾಸ್ಸರ್ವೇ ಸುರಾ ವಯಂ ॥೭॥

ಮಾರ್ಗಾಂತರೇಣ ಗಮನಂ ಗರ್ಭಸ್ಥಸ್ಯೋಚಿತಂ ನ ।
ತತ್ತ್ವಜ್ಞಸ್ಯ ತವಾತ್ರಾಪಿ ಗರ್ಭವಾಸೋ ನ ರೋಚತೇ ॥೮॥

ಆನಂತರ ಅಲ್ಲಿ ಆತನು ಯೋಗಮಾರ್ಗವನ್ನು ಅವಲಂಬಿಸಿ ಎರಡನೆಯ ವಾಮದೇವನೋ ಎಂಬಂತೆ ತಾನು ಬ್ರಹ್ಮಜ್ಞಾನಿಯಾದನು. ॥೪॥

ಒಂದು ಸಾರಿ ಆ ವಿಪ್ರನು ಮತ್ತೆ ಒಂದು ಗರ್ಭದಲ್ಲಿ ನೆಲಸಿ, ತಾನು ಯೋನಿಮಾರ್ಗದಿಂದ ಅವತರಿಸುವುದು ಬೇಡವೆಂದು ಶಂಕರನನ್ನು ಬಹುವಾಗಿ ಪ್ರಾರ್ಥಿಸಿಕೊಂಡನು. ॥೫॥

ಹಾಗೆ ಪ್ರಾರ್ಥಿಸುತ್ತಾ ಗರ್ಭದಲ್ಲಿರತಕ್ಕ ಆ ಬ್ರಾಹ್ಮಣನನ್ನು ದೇವತೆಗಳೆಲ್ಲರೂ ವಿನಯದಿಂದಲೂ, ನಮ್ರರಾಗಿಯೂ, ಕೈಮುಗಿದು ಹೀಗೆ ಸ್ತೋತ್ರಮಾಡಿದರು.॥೬॥

"ಎಲೈ ಬ್ರಾಹ್ಮಣೋತ್ತಮನೇ, ಈ ಅನೂಚಾನವಾದ ಮಾರ್ಗತ್ಯಾಗವು ನ್ಯಾಯವಾದುದಲ್ಲ. ಅದೇ ಮಾರ್ಗದಿಂದಲೇ ನಾವುಗಳೆಲ್ಲರೂ ಋಷಿಗಳೂ, ಸಿದ್ಧರೂ ಜನ್ಮ ತಾಳಿರುವೆವು. ॥೭॥

ಗರ್ಭದಲ್ಲಿರತಕ್ಕವರಿಗೆ ಮಾರ್ಗಾಂತರದಿಂದ ನಿರ್ಗಮನವು ಯೋಗ್ಯವಾದುದಲ್ಲ. ನೀನು ತತ್ತ್ವಜ್ಞನಾಗಿದ್ದೀಯೆ. ಆದುದರಿಂದ ನಿನಗೆ ಈ ಗರ್ಭವಾಸವು ಸರಿಹೋಗುವುದಿಲ್ಲ. ॥೮॥

ತಥಾಪಿ ಗರ್ಭವಾಸಾರ್ಥಂ ತ್ವಮಿಹಾಪ್ಯಾಗತೋಽಸಿ ಹಿ ।
ಮಾರ್ಗಾಂತರೇಣ ಗಮನೇ ಸುದುಃಖಾ ಜನನೀ ಭವೇತ್ ॥೯॥

ಯತ್ರ ಕುತ್ರಾಪ್ಯವಸ್ಥಾನಂ ಯೋಽಸ ಕೇನ ಪಥಾ ಗತಿಃ ।
ಯೋಗಿನಾಮಪಿ ಯುಕ್ತೇಽಪಿ ಕುತ್ಸಿತತ್ವಮತಿಂ ತ್ಯಜ ॥೧೦॥

ಮನುಷ್ಯರೂಪಮಾಸಾದ್ಯ ಯೋನಿಮಾರ್ಗೇಣ ನಿರ್ಗಮೇ ।
ನ ದೂಷಣಂ ಚ ಲೋಕಾನಾಂ ಸರ್ವೇಷಾಂ ಸಮಮಿತ್ಯತಃ ॥೧೧॥

ಸೃಷ್ಟಿಮಪ್ಯನ್ಯಥಾ ಕರ್ತುಂ ಶಕ್ತಿರಸ್ತ್ಯೇವ ಯದ್ಯಪಿ ।
ತಥಾಪಿ ನ ತಥಾ ಕರ್ತುಂ ಯುಕ್ತಮೇನೇತಿ ಮನ್ಯತಾಂ ॥೧೨॥

ಅತಃ ಪರಂ ಯೋನಿಮಾರ್ಗಾದಗ್ರೇ ನಿಸ್ಸರಣಂ ನ ತೇ ।
ಶರೀರಂ ಚರಮಂ ಯಸ್ಮಾತ್ತವ ಬ್ರಾಹ್ಮಣಸತ್ತಮ ॥೧೩॥

ಆದರೂ ಕೂಡ ನೀನು ಗರ್ಭದಲ್ಲಿ ವಾಸಮಾಡಲೆಂಬ ಉದ್ದೇಶದಿಂದಲೇ ಇಲ್ಲಿಗೆ ಬಂದಿರುತ್ತೀಯೆ. ಮಾರ್ಗಾಂತರದಿಂದ ನಿರ್ಗಮಮಾಡಿದಲ್ಲಿ ನಿನ್ನ ತಾಯಿಯು ದುಃಖಸಹಿತಳಾಗಿ ಕೊರಗುವಳು. ॥೯॥

ಎಲ್ಲಿಯಾದರೂ ವಾಸಮಾಡಬಹುದು. ಯಾವತರಹ ಮಾರ್ಗದಲ್ಲಿಯಾದರೂ ಸದ್ಗತಿಯನ್ನು ಸಂಪಾದಿಸಬಹುದು. ಇವುಗಳು ಯೋಗಿಗಳಿಗೆ ಯುಕ್ತವಾದುದು, ಎಂಬ ಆ ಕುತ್ಸಿತಬುದ್ಧಿಯನ್ನು ಬಿಡು. ॥೧೦॥

ಮನುಷ್ಯರ ಗರ್ಭವನ್ನು ಹೊಂದಿ ಯೋನಿಮಾರ್ಗವಾಗಿ ಹೊರಬಂದರೆ ಯಾವ ದೂಷಣೆಯೂ ಇರುವುದಿಲ್ಲ ಏಕೆಂದರೆ ಸಮಸ್ತ ಜನರಿಗೂ ಇದು ಉಚಿತ ಮಾರ್ಗವಾಗಿರುವುದು. ॥೧೧॥

ಸೃಷ್ಟಿಯನ್ನು ಬೇರೆ ವಿಧಾನದಲ್ಲಿ ಮಾಡಲು ಶಕ್ತಿಯೇನೋ ಇರುತ್ತದೆ. ಆದರೆ ಆರೀತಿ ಮಾಡುವುದು ಯೋಗ್ಯವಾದುದಲ್ಲವೆಂದು ತಿಳಿ. ॥೧೨॥

ಇಲ್ಲಿಂದ ಮುಂದೆ ನಿನಗೆ ಯೋನಿಮಾರ್ಗವಾಗಿ ಬಹಿರ್ನಿಸ್ಸರಣವಿರುವುದಿಲ್ಲ. ಇದಕ್ಕೆ ನಿನಗೆ ಈ ಜನ್ಮವೇ ಅಂತ್ಯಜನ್ಮವಾಗಿರುವುದೇ ಕಾರಣ. ॥೧೩॥

ಸಾಯಂಕಾಲೇ ತ್ವಯಾ ದೃಷ್ಟಂ ಶಿವಲಿಂಗಂ ಸಮರ್ಚಿತಂ ।
ತೇನ ಪುಣ್ಯಪ್ರಭಾವೇನ ಜ್ಞಾನಮೇವಮಭೂತ್ತವ ॥೧೪॥

ತದಿದಂ ಪುಣ್ಯಮುತ್ಕೃಷ್ಟಂ ತತ್ಪ್ರಭಾವಾತ್ತವೇದೃಶೀ ।
ಮತಿರ್ಯುಕ್ತಾ ನ ಸಂದೇಹಸ್ತತ್ಪುಣ್ಯಂ ತಾದೃಶಂ ಯತಃ ॥೧೫॥

ಶಂಕರಾನುಗ್ರಹೇಣೈವ ತತ್ಪುಣ್ಯಮಭವತ್ತವ ।
ಅನ್ಯಥಾ ತಾದೃಶಂ ಪುಣ್ಯಂ ದೇವಾನಾಮಪಿ ದುರ್ಲಭಂ ॥೧೬॥

ಶಿವಲಿಂಗಾರ್ಚನಂ ದೃಷ್ಟ್ವಾ ಸಾಯಂಕಾಲೇ ವಿಶೇಷತಃ ।
ಸ್ವಯಂ ನೃತ್ಯತಿ ಸಂತುಷ್ಟೋ ದಿವ್ಯದೇವಗಣೈಃ ಸಹ ॥೧೭॥

ಪ್ರದೋಷಸಮಯೇ ದೃಷ್ಟಂ ಶಿವಲಿಂಗಂ ಸಮರ್ಚಿತಂ ।
ಸರ್ವಕಾಮದಮಿತ್ಯಾಹುಃ ತತ್ಸತ್ಯಮಭವತ್ ಖಲು ॥೧೮॥

ನೀನು ಸಾಯಂಕಾಲದಲ್ಲಿ ಪೂಜಿಸಿದಂತಹ ಶಿವಲಿಂಗವನ್ನು ನೋಡಿದ್ದೀಯೆ. ಆ ಪುಣ್ಯಪ್ರಭಾವದಿಂದ ನಿನಗೆ ಈರೀತಿಯಾದ ಜ್ಞಾನೋದಯವಾಯಿತು. ||೧೪||

ಆ ಲಿಂಗದರ್ಶನದಿಂದುಂಟಾಗತಕ್ಕ ಪುಣ್ಯವು ಸರ್ವಶ್ರೇಷ್ಠವಾದುದರಿಂದ ನಿನಗೆ ಈತರಹ ಬುದ್ಧಿಯು ಉಂಟಾಯಿತೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ||೧೫||

ನಿನಗೆ ಶಂಕರನ ಅನುಗ್ರಹವಿರುವುದರಿಂದಲೇ ಈ ಪುಣ್ಯವು ಜನಿಸಿತು. ಇಲ್ಲದಿದ್ದರೆ ಇಂತಹ ದೇವತೆಗಳಿಗೂ ದುರ್ಲಭವಾದ ಪುಣ್ಯವು ಹೇಗೆ ತಾನೇ ಲಭಿಸುತ್ತಿತ್ತು? ||೧೬||

ಸಾಯಂಕಾಲದಲ್ಲಿ ಶಿವಲಿಂಗಕ್ಕೆ ಅರ್ಚನೆಮಾಡುವುದನ್ನು ನೋಡಿದವರು ದೇವಗಣಗಳೊಡನೆ ಸಂತುಷ್ಟರಾಗಿ ನರ್ತನಮಾಡುತ್ತಾರೆ. ||೧೭||

ಪ್ರದೋಷಸಮಯದಲ್ಲಿ ಪೂಜಿಸಿದಂತಹ ಶಿವಲಿಂಗದರ್ಶನಮಾಡುವುದು, ಸರ್ವಾಭೀಷ್ಟದಾಯಕವೆಂಬುದಾಗಿ ಹೇಳಲ್ಪಟ್ಟಿದೆ. ||೧೮||

ಸಂದಿಹಾನಃ ಶಿವಾಚಾರೇ ಪಾಪಿಷ್ಠೋ ನ ಪ್ರವರ್ತತೇ ।
ಏತಾದೃಶಂ ಮಹದ್ಭಾಗ್ಯಮಧುನಾ ದೃಷ್ಟಮದ್ಭುತಂ ॥೧೯॥

ತವ ಸ್ವರೂಪಂ ವಿಜ್ಞಾತಂ ತ್ವಯಾಽಪಿ ನ ಶಿವಾರ್ಚನಂ ।
ಕೃತಂ ಪಾಪೇನ ನೀತಾನಿ ದಿನಾನಿ ಖಲು ಸರ್ವದಾ ॥೨೦॥

ದುಷ್ಪ್ರತಿಗ್ರಹಲೋಲಸ್ತ್ವಂ ದುರಾಚಾರರತಃ ಸದಾ ।
ನ ಸ್ಮಾರ್ತಕರ್ಮನಿರತೋ ವೈದಿಕಂ ಜ್ಞಾಯತೇಽಪಿ ನ ॥೨೧॥

ನೀಚಾನ್ನಭಕ್ಷಣೇನೈವ ವಯೋ ನೀತಂ ತ್ವಯಾ ಖಲು ।
ಮದ್ಯಪಾಂಗನಯಾ ಸಾಕಂ ಬಹುಕಾಲಂ ಸ್ಥಿತಂ ತ್ವಯಾ ॥೨೨॥

ತಸ್ಯಾಮುತ್ಪಾದಿತಾಃ ಪುತ್ರಾಃ ಕನ್ಯಕಾಶ್ಚ ದುರಾತ್ಮನಾ ।
ತ್ರಿಪುಂಡ್ರಧಾರಣಂ ತಾವನ್ನ ಕೃತಂ ಶ್ರುತಿಚೋದಿತಂ ॥೨೩॥

ಪಾಪಿಷ್ಠನಾದವನು ಈಶ್ವರನ ಪೂಜಾದಿಗಳಲ್ಲಿ ಸಂದಿಗ್ಧನಾಗುವನು. ಅಂತಹವರು ಶಿವನ ವಿಷಯದಲ್ಲಿ ಭಕ್ತಿಯನ್ನೂ ಇಡುವುದಿಲ್ಲ. ಈಗಲಾದರೋ ಇಂತಹ ಮಹದ್ಭಾಗ್ಯವು ನಮಗೆ ಗೋಚರವಾಗಿರುತ್ತದೆ. ॥೧೯॥

ನೀನು ಪಾಪಿಷ್ಠನಾದರೂ ಶಿವಾರ್ಚನೆಯನ್ನು ನೋಡಿ ಯಾವಾಗಲೂ ನಿನ್ನ ಪಾಪದ ದಿನಗಳನ್ನು ಕಳೆದಿದ್ದೀಯೆ ಎಂಬುದಾಗಿ ನಾವು ನಿನ್ನ ಸ್ವರೂಪವನ್ನು ಈಗ ತಿಳಿದೆವು. ॥೨೦॥

ನೀನು ಯಾವಾಗಲೂ ದುರ್ದಾನಗಳನ್ನು ಪಡೆಯುವುದರಲ್ಲಿಯೂ ದುರ್ನಡತೆಗಳಲ್ಲಿ ನಡೆಯುವುದರಲ್ಲಿಯೂ ಆಸಕ್ತನಾಗಿದ್ದೆ. ಮತ್ತು ಸ್ಮಾರ್ತಕರ್ಮಗಳನ್ನೇ ಆಗಲಿ, ವೈದಿಕಕರ್ಮಗಳನ್ನೇ ಆಗಲಿ ನೀನು ಅನುಷ್ಠಿಸಲಿಲ್ಲ. ॥೨೧॥

ನೀನು ನಿನ್ನ ವಯಸ್ಸನ್ನೆಲ್ಲಾ ದುರಾನ್ನಭಕ್ಷಣೆಮಾಡುವುದರಲ್ಲಿಯೇ ಕಳೆದಿದ್ದೀಯೆ. ಮತ್ತು ಬಹಳ ಕಾಲದವರೆಗೂ ಮದ್ಯಪಾಯಿನಿಯಾದ ಅಂಗನೆಯೊಡನೆ ಸುಖಪಟ್ಟಿರುವೆ. ॥೨೨॥

ದುರಾತ್ಮನಾದ ನೀನು ಆ ಮದ್ಯಪಾಯಿನಿಯಾದ ಅಂಗನೆಯಲ್ಲಿ ಪುತ್ರರನ್ನೂ ಕನ್ನಿಕೆಯರನ್ನೂ ಪಡೆದಿರುವೆ. ಮತ್ತು ಶ್ರುತಿಯಲ್ಲಿ ಹೇಳಿರುವಂತೆ ತ್ರಿಪುಂಡ್ರಧಾರಣೆಯನ್ನು ಎಂದೂ ಸಹ ಮಾಡಲಿಲ್ಲ. ॥೨೩॥

ಶಿವಲಿಂಗಂ ನ ದೃಷ್ಟಂ ಚೇತ್ಸಾಯಂಕಾಲೇ ತ್ವಯಾ ತದಾ ।
ಆಕಲ್ಪಂ ಘೋರನರಕಾತ್ ಪ್ರಚ್ಯವಸ್ತು ಕಥಂ ಭವೇತ್ ॥೨೯॥

ಶಿವಾಚಾರವಿಹೀನಾನಾಂ ನರಕಾನ್ನಿರ್ಗಮಃ ಕಥಂ ।
ಪಿತ್ರಾದಿಭಿಃ ಸಹಾವಾಸೋ ನರಕೇಷ್ವೇವ ಕೋಟಿಶಃ ॥೩೦॥

ಜನ್ಮೋತ್ತರಂ ವಾ ಸತತಂ ಶಿವಮರ್ಚಯ ಸಾದರಂ ।
ಜಾತಿಸ್ಮರತ್ವಂ ಸಂಪ್ರಾಪ್ಯ ತೇನ ಪುಣ್ಯೇನ ಸತ್ವರಂ ॥೩೧॥

ತತ್ತ್ವಜ್ಞಾನಸ್ಯ ಧರ್ಮಾಣಾಂ ಯಾಗಾನಾಮಪಿ ಯತ್ಫಲಂ ।
ತತ್ಫಲಂ ಕೇವಲಂ ಮನ್ಯೇ ಶ್ರೀಮಹಾದೇವಪೂಜನಂ ॥೩೨॥

ಶಿವಾರ್ಚನೇನ ಸರ್ವೇಷಾಂ ಕಾಮಾನಾಂ ಸಿದ್ಧಿರಿತ್ಯತಃ ।
ಪ್ರಯತ್ನೈರ್ಬಹುಭಿರ್ನಿತ್ಯಂ ಕುರು ಶಂಕರಪೂಜನಂ ॥೩೩॥

ಅಂದು ಸಾಯಂಕಾಲದಲ್ಲಿ ನೀನು ಶಿವಲಿಂಗವನ್ನು ನೋಡದೇ ಇದ್ದಿದ್ದರೆ ಕಲ್ಪಾವಸಾನವಾಗುವ ವರೆಗೂ ಘೋರನರಕವು ನಿನ್ನ ಪಾಲಿಗೆ ಬರುತ್ತಿತ್ತು. ॥೨೯॥

ಈಶ್ವರನ ಧರ್ಮಾಚಾರಗಳಲ್ಲಿ ಆಸಕ್ತರಾಗದವರಿಗೆ ನರಕವು ಹೇಗೆತಾನೆ ತಪ್ಪೀತು? ಅವರಿಗೆ ಕೋಟ್ಯಂತರಕಾಲ ತಮ್ಮ ತಮ್ಮ ಪಿತೃಗಳೊಡನೆಯೂ ಸಹ ನರಕದಲ್ಲಿಯೇ ವಾಸವು ಸಿದ್ಧ. ॥೩೦॥

ಮುಂದಿನ ಜನ್ಮದಲ್ಲಿಯಾದರೂ ನೀನು ಯಾವಾಗಲೂ ಆಸಕ್ತಿಯಿಂದ ಶಿವನನ್ನು ಪೂಜಿಸು. ಆ ಪುಣ್ಯಪ್ರಭಾವದಿಂದ ನಿನಗೆ ಜನ್ಮಾಂತರಸ್ಮರಣೆಯುಂಟಾಗುವುದು. ॥೩೧॥

ತತ್ತ್ವಜ್ಞಾನಗಳನ್ನರಿಯುವುದರಿಂದಲೂ, ಯಾಗಗಳಿಂದಲೂ, ಯಾವ ಫಲವು ಲಭಿಸುವುದೋ, ಅದು ಕೇವಲ ಶ್ರೀಮಹಾದೇವನ ಅರ್ಚನೆಯಿಂದಲೇ ಬರುವುದೆಂದು ನಾವು ತಿಳಿದಿರುತ್ತೇವೆ. ॥೩೨॥

ನೀನು ಪ್ರತಿದಿನವೂ ಸಹ ಪ್ರಯತ್ನಪೂರ್ವಕವಾಗಿ ಶಿವಪೂಜೆಯನ್ನು ಮಾಡು. ಇದರಿಂದ ಸಕಲ ಇಷ್ಟಗಳೂ ಸಿದ್ಧಿಸುವುವು. ॥೩೩॥

ಭೂಪಾಲತ್ವಂ ಸಮಾಸಾದ್ಯ ನಿರ್ಮತ್ಸರೋ ಭವ ಸರ್ವಥಾ ।
ವಿಭವೈರ್ಬಹುಭಿರ್ನಿತ್ಯಂ ಶಿವಲಿಂಗಂ ಸಮರ್ಚಯ ॥೩೪॥

ಯದಿ ತತ್ರ ತವೋನ್ಮಾದಸ್ತದಾ ಕುತ್ಸಿತಯೋನಿಷು ।
ತವ ಜನ್ಮಾನ್ಯನಂತಾನಿ ಭವಿಷ್ಯಂತಿ ನ ಸಂಶಯಃ ॥೩೫॥

ಪಾಪಿಷ್ಠಾನಾಂ ಶಿವಾಚಾರೇ ನ ಬುದ್ಧಿರ್ಜಾಯತೇ ತತಃ ।
ಪ್ರಯಾಂತಿ ನರಕಂ ಘೋರಂ ಯಾವದಾಚಂದ್ರತಾರಕಂ ॥೩೬॥

ಅತೋ ಗರ್ವಂ ವಿಹಾಯಾದ್ಯ ಯೋನಿಮಾರ್ಗೇಣ ಕೇವಲಂ ।
ಭುವಂ ವ್ರಜ ಯಥಾ ಕಾಮಂ ಯಜ ಮೃತ್ಯುಂಜಯಂ ಮುಹುಃ ॥೩೭॥

ಇತಿ ದೇವವಚನಂ ಶ್ರುತ್ವಾ ತಥಾಸ್ತ್ವಿತಿ ಪುನಃ ಪುನಃ ।
ನತ್ವಾ ತಾನ್ ಪ್ರೇಷಯಾಮಾಸ ಸ್ವಕೃತಂ ಸುಕೃತಂ ಸ್ಮರನ್ ॥೩೮॥

ರಾಜತನವನ್ನು ಪಡೆದು ಮತ್ಸರಿಯಾಗಬೇಡ. ನಿನ್ನ ಸಕಲ ಐಶ್ವರ್ಯಗಳಿಂದ ಶಿವಲಿಂಗವನ್ನು ಅರ್ಚಿಸು. ನೀನು ಶಿವನ ಪ್ರೀತಿಗೆ ಪಾತ್ರನೆನಿಸುವೆ. ॥೩೪॥

ಆ ರೀತಿ ನೀನು ಮದಿಸುವುದಾದರೆ ನಿನಗೆ ಜನ್ಮಗಳು ಇನ್ನೂ ಅನೇಕವಾಗುವುದು ಮಾತ್ರವಲ್ಲದೆ, ಕುತ್ಸಿತಯೋನಿಗಳಲ್ಲಿ ಆವಿರ್ಭವಿಸಬೇಕಾಗುತ್ತದೆಂಬುದರಲ್ಲಿ ಯಾವ ಸಂಶಯವೂ ಇಲ್ಲ. ॥೩೫॥

ಪಾಪಿಗಳಾದವರಿಗೆ ಶಿವಪೂಜೆಯಲ್ಲಿ ಬುದ್ಧಿ ಹುಟ್ಟುವುದಿಲ್ಲ. ಅದರಿಂದ ಚಂದ್ರ ಮತ್ತು ನಕ್ಷತ್ರಗಳಿರುವವರೆಗೂ ಅವರು ಘೋರವಾದ ನರಕಕ್ಕೆ ಸೇರುತ್ತಾರೆ. ॥೩೬॥

ಆದ್ದರಿಂದ ನೀನು ಈ ಅಹಂಕಾರವನ್ನು ಬಿಟ್ಟು, ಕೇವಲ ಯೋನಿಮಾರ್ಗದಿಂದಲೇ ಭೂಮಿಯಲ್ಲವತರಿಸಿ ಮೃತ್ಯುಂಜಯನನ್ನು ಚೆನ್ನಾಗಿ ಅರ್ಚನೆಮಾಡು" ಎಂಬುದಾಗಿ ದೇವತೆಗಳೆಲ್ಲರೂ ಹೇಳಿದರು. ॥೩೭॥

ಒಡನೆಯೇ ಈ ಮಾತನ್ನು ಕೇಳಿ, ಆ ವಿಪ್ರನು ಹಾಗೆಯೇ ಆಗಲೆಂದು ಹೇಳಿ ಅವರನ್ನು ನಮಸ್ಕರಿಸಿ ಕಳುಹಿಸಿದನು. ಮತ್ತು ಆಗ ತನ್ನ ಪುಣ್ಯವನ್ನು ಸ್ಮರಿಸಿಕೊಂಡನು. ॥೩೮॥

ಸ ಮಾಸನವಕಂ ಸ್ಥಿತ್ವಾ ಗರ್ಭೇ ಗಿರಿಶಮರ್ಚಯನ್ ।
ಮನಸಾ ಕೇವಲಂ ಪಶ್ಚಾದ್ಯೋನಿಮಾರ್ಗಾದ್ವಿನಿರ್ಗತಃ ॥೩೯॥

ಸ ಮುಹೂರ್ತೇ ಸಮುತ್ಪನ್ನೋ ಪಿತ್ರೋರಾನಂದವರ್ಧಕಃ ।
ಬಭಾಷೇ ಶಿವ ಇತ್ಯಾದೌ ಶ್ರೀಮಹಾದೇವ ಇತ್ಯಪಿ ॥೪೦॥

ಯದಾ ತದ್ವಚನಂ ಶ್ರುತ್ವಾ ತನ್ಮಾತಾ ಕಂಪಸಂಯುತಾ ।
ತದಾ ತು ನಿಕಟೇ ಸರ್ವಾ ಕಂಪಮಾಪುಸ್ತ್ರಿಯೋ ಮುಹುಃ ॥೪೧॥

ಕಿಮದ್ಭುತಮಿದಂ ಜಾತಂ ಬಾಲಚೇಷ್ಟಾ ತು ನೇದೃಶೀ ।
ಇದಂ ಖಲು ಮಹದ್ಭೂತಮುತ್ಪನ್ನಂ ಭಯಸಾಧನಂ ॥೪೨॥

ರಾಜ್ಞೇ ನಿವೇದಯಾಮಾಸುರ್ಮಹದ್ಭೂತವಿಚೇಷ್ಟಿತಂ ।
ಇತಿ ವಿಸ್ಮಯಮಾಪನ್ನಾಸ್ತದ್ದಾಸ್ಯೋ ನೃಪಸಂನಿಧಿಂ ॥೪೩॥

ಗತ್ವಾ ತತ್ಪುತ್ರವೃತ್ತಾಂತಂ ಕೀರ್ತಯಾಮಾಸುರಾದರಾತ್ ।
ರಾಜನ್ ಕುಮಾರಃ ಸಂಭೂತೋ ಮದನಾಪರವಿಗ್ರಹಃ ॥೪೪॥

ಆ ಗರ್ಭದಲ್ಲಿಯೇ ನವಮಾಸಗಳು ವಾಸಮಾಡಿ ಅಲ್ಲಿಯೇ ಈಶ್ವರನನ್ನು ಸ್ಮರಿಸುತ್ತಾ ಅನಂತರ ಯೋನಿಮಾರ್ಗದಿಂದ ಹೊರಬಂದನು. ॥೩೯॥

ಕೊನೆಗೆ ಸುಮುಹೂರ್ತದಲ್ಲಿ, ತಾಯಿತಂದೆಯರಿಗೆ ಆನಂದವನ್ನು ಹೆಚ್ಚಿಸುತ್ತಾ ಮೊದಲು ಶಿವನೆಂದೂ, ಅನಂತರ ಶ್ರೀಮಹಾದೇವನೆಂತಲೂ ಶಿವನಾಮಗಳನ್ನು ಹೇಳುತ್ತಾ ಹುಟ್ಟಿದನು. ॥೪೦॥

ಅವನ ತಾಯಿಯು ಈ ಮಾತನ್ನು ಕೇಳಿ ನಡುಗಿದಳು. ಆಕೆಯು ಹಾಗೆ ಹೆದರುವುದನ್ನು ನೋಡಿ ಅಲ್ಲಿದ್ದ ಸ್ತ್ರೀಯರೆಲ್ಲಾ ಭಯಪಟ್ಟರು. ॥೪೧॥

ಇದೇನಿದು? ಎಂತಹ ಅದ್ಭುತವು? ಶಿಶುಗಳ ವರ್ತನೆಯು ಈರೀತಿ ಎಂದೂ ಇರುವುದಿಲ್ಲ. ಇದು ಒಂದು ಭಯಸಾಧನವಾದ ಭೂತವೇ ಅಹುದು. ॥೪೨॥

ಈ ದೊಡ್ಡ ಭೂತದ ಚೇಷ್ಟೆಯನ್ನು ರಾಜನಿಗೆ ತಿಳಿಸಬೇಕೆಂದು, ಆಶ್ಚರ್ಯಚಕಿತರಾಗಿ ರಾಜನ ಬಳಿಗೆ ದಾಸಿಯರೆಲ್ಲಾ ಬಂದರು. ॥೪೩॥

ಎಲೈ ರಾಜನೇ, ನಿನಗೆ ಮದನನಂತಿರುವ ಕುಮಾರನು ಸಂಭವಿಸಿದನು. ಎಂದು ಆರಂಭಿಸಿ ಆ ಪುತ್ರವೃತ್ತಾಂತವನ್ನು ಹೀಗೆ ಕೀರ್ತಿಸಿದರು. ॥೪೪॥

ತದ್ದೇಹತೇಜಸಾ ವ್ಯಾಪ್ತಂ ಸೂತಿಕಾಮಂದಿರಂ ನೃಪ ।
ತದ್ದೇಹಪ್ರಭಯಾ ದೀಪಾಃ ಸರ್ವೇ ಶಾಂತಾ ಇವ ಸ್ಥಿತಾಃ ॥೪೫॥

ಅನ್ಯದತ್ಯದ್ಭುತಂ ಕಿಂಚಿದುತ್ಪನ್ನೇನೈವ ಸುತೇನ ತೇ ।
ಉಚ್ಚೈಃ ಶಿವ ಮಹಾದೇವ ಮಹೇಶೇತ್ಯುಕ್ತಮಾದರಾತ್ ॥೪೬॥

ಇದಮದ್ಭುತಮಾಕರ್ಣ್ಯ ಬಾಲಕೋ ನಾಯಮಿತ್ಯಪಿ ।
ತನ್ಮಾತುರಭವದ್ಬುದ್ಧಿರಸ್ಮಾಕಮಪಿ ಸಾ ಮತಿಃ ॥೪೭॥

ಇತ್ಯುದೀರಿತಮಾಕರ್ಣ್ಯ ಸ ರಾಜಾ ವಿಸ್ಮಯಂ ಗತಃ ।
ಉತ್ಸಾಹೋಽಪಿ ಪ್ರವೃದ್ಧೋಽಭೂದ್ಭೂಪಾಲಸ್ಯ ತದಾ ಮಹಾನ್ ॥೪೮॥

ತದಾನೀಮಾಗತಸ್ತತ್ರ ನಾರದೋ ಮುನಿಪುಂಗವಃ ।
ತಮಾಗತಂ ವಿಲೋಕ್ಯಾಶು ಪೂಜಯಾಮಾಸ ಭೂಪತಿಃ ॥೪೯॥

ನಿವೇದ್ಯ ಪುತ್ರವೃತ್ತಾಂತಂ ನಾರದಾಯ ಸ ಭೂಪತಿಃ ।
ಸಂಸ್ತುತೋ ನಾರದೇನಾಸೌ ಮುಹುಃ ಪ್ರೀತಿಪುರಸ್ಸರಂ ॥೫೦॥

ಎಲೈ ರಾಜನೇ—ಆ ಸೂತಿಕಾಗೃಹವು (ಬಾಣಂತಿಯಮನೆಯು) ಆ ಕುಮಾರನ ದೇಹದ ತೇಜಸ್ಸಿನಿಂದಲೇ ಬೆಳಗುತ್ತಿದೆ. ಮತ್ತು ಆ ಕಾಂತಿಗೆ ಎಲ್ಲಾ ದೀಪಗಳೂ ಸಹ ಶಾಂತವಾದಂತಿವೆ. ||೪೫||

ನಿನ್ನ ಮಗನ ಇನ್ನೊಂದು ಅದ್ಭುತವೇನೆಂದರೆ, ಆದರಪೂರ್ವಕವಾಗಿ ಮತ್ತು ಗಟ್ಟಿಯಾಗಿ, ಶಿವ, ಮಹಾದೇವ, ಮಹೇಶ, ಎಂಬ ಶಿವನಾಮಗಳನ್ನು ಕೂಗುವನು. ||೪೬||

ಈ ಅದ್ಭುತವಾದ ಮಾತನ್ನು ಕೇಳಿದುದರಿಂದ ನಿನ್ನ ಪತ್ನಿಗೂ ಮತ್ತು ನಮಗೂ ಸಹ ಇವನು ಬಾಲಕನಲ್ಲವೆಂಬ ಬುದ್ಧಿಯುಂಟಾಗಿದೆ. ||೪೭||

ಈರೀತಿಯಾದ ದೂತಿಯರ ಮಾತನ್ನು ಕೇಳಿ ಆ ರಾಜನಿಗೆ ವಿಸ್ಮಯವೂ ಮತ್ತು ನೋಡುವ ಕುತೂಹಲವೂ ಉಂಟಾಯಿತು. ||೪೮||

ಅಷ್ಟರಲ್ಲಿ ಅಲ್ಲಿಗೆ ಋಷಿಶ್ರೇಷ್ಠನಾದ ನಾರದಮಹರ್ಷಿಯು ಬಂದನು. ಆ ಋಷಿಯನ್ನು ನೋಡಿ ರಾಜನು ಆತನನ್ನು ಭಕ್ತಿಯಿಂದ ಪೂಜಿಸಿದನು. ||೪೯||

ಮತ್ತು ರಾಜನು ತನ್ನ ಮಗನ ವೃತ್ತಾಂತವನ್ನು ನಾರದರಿಗೆ ತಿಳಿಸಿದನು

ರಾಜನ್ ತವ ಕುಮಾರಸ್ಯ ಯೋಗಾಜ್ಞಾತಾಜನಿರ್ಮಯಾ ।
ಪೂರ್ವಜನ್ಮಾರ್ಜಿತಂ ಪುಣ್ಯಂ ತಸ್ಯ ತದ್ಧಿ ಫಲಂ ಖಲು ॥೫೧॥

ಸಾಯಂಕಾಲೇ ತೇನ ದೃಷ್ಟಂ ಮನೋಜ್ಞಂ
ಬಿಲ್ವೈಃ ಪುಷ್ಪೈಃ ಪೂಜಿತಂ ಶೈವಲಿಂಗಂ ।
ಧೂಪೈರನ್ನೈರ್ದೀಪದಾನೈರನಂತೈಃ
ತತ್ವಜ್ಞೋಯಂ ತೇನ ಪುಣ್ಯೇನ ಭೂಪ ॥೫೨॥

ಪುಣ್ಯಾನ್ಯನಂತಾನ್ಯಪಿ ಸಂತಿ ಕಿಂ ತೈಃ
ಪ್ರದೋಷಕಾಲೇ ಶಿವದರ್ಶನೇನ ।
ಭವತ್ಯವಶ್ಯಂ ನೃಪ ತತ್ವವೇತ್ತಾ
ಸೌಭಾಗ್ಯಸೌಂದರ್ಯನಿಧಿಶ್ಚ ಮರ್ತ್ಯಃ ॥೫೩॥

ಆ ನಾರದನಾದರೋ ಇವನ ಅದೃಷ್ಟವನ್ನು ಹೊಗಳಿ ಬಹಳವಾಗಿ ಸ್ತೋತ್ರಮಾಡಿದನು. ॥೫೦॥

ಎಲೈ ರಾಜನೇ, ನಿನ್ನ ಮಗನ ಉತ್ಪತ್ತಿಯು ನನಗೆ ಯೋಗದೃಷ್ಟಿಯಿಂದ ತಿಳಿಯಿತು. ಅದು ಅವನ ಪೂರ್ವಜನ್ಮಾರ್ಜಿತ ಪುಣ್ಯವಿಶೇಷವೆಂದು ತಿಳಿಯಬೇಕು. ॥೫೧॥

ಈತನು ಹಿಂದಿನ ಜನ್ಮದಲ್ಲಿ ಸಾಯಂಕಾಲದಲ್ಲಿ, ಬಿಲ್ವದಳಗಳಿಂದಲೂ. ಪುಷ್ಪಗಳಿಂದಲೂ, ಧೂಪ, ದೀಪ, ಅನ್ನಾದಿಗಳಿಂದಲೂ ಪೂಜಿಸಿದ ಶಿವಲಿಂಗವನ್ನು ದರ್ಶನಮಾಡಿದನು. ಆದ್ದರಿಂದ ಈತನು ತತ್ತ್ವಜ್ಞಾನಿಯಾಗಿ ಜನ್ಮಾಂತರಸ್ಮರಣೆಯಿಂದ ಕೂಡಿ ನಿನ್ನ ಪುತ್ರನಾಗಿ ಜನಿಸಿದನು. ॥೫೨॥

ಎಲೈ ರಾಜನೇ, ಪ್ರದೋಷಕಾಲದಲ್ಲಿ ಶಿವದರ್ಶನಮಾಡುವುದಕ್ಕಿಂತಲೂ ಹೆಚ್ಚಿನ ಪುಣ್ಯಕಾರ್ಯವು ಯಾವುದೂ ಇಲ್ಲ. ಆದ್ದರಿಂದ ಯಾವ ಮನುಷ್ಯನು ಪ್ರದೋಷಕಾಲಾರ್ಚನೆಮಾಡುವನೋ, ಅಂತಹವನಿಗೆ ಸಕಲ ಸೌಭಾಗ್ಯಗಳೂ ದೊರಕುವುದಲ್ಲದೆ ಅವನು ತತ್ವಜ್ಞಾನಿಯೂ ಆಗುವನು. ॥೫೩॥

ಕಿಂ ಕೌತುಕಂ ಸೃಷ್ಟಮಿದಂ ಶಿವೇನ
ದೃಷ್ಟಂ ಪ್ರದೋಷೇ ಶಿವಲಿಂಗಮಾತ್ರಂ ।
ಸೂತೇ ಸುಖಾನಿ ಸ್ವಯಮೇಕಮೇವ
ನಾನ್ಯತ್ಪರಂ ಕಿಂಚಿದಪೇಕ್ಷಿತಂ ಚ ॥೫೪॥

ಪ್ರದೋಷಕಾಲಃ ಶಿವಸಂಮತೋಽತೋ
ಪ್ರದೋಷಕಾಲೀನಶಿವಾರ್ಚನೇನ ।
ಪ್ರಯಾಂತಿ ಶೈವಂ ಪದಮದ್ಭುತಂ ತ
ನ್ನ ಜ್ಞಾಯತೇ ಭೂಪಸುರಾದಿಭಿಶ್ಚ ॥೫೫॥

ಯಃ ಕೋಽಪಿ ಸಾಯಂ ಶಿವದರ್ಶನೇನ
ಭುಕ್ತ್ವಾ ಭೋಗಾನ್ವಿಪುಲಾನಪಾರಾನ್ ।
ಶಿವಂ ಪ್ರಯಾಂತ್ಯೇವ ವಿನಾ ಪ್ರಯತ್ನೈಃ
ಸ ಯೋಗಿನಾಮಪ್ಯತಿದುರ್ಲಭೋ ಹಿ ॥೫೬॥

ಪ್ರದೋಷಕಾಲದಲ್ಲಿ ಶಿವಲಿಂಗ ದರ್ಶನಮಾತ್ರದಿಂದ ಎಲ್ಲರಿಗೂ ಶಿವಸ್ವರೂಪವೇ ಬರುವಂತೆಯೂ, ಮತ್ತು ಅನಪೇಕ್ಷಿತವಾಗಿ ಸಕಲ ಸೌಭಾಗ್ಯಗಳೂ ಅದರಿಂದ ಒದಗುವಂತೆಯೂ ಮಾಡಿ ಶಿವನು ಎಂತಹ ಕೌತುಕವನ್ನು ಸೃಷ್ಟಿಸಿದ್ದಾನೆ. ॥೫೪॥

ಎಲೈ ರಾಜನೇ, ಪ್ರದೋಷಕಾಲವು ಈಶ್ವರನಿಗೆ ಅತ್ಯಂತಪ್ರಿಯವಾದುದು. ಆ ಕಾಲದಲ್ಲಿ ಅವನನ್ನು ಪೂಜೆಮಾಡುವುದರಿಂದ ಅವನ ಭಕ್ತರು ಅದ್ಭುತವಾಗಿರುವ ಸಾಕ್ಷಾತ್ ಶಿವಪದವಿಯನ್ನೇ ಹೊಂದುತ್ತಾರೆಂಬ ಆ ವಿಷಯವು ದೇವತೆಗಳಿಗೂ ಸಹ ತಿಳಿದಿಲ್ಲ. ॥೫೫॥

ಯಾವ ಮನುಷ್ಯನು ಸಾಯಂಕಾಲದಲ್ಲಿ ಶಿವದರ್ಶನಮಾಡುತ್ತಾನೆಯೋ, ಅಂತಹವನಿಗೆ ಅತಿಶಯವಾಗಿಯೂ, ಅಪಾರಗಳಾಗಿಯೂ ಇರತಕ್ಕ ಭೋಗಸಾಮಗ್ರಿಗಳು ಒದಗುತ್ತವೆ. ಮತ್ತು ಅವನ್ನೆಲ್ಲಾ ಆತನು ಅನುಭವಿಸಿ ಯಾವ ಪ್ರಯತ್ನವೂ ಇಲ್ಲದೆ ಶಿವಸಾಯುಜ್ಯವನ್ನು ಹೊಂದುತ್ತಾನೆ. ಆ ಶಿವನು ಎಂತೆಂತಹ ಯೋಗಿಗಳಿಗೂ ಕೂಡ ಸುಲಭನಾಗಿ ಸಿಕ್ಕಲಾರನು. ॥೫೬॥

ಸ ಯೋಗವಾರ್ತಾಂ ನ ಕರೋತಿ ಶಂಭು
ರ್ನ ಯಾಗವಾರ್ತಾಮಪಿ ದಾನವಾರ್ತಾಂ ।
ಪರಂತು ಸಾಯಂ ಶಿವಪೂಜಕಾನಾಂ
ಕರೋತಿ ವಾರ್ತಾಂ ಗಿರಿಜಾಸಮೇತಃ ॥೫೭॥

ಪ್ರದೋಷಕಾಲೇ ಸಮುಪಾಗತೋಽದ್ಯ
ಪುಷ್ಪಂ ಗೃಹೀತ್ವಾ ಕಮಲಂ ಗೃಹೀತ್ವಾ ।
ಸಬಿಲ್ವಮಾದಾಯ ಜಲಂ ಗೃಹೀತ್ವಾ
ಸಭೂತಿಮಾದಾಯ ತಿಲಾಕ್ಷತಾದೀನ್ ॥೫೮॥

ಸಧೂಪಮಾದಾಯ ಸಮಾಗತೋಽದ್ಯ
ದೀಪಂ ಸಮಾದಾಯ ಫಲಂ ಗೃಹೀತ್ವಾ ।
ತಾಂಬೂಲಮಾದಾಯ ಸ ಸಾಯಮಾಪ
ಲಿಂಗಾರ್ಚನಾಸಕ್ತಮತಿರ್ಭವಾನಿ ॥೫೯॥

ನಿರೀಕ್ಷಿತಂ ತೇನ ಮಹಾಪ್ರದೋಷೇ
ಬಿಲ್ವಾರ್ಚಿತಂ ಲಿಂಗಮನುತ್ತಮಂ ಮೇ ।
ಪ್ರದಕ್ಷಿಣೇನ ಪ್ರಣತಂ ಚ ತೇನ
ಧ್ಯಾತಂ ಚ ತೇನ ಕ್ಷಣಮಾಸ್ತಿಕೇನ ॥೬೦॥

ಆ ಪಾರ್ವತೀಸಮೇತನಾಗಿರತಕ್ಕ ಈಶ್ವರನು ಮನುಷ್ಯನ, ಯೋಗ, ಯಾಗ, ದಾನ, ಇತ್ಯಾದಿ ಯಾವ ಕರ್ಮಗಳಿಂದಲೂ ಸುಲಭವಾಗಿ ದೊರೆಯುವವನಲ್ಲ. ಆದರೆ ಶಿವಪೂಜಕರ ಮಾತನ್ನು ಮಾತ್ರ ಆಲಿಸಿ, ಲಾಲಿಸಿ ಪಾಲಿಸುವನು. ಅಲ್ಲದೆ ತಾನು ಪಾರ್ವತಿಯೊಡಗೂಡಿ, ಪ್ರದೋಷಕಾಲದಲ್ಲಿ ತನ್ನನ್ನು ಅರ್ಚಿಸುವವರ ವಿಷಯವಾಗಿ ಹೀಗೆ ಮಾತಾಡುವನು. ||೫೭||

" ದೇವಿಯೇ, ಈ ಆಸ್ತಿಕನಾದ ಮನುಜನು ಪ್ರದೋಷಕಾಲದಲ್ಲಿ ಹೂವು, ಕಮಲ, ಬಿಲ್ವಸಹಿತವಾದ ಜಲ, ವಿಭೂತಿ, ತಿಲಾಕ್ಷತೆ, ಧೂಪ, ದೀಪ, ತಾಂಬೂಲ, ಇತ್ಯಾದಿಗಳನ್ನೆಲ್ಲಾ ಸಿದ್ಧಪಡಿಸಿಕೊಂಡು ಲಿಂಗಾರ್ಚನೆಯನ್ನು ಮಾಡಬೇಕೆಂಬ ಆಸ್ತಿಕ ಬುದ್ಧಿಯಿಂದ ಮಹಾಪ್ರದೋಷಬರುವವರೆಗೂ ನಿರೀಕ್ಷಿಸಿ, ಸರ್ವಶ್ರೇಷ್ಠವಾದ

ವಿಭೂತಿಪೂತೇನ ವಿಲೋಕಿತಂ ಚ
ಪುನಃ ಪುನರ್ಲಿಂಗಮನುಸ್ಮೃತಂ ಚ ।
ರುದ್ರಾಕ್ಷಮಾಲಾಚ್ಛವಿಭೂಷಣೇನ
ಪುನಃ ಪುನಸ್ತತ್ಪ್ರಣತಂ ಚ ಲಿಂಗಂ ॥೬೧॥

ತಾಂಬೂಲಮಾದಾಯ ನಿವೇದಿತಂ ಚ
ದ್ರಾಕ್ಷಾಫಲಂ ತೇನ ನಿವೇದಿತಂ ಚ ।
ತೇನಾರ್ಪಿತಾನಿ ಸತ್ಕದಲೀಫಲಾನಿ
ಪ್ರದೋಷಕಾಲೇ ಶಿವಲಿಂಗಮೂರ್ಧ್ನಿ ॥೬೨॥

ತೇನಾಮ್ರಪಕ್ವೋರುಫಲಾನಿ ತಾನಿ
ದತ್ತಾನಿ ಲಿಂಗೋಪರಿ ಕೇನ ದತ್ತಂ ।
ದುಕೂಲಮತ್ಯುಜ್ವಲಮಾಯತಂ ಚ
ತದೇವ ತಾವದ್ವಿಪುಲಂ ಮನೋಜ್ಞಂ ॥೬೩॥

ನನ್ನ ಶಿವಲಿಂಗವನ್ನು ಬಿಲ್ವಾದಿಗಳಿಂದ ಅರ್ಚನೆಮಾಡಿ ಪ್ರದಕ್ಷಿಣ ನಮಸ್ಕಾರ ಮಾಡಿ ಒಂದು ಕ್ಷಣಕಾಲ ಧ್ಯಾನಿಸುತ್ತಿರುವನು. ಪದೇ ಪದೇ ದರ್ಶನಮಾಡಿ ಆನಂದಪಡುತ್ತಿರುವನು. ಭಕ್ತಿಪರವಶನಾಗಿ ಭಾವಾವೇಶಗೊಳ್ಳುತ್ತಿರುವನು. ॥೫೮-೬೦॥

ವಿಭೂತ್ಯಾದಿಧಾರಣೆಗಳಿಂದ ಪವಿತ್ರನಾಗಿ ಶಿವಲಿಂಗವನ್ನು ನೋಡಿ ನೋಡಿ, ಶಿವಧ್ಯಾನಮಾಡುತ್ತಿರುವನು. ರುದ್ರಾಕ್ಷಮಾಲೆಯ ಆಭರಣವನ್ನು ಧರಿಸಿ ಬಾರಿ ಬಾರಿಗೂ ಶಿವಲಿಂಗಕ್ಕೆ ನಮಸ್ಕರಿಸುತ್ತಿರುವನು. ॥೬೧॥

ಪ್ರದೋಷಕಾಲದಲ್ಲಿ ಶಿವಲಿಂಗಕ್ಕೆ ತಾಂಬೂಲ, ದ್ರಾಕ್ಷಾಫಲ, ಬಾಳೆಹಣ್ಣು ಇವುಗಳನ್ನು ನಿವೇದಿಸುತ್ತಿರುವನು. ದಿವ್ಯವಾದ ಬಾಳೆಹಣ್ಣನ್ನು ಶಿವಪ್ರೀತ್ಯರ್ಥವಾಗಿ ಶಿವಲಿಂಗದ ಮೇಲಿಡುತ್ತಿರುವನು. ॥೬೨॥

ಪಕ್ವಗಳಾದ ಮಾವಿನಹಣ್ಣುಗಳನ್ನು ಶಿವಲಿಂಗಕ್ಕೆ ಅರ್ಪಿಸುತ್ತಿರುವನು. ಮತ್ತು ಬಹಳ ಲಕ್ಷಣವಾಗಿಯೂ, ಮನೋಹರವಾಗಿಯೂ ಇರುವ ಪಟ್ಟೆವಸ್ತ್ರಗಳನ್ನು ಧರಿಸುತ್ತಿರುವನು. ॥೬೩॥

ಕ್ಷೀರಪ್ರವಾಹೈರಭಿಷಿಕ್ತಮದ್ಯ
ಪ್ರದೋಷಕಾಲೇ ಸುದಧಿಪ್ರವಾಹೈಃ ।
ಘೃತಪ್ರವಾಹೈಶ್ಚ ಮಧುಪ್ರವಾಹೈಃ
ಸುಶರ್ಕರಾರಾಶಿಭಿರರ್ಚಿತಂ ಚ ॥೬೪॥

ಮಂದಾರಮಾಲಾಸಮಲಂಕೃತಂ ಚ
ಲಿಂಗಂ ಮದೀಯಂ ಘನಚಂದನೇನ ।
ಕಸ್ತೂರಿಕಾಕರ್ದಮಸಂಯುತೇನ
ಪ್ರದೋಷಕಾಲೇ ಖಲು ಶಾಂಭವೇನ ॥೬೫॥

ಸುಶರ್ಕರಾಸಘೃತಯುಕ್ತಕುಂಭಂ
ಕ್ಷೀರಾನ್ನಮೇಕೇನ ನಿವೇದಿತಂ ಮೇ ।
ಅಪೂಪರಾಶಿಶ್ಚ ಸಮರ್ಪಿತೋ ಮೇ ।
ಮಹಾಪ್ರದೋಷೇ ಖಲು ಶಾಂಭವೇನ ॥೬೬॥

ಅನೇನ ರತ್ನಾಭರಣಾನಿ ದತ್ತಾನ್ಯ
ನೇನ ದತ್ತಾ ಖಲು ಬಿಲ್ವಮಾಲಾ ।

ಪ್ರದೋಷಕಾಲದಲ್ಲಿ ಈತನು ದಿವ್ಯವಾದ ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ ಮುಂತಾದ ಪಂಚಾಮೃತದ್ರವ್ಯಗಳಿಂದ ನನ್ನ ಶಿವಲಿಂಗಕ್ಕೆ ಧಾರಾಕಾರವಾಗಿ ಅಭಿಷೇಕಮಾಡುತ್ತಿರುವನು. ॥೬೪॥

ನನ್ನ ಭಕ್ತನಾದ ಈತನು ಪ್ರದೋಷಕಾಲದಲ್ಲಿ ಶಿವಲಿಂಗವನ್ನು ಮಂದಾರ ಪುಷ್ಪದಮಾಲೆಗಳಿಂದಲೂ, ಸಾಂದ್ರವಾದ ಚಂದನಗಂಧದ ಲೇಪನದಿಂದಲೂ, ಅಲಂಕರಿಸುತ್ತಿರುವನು. ॥೬೫॥

ಮಹಾಪ್ರದೋಷಕಾಲದಲ್ಲಿ ನನ್ನ ಭಕ್ತನಾದವನು ನನಗೆ ಸಕ್ಕರೆ ಮತ್ತು ತುಪ್ಪದ ಗಡಿಗೆಗಳನ್ನೂ, ಕ್ಷೀರಾನ್ನವನ್ನೂ ಅಪೂಪದರಾಶಿಯನ್ನೂ ಸಹ ನಿವೇದಿಸುವನು. ॥೬೬॥

ಈತನು ಪ್ರದೋಷಕಾಲದಲ್ಲಿ ರತ್ನದ ಆಭರಣಗಳನ್ನೂ, ಬಿಲ್ವಮಾಲೆ

ಪ್ರದೋಷಕಾಲೇ ಮುಹುರಾದರೇಣ
ಸ್ಪೃಷ್ಟಂ ಚ ಲಿಂಗಂ ಮಮ ಶಾಂಭವೇನ ॥೬೭॥

ಅಯಂ ಚ ಹಸ್ತೋ ಭಗವಾನಯಂ ಮೇ
ಪುಣ್ಯಸ್ವಭಾವೋ ಭಗವತ್ತರೋ ಮೇ ।
ಅಯಂಹಿ ಹಸ್ತಃ ಖಲು ವಿಶ್ವಭೇಷಜೋ
ಯಸ್ಮಾದಯಂ ಮೇಽದ್ಯ ಶಿವಾಭಿಮರ್ಶನಂ ॥೬೮॥

ಅನೇನ ಭುಕ್ತಂ ನ ದಿವಾ ಭವಾನಿ
ಜಲಂ ನ ಪೀತಂ ಫಲಭಕ್ಷಣಂ ಚ ।
ಕೃತಂ ನ ತಾಂಬೂಲಮಪಿ ಪ್ರದೋಷೇ
ತ್ಯಕ್ತ್ವಾ ಶಿವಾರಾಧನಮಾದರೇಣ ॥೬೯॥

ಏತೇ ಮದೀಯಾಃ ಸಿತಭಸ್ಮಪೂತಾಃ
ಪ್ರದೋಷಕಾಲೇ ಶಿವಪೂಜನಾಯ ।
ಕೃತಪ್ರಯತ್ನಾಃ ಶಿವನಾಮಪೂತಾಃ
ಪ್ರಕೃಷ್ಟರುದ್ರಾಕ್ಷವಿಭೂಷಿತಾಂಗಾಃ ॥೭೦॥

ಯನ್ನೂ ಸಹ ಸಮರ್ಪಿಸಿ, ಬಾರಿಬಾರಿಗೂ ಪ್ರೀತಿಯಿಂದ ಸ್ಪರ್ಶಮಾಡುತ್ತಿರುವನು. ॥೬೭॥

ಶಿವಲಿಂಗವನ್ನು ಸ್ಪರ್ಶಮಾಡಿದ ಈತನು ತನ್ನ ಹಸ್ತವು ಷಡ್ಗುಣೈಶ್ವರ್ಯ ಸಂಪನ್ನವಾದುದುದೆಂದೂ, ಪ್ರಪಂಚವನ್ನೇ ಅದು ಉದ್ಧರಿಸುವುದೆಂದೂ ಭಾವಿಸಿ ಆನಂದಪಡುವನು. ॥೬೮॥

ಎಲೌ ಪಾರ್ವತಿಯೇ, ಈತನು ಪ್ರದೋಷಕಾಲದಲ್ಲಿ ಶಿವಾರಾಧನೆಯನ್ನು ಬಿಟ್ಟು, ಹಗಲಿನಲ್ಲಿ ಊಟಮಾಡಲಿಲ್ಲ. ನೀರನ್ನೂ ಸಹ ಕುಡಿಯಲಿಲ್ಲ. ಫಲಗಳನ್ನಾದರೂ ತಿನ್ನಲಿಲ್ಲ. ತಾಂಬೂಲಚರ್ವಣವನ್ನು ಸಹ ಮಾಡಲಿಲ್ಲ. ॥೬೯॥

ಇವರು ಪ್ರದೋಷಕಾಲದಲ್ಲಿ ಶಿವಪೂಜೆಮಾಡಬೇಕೆಂಬ ಅಭಿಲಾಷೆಯಿಂದ ಉತ್ತಮಗಳಾದ ರುದ್ರಾಕ್ಷಗಳಿಂದಲೂ, ಸಿತಭಸ್ಮದಿಂದಲೂ ತಮ್ಮ ಅಂಗಗಳನ್ನು ಅಲಂಕರಿಸಿ ಪ್ರಯತ್ನಪೂರ್ವಕವಾಗಿ ಪವಿತ್ರಗಳಾದ ಶಿವನಾಮವನ್ನು ಗಾನಮಾಡುತ್ತಿರುವರು. ॥೭೦॥

ಪ್ರದೋಷಕಾಲೀನಶಿವಾರ್ಚನೇನ
ಭುಕ್ತ್ವೈವ ಭೋಗಾನ್ವಿಪುಲಾನಪಾರಾನ್ ।
ಸ್ಥಾಸ್ಯಂತಿ ಸರ್ವೇಽಪಿ ಮಮೈವ ಪಾರ್ಶ್ವೇ
ಮತ್ಪೂಜನಪ್ರಾಪ್ತಮಹೋತ್ಸವಾಸ್ತು ॥೨೦॥

ಏತೇ ವಿಮಾನಾನಿ ಮನೋಹರಾಣಿ
ಪ್ರಾಪ್ಯಾಂತಕಾರಾಧಿತಪಾದಪದ್ಮಾಃ ।
ವಿಧೀಂದ್ರನಾರಾಯಣಪೂಜಿತಾಶ್ಚ
ಸ್ಥಾಸ್ಯಂತಿ ಮತ್ಪಾದನಖಪ್ರಭಾಭಿಃ ॥೨೧॥

ಧನ್ಯಾಃ ಪ್ರದೋಷೇಷು ಶಿವಾರ್ಚಕಾಸ್ತೇ
ಸರ್ವೇ ಮಮೈವಾಪರನಿಗ್ರಹಾಸ್ತೇ ।
ತೇಷಾಂ ಪರಂ ಪಾದರಜೋ ಯಮೋಽಪಿ
ಧತ್ತೇ ಶಿರಸ್ಯೇವ ತಥೈವ ವಿಪ್ರಾಃ ॥೨೨॥

ಯಾವ ಮನುಷ್ಯರು ಪ್ರದೋಷಕಾಲದಲ್ಲಿ ಶಿವಾರ್ಚನೆಯನ್ನು ಮಾಡುತ್ತಾರೆಯೋ ಅಂತಹವರು ಸಕಲ ಸಂಪತ್ತುಗಳನ್ನೂ ಅನುಭವಿಸಿ, ಅನಂತರ ಆನಂದಮಯರಾಗಿ ನನ್ನ ಸನ್ನಿಧಿಯಲ್ಲಿಯೇ ಇರುವರು. ॥೨೦॥

ಕೊನೆಯಲ್ಲಿ ಇವರು ಮನೋಹರಗಳಾದ ವಿಮಾನಗಳನ್ನು ಹತ್ತಿ, ಯಮನ ಬಳಿಗೆಹೋಗಿ, ಅಲ್ಲಿ ಯಮನಿಂದ ಪೂಜಿತನಾಗಿ, ಬ್ರಹ್ಮ, ನಾರಾಯಣ, ಇಂದ್ರ ಇತ್ಯಾದಿದೇವತೆಗಳಿಂದ ಗೌರವಿಸಲ್ಪಟ್ಟು ನನ್ನ ಕಾಲುಗುರುಗಳ ತೇಜಸ್ಸಿನಿಂದ ಕೂಡಿದವರಾಗುವರು. ॥೨೧॥

ಪ್ರದೋಷಕಾಲದಲ್ಲಿ ಶಿವಾರ್ಚನೆಯನ್ನು ಮಾಡತಕ್ಕವರು ಧನ್ಯರು. ಅವರು ನನ್ನ ಬೇರೊಂದು ಶರೀರವೋ ಎಂಬಂತೆ ಕಾಣುತ್ತಾರೆ. ಬ್ರಾಹ್ಮಣರೂ ಯಮನೇ ಮೊದಲಾದ ದೇವತೆಗಳೂ ನನ್ನ ಭಕ್ತರ ಪಾದ ರಜಸ್ಸನ್ನು ಶಿರಸ್ಸಿನಲ್ಲಿ ಧರಿಸುತ್ತಾರೆ. ॥೨೨॥

ಪ್ರದೋಷಕಾಲೇಶಿವಾರ್ಚನಾಯ
ಮತಿಃ ಶಿವೇ ಸ್ಯಾನ್ಮದನುಗ್ರಹೇಣ ।
ಅಘೋರಸಂಸಾರವಿಕಾರಸಾಗರಃ
ಪುನರ್ನ ದುಃಖಾನಿ ತಯಾ ಭವಂತಿ ॥೭೪॥

ತಾವನ್ಮಹಾಪಾಪಭಯಂ ಭವಾನಿ
ಯಾವನ್ನ ಪೂಜಾಂ ರಜನೀಮುಖೇಷು ।
ಕರೋತಿ ಲಿಂಗೇ ಸಿತಭಸ್ಮಲಿಪ್ತಃ
ತ್ರಿಪುಂಡ್ರರುದ್ರಾಕ್ಷವಿಭೂಷಣಸ್ಸನ್ ॥೭೫॥

ಪೂಜಾಂ ಕೋಽಪಿ ಮಹಾಪ್ರದೋಷಸಮಯೇ ಕೃತ್ವಾ ವಿಭೂತಿಪ್ರಭಾ
ರುದ್ರಾಕ್ಷಾಭರಣಪ್ರಭಾಪರಿವೃತೋ ಲಿಂಗೇ ಜಲೈರ್ವಾ ಫಲೈಃ ।
ಬಿಲ್ವೈರ್ವಾ ನವಕಂಟಕಾರಿಕುಸುಮೈಃ ದೂರ್ವಾಂಕುರೈರ್ವಾ ಶಿವೇ
ಭೂಪಾಲತ್ವಮವಾಪ್ಯ ಮತ್ಪದರಜಃಪುಂಜೇನ ಸಂಕ್ರೀಡತಿ ॥೭೬॥

ಪ್ರದೋಷಕಾಲದಲ್ಲಿ ಶಿವನನ್ನು ಪೂಜಿಸಬೇಕೆಂಬ ಬುದ್ಧಿಯೂ ಸಹ ನನ್ನ ಅನುಗ್ರಹದಿಂದಲೇ ಉಂಟಾಗುತ್ತದೆ. ಆ ಬುದ್ಧಿಯಿಂದ ಬಾರಿಬಾರಿಗೂ ದುಃಖಗಳು ಉಂಟಾಗಲಾರವು. ಮತ್ತು, ಕಠಿಣವಾದ ಸಂಸಾರವೆಂಬ ಸಾಗರವನ್ನು ನಾಶಮಾಡುವಂತಹ ಸ್ಥಾನವನ್ನು ಸಹ ಪಡೆಯುತ್ತಾರೆ. ॥೭೪॥

ಮನುಷ್ಯನು ತ್ರಿಪುಂಡ್ರ, ರುದ್ರಾಕ್ಷ, ಸಿತಭಸ್ಮ ಇವುಗಳನ್ನು ಧರಿಸಿ ಪ್ರದೋಷ ಕಾಲದಲ್ಲಿ ಶಿವಾರ್ಚನೆಯನ್ನು ಎಲ್ಲಿಯವರೆಗೆ ಮಾಡುವುದಿಲ್ಲವೋ, ಅಲ್ಲಿಯ ವರೆಗೂ ಮಹಾಪಾತಕಗಳ ಭಯವು ಆತನಿಗೆ ತಪ್ಪದು. ॥೭೫॥

ಪಾರ್ವತಿಯೇ ಮಹಾಪ್ರದೋಷ ಸಮಯದಲ್ಲಿ, ವಿಭೂತಿಯನ್ನು ಹಚ್ಚಿ, ರುದ್ರಾಕ್ಷಾಭರಣವನ್ನು ಧರಿಸಿ, ಶಿವಲಿಂಗವನ್ನು, ಜಲ, ಫಲ, ಬಿಲ್ವ, ಹೊಸದಾಗಿರ ತಕ್ಕ ಕಂಟಕಾರಿ ಕುಸುಮ, ದುರ್ವಾಂಕುರ, ಇವುಗಳಿಂದ ಪೂಜಿಸಿದುದೇ ಆದರೆ ಅಂತಹವನು ರಾಜನಾಗಿ ಪುನಃ ಪುನಃ ನನ್ನನ್ನು ಪೂಜಿಸಿ ನನ್ನ ಪಾದಸೇವೆಯ ಫಲವನ್ನು ಪೂರ್ಣವಾಗಿ ಪಡೆಯುವನು. ॥೭೬॥

ಕೋ ವಾ ತೇನ ಸಮಃಪ್ರದೋಷಸಮಯೇ ಯೇನಾಹಮಭ್ಯರ್ಚಿತೋ
ಬಿಲ್ವೀಪಲ್ಲವಮಾಲಯಾ ಜಲಲವೈಃ ಶ್ರೌತೇನ ವಾ ಭಸ್ಮನಾ ।
ಉತ್ಫುಲ್ಲೈಃ ಕರವೀರಚಂಪಕಮಹಾಮಲ್ಲೀಪ್ರಸೂನೈಃ ಶಿವೇ
ತತ್ಪಾದಾಂಬುಜರೇಣುಭಿರ್ಮುಹುರಹೋ ನಾರಾಯಣಃ ಪೂಜಿತಃ ॥೭೭॥

ಆಜನ್ಮಾಖಿಲಕಂಠಶೋಷಣಕರೈಃ ಕಿಂ ವೇದಪಾರಾಯಣೈಃ
ಕಿಂ ದಾನೈಃ ಧನಧಾನ್ಯನಾಶನಕರೈಃ ಕನ್ಯಾಪ್ರದಾನೈರಪೀ ।
ಕಿಂ ಚೋತ್ತುಂಗತರಂಗದಂತಿನಿಕರಾರಬ್ಧಪ್ರದಾನೈಃ ಶಿವೆ
ಸಾಯಂಕಾಲಶಿವಾರ್ಚನಾರ್ಜಿತಫಲಾಭಾವೇನ ಮುಕ್ತಿರ್ಯತಃ ॥೭೮॥

ಕ್ಷೀಣಾಸ್ಯಾತ್ತನುರೇವ ಘೋರತಪಸಾ ದಾನೈರ್ಧನಂ ನಶ್ಯತಿ
ವ್ಯರ್ಥಂ ಚಾರುರಪಿ ಪ್ರಯಾತಿ ಗಿರಿಜೇ ಲಿಂಗಾರ್ಚನಂ ತನ್ನ ಚೇತ್ ।
ತೇನೈವಾಖಿಲಭಾಗ್ಯಭೋಗವಿಭವೇ ಭೂಮಂಡಲೇ ಜಾಯತೇ
ಪಶ್ಚಾನ್ಮುಕ್ತಿರಪೀತಿ ತೇನ ಸದೃಶಂ ಧರ್ಮಂ ನ ಜಾನೇ ಧ್ರುವಂ ॥೭೯॥

ಯಾವ ಮನುಷ್ಯನು ನನ್ನನ್ನು ಚಿಗುರಿದ ಬಿಲ್ವಗಳ ಮಾಲೆಯಿಂದಲೂ, ಪರಿಶುದ್ಧವಾದ ಭಸ್ಮದಿಂದಲೂ, ಅರಳಿರತಕ್ಕ, ಕಣಿಗಲೆ, ಸಂಪಿಗೆ, ಮಲ್ಲಿಗೆ, ಇಂತಹ ಪುಷ್ಪಗಳಿಂದಲೂ, ಪೂಜಿಸುವನೋ ಅವನೇ ಧನ್ಯನು. ಯಾರೂ ಇಲ್ಲ. ಅವನ ಪಾದಧೂಳಿಯನ್ನು ನಾರಾಯಣನೂ ಸಹ ಗೌರವಿಸುವನು. ||೭೭||

ಜನ್ಮಾವಧಿ ವೃಥಾ ಕಂಠಗಳನ್ನು ಶೋಷಿಸತಕ್ಕ ವೇದಪಾರಾಯಣಗಳಿಂದಾಗಲೀ ತನ್ನ ಐಶ್ವರ್ಯಗಳನ್ನೆಲ್ಲಾ ನಾಶವಾಡತಕ್ಕ ಧರ್ಮಗಳಿಂದಾಗಲಿ, ಕನ್ಯಾದಾನವೇ ಮೊದಲಾದ ಮಹಾಮಹಾದಾನಗಳಿಂದಾಗಲಿ ಯಾವ ಪ್ರಯೋಜನವೂ ಇಲ್ಲ. ಏತಕ್ಕೆಂದರೆ ಸಾಯಂಕಾಲದಲ್ಲಿ ಶಿವಾರ್ಚನೆಮಾಡಿ ಸಂಪಾದನೆ ಮಾಡಿದ ಫಲವಿಲ್ಲದಿದ್ದರೆ ಮುಕ್ತಿಯು ಖಂಡಿತ ಲಭಿಸಲಾರದು. ||೭೮||

ಘೋರವಾದ ತಪಸ್ಸಿನಿಂದ ಶರೀರವು ಕ್ಷಿಣವಾಗುತ್ತದೆ. ದಾನಾದಿಗಳಿಂದ ಐಶ್ವರ್ಯವೆಲ್ಲಾ ವ್ಯರ್ಥವಾಗಿ ಹಾಳಾಗುತ್ತದೆ. ಲಿಂಗಾರ್ಚನದಿಂದಲಾದರೋ ಇವು ಯಾವುವೂ ಇಲ್ಲದೆ ಐಹಿಕವಾದ ಸಕಲ ಭೋಗಗಳೂ ಲಭಿಸಿ ಅನಂತರ ಮೋಕ್ಷವೂ ದೊರಕುತ್ತದೆ. ಆದ್ದರಿಂದ ಇದಕ್ಕೆ ಸದೃಶವಾದ ಧರ್ಮವು ಮತ್ತೊಂದಿಲ್ಲ. ||೭೯||

ಸ್ವರ್ಗಃ ಕೇವಲಮಂಗಜಾತಸಹಿತಾದ್ಯಾತ್ಸ ನಷ್ಯಂಗತೋ
ವ್ಯಂಗಂ ಲಿಂಗಸಮರ್ಚನಂ ಜಲಲವೈಃ ಬಿಲ್ವೀದಲೈರ್ವಾ ಕೃತಂ ।
ತೇನಾಪಾರಸುರಾನತೋಽತಿವಿಭವಃ ಸ್ವರ್ಗಾಪವರ್ಗಪ್ರದಂ
ಲಿಂಗಾರಾಧನಮೇವ ತೇನ ಸದೃಶೋ ಧರ್ಮೋ ನ ಲೋಕತ್ರಯೇ ॥೮೦॥

ಚಿತ್ತಂ ಯಸ್ಯ ನಲಿಂಗಪೂಜನರತಂ ತಜ್ಜನ್ಮ ತಾವನ್ಮತಂ
ವ್ಯರ್ಥಂ ತಜ್ಜನನೀ ವಯಸ್ತರುವರಚ್ಛೇದೇ ಕುಠಾರಸ್ಸ ತು ।
ತದ್ವಾರ್ತಾಪ್ಯಘಸಾಧನಾಯ ಗಿರಿಜೇ ಲಿಂಗಾರ್ಚಕಾರಾಧಕೋ
ಯಸ್ತಸ್ಯಾನುಚರೋಽಪಿ ಸೋಽಪಿ ಹಿ ಮಹಾನ್ ಕಾಲಾದ್ಭಯಂ ಕಸ್ಯ ನ
॥೮೧॥

ತಜ್ಜನ್ಮಾತಿಮನೋಹರಂ ಸುಖಕರಂ ಮನ್ಯೇತಿ ಮಾನ್ಯೇ ಶಿವೇ
ಯಃ ಸಾಯಂ ಶಿವಪೂಜನೋದ್ಯತಮತಿರ್ಮಧ್ಯಾಹ್ನಕಾಲೇ ಪ್ರಗೇ ।

ಯಾಗಾದಿಕರ್ಮಗಳನ್ನು ಸಾಂಗವಾಗಿ ಮಾಡಿದರೆ ಮಾತ್ರ ಸ್ವರ್ಗವು ಲಭಿಸಬಹುದು. ಅಂಗಕರ್ಮಗಳು ಲುಪ್ತವಾದರೆ ಕರ್ಮವೇ ಕೆಡುವುದು. ಲಿಂಗಪೂಜೆಗೆ ಯಾವ ಅಂಗಕರ್ಮಗಳು ಇಲ್ಲ. ಇದರ ಆಚರಣೆಯಿಂದ ಅಪಾರ ಗಳಾದ ಸುಖಸಂಪತ್ತುಗಳೂ ಲಭಿಸುವುವಲ್ಲದೆ ನಾಶರಹಿತವಾದ ಮೋಕ್ಷಪ್ರಾಪ್ತಿ ಯೊದಗುವುದು. ಇದಕ್ಕೆ ಸಮಾನವಾದ ಧರ್ಮವು ಮೂರು ಲೋಕಗಳಲ್ಲಿ ಮತ್ತೊಂದಿಲ್ಲ. ॥೮೦॥

ಯಾವ ಮನುಜನ ಮನಸ್ಸು ಲಿಂಗಪೂಜೆಯಲ್ಲಿ ಆಸಕ್ತವಾಗಿರುವುದಿಲ್ಲವೋ ಅಂತಹವನ ಜನ್ಮವು ನಿರರ್ಥಕ. ಮತ್ತು ಆತನು ತನ್ನ ತಾಯಿಯ ಯೌವನವೆಂಬ ವೃಕ್ಷಕ್ಕೆ ಕೊಡಲಿಯಂತಾಗುವನು. ಅಂದರೆ ಆತನ ಜನ್ಮವು ಅಪ್ರಯೋಜಕವೆನಿಸು ವುದು. ಅವನ ವಾರ್ತೆಗಳು ಪಾಪಕಾರಿಗಳಾಗುವುವು. ಆದ್ದರಿಂದ ಲೋಕದಲ್ಲಿ ಶಿವಲಿಂಗಾರಾಧಕರೇ ಮಹಾತ್ಮರು. ಅವರ ದಾಸರೂ ಶ್ರೇಷ್ಠರೆನಿಸುವರು. ಅವರಿಗೆ ಯಮನ ಭೀತಿಯೇ ಇರುವುದಿಲ್ಲ. ॥೮೧॥

ಆದ್ದರಿಂದ ಶಿವಾರ್ಚಕನ ಜನ್ಮವು ಮನೋಹರವಾದುದು. ಸೌಖ್ಯದಾಯ ಕವೂ ನಿಜ. ತ್ರಿಕಾಲದ ಶಿವಾರ್ಚನೆಯಲ್ಲಿ ನಿರತರಾದವರನ್ನು ಹಿಂಸಿಸಲು ಮಾರಿ ದೇವತೆಗಳೂ ಸಹ ನಡುಗುತ್ತಾರೆ. ಅವನ ತಂದೆ ತಾಯಿಗಳೆಲ್ಲರೂ ಧನ್ಯರೆನಿಸು

**ತಂ ದೃಷ್ಟ್ವಾಪಿ ಯಮಾದಯೋಽಪಿ ಬಹುಧಾ ಕೆಂಪಾಯಮಾನಸ್ಸದಾ**
**ಧನ್ಯಾ ತಜ್ಜನನೀ ಪಿತಾಪಿ ಸುತರಾಂ ಧನ್ಯಸ್ಸ ಮಾನ್ಯಃ ಸುರೈಃ ॥೮೨॥**

**ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ**
**ಪ್ರದೋಷಪೂಜಾದರ್ಶನಂ ನಾಮ ಚತುರ್ಥೋಽಧ್ಯಾಯಃ**

ತ್ತಾರೆ. ಮತ್ತು ದೇವಾಧಿದೇವತೆಗಳು ಸಹ ಅವನನ್ನು ಪೂಜಿಸುವರು ಎಂದು ಪರಶಿವನು ಪಾರ್ವತಿಯೊಡನೆ ಮಾತನಾಡಿಕೊಳ್ಳುವನು. ಎಂಬುದಾಗಿ ನಾರದ ಮಹರ್ಷಿಯು ರಾಜನಿಗೆ ಹೇಳಿದನು. ॥೮೨॥

ಇಲ್ಲಿಗೆ ಶಿವರಹಸ್ಯದ ಮೂರನೆಯ ಅಂಶದ ಉತ್ತರಾರ್ಧದಲ್ಲಿ ಪ್ರದೋಷಪೂಜಾ
ಮತ್ತು ದರ್ಶನವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಪಂಚಮೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತ್ಯುಕ್ತಂ ತದ್ವಚಃ ಶ್ರುತ್ವಾ ನಾರದೇನ ಸಹಾವಿಶತ್ ।
ಮಂದಿರಂ ಲಿಂಗಸಂವೀತಂ ರತ್ನಮಂಡಪಮಂಡಿತಂ ||೧||

ತತ್ರಾನೀತಃ ಸಬಾಲೋಽಪಿ ಬ್ರಹ್ಮಭೂಪಾಜ್ಞಯಾ ತದಾ ।
ಸ ಬಾಲಕೋಽಪಿ ತಂ ದೃಷ್ಟ್ವಾ ಸಂತುಷ್ಟೋ ಲಿಂಗಮಂದಿರಂ ||೨||

ರತ್ನನಂದೀಶಸಂಕೀರ್ಣಂ ರತ್ನಭೃಂಗೀವಿರಾಜಿತಂ ।
ರತ್ನನಂದಿಧ್ವಜಾಕೀರ್ಣಂ ಮಣಿತೋರಣಸಂಯುತಂ ||೩||

## ಐದನೆಯ ಅಧ್ಯಾಯ

ಯಾಜ್ಞವಲ್ಕ್ಯನು ಮುಂದುವರಿಸಿ ಹೀಗೆ ಹೇಳಿದನು. ಹಾಗೆ ನಾರದನು ಹೇಳಿದ ಮಾತನ್ನು ಕೇಳಿ ರಾಜನು ರತ್ನಖಚಿತವಾದ ಮಂಟಪದಲ್ಲಿ ಅಲಂಕರಿಸಿಟ್ಟಿರುವ ಶಿವಲಿಂಗವುಳ್ಳ ದೇವಸ್ಥಾನಕ್ಕೆ ಆ ನಾರದರೊಡನೆ ಹೋದನು. ||೧||

ಮತ್ತು ಆ ಬ್ರಹ್ಮಜ್ಞರಾಜನ ಆಜ್ಞೆಯಂತೆ ಆ ಶಿಶುವನ್ನೂ ಸಹ ಅಲ್ಲಿಗೆ ತಂದರು. ಆ ಬಾಲಕನಾದರೋ ಆ ಲಿಂಗಮಂದಿರವನ್ನು ಕಂಡು ಬಹು ಸಂತೋಷಪಟ್ಟನು. ||೨||

ಆ ಮಂದಿರದಲ್ಲಿ ನಂದಿಕೇಶ್ವರ ವಿಗ್ರಹವನ್ನೂ, ಭೃಂಗಿಯ ಪ್ರತಿಮೆಯನ್ನೂ ರತ್ನದಿಂದ ಕೆತ್ತಿದರು. ನಂದಿಧ್ವಜವೂ ಮಣಿತೋರಣವೂ ಹೊಳೆಯುತ್ತಿದ್ದಿತು. ||೩||

ತತಃ ಪ್ರಫುಲ್ಲನಯನಂ ದೃಷ್ಟ್ವಾ ರಾಜಾನಮಾಸ್ತಿಕಂ ।
ನಾರದಂ ಚ ಪ್ರವಿಷ್ಟೋಽಸೌ ಗರ್ಭಾಗಾರಂ ಶಿವಸ್ಯ ಸಃ ॥೪॥

ತತಃ ಪ್ರಣಮ್ಯ ತಲ್ಲಿಂಗಮಾಲಿಂಗ್ಯ ಸಮುಭೂನ್ಮುಹುಃ ।
ಭೂತಿರುದ್ರಾಕ್ಷಸಂಪ್ರೂತಾಂಗಃ ಪೂಜಯಾಮಾಸ ಶಂಕರಂ ॥೫॥

ಪಂಚಾಮೃತಪ್ರವಾಹಾದ್ಯೈಃ ಚಂದನಾದ್ಯೈರ್ಮನೋಹರೈಃ ।
ಪೂಜಯಾಮಾಸ ಗಿರಿಶಂ ಬಿಲ್ವಪುಷ್ಪಾದಿರಾಶಿಭಿಃ ॥೬॥

ನೈವೇದ್ಯರಾಶಿಭಿರ್ದ್ರವ್ಯೈಃ ಧೂಪದೀಪಾದಿಭಿರ್ಮುದಾ ।
ತತೋ ನಾಟ್ಯಂ ಚಕಾರಾಯಂ ಬಾಲಕೋ ನಾಟ್ಯಮಂಡಪೇ ॥೭॥

ಪ್ರಣಮ್ಯ ಬಹುಧಾ ಶಂಭುಂ ಶಿವಧ್ಯಾನಪುರಸ್ಸರಂ ।
ತತಃ ಸ ನಾರದಂ ದೃಷ್ಟ್ವಾ ರಾಜಾನಂ ಚ ಶಿವಾರ್ಚಕಃ ॥೮॥

ಅಲ್ಲಿಗೆ ಬಂದ ಶಿಶುವು ಹರ್ಷಚಿತ್ತವಾಗಿಯೂ, ವಿಶಾಲವಾದ ಕಣ್ಣುಗಳುಳ್ಳದ್ದಾಗಿಯೂ ನಗುತ್ತ ಆಸ್ತಿಕನಾದ ರಾಜನನ್ನೂ ನೋಡುತ್ತಾ ಶಿವನ ಗರ್ಭಾಂಗಣವನ್ನು ಪ್ರವೇಶಿಸಿತು. ॥೪॥

ಅನಂತರ ಶಿವಲಿಂಗಕ್ಕೆ ನಮಸ್ಕರಿಸಿ ಬಾರಿಬಾರಿಗೂ ಆಲಿಂಗಿಸಿಕೊಂಡು ವಿಭೂತಿ ಮತ್ತು ರುದ್ರಾಕ್ಷಿಗಳಿಂದ ತನ್ನ ಅವಯವಗಳನ್ನು ಪವಿತ್ರಗಳನ್ನಾಗಿ ಮಾಡಿಕೊಂಡಿತು. ॥೫॥

ಆ ಬಾಲಕನು ಪಂಚಾಮೃತದ ಧಾರೆಗಳಿಂದಲೂ, ಮನೋಹರಗಳಾದ ಚಂದನವೇ ಮೊದಲಾದ ಗಂಧಗಳಿಂದಲೂ, ಬಿಲ್ವಾದಿಪುಷ್ಪಗಳಿಂದಲೂ ಪೂಜಿಸಿದನು. ॥೬॥

ಮತ್ತು ನೈವೇದ್ಯವನ್ನೂ ಧೂಪದೀಪಾದಿಗಳನ್ನೂ ಸಮರ್ಪಿಸಿ, ನಾಟ್ಯಮಂಟಪದಲ್ಲಿ ಈ ಬಾಲಕನು ನಾಟ್ಯವಾಡಲಾರಂಭಿಸಿದನು. ॥೭॥

ಈ ರೀತಿಯಾಗಿ ವಿಭೂತಿ, ರುದ್ರಾಕ್ಷಗಳಿಂದ ಅಲಂಕೃತನಾದ ಬಾಲಕನು ಶಿವಧ್ಯಾನಪೂರ್ವಕವಾಗಿ ಶಂಭುವನ್ನು ವಂದಿಸಿ, ಹಾಗೆಯೇ ವಿಭೂತಿ, ರುದ್ರಾಕ್ಷ

ಭೂತಿರುದ್ರಾಕ್ಷಪ್ರೋತಾಂಗಃ ಭೂತಿರುದ್ರಾಕ್ಷಭೂಷಣಃ ।
ಪ್ರಣಮ್ಯ ನಾರದಂ ಪ್ರಾಹ ಧರ್ಮಾಧರ್ಮಂ ವದೇತಿ ಸಃ ॥೯॥

॥ ನಾರದ ಉವಾಚ ॥

ಸಾಧು ಸಾಧು ಮಹಾಪ್ರಾಜ್ಞ ಚಿರಂ ಜೀವ ಶಿವಂ ವ್ರಜ ।
ಭಜ ಮೃತ್ಯುಂಜಯಂ ಭಕ್ತ್ಯಾ ಜಯ ಮೃತ್ಯುಂ ಶಿವಾರ್ಚನೈಃ ॥೧೦॥

ಧನ್ಯೋಽಸಿ ಕೃತಕೃತ್ಯೋಽಸಿ ಕೃತಕೃತ್ಯತಮಃ ಶ್ರಿಯಾ ।
ಆವೃತ್ತೋಽಸಿ ಮಹಾತ್ಮೇಶಭೂತಿರುದ್ರಾಕ್ಷಮಾಲಯಾ ॥೧೧॥

ಜಾತಮಾತ್ರಸ್ಯ ಯಾ ಬುದ್ಧಿರ್ಮಹಾದೇವಾರ್ಚನೇ ತವ ।
ಸಾ ತಾವನ್ನಮ್ಭವಃ ಸಾಯಂ ದೃಷ್ಟಂ ಲಿಂಗಂ ತಯಾ ಯುತಃ ॥೧೨॥

ತಲ್ಲಿಂಗದರ್ಶನೋತ್ಪನ್ನಪುಣ್ಯೇನೈವ ಶಿವಾರ್ಚನೇ ।
ಅಧುನಾ ಭಕ್ತಿರುತ್ಪನ್ನಾ ಸದ್ಯಃ ಸ್ವರ್ಗಾಪವರ್ಗದಾ ॥೧೩॥

ಗಳಿಂದಲಂಕೃತರಾದ ನಾರದರಿಗೆ ನಮಸ್ಕರಿಸುತ್ತಾ ಧರ್ಮಾಧರ್ಮಸ್ವರೂಪವನ್ನು ಹೇಳು ಎಂಬುದಾಗಿ ಪ್ರಶ್ನಿಸಿದನು. ॥೮-೯॥

ಆಗ ಆ ಬಾಲಕನನ್ನು ಕುರಿತು ನಾರದರು ಹೀಗೆಂದರು. ಎಲೈ ಬಾಲಕನೇ, ಒಳ್ಳೆಯದು. ನೀನು ಬಹಳ ತಿಳಿವಳಿಕೆಯುಳ್ಳವನಾಗಿದ್ದೀಯೆ. ಚಿರಂಜೀವಿಯಾಗಿದ್ದು ಶಿವಸಾಯುಜ್ಯವನ್ನು ಪಡೆ. ಶಿವಾರ್ಚನೆಗಳನ್ನು ಮಾಡಿ ಮೃತ್ಯುವನ್ನೂ ಜಯಿಸು. ॥೧೦॥

ನೀನು ಮಹೇಶ್ವರನ ವಿಭೂತಿ, ರುದ್ರಾಕ್ಷಿಗಳ ಮಾಲೆಯಿಂದ ಆವರಿಸಲ್ಪಟ್ಟಿದ್ದೀಯೆ. ಆದ್ದರಿಂದ ನೀನೇ ಧನ್ಯ. ॥೧೧॥

ಇಲ್ಲಿ ಮತ್ತೇನೂ ಆಶ್ಚರ್ಯವಿಲ್ಲ. ಸಾಯಂಕಾಲದಲ್ಲಿ ಶಿವಲಿಂಗವನ್ನು ದರ್ಶನಮಾಡಿದ್ದೀಯೆ. ಅದರಿಂದ ನಿನಗೆ ಜನನಕಾಲದಲ್ಲಿಯೇ ಮಹಾದೇವಾರ್ಚನೆಯಲ್ಲಿ ಬುದ್ಧಿಯುಂಟಾಗಿದೆ. ॥೧೨॥

ಹಿಂದಿನ ಜನ್ಮದಲ್ಲಿ ಮಾಡಿದ ಪ್ರದೋಷಕಾಲದ ಶಿವದರ್ಶನದಿಂದ ನಿನಗೆ ಈಗ ಶಿವಾರ್ಚನೆಯಲ್ಲಿ ಭಕ್ತಿಯುಂಟಾಗಿದೆ. ಅದು ಸದ್ಯದಲ್ಲಿಯೇ ಮೋಕ್ಷದಾಯಕವಾಗುವುದು. ॥೧೩॥

ಅದ್ಯ ಪ್ರಭೃತಿ ನ ತ್ಯಾಜ್ಯಂ ಶಿವಲಿಂಗಾರ್ಚನಂ ತ್ವಯಾ ।
ನ ತ್ಯಾಜ್ಯಂ ಸಹಸಾ ಬಾಲ ಭಸ್ಮರುದ್ರಾಕ್ಷಭೂಷಣಂ ॥೧೪॥

ಶಿವಾರ್ಚನೇನ ಕಾಲೋಽಯಂ ನೇಯಃ ಕಲ್ಯಾಣದಾಯಕಃ ।
ವ್ಯರ್ಥಕಾಲಾಪನಯನಂ ನ ಕಾರ್ಯಂ ಜ್ಞಾನಿನಾ ತ್ವಯಾ ॥೧೫॥

ಆಯುಃ ಶಿವಾರ್ಚನೇನೈವ ಯದಿ ಕ್ಷೀಣಂ ಭವಿಷ್ಯತಿ ।
ತದಾ ಜ್ಞಾನಂ ಚ ಸಫಲಂ ತದಾಯುರಪಿ ಸಾರ್ಥಕಂ ॥೧೬॥

ಜ್ಞಾನೇನಾಜ್ಞಾನಮಾತ್ರಸ್ಯ ವಿನಾಶೇ ಸತಿ ಸರ್ವಥಾ ।
ಶಿವಾರ್ಚನಾರ್ಥಂ ಯತ್ನಸ್ತತ್ಕರ್ತವ್ಯಸ್ತೇನ ಮುಚ್ಯತೇ ॥೧೭॥

ಯಾವದ್ಭೂಮೌ ಭವೇಜ್ಜೀವೋ ತಾವದ್ಭ್ರಮತಿ ಸರ್ವಥಾ ।
ಸಂಸಾರಘೋರನರಕೇ ಪಾಪನಕ್ರಗ್ರಹಾಕುಲೇ ॥೧೮॥

ಜ್ಞಾನಮಾತ್ರಂ ಚ ಯತ್ತುಲ್ಯಂ ತುಚ್ಛಜಂತುಸಮಾಶ್ರಿತಂ ।
ತಾದೃಶಂ ಜ್ಞಾನಮನ್ಯೇಷಾಂ ನ ಮುಕ್ತ್ಯರ್ಥಂ ಪ್ರಜಾಯತೇ ॥೧೯॥

ಎಲೈ ಬಾಲಕನೇ, ನೀನು ಇನ್ನು ಮುಂದೆ ಶಿವಾರ್ಚನೆಯನ್ನು ಮತ್ತು ಭಸ್ಮರುದ್ರಾಕ್ಷಧಾರಣೆಯನ್ನು ಸಹ ಬಿಡಬೇಡ. ॥೧೪॥

ಎಲೈ ಬಾಲಕನೇ, ನೀನು ಜ್ಞಾನಿಯಾಗಿದ್ದೀಯೆ. ಆದ್ದರಿಂದ ನೀನು ಕಾಲವನ್ನೆಲ್ಲಾ ವ್ಯರ್ಥಮಾಡದೆ ಶಿವಾರ್ಚನೆಯಲ್ಲಿಯೇ ಕಳೆಯಬೇಕು. ॥೧೫॥

ಶಿವಾರ್ಚನೆಮಾಡುವುದರಲ್ಲಿಯೇ ಆಯುಸ್ಸು ಕ್ಷೀಣವಾಗುವುದಾದರೆ, ಅಂತಹವನ ಜ್ಞಾನವೂ ಆಯುಸ್ಸೂ ಸಹ ಸಾರ್ಥಕವಾಗುತ್ತದೆ. ॥೧೬॥

ಜ್ಞಾನದಿಂದ ಅಜ್ಞಾನವು ಮಾತ್ರ ನಾಶವಾಗುವುದಾದರೆ ಸಾಲದು. ಶಿವಾರ್ಚನೆಗಾಗಿ ಯತ್ನಿಸಿದರೆ, ಅದರಿಂದ ಮನುಜನು ಮುಕ್ತನಾಗುತ್ತಾನೆ. ॥೧೭॥

ಭೂಮಿಯಲ್ಲಿ ಜೀವವಿರುವವರೆಗೂ ಜೀವಿಯು ಪಾಪಗಳೆಂಬ ಮೊಸಳೆಗಳಿಂದ ವ್ಯಾಪ್ತವಾಗಿರುವ ಘೋರನರಕದಂತಿರುವ ಸಂಸಾರದಲ್ಲಿ ತಿರುಗುತ್ತಿರುತ್ತಾನೆ. ॥೧೮॥

ಜ್ಞಾನಮಾತ್ರವಿದ್ದರೆ ಅದು ಕೇವಲ ನೀಚವಾದ ಜಂತುಗಳಿಗೆ ತಿಳಿವಳಿಕೆ ಬಂದಂತೆಯೇ ಸರಿ. ಆ ತರಹ ಜ್ಞಾನವು ಮುಕ್ತಿಗೆ ಸಾಧಕವಾಗುವುದಿಲ್ಲ. ॥೧೯॥

ಪತಂಗಾನಾಂ ನ ಕಿಂ ಜ್ಞಾನಂ ತಸ್ಮಿಂ ಮೋಕ್ಷಸ್ಯ ಸಾಧನಂ ।
ಮೋಕ್ಷಸಾಧನಭೂತಂ ತು ಜ್ಞಾನಮನ್ಯದ್ವಿಲಕ್ಷಣಂ ॥೨೦॥

ಯೇನ ಜ್ಞಾನೇನ ಮುಕ್ತಿಃ ಸ್ಯಾತ್ತಜ್ಜ್ಞಾನಾಭ್ಯಸನಾತ್ಪರಂ ।
ಮುಕ್ತೋ ಭವತಿ ತಜ್ಜ್ಞಾನಂ ಕೇವಲಂ ಶಿವಪೂಜಯಾ ॥೨೧॥

ದೇವದೇವೋಕ್ತಮುತ್ಪನ್ನೇನ ಜ್ಞಾತೇ ಸತಿ ಮಹೇಶ್ವರೇ ।
ತಜ್ಜ್ಞಾನಾದೇವ ಮುಕ್ತಿಃಸ್ಯಾತ್ ತಜ್ಜ್ಞಾನಂ ಚ ಶಿವಾರ್ಚನಾತ್॥೨೨॥

ಧರ್ಮಾರ್ಥಧರ್ಮತಯಾ ಜ್ಞಾತಂ ಶ್ರೀಮಹಾದೇವಪೂಜನಂ ।
ತೇನ ಮುಕ್ತಿರ್ಭವತ್ಯೇವ ಸ್ವರ್ಗಭೋಗಶ್ಚ ಸರ್ವದಾ ॥೨೩॥

ಭಕ್ತ್ಯಾ ಪೂಜಿತವಾನ್ಮರ್ತ್ಯೋ ಯಃ ಸ್ವರ್ಗಂ ನಾಭಿವಾಂಛತಿ
ತ[illegible]ತಿ ಸ್ವರ್ಗಾಂತೇ [illegible] ಸ್ವ[illegible]ಮೋಕ್ಷೌ ನ ಸಂಶಯಃ ॥೨೪॥

ಪತಂಗಗಳಿಗೆ ತಿಳಿದ ಜ್ಞಾನವಿಲ್ಲವೆ? ಅದು ಮೋಕ್ಷಕ್ಕೆ ಸಾಧಕವಾಗುವುದೇ? ಮೋಕ್ಷಸಾಧನದ ಜ್ಞಾನದ ರೀತಿಯೇ ಬೇರೆ. ॥೨೦॥

ಯಾವ ಜ್ಞಾನದಿಂದ ಮುಕ್ತಿಯುಂಟಾಗುವುದೋ ಅಂತಹ ಜ್ಞಾನವನ್ನು ಕಷ್ಟದಿಂದ ಸಾಧಿಸಬೇಕಾಗಿದೆ. ಅಂತಹ ಜ್ಞಾನವು ಶಿವಪೂಜೆಯಿಂದ ಅನಾಯಾಸವಾಗಿ ಬರುವುದು. ॥೨೧॥

ಮಹೇಶ್ವರನನ್ನು ದೇವರುಗಳೆಲ್ಲಾ ಉತ್ತಮನೆಂದು ತಿಳಿದರೆ ಅದೇ ಸುಜ್ಞಾನ. ಅದರಿಂದಲೇ ಮುಕ್ತಿ. ಆ ಜ್ಞಾನಕ್ಕಾಗಿ ಶಂಕರನ ಶಿವಾರ್ಚನೆ ಮಾಡಬೇಕು. ॥೨೨॥

ಶ್ರೀಮಹಾದೇವನ ಪೂಜೆಯು ಶ್ರೇಷ್ಠವಾದ ಧರ್ಮವೆಂದು ಪರಿಗಣಿಸಲ್ಪಟ್ಟಿದೆ. ಅದರಿಂದ ಮುಕ್ತಿಯುಂಟಾಗುತ್ತದೆ. ಮತ್ತು ಸ್ವರ್ಗಭೋಗಂಗಳೂ ಸಹ ಅದರಿಂದಲೇ ದೊರಕುತ್ತವೆ. ॥೨೩॥

ಮನುಷ್ಯನು ಸ್ವರ್ಗಾಭಿವಾಂಛನಮಾಡದೇ ಶಂಕರನನ್ನು ಪೂಜಿಸಿದರೂ ಆತನು ಕೊನೆಯಲ್ಲಿ ಸ್ವರ್ಗವನ್ನೂ, ಮೋಕ್ಷವನ್ನೂ ನಿಜವಾಗಿ ಪಡೆಯುತ್ತಾನೆಂಬುದರಲ್ಲಿ ಸಂಶಯವಿಲ್ಲ. ॥೨೪॥

ಸ್ವರ್ಗಾರ್ಥಕಮಪಿ ಚೇದ್ಭಕ್ತ್ಯಾ ಶಂಕರಾರಾಧಕಸ್ತದಾ ।
ಅಪವರ್ಗೋಽಭವತ್ಯೇವ ಸ್ವರ್ಗೋಽಪ್ಯತ್ರ ನ ಸಂಶಯಃ ॥೨೫॥

ಸ್ವರ್ಗಾಪವರ್ಗದಂ ಯಸ್ಮಾಲ್ಲಿಂಗೇ ಶಂಕರಪೂಜನಂ ।
ತತ್ತತ್ಫಲಮದತ್ವಾ ತು ನ ತಿಷ್ಠತ್ಯೇವ ಸರ್ವಥಾ ॥೨೬॥

ಶಿವಲಿಂಗಾರ್ಚನಾಕಾರೋ ಯಃ ಕಲ್ಪತರುರುತ್ತಮಃ ।
ಸ ಸರ್ವಫಲದೋ ನಿತ್ಯಂ ಭವತ್ಯೇವ ನ ಸಂಶಯಃ ॥೨೭॥

ರೂಪಲಾವಣ್ಯಸಂಪನ್ನಾಸ್ತರುಣೀಗಣಕೋಟಯಃ ।
ಆಸನ್ನಾ ಏವ ತಸ್ಯ ಸ್ಯುರ್ಯಃ ಶಿವಾರಾಧನಪ್ರಿಯಃ ॥೨೮॥

ದಿವ್ಯತುಂಗತುರಂಗಾಣಾಂ ಕೋಟಯಃ ಸಮುಪಸ್ಥಿತಾಃ ।
ಭವಂತ್ಯೇವ ನ ಸಂದೇಹಃ ಶಿವಲಿಂಗಾರ್ಚಕಾಂಗಣೇ ॥೨೯॥

ಉಪಸ್ಥಿತಾಃ ಸರ್ವದಾಪಿ ಮತ್ತಮಾತಂಗಕೋಟಯಃ ।
ಯಃ ಶಿವಾರಾಧನೋದ್ಯುಕ್ತೋ ತದ್ಗೃಹದ್ವಾರಮಂಟಪೇ ॥೩೦॥

ಸುರಾಸ್ತದ್ವಶಮಾಯಾಂತಿ ಯಃ ಶಿವಾರಾಧನೋತ್ಸುಕಃ ।
ತಿಷ್ಠಂತಿ ದೇವಾಸ್ಸತತಂ ಶಿವಾರಾಧಕಮಂದಿರೇ ॥೩೧॥

ಸ್ವರ್ಗಾಭಿಲಾಷೆಯಿಂದ ಶಂಕರಾರಾಧಕನಾದ ಮನುಷ್ಯನಿಗೂ ಶಾಶ್ವತವಾದ ಮೋಕ್ಷವೇ ಲಭಿಸುವಾಗ ಸ್ವರ್ಗಪ್ರಾಪ್ತಿಯಲ್ಲಿ ಸಂಶಯವಿರುವುದೇ ? ||೨೫||

ಸ್ವರ್ಗ ಮತ್ತು ಮೋಕ್ಷಗಳನ್ನು ಉಂಟುಮಾಡತಕ್ಕ ಈಶ್ವರನ ಲಿಂಗ ಪೂಜೆಯು ಖಂಡಿತವಾಗಿಯೂ ತನ್ನ ಫಲವನ್ನುಂಟುಮಾಡದೇ ಇರುವುದಿಲ್ಲ. ||೨೬||

ಶಿವಲಿಂಗದ ಅರ್ಚನೆಯೆಂಬುದು ಒಂದು ಕಲ್ಪವೃಕ್ಷದಂತಿರುವುದು. ಆದ್ದರಿಂದ ಅದು ಸರ್ವಫಲವನ್ನೂ ಕೊಡುವುದೆಂಬುದರಲ್ಲಿ ಸಂಶಯವಿಲ್ಲ. ||೨೭||

ಶಿವಾರಾಧಕನಿಗೆ ರೂಪವತಿಯರಾಗಿಯೂ, ಲಾವಣ್ಯವತಿಯರಾಗಿಯೂ ಇರುವ ಕೋಟ್ಯಂತರ ತರುಣಿಯರೂ, ದಿವ್ಯವಾದ ಮತ್ತು ಎತ್ತರವಾದ ಕುದುರೆಗಳೂ ಅನಾಯಾಸವಾಗಿ ಲಭಿಸುವುವು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ||೨೮-೨೯||

ಮತ್ತು ಯಾವಾಗಲೂ ಆ ಭಕ್ತನ ಮನೆಯ ಮಂಟಪದಲ್ಲಿ ಕೋಟ್ಯಂತರ

ಶಿವಜ್ಞಾನಂ ಸಮಾಸಾದ್ಯ ಯಃ ಶಿವಾರ್ಚನತತ್ಪರಃ ।
ತದ್ದರ್ಶನೇನ ಮುಕ್ತಿಃ ಸ್ಯಾತ್ಸಯಸ್ಯಾಚ್ಛಂಕರಪ್ರಿಯಃ ॥೩೨॥

ಶಾಂಭವೈಃ ಸಹ ಸಲ್ಲಾಪೋಽಘಕೋಟಿವಿನಾಶಕಃ ।
ಶಾಂಭವಾನಾಂ ದರ್ಶನಂ ಚ ಶಂಕರಸ್ಯೈವ ದರ್ಶನಂ ॥೩೩॥

ಶಂಕರೋ ದುರ್ಲಭೋ ಲೋಕೇ ಶಿವಪೂಜಾತಿದುರ್ಲಭಾ ।
ದುರಾತ್ಮನಾಂ ತಥಾ ಬುದ್ಧಿಃ ಕುತಃ ಸ್ಯಾಚ್ಛಿವಪೂಜನೇ ॥೩೪॥

ಕಿಂಚಾನ್ಯದುಚ್ಯತೇ ಬಾಲ ಶಂಕರೇಣಾಪಿ ಗೋಪನಂ ।
ಕೃತಂ ಹಿ ಶಿವವಿದ್ಯಾಯಾಃ ತತಃ ಸಾ ಚಾಪಿ ದುರ್ಲಭಾ ॥೩೫॥

ಶಿವವಿದ್ಯಾ ಮಹಾವಿದ್ಯಾ ವಿದ್ಯಾನಾಂ ಪರಮಾ ಮತಾ ।
ತಸ್ಯಾಃ ಸಂಗೋಪನಂ ತೇನ ಕೃತಮಿತ್ಯತ್ರ ನಾದ್ಭುತಂ ॥೩೬॥

---

ಮತ್ತಗಜಗಳೂ ವಿಜೃಂಭಿಸುತ್ತವೆ. ದೇವತೆಗಳೆಲ್ಲರೂ ಸಹ ಆತನಿಗೆ ವಶರಾಗಿ ಅಲ್ಲಿಯೇ ಇರುತ್ತಾರೆ. ||೩೦-೩೧||

ಶಿವಜ್ಞಾನವನ್ನು ಪಡೆದು ಶಿವನನ್ನು ಪೂಜಿಸತಕ್ಕವನು ಶಿವನ ಪ್ರೀತಿ ಪಾತ್ರನೆನಿಸುವನು. ಆತನ ದರ್ಶನವೂ ಮೋಕ್ಷಪ್ರದವಾದುದು. ||೩೨||

ಶಿವಭಕ್ತರೊಡನೆ ಸಲ್ಲಾಪವೂ ಕೋಟ್ಯಂತರ ಪಾಪನಾಶಕವಾದುದು. ಶಂಕರಕಿಂಕರದರ್ಶನವೂ ಕೂಡ ಶಂಕರನ ದರ್ಶನದಂತೆಯೇ ಫಲಕೊಡುವುದು. ||೩೩||

ಲೋಕದಲ್ಲಿ ಶಂಕರನೂ ಮತ್ತು ಅವನ ಪೂಜೆಯೂ ಲಭಿಸುವುದು ದುರ್ಲಭ. ಹೀಗಿರುವಲ್ಲಿ ದುರಾತ್ಮರಿಗೆ ಆ ಪೂಜೆಯಲ್ಲಿ ಬುದ್ಧಿಯುಂಟಾದೀತು. ||೩೪||

ಎಲೈ ಬಾಲಕನೇ ಈಶ್ವರನೂ ಕೂಡ ಇನ್ನು ಯಾವ ಗುಟ್ಟನ್ನು ತಾನೆ ಮುಚ್ಚಿಟ್ಟಿರುವನು? ಆ ಶಿವವಿದ್ಯೆಯೂ ಕೂಡ ಬಹು ದುರ್ಲಭವಾದುದು. ||೩೫||

ಆ ಶಿವ ವಿದ್ಯೆಯು ಮಹಾವಿದ್ಯೆ ಎಂದೂ, ಪರಮಾವಿದ್ಯೆ ಎಂದು ಗಣಿಸಲ್ಪಟ್ಟಿದೆ. ಈಶ್ವರನೂ ಅದನ್ನು ಗೋಪನ ಮಾಡಿದ್ದಾನೆಂಬುದರಲ್ಲಿ ಆಶ್ಚರ್ಯವಿಲ್ಲ. ||೩೬||

ಸಾ ತು ವಿದ್ಯಾ ಪ್ರಯತ್ನೇನ ಪಾರ್ವತ್ಯಾಂ ಸ್ಕಂದಸನ್ನಿಧೌ ।
ಪ್ರಾಪ್ತಾ ಶಿವಪ್ರಸಾದೇನ ಸ್ಕಂದೇನಾಪಿ ಮಹೇಶ್ವರಾತ್ ॥೩೭॥

ಆರಾಧಿತಃ ಶಂಕರೋಽಪಿ ಸ್ಕಂದೇನ ಶಿವಯಾಪಿ ಚ ।
ತಾಭ್ಯಾಮುಕ್ತಮಹಾವಿದ್ಯಾ ಭುಕ್ತಿಮುಕ್ತಿಪ್ರದಾಯಿನೀ ॥೩೮॥

ಅನಂತಯತ್ನಾಲ್ಲಬ್ಧಾ ಸಾ ಮಹಾವಿದ್ಯಾ ಮಹಾತ್ಮನಾ ।
ಮಹಾದೇವೇನ ದತ್ತೇತಿ ಮಹಾಗೌರ್ಯಾ ಮುಹುರ್ಮುಹುಃ ॥೩೯॥

ಸಾ ಯಾ ತು ಮೂಲವಿದ್ಯಾಸ್ತಿ ಶಿವವಿದ್ಯಾ ಶಿವಾತ್ಮಿಕಾ ।
ಸಾ ದುರ್ಲಭಾ ನ ಕಸ್ಯಾಪಿ ಸಾ ಸ್ಫುರತ್ಯಪಿ ಸರ್ವದಾ ॥೪೦॥

ತದ್ವಿದ್ಯಾ ಸಾಧನೀಭೂತಂ ಶಂಕರಾರಾಧನಂ ಪರಂ ।
ಅಶಂಕರಾರಾಧಕಸ್ಯ ದುರ್ಲಭಂ ಖಲು ದೃಶ್ಯತೇ ॥೪೧॥

ಸ್ಕಂದ ಸಮೇತಳಾಗಿರತಕ್ಕ ಪಾರ್ವತಿಗೆ ಶಿವಾನುಗ್ರಹದಿಂದ ಆ ವಿದ್ಯೆಯು ಬಂದಿತು. ಆಗಲೇ ಕುಮಾರಸ್ವಾಮಿಯೂ ಆ ವಿದ್ಯಾಮಹಿಮೆಯನ್ನರಿತನು. ||೩೭||

ಸ್ಕಂದ ಮತ್ತು ಪಾರ್ವತಿ, ಇವರು ಶಂಕರನನ್ನು ಆರಾಧಿಸಿ ಅವನಿಂದ ಭುಕ್ತಿ ಮತ್ತು ಮೋಕ್ಷದಾಯಕವಾದ ಆ ಮಹಾವಿದ್ಯೆಯನ್ನು ಪಡೆದರು. ||೩೮||

ಬಹು ಪ್ರಯತ್ನದಿಂದ ಈ ವಿದ್ಯೆಯು ನನಗೆ ಮಹಾದೇವನಿಂದ ಬಂದಿತೆಂದು ಗೌರಿಯು ಬಾರಿಬಾರಿಗೂ ಹೇಳುತ್ತಿದ್ದಳು. ||೩೯||

ಆ ಮೂಲವಿದ್ಯೆಯು ಶಿವಾತ್ಮಕವಾಗಿಯೂ, ಶಿವ ವಿದ್ಯೆಯಾಗಿಯೂ ಇರುವುದು. ಅದು ದುರ್ಲಭವಾದುದಾಗಿ ಯಾರಿಗೂ ಸಹ ಯಾವಾಗಲೂ ಸ್ಫುರಿಸುವುದಿಲ್ಲ. ||೪೦||

ಆ ವಿದ್ಯೆಯು ಈಶ್ವರಾರಾಧನ ಮಾತ್ರದಿಂದಲೇ ಸಿದ್ಧಿಸುತ್ತದೆ. ಶಂಕರಾರಾಧನೆ ಮಾಡದಂತಹವರಿಗೆ ಆ ವಿದ್ಯೆಯು ದುರ್ಲಭವಾದುದು. ||೪೧||

ಯದ್ದುರ್ಲಭಮಿತಿ ಜ್ಞಾತಂ ತದೇವ ಸುಲಭಂ ಭವೇತ್ ।
ಶಿವಾರ್ಚನೇನ ತತ್ತಸ್ಮಾತ್ಸರ್ವಸಿದ್ಧಿಪ್ರದಾಯಕಂ ॥೪೨॥

ಶಿವಾರ್ಚನೇನ ಲೋಕೇಷು ಕೋ ವಾ ಮುಕ್ತೋ ನ ಜಾಯತೇ ।
ತತ್ರ ತಾವನ್ನ ವಿಶ್ವಾಸೋ ಭವಿಷ್ಯತಿ ದುರಾತ್ಮನಾಂ ॥೪೩॥

ಮಹೇಶಾರ್ಚನಮಾಹಾತ್ಮ್ಯಂ ನ ವಿಜಾನಂತಿ ಮಾನವಾಃ ।
ಅತ ಏವ ಪತಂತ್ಯೇತೇ ನರಕೇಷು ನ ಸಂಶಯಃ ॥೪೪॥

ಶಿವಾರ್ಚನಪರಿತ್ಯಾಗಃ ಸರ್ವಥಾ ಪಾಪಸಾಧನಂ ।
ತೇನ ಪಾಪೇನ ಯಾಂತ್ಯೇವ ನರಕಂ ದುಷ್ಕರಂ ಪರಂ ॥೪೫॥

ಅಯತ್ನೇನ ಪ್ರಯಾಂತ್ಯೇತೇ ನರಕಂ ಪ್ರತಿ ಮಾನವಾಃ ।
ಅಹೋ ನ ನೀರಮಪ್ಯಲ್ಪಂ ನ ಚ ಯಚ್ಛಂತಿ ಪಲ್ಲವಂ ॥೪೬॥

ಪುಷ್ಪಂ ವಾ ದೇವದೇವಾಯ ಲಿಂಗರೂಪಾಯ ಸರ್ವದಾ ।
ಸುಲಭಾನ್ಯೇವ ಪತ್ರಾಣಿ ಜಲಾನಿ ವಿಮಲಾನ್ಯಪಿ ॥೪೭॥

ಶಿವಾರ್ಚನೆ ಮಾಡುವುದರಿಂದ ಸಕಲಸಿದ್ಧಿಗಳೂ ಸಿದ್ಧಿಸುವುವಲ್ಲದೆ ದುರ್ಲಭವಾದವುಗಳೆಲ್ಲಾ ಸುಲಭಗಳಾಗುತ್ತವೆ. ||೪೨||

ಲೋಕದಲ್ಲಿ ಶಿವಾರ್ಚನೆಯನ್ನು ಮಾಡಿ ಯಾರುತಾನೆ ಮುಕ್ತರಾಗಲಾರರು ? ಇಂತಹ ವಿಚಾರವನ್ನು ದುರಾತ್ಮರು ನಂಬುವುದಿಲ್ಲ ||೪೩||

ಮನುಷ್ಯರು ಮಹೇಶ್ವರನ ಅರ್ಚನೆಯಿಂದ ಉಂಟಾಗುವ ಮಹಿಮೆಯನ್ನು ತಿಳಿಯದೇ ನರಕಗಳಲ್ಲಿ ಬೀಳುತ್ತಾರೆ. ||೪೪||

ಶಿವಾರ್ಚನೆ ಮಾಡದಿರುವುದು ಪಾಪಸಾಧಕವಾದುದು. ಆ ಪಾಪಗಳಿಂದ ಅವರು ಘೋರವಾದ ನರಕಕ್ಕೆ ಹೋಗುತ್ತಾರೆ. ||೪೫||

ಅಯ್ಯೋ! ಜನರು ಸುಲಭವಾಗಿ ಸಿಕ್ಕುತ್ತಿದ್ದರೂ ಸಹ ವಿಮಲವಾದ ನೀರನ್ನೋ ಆಗಲಿ ಪುಷ್ಪ, ಬಿಲ್ವದಳಗಳನ್ನೋ ಆಗಲಿ ಶಿವಲಿಂಗಕ್ಕೆ ಪೂಜಿಸದೇ ನರಕಕ್ಕೆ ಹೋಗುವರು. ||೪೬-೪೭||

ಸರ್ವಭಾವೇನ ಯೋ ಭಾವ್ರೋ ಭವಪೂಜನತತ್ಪರಃ ।
ಭವೇ ಭವೇಽಪಿ ಸ ಭವೇತ್ ಸ ಭೂಯೋ ನ ಭವಿಷ್ಯತಿ ॥೪೮॥

ಕಃ ಶಂಕರಜ್ಞಾನರಸಂ ವಿಹಾಯಾಪಿ ರಸಾಂತರಂ ।
ಸ ತಾವದಜ್ಞೋ ವಿಜ್ಞೇಯೋ ಸಂಜ್ಞಯಾವಜ್ಞಯಾಽಪಿ ಚ ॥೪೯॥

ಅವಜ್ಞಾಯಾಃ ಪರಂಸ್ಥಾನಂ ಶಂಕರಾರ್ಚನಕೋ ಜನಃ ।
ತುಷ್ಯತ್ಯೇವ ಮಹಾದೇವಃ ಕೇವಲಂ ತದವಜ್ಞಯಾ ॥೫೦॥

ಅವಜ್ಞಾಪಾತ್ರಭೂತಸ್ಯಾಪ್ಯವಜ್ಞಾಂ ಯಸ್ತು ನೋಽಹತಃ ।
ನ ಕರಿಷ್ಯತಿ ತಂ ತಾವತ್ಪಾತಯತ್ಯಪಪಾತಕೇ ॥೫೧॥

ಕೃತ್ವಾ ಪಾಪಾನ್ಯನಂತಾನಿ ಸಕೃದ್ವಾ ಯಃ ಶಿವಂ ಸ್ಮರೇತ್ ।
ಸ ಧೂತಪಾಪ ಇತ್ಯೇವ ವಿಜ್ಞೇಯೋ ಮುನಿಸತ್ತಮೈಃ ॥೫೨॥

ಮುನೀನಾಮಪಿ ವಂದ್ಯಸ್ಸ್ಯಾನ್ಮಹಾದೇವಪರಾಯಣಃ ।
ವಂದ್ಯೋ ನಾರಾಯಣಾದೀನಾಂ ಸುರಾಣಾಮಪಿ ಸರ್ವಥಾ ॥೫೩॥

ಯಾವ ನರನು ಪ್ರತಿಜನ್ಮದಲ್ಲಿಯೂ ಎಲ್ಲಾ ಭಾವಗಳಿಂದಲೂ ಶಿವಪೂಜಾಸಕ್ತನಾಗುವನೋ ಅವನಿಗೆ ಪುನರ್ಜನ್ಮವಿಲ್ಲ. ॥೪೮॥

ಯಾವನು ಸಾರಭೂತವಾದ ಶಂಕರ ಜ್ಞಾನವನ್ನು ಬಿಟ್ಟು ಬೇರೆ ಧರ್ಮವನ್ನು ಆಶ್ರಯಿಸುವನೋ ಅವನನ್ನು ಅಜ್ಞನೆಂಬ ಸಂಜ್ಞೆಯಿಂದ ಕರೆಯಬೇಕು. ॥೪೯॥

ಶಂಕರನನ್ನು ಪೂಜಿಸದವನನ್ನು ನಿಜವಾಗಿಯೂ ತಿರಸ್ಕರಿಸಬೇಕು. ಅಂತಹ ತಿರಸ್ಕಾರದಿಂದಲೂ ಶಂಕರನು ತೃಪ್ತಿಪಡುವನು. ॥೫೦॥

ತಿರಸ್ಕಾರಕ್ಕೆ ಯೋಗ್ಯನಾದ ಮನುಷ್ಯನನ್ನು, ತಿರಸ್ಕರಿಸದೆ ಪುರಸ್ಕರಿಸಿದವರು ನಿಜವಾಗಿಯೂ ನರಕಭಾಗಿಗಳಾಗುವರು. ॥೫೧॥

ಯಾವನು ಅನಂತವಾಗಿ ಪಾಪಗಳನ್ನು ಮಾಡಿದರೂ ಒಂದು ಸಾರಿಯಾದರೂ ಶಿವನನ್ನು ಸ್ಮರಿಸುತ್ತಾನೋ, ಅಂತಹವನು ಪಾಪಿಯಿಲ್ಲವೆಂದು ಮುನಿಗಳೂ ಸಹ ತಿಳಿದಿದ್ದಾರೆ. ॥೫೨॥

ಮಹಾದೇವ ಪೂಜಾ ಪರಾಯಣನಾದವನು ಋಷಿಗಳಿಗೂ, ನಾರಾಯಣ ಮತ್ತು ಸುರರಿಗೂ ವಂದ್ಯನೆಂಬುದರಲ್ಲಿ ಸಂಶಯವಿಲ್ಲ. ॥೫೩॥

ಶಿವಾರ್ಚನಪರೋ ಲೋಕೇ ವಂದ್ಯಃ ಪೂಜ್ಯಶ್ಚ ಸರ್ವಥಾ ।
ತತ್ಪೂಜಯಾ ಪರಂ ಸರ್ವೇ ಮುಕ್ತಾ ಇತ್ಯವಧಾರಣಾತ್ ॥೫೪॥

ಮಹಾದೇವೋಽಪಿ ತಂ ದೃಷ್ಟ್ವಾ ತುಷ್ಟೋ ಭವತಿ ಮಾನವಂ ।
ಯೋ ಭಕ್ತ್ಯಾ ಲಿಂಗಪೂಜಾಯಾಂ ನಿರತಃ ಸರ್ವಸಾಧನೈಃ ॥೫೫॥

ಸಕೃದ್ವಾ ಪ್ರಣಮೇದ್ಯಸ್ತು ಶಂಕರಂ ಭಕ್ತಿಪೂರ್ವಕಂ ।
ತಸ್ಯ ಪಾಪಾನಿ ನಶ್ಯಂತಿ ಸ ಏವ ಪುರುಷರ್ಷಭಃ ॥೫೬॥

ಧನ್ಯಂ ಕೃತಾರ್ಥಂ ತಂ ಮನ್ಯೇ ಕೃತಕೃತ್ಯಂ ನರೋತ್ತಮಂ ।
ಯಃ ಕ್ಷಣಂ ವಾ ಮಹಾದೇವಂ ಲಿಂಗೇ ಪೂಜಯತಿ ಪ್ರಭುಂ ॥೫೭॥

ಭಸ್ಮೋದ್ಧೂಳಿತಸರ್ವಾಂಗೋ ರುದ್ರಾಕ್ಷಾಭರಣಾಂಚಿತಃ ।
ಯೋ ನಾರ್ಚಯತಿ ಗೌರೀಶಂ ಸ ಪಾತಕಗಣಾಶ್ರಯಃ ॥೫೮॥

---

ಶಿವಾರ್ಚನಾಸಕ್ತನಾದವನು ಲೋಕದಲ್ಲಿ ವಂದ್ಯನೂ, ಪೂಜ್ಯನೂ ಆಗುತ್ತಾನೆ. ಶಿವಪೂಜೆಯಿಂದ ಎಲ್ಲರೂ ಮುಕ್ತರಾಗುವರೆಂಬುದೇ ಇದಕ್ಕೆ ಕಾರಣ. ||೫೪||

ಯಾವನು ಭಕ್ತಿಯಿಂದ ಸರ್ವ ಸಾಧನಗಳನ್ನೂ ಪೂಜಾಸಾಮಗ್ರಿಗಳನ್ನೂ ಒದಗಿಸಿಕೊಂಡು ಶಂಕರ ಪೂಜೆಮಾಡುವನೋ ಅಂತಹ ಮಾನವನನ್ನು ಕಂಡು ಮಹೇಶ್ವರನೂ ಸಹ ಸಂತುಷ್ಟನಾಗುತ್ತಾನೆ. ||೫೫||

ಯಾವ ಮನುಷ್ಯನು ಭಕ್ತಿಯಿಂದ ಒಂದಾವರ್ತಿಯಾದರೂ ಶಿವನನ್ನು ನಮಸ್ಕರಿಸುವನೋ, ಅಂತಹವನು ತನ್ನ ಪಾಪಗಳಿಂದ ಬಿಡುಗಡೆಯನ್ನು ಹೊಂದಿ ಪುರುಷಶ್ರೇಷ್ಠನೆಂದೆನಿಸುತ್ತಾನೆ. ||೫೬||

ಯಾವ ಮನುಷ್ಯನು ಒಂದು ಕ್ಷಣವಾದರೂ ಶಿವಲಿಂಗದಲ್ಲಿ ಶಿವನನ್ನು ಪೂಜಿಸುವನೋ, ಅಂತಹ ಮನುಷ್ಯನನ್ನು ಧನ್ಯನೆಂದೂ, ಕೃತಾರ್ಥನೆಂದೂ, ನರಶ್ರೇಷ್ಠನೆಂದೂ ತಿಳಿಯುತ್ತೇನೆ. ||೫೭||

ಯಾವ ಮನುಷ್ಯನು ತನ್ನ ಅವಯವಗಳೆಲ್ಲವನ್ನೂ ಭಸ್ಮದಿಂದ ಲೇಪಿಸಿಕೊಳ್ಳದೆ, ರುದ್ರಾಕ್ಷಾಭರಣವನ್ನು ಧರಿಸದೆ, ಶಂಕರನನ್ನು ಅರ್ಚಿಸುವುದಿಲ್ಲವೋ ಆತನು ಪಾಪಿಗಳ ಗುಂಪನ್ನು ಸೇರುವನು. ಅಥವಾ ಭಸ್ಮರುದ್ರಾಕ್ಷ ಧಾರಣೆ ಮಾಡಿ

ಶಿವಾರ್ಚನಾಗ್ನಿಸಂದಗ್ಧಾಃ ಪಾಪಪರ್ವತಕೋಟಿಯಃ ।
ತಸ್ಯಾಶಕ್ಯಂ ನ ಲೋಕೇಽಸ್ಮಿನ್ಸರ್ವಥಾ ನೃಪಬಾಲಕ ॥೫೯॥

ಭಾಗ್ಯಾದ್ಬುದ್ಧಿಃ ಪ್ರವೃದ್ಧಸ್ಸ್ಯಾಚ್ಛ್ರೀಮಹಾದೇವಪೂಜನೇ ।
ದುರ್ಲಭಂ ದುರ್ಲಭಂ ಯಸ್ಮಾತ್ ಶ್ರೀಮಹಾದೇವಪೂಜನಂ ॥೬೦॥

ಪ್ರಾತಃ ಕಾಲೇ ಮಹಾದೇವಂ ಭಸ್ಮರುದ್ರಾಕ್ಷಭೂಷಣಃ ।
ೄ ಲಿಂಗರೂಪಂ ಚ ಮುಚ್ಯತೇ ನಾತ್ರ ಸಂಶಯಃ ॥೬೧॥

ಕಾಲತ್ರಯೇಽಪಿ ಕರ್ತವ್ಯಂ ಶಿವಲಿಂಗಾರ್ಚನಂ ಬುಧೈಃ ।
ಮಧ್ಯೇ ಮಧ್ಯೇಽಪಿ ಕರ್ತವ್ಯಂ ವಿರತಿಸ್ತಸ್ಯ ನೋಚಿತಾ ॥೬೨॥

ಯಸ್ಯ ಸ್ಯಾದ್ವಿರತಿರ್ದೈವಾತ್ ಶ್ರೀಮಹಾದೇವಪೂಜನೇ ।
ಸ ನ ಸಂಸಾರಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ ॥೬೩॥

ದರೂ ಶಿವಾರ್ಚಕನಾಗದಿದ್ದರೂ ಆತನೂ ಪಾಪಿಯೆನಿಸುವನು. ಅವನ ಸರ್ವನಾಶಕಗಳಾದ ಕೋಟ್ಯಂತರ ಪಾಪಗಳೂ ಸಹ ಶಿವಾರ್ಚನವೆಂಬ ಅಗ್ನಿಯಿಂದ ದಗ್ಧವಾಗುತ್ತವೆ. ರಾಜಪುತ್ರನೇ, ಆದ್ದರಿಂದ ಪಾಪನಾಶಕ್ಕೆ ಶಿವಾರ್ಚನೆಯೇ ಮುಖ್ಯವೆಂದು ತಿಳಿ. ||೫೮-೫೯||

ಶ್ರೀ ಮಹಾದೇವ ಪೂಜೆಯು ಬಹು ದುರ್ಲಭವಾದುದರಿಂದ ಅದರಲ್ಲಿ ಬುದ್ಧಿಯು ಪ್ರವರ್ತಿಸಬೇಕಾದರೆ ತನ್ನ ಭಾಗ್ಯವೇ ಕಾರಣ. ||೬೦||

ಪ್ರಾತಃಕಾಲದಲ್ಲಿ ಭಸ್ಮ, ರುದ್ರಾಕ್ಷಿ ಇವುಗಳನ್ನು ಧರಿಸಿಕೊಂಡು ಲಿಂಗರೂಪಿಯಾದ ಮಹಾದೇವನನ್ನು ಪೂಜಿಸಿದವನು ಮುಕ್ತನಾಗುವನೆಂಬುದರಲ್ಲಿ ಸಂಶಯವಿಲ್ಲ. ||೬೧||

ಶಿವಲಿಂಗಾರ್ಚನೆಯನ್ನು ಮೂರು ಕಾಲಗಳಲ್ಲಿಯೂ ಮಾಡಬೇಕು. ಕಾಲಾತೀತವಾದರೂ ಮಧ್ಯಕಾಲದಲ್ಲಿಯಾದರೂ ಸಹ ಮಾಡಬೇಕಲ್ಲದೆ ಬಿಡುವುದು ಉಚಿತವಲ್ಲ ||೬೨||

ಯಾವನು ದುರದೃಷ್ಟದಿಂದ ಶಿವಪೂಜೆಯಲ್ಲಿ ಆಸಕ್ತಿಯನ್ನಿಡುವುದಿಲ್ಲವೋ, ಅವನು ಸಂಸಾರದ ಪಾಪಕರ್ಮಗಳಿಂದ ಬಿಡುಗಡೆಯನ್ನು ಹೊಂದಲಾರನು. ಇದರಲ್ಲಿ ಸಂಶಯವಿಲ್ಲ. ||೬೩||

ಪಾಪಾರ್ಣವಸಮಾಕೀರ್ಣೋ ನ ಲಿಂಗಾರ್ಚನತತ್ಪರಃ ।
ಲಿಂಗಾರ್ಚನಪರಿತ್ಯಾಗಾತ್ಪಾಪೀ ಭವಿಷ್ಯತಿ ॥೬೪॥

ಶಿವಲಿಂಗಾರ್ಚನಂ ಮನ್ಯೇ ಮಹಾಪಾತಕನಾಶಕಂ ।
ತನ್ನ ಜಾನಂತಿ ಸಹಸಾ ಮೂರ್ಖಾ ವಾನರವೃತ್ತಯಃ ॥೬೫॥

ಯೇಷಾಂ ನರಾಣಾಂ ಪುಣ್ಯಾನಿ ಬಹೂನಿ ವಿವಿಧಾನ್ಯಪಿ ।
ತೇಷಾಮೇವ ಭವೇಚ್ಛ್ರದ್ಧಾ ಶಿವಲಿಂಗಸಮರ್ಚನೇ ॥೬೬॥

ಶಿವಾರ್ಚನೇನ ಯಸ್ಯಾಸ್ತಿ ವಿಶ್ವಾಸೋ ಮುಕ್ತಿದಾಯಕೇ ।
ಸ ವೇದಬಾಹ್ಯ ಇತ್ಯೇವ ಜ್ಞಾತವ್ಯೋ ಮುನಿಭಿರ್ನೃಪ ॥೬೭॥

ಶಿವಾರ್ಚನಂ ವಿನಾ ಭೂಪ ನ ಪೇಯಂ ಜಲಮಪ್ಯಪಿ ।
ನ ಭೋಕ್ತವ್ಯಂ ಚ ಸಹಸಾ ನ ತಾಂಬೂಲಸ್ಯ ಚರ್ವಣಂ ॥೬೮॥

ಯದೇವ ಸ್ವೋಪಭೋಗಾರ್ಥಂ ಪವಿತ್ರಂ ವಸ್ತು ತನ್ಮುದಾ ।
ನಿವೇದ್ಯ ಶಂಭವೇ ಪಶ್ಚಾತ್ಸ್ವಭೋಗಾಯ ಪ್ರಕಲ್ಪಯೇತ್ ॥೬೯॥

---

ಪಾಪವೆಂಬ ಸಮುದ್ರದಲ್ಲಿ ಮುಳುಗಿದವನು ಲಿಂಗಾರ್ಚನೆಯಲ್ಲಿ ಆಸಕ್ತನಾಗಲಾರನು. ಆದರಿಂದ ಮತ್ತೆ ಅವನು ಪಾಪಿಯಾಗಿಯೇ ಜನಿಸುತ್ತಾನೆ. ॥೬೪॥

ನಾನು ಶಿವಲಿಂಗಾರ್ಚನೆಯನ್ನು ಮಹಾಪಾತಕವನ್ನಾಗಿ ತಿಳಿದಿದ್ದೇನೆ. ಇದನ್ನು ಮೂರ್ಖರೂ, ವಾನರವೃತ್ತಿಯುಳ್ಳವರೂ ತಿಳಿಯಲಾರರು. ॥೬೫॥

ಯಾರು ಬಹುವಾಗಿ ವಿಧವಿಧವಾದ ಪುಣ್ಯವನ್ನು ಸಂಪಾದಿಸುವರೋ ಅಂತಹವರಿಗೆ ಮಾತ್ರ ಶಿವಲಿಂಗಾರ್ಚನೆಯಲ್ಲಿ ಶ್ರದ್ಧೆಯು ಹುಟ್ಟುತ್ತದೆ. ॥೬೬॥

ಮೋಕ್ಷವನ್ನುಂಟುಮಾಡುವ ಶಿವಾರ್ಚನೆಯಲ್ಲಿ ಯಾರಿಗೆ ವಿಶ್ವಾಸವೇ ಇಲ್ಲವೋ, ಅಂತಹವನನ್ನು ಮುನಿಗಳು ವೇದಬಾಹಿರನೆಂದು ತಿಳಿಯುತ್ತಾರೆ. ॥೬೭॥

ರಾಜನೇ, ಶಿವಾರ್ಚನೆಯನ್ನು ಮಾಡದೆ, ಸ್ವಲ್ಪ ನೀರನ್ನೇ ಆಗಲಿ, ಆಹಾರವನ್ನೇ ಆಗಲಿ, ತಾಂಬೂಲವನ್ನೇ ಆಗಲಿ ನಿಜವಾಗಿಯೂ ಸ್ವೀಕರಿಸಬಾರದು. ॥೬೮॥

ನಮ್ಮ ಉಪಯೋಗಕ್ಕಾಗಿ ಯಾವ ಭೋಗ್ಯವಸ್ತು ಇದೆಯೋ ಅದನ್ನು ಸಂತೋಷದಿಂದ ಮೊದಲು ಶಂಭುವಿಗೆ ಸಮರ್ಪಿಸಿ ಪವಿತ್ರವನ್ನಾಗಿ ಮಾಡಿಕೊಂಡ ಅನಂತರ ಉಪಯೋಗಿಸಬೇಕು. ॥೬೯॥

ಯೇನ ಭಾಗ್ಯೋಪಕರಣಂ ನ ಶಿವಾಯ ಸಮರ್ಪಿತಂ ।
ಸ ನಾರಕೀತಿ ವಿಜ್ಞೇಯಃ ಸ ಪಾಮರವರೋ ಯತಃ ॥೭೦॥

ಶಿವವಿಜ್ಞಾನಹೀನಾ ಯೇ ತೇ ಸರ್ವೇ ಪಾಮರಾ ನರಾಃ ।
ವಾನರಾ ಏವ ತೇ ತಾವತ್ಸರ್ವೇಽಪಿ ನರಕಾಕರಾಃ ॥೭೧॥

ಅಶೈವಸೃಷ್ಟಿಃ ಕಷ್ಟಾಯ ತೇಷಾಂ ನರಕಪಾತನಂ ।
ಕರೋತ್ಯೇವ ಸದಾ ಕಾಲಃ ಕಾಲಭೇದೇನ ಕೇವಲಂ ॥೭೨॥

ಕಾಲಕಾಲಾರ್ಚನಂ ತ್ಯಕ್ತ್ವಾ ಯಃ ಸಂಚರತಿ ಕೇವಲಂ ।
ತಂ ಕಾಲದೂತಾಃ ಪಶ್ಯಂತಿ ಮುಹುರೇವ ಮಹೋದ್ಧತಾಃ ॥೭೩॥

ಪಾತನೀಯೋ ಮಯಾ ಯತ್ನಾದಯಂ ನರಕಸಾಗರೇ ।
ಸರ್ವಥೇತಿ ವದಂತಸ್ತೇ ಪ್ರಧಾವಂತಿ ಮುಹುರ್ಮುಹುಃ ॥೭೪॥

ಯಾವನು ತನ್ನ ಭೋಗಸಾಧನವಸ್ತುಗಳನ್ನು ಶಿವನಿಗೆ ಸಮರ್ಪಿಸುವುದಿಲ್ಲವೋ, ಅವನು ಬಹಳ ಪಾಮರನೆಂದೂ, ನರಕಕ್ಕೆ ಹೋಗಲು ಯೋಗ್ಯನೆಂದೂ ತಿಳಿಯಲ್ಪಡುತ್ತಾನೆ. ॥೭೦॥

ಯಾರು ಶಿವಜ್ಞಾನವನ್ನು ತಿಳಿಯುವುದಿಲ್ಲವೋ ಅವರು ಪಾಮರರು, ವಾನರರು ಎಂದೆನಿಸಲ್ಪಡುವರು. ಮತ್ತು ಅವರೆಲ್ಲರಿಗೂ ನರಕವೇ ಗತಿ. ॥೭೧॥

ಶಿವಭಕ್ತರಲ್ಲದವರ ಸೃಷ್ಟಿಯು ಕೇವಲ ನರಕಕ್ಕೆ ತಳ್ಳಿ ಕಷ್ಟಪಡಿಸುವುದಕ್ಕಾಗಿಯೇ. ಅವರನ್ನು ಯಾವಾಗಲೂ ಯಮನು ಕಾಲಾನುಗುಣವಾಗಿ ನರಕಕ್ಕೆ ತಳ್ಳುತ್ತಾನೆ. ॥೭೨॥

ಯಾರು ಸಕಾಲದಲ್ಲಿ ಶಿವಾರ್ಚನೆಯನ್ನು ಮಾಡದೇ ಅಲೆಯುತ್ತಿರುವರೋ, ಅಂತಹವರನ್ನು ಯಮದೂತರು ಬಾರಿಬಾರಿಗೂ ಹೆಚ್ಚು ಕೋಪಗೊಂಡವರಾಗಿ ನೋಡುತ್ತಾರೆ. ಮತ್ತು ॥೭೩॥

ಈತನನ್ನು ಖಂಡಿತವಾಗಿ ನರಕವೆಂಬ ಸಾಗರದಲ್ಲಿ ಬೀಳಿಸಬೇಕೆಂದು ಶಪಥ ಮಾಡುತ್ತಾ ತಿರುಗುತ್ತಿರುತ್ತಾರೆ. ॥೭೪॥

ಶಂಕರಾನರ್ಚಕಸ್ಯಾಸ್ಯ ಕದಾ ವಾ ಮರಣಂ ಭವೇತ್ ।
ಕದಾ ನೇಯ ಇತಿ ಪ್ರಾಯಃ ಪ್ರಚರಂತಿ ಪ್ರತಿಕ್ಷಣಂ ॥೭೫॥

ಆಯುರಸ್ಯಾಖಿಲಂ ಕ್ಷೀಣಂ ಶಿವಾನರ್ಚನತಸ್ತತಃ ।
ಅಯಂ ನೇಯೋ ಮಹಾಘೋರೇ ಕುಂಭೀಪಾಕೇ ನಿಪಾತ್ಯತೇ॥೭೬॥

ಅಯಂ ದುರಾತ್ಮಾ ದುರ್ವೃತ್ತಃ ಶಿವಾನರ್ಚನತತ್ಪರಃ ।
ಏತದರ್ಥಂ ಮಯಾ ಸೃಷ್ಟಾಃ ತಪ್ತಾಶ್ಚಾಯಸಶೃಂಖಲಾಃ ॥೭೭॥

ಸಂತಪ್ತೇಷ್ವಾಯಸಸ್ತಂಭೇಷ್ವೈವಾಂಸ್ತಪ್ತಮುದ್ಗರೈಃ ।
ಬಧ್ವಾ ಸಂತಾಡಯಿಷ್ಯಾಮೋ ಮುಹುರದ್ಯ ನ ಸಂಶಯಃ ॥೭೮॥

ಪೂರ್ವಂ ಯಮಪುರೀ ಸರ್ವಾ ಶೂನ್ಯಾ ಜಾತಾ ತತಃಪರಂ ।
ಅಶೈವೈರೇವ ಸಂಪೂರ್ಣಾ ಸಾ ಶಿವ್ವಾಸಾಯ ಕಲ್ಪಿತಾ ॥೭೯॥

ಒಂದುಕ್ಷಣದಲ್ಲಿಯೂ ಶಂಕರಾರ್ಚನೆಯನ್ನು ಮಾಡದ ಈತನಿಗೆ ಯಾವಾಗ ಮರಣವು ಉಂಟಾಗುತ್ತದೆ! ಯಾವಾಗ ಈತನನ್ನು ತೆಗೆದುಕೊಂಡು ಹೋಗುವುದು? ಎಂದು ಯೋಚಿಸುತ್ತಿರುವರು. ॥೭೫॥

ಇವನು ತನ್ನ ಆಯುಸ್ಸನ್ನೆಲ್ಲಾ ಶಿವಪೂಜೆಯನ್ನು ಮಾಡದೆ ಕಳೆದಿರುತ್ತಾನೆ. ಆದ್ದರಿಂದ ಈತನು ಕುಂಭೀಪಾಕನರಕದಲ್ಲಿ ಬೀಳತಕ್ಕವನು ಎಂದು ಯೋಚಿಸುತ್ತಾರೆ. ॥೭೬॥

ಈತನು ದುರಾತ್ಮನಾಗಿಯೂ, ದುರಾಚಾರಿಯಾಗಿಯೂ, ಶಿವಾರ್ಚನೆಯಲ್ಲಿ ಅನಾಸಕ್ತನಾಗಿಯೂ ಇರುತ್ತಾನೆ. ಇವನಿಗಾಗಿಯೇ ನಾನು ಚೆನ್ನಾಗಿ ಕಾಯಿಸಲ್ಪಟ್ಟ ಕಬ್ಬಿಣದ ಸರಪಳಿಗಳನ್ನು ಇಟ್ಟಿರುವೆನು. ॥೭೭॥

ಈ ಶಂಕರಾರ್ಚಕರಲ್ಲದವರನ್ನು ಚೆನ್ನಾಗಿ ಕಾಯಿಸಿದ ಕಬ್ಬಿಣದ ಕಂಬಿಗಳಲ್ಲಿ ಕಾಯಿಸಿದ ಬೀಡಿಗಳಿಂದ ಕಟ್ಟಿಹಾಕಿ, ಹೊಡೆಯುತ್ತೇವೆ. ಇದರಲ್ಲಿ ಯಾವ ಸಂಶಯವೂ ಇಲ್ಲ. ॥೭೮॥

ಪೂರ್ವದಲ್ಲಿ ಯಮನ ಪಟ್ಟಣವು ಶೂನ್ಯವಾಗಿತ್ತು. ಅಲ್ಲಿಂದ ಮುಂದೆ ಅಲ್ಲಿ ಶಿವಾರ್ಚಕರಲ್ಲದವರನ್ನು ಇಡುವುದಕ್ಕೆ ಮೊದಲಾಗಿ ಈಗ ಅದು ಶಿವದ್ವೇಷಿಗಳ ನೆಲೆವೀಡಾಗಿದೆ. ॥೭೯॥

ಅಶೈವಸದನತ್ವೇನ ಕುಂಭೀಪಾಕಂ ವದತ್ಯತಃ ।
ತತ್ರಾಶೈವಾ ಪ್ರಯತ್ನೇನ ನೇಯಾ ಏವ ನ ಸಂಶಯಃ ॥೮೦॥

ಅಶಾಂಭವಾಸ್ತು ಪಾಪಿಷ್ಠಾಃ ಸರ್ವೇ ವಿಷ್ಠಾಲಯೇಷ್ವಪಿ ।
ತಪ್ತೇಷು ಪಾತನೀಯಾಸ್ತೇ ನ ತ್ಯಾಜ್ಯಾಃ ಸರ್ವಥಾ ಮಯಾ ॥೮೧॥

ಸಂತಪ್ತಮೂತ್ರಕುಂಡೇಷು ಶಿವಾರ್ಚನವಿವರ್ಜಿತಾಃ ।
ಪತಿಷ್ಯಂತಿ ನ ಸಂದೇಹಸ್ತೇಷಾಂ ಸ್ಥಾನಾನಿ ತಾನ್ಯಪಿ ॥೮೨॥

ಯಾನಿ ಯಾನ್ಯತಿದುಷ್ಟಾನಿ ಸ್ಥಾನಾನಿ ಯಮಮಂದಿರೇ ।
ತಾನಿ ಸ್ಥಾನಾನಿ ಸೃಷ್ಟಾನಿ ಶೈವಾನ್ಯಸ್ಯ ದುರಾತ್ಮನಃ ॥೮೩॥

ಪಾಯುಕುಂಡಾನಿ ತಪ್ತಾನಿ ರೇತಸಾ ಸಂಯುತಾನ್ಯಪಿ ।
ಅಶೈವಾರ್ಥೇ ನಿರ್ಮಿತಾನಿಯಮೇನೈವ ಮಹಾತ್ಮನಾ ॥೮೪॥

ಸರ್ವೇ ಪಾದಾನುರೂಪೇಣ ದಂಡನೀಯಾಃ ಪ್ರಯತ್ನತಃ ।
ಅಶೈವಾನಾಂ ತು ನ ತಥಾ ತೇ ಘೋರನರಕಾಶ್ರಯಾಃ ॥೮೫॥

ಅಲ್ಲಿ ಆ ರೀತಿ ಶಿವಾರ್ಚಕರಲ್ಲದವರನ್ನು ಇಡುವುದರಿಂದ ಕುಂಭೀಪಾಕವೆಂದು ಹೆಸರಾಯಿತು. ಶಿವಾರ್ಚಕರಲ್ಲದವರನ್ನೆಲ್ಲಾ ಅಲ್ಲಿಗೆ ಒಯ್ಯಬೇಕು. ॥೮೦॥

ಪರಶಿವಭಕ್ತರಲ್ಲದ ಇವರೆಲ್ಲರೂ ಪಾಪಿಗಳು. ಎಲ್ಲರನ್ನೂ ಸುಡುವ ಮಲ ಮೂತ್ರ ಗೃಹದಲ್ಲಿ ಹಾಕಬೇಕು. ಇವರನ್ನು ಖಂಡಿತ ಬಿಡಕೂಡದು. ॥೮೧॥

ಶಿವಾರ್ಚಕರಲ್ಲದವರು ಚೆನ್ನಾಗಿ ಕಾಯಿಸಿದ ಮೂತ್ರ ಕುಂಡಗಳಲ್ಲಿ ಬೀಳುತ್ತಾರೆ. ಆ ಕುಂಡಗಳೇ ಅವರ ಸ್ಥಾನಗಳು. ॥೮೨॥

ಯಮಗೃಹದಲ್ಲಿ ಯಾವಯಾವ ದುಷ್ಟ ಸ್ಥಾನಗಳಿವೆಯೋ, ಅವುಗಳೆಲ್ಲಾ ಈ ತರಹ ಶಿವದ್ವೇಷಿಗಳಾದ ದುರಾತ್ಮರಿಗಾಗಿಯೇ ಸೃಜಿಸಲ್ಪಟ್ಟಿವೆ. ॥೮೩॥

ಬಹು ತಪ್ತಗಳಾಗಿಯೂ, ರೇತಸ್ಸುಗಳಿಂದ ತುಂಬಿರುವ ಅಮೇಧ್ಯ ಕುಂಡಗಳನ್ನು, ಶೈವರಲ್ಲದವರಿಗೆ ಮಾತ್ರ ಮಹಾತ್ಮನಾದ ಶಿವನು ಸೃಜಿಸಿದ್ದಾನೆ. ॥೮೪॥

ಲೋಕದಲ್ಲಿ ಎಲ್ಲರೂ ಅವರವರ ಪಾಪಕರ್ಮಾನುಸಾರವಾಗಿ ಶಿಕ್ಷೆಗೆ ಒಳಪಡುತ್ತಾರೆ. ಶಿವದೂಷಕರಿಗೆ ಮಾತ್ರ ಘೋರನರಕವೇ ಖಂಡಿತ. ॥೮೫॥

ಕಿಂ ಚಾವಾಸಸ್ತು ಯೋ ಯೇಷಾಂ ಸ ತೇಷಾಮಿತಿ ಸಿಶ್ಚಯಾತ್ ।
ಅಶೈವಾನಾಂ ನಿವಾಸಾಯ ಕ್ಲುಪ್ತಂ ನರಕಮಂದಿರಂ ॥೮೬॥

ಸಂತಪ್ತಭಿಂಡಿಪಾಲಾನಾಂ ಕುಂಡೇಷು ವಿನಿಪಾತಿತಾಃ ।
ಅಶೈವಾಸ್ತು ಮಯಾ ಪೂರ್ವಂ ತೇ ತಿಷ್ಠಂತ್ಯಧುನಾಪಿ ಹಿ ॥೮೭॥

ತೇ ತಾವನ್ನ ಮಯಾ ತ್ಯಾಜ್ಯಾಃ ಕಲ್ಪಾಂತೇಽಪಿ ನ ಸಂಶಯಃ ।
ಅನಂತದುಃಖದಾನಾಯ ವಿಧಿನಾ ಸೃಷ್ಟ ಇತ್ಯತಃ ॥೮೮॥

ಇತ್ಥಂ ಯಮಭಟಾಃ ಸರ್ವೇ ಪ್ರವದಂತಿ ಹಸಂತಿ ಚ ।
ಅಶೈವಾಲೋಕನೇಽನೈವ ಬಂಭಾರವಪುರಸ್ಸರಂ ॥೮೯॥

ಅತಃ ಕುರು ಪ್ರಯತ್ನೇನ ಲಿಂಗೇ ಶಂಕರಪೂಜನಂ ।
ಲಿಂಗಾರ್ಚನೇ ಕೃತೇ ಭೀತಿರ್ನ ಮೃತ್ಯೋರಪಿ ಜಾಯತೇ ॥೯೦॥

---

ಅವರ ಕರ್ಮಾನುಸಾರವಾಗಿ ಅವರ ಆವಾಸಸ್ಥಾನವೂ ಇರಬೇಕೆಂಬ ನಿಶ್ಚಯದಂತೆ ಶೈವರಲ್ಲದವರ ನಿವಾಸಕ್ಕಾಗಿಯೇ ನರಕವು ಸೃಷ್ಟಿಸಲ್ಪಟ್ಟಿದೆ. ॥೮೬॥

ನಾನು ಪೂರ್ವದಲ್ಲಿ ಯಾವ ಶೈವರಲ್ಲದವರನ್ನು ಚೆನ್ನಾಗಿ ಕಾದ ಅಗುಳಿಗಳಿಂದ ತಯಾರಿಸಿದ ಕುಂಡಗಳಲ್ಲಿ ಹಾಕಿದ್ದೆನೋ, ಅವರು ಈಗಲೂ ಸಹ ಅಲ್ಲಿಯೇ ಇರುತ್ತಾರೆ. ॥೮೭॥

ಅವರಿಗೆ ಬಹುವಾಗಿ ದುಃಖವನ್ನು ಕೊಡಬೇಕೆಂದು ವಿಧಿಯಾಜ್ಞೆ ಇರುವುದರಿಂದ ನಾನು ಖಂಡಿತ ಕಲ್ಪಾಂತರದಲ್ಲಿಯೂ ಅವರನ್ನು ಬಿಡುವುದಿಲ್ಲ. ॥೮೮॥

ಈ ರೀತಿಯಾಗಿ ಯಮಭಟರೆಲ್ಲಾ ಶೈವರಲ್ಲದವರನ್ನು ನೋಡಿ, ಗಟ್ಟಿಯಾದ ಧ್ವನಿಯಿಂದ ಮಾತನಾಡುತ್ತಾರೆ ಮತ್ತು ನಗುತ್ತಾರೆ. ॥೮೯॥

ಎಲೈ ಬಾಲಕನೇ, ಈ ಕಾರಣದಿಂದ ನೀನು ಲಿಂಗದಲ್ಲಿ ಶಿವಪೂಜೆಯನ್ನು ಪ್ರಯತ್ನದಿಂದಲಾದರೂ ಮಾಡು. ಹಾಗೆ ನಡೆದರೆ ನಿನಗೆ ಯಮನ ಭಯವು ಉಂಟಾಗಲಾರದು. ॥೯೦॥

ಮೃತ್ಯುರ್ಬಿಭೇತಿ ಭೀತಾಸ್ತೇ ಕಾಲಸ್ಯಾಽಪಿ ಭಟಾಸ್ತದಾ ।
ಮೃತ್ಯುಂಜಯಾರ್ಚಕಂ ದೃಷ್ಟ್ವಾ ಜಲೈರಪಿ ಫಲೈರಪಿ ॥೯೧॥

ಕಲ್ಯಾಣಾನ್ಯನುಧಾವಂತಿ ಕಲ್ಯಾಣಪತಿಪೂಜಯಾ ।
ಸರ್ವಕಲ್ಯಾಣನಾಥೋಽಯಂ ಮಂಗಳಾಪತಿರೀಶ್ವರಃ ॥೯೨॥

ಸ ಸರ್ವಮಂಗಳಾಕಾಂತಃ ಸರ್ವಮಂಗಳಸಂಶ್ರಯಃ ।
ಸರ್ವಮಂಗಳದಾತಾ ಚ ಶಿವಭಕ್ತಾಯ ಕೇವಲಂ ॥೯೩॥

ಆಲಸ್ಯೇನಾಪಿ ಯಃ ಕುರ್ಯಾನ್ಮಹಾದೇವಸ್ಯ ಪೂಜನಂ ।
ಸ ತರತ್ಯೇವ ಸಂಸಾರಾನ್ಮಹಾಪದ್ಘೋರಸಾಗರಾತ್ ॥೯೪॥

ಸುಲಭಂ ಚ ಮಹೇಶಸ್ಯ ಪೂಜನಂ ಶಾಂಭವಸ್ಯ ತು ।
ಅಶಾಂಭವಾನಾಂ ಕಠಿನಂ ತತ್ರಾನಧಿಕೃತೋಽಪಿ ಸಃ ॥೯೫॥

ಕೇವಲ ನೀರು ಅಥವಾ ಫಲಗಳಿಂದಲಾದರೂ ಮೃತ್ಯುಂಜಯನನ್ನು ಪೂಜೆ ಮಾಡಿದವನನ್ನು ಕಂಡು ಯಮನ ಭಟರೂ, ಯಮನೂ ಕೂಡ ಭೀತಿಗೊಳ್ಳುವರು. ||೯೧||

ಈಶ್ವರನು ಮಂಗಳಾಧಿಪನಾಗಿಯೂ, ಕಲ್ಯಾಣದಾಯಕನಾಗಿಯೂ ಇರುತ್ತಾನೆ. ಸರ್ವಮಂಗಳೆಗೆ ಒಡೆಯನಾದ ಪರಶಿವನಲ್ಲಿ ಸಕಲ ಸನ್ಮಂಗಳಗಳೂ ಇರುವುದರಲ್ಲಿ ಸಂಶಯವೇನು ? ಆದ್ದರಿಂದ ಆ ಶಿವಭಕ್ತನಿಗೆ ಸಕಲ ಕಲ್ಯಾಣಗಳೂ ಒದಗುತ್ತವೆ. ||೯೨-೯೩||

ಕೇವಲ ಉದಾಸೀನದಿಂದಲಾದರೂ ಸರಿ, ಶಿವಪೂಜೆಮಾಡಿದ ನರನು ಮಹಾಘೋರವಾಗಿಯೂ, ಆಪದ್ದಾಯಕವಾಗಿಯೂ ಇರುವ ಸಂಸಾರವನ್ನು ದಾಟಿಯೇ ದಾಟುತ್ತಾನೆ. ||೯೪||

ಮಹೇಶಪೂಜೆಯು ಭಕ್ತಿ ಭರಿತನಿಗೆ ಸುಲಭವಾಗಿಯೂ, ಭಕ್ತಿ ಶೂನ್ಯನಿಗೆ ಕಠಿಣವಾಗಿಯೂ, ತೋರಲು, ಅವರವರ ಆಸಕ್ತಿಯೇ ಕಾರಣ. ||೯೫||

ಶೈವತ್ವಮಂಗಂ ಶಿವಪೂಜನೇಷು
ಮುಖ್ಯಂ ನ ತೇನಾಪಿ ವಿನಾ ಶಿವಾರ್ಚಾ ।
ಅನ್ಯಚ್ಚ ತತ್ಸಾಧನಮಸ್ತು ತತ್ತು
ಮುಖ್ಯಂ ತದೇವೇತ್ಯವಧಾರಿತಂ ಹಿ ॥೯೬॥

ತೇನಾಧಿಕಾರೇ ಸತಿ ಸರ್ವದಾಪಿ
ಶಿವಾರ್ಚನಂ ತೇನ ಕೃತಂ ಪ್ರಯತ್ನಾತ್ ।
ಸರ್ವಾರ್ಥಸಿಧ್ಯೈ ಭವತೀತಿ ಮನ್ಯೇ
ಸ ಏವ ಧನ್ಯೋ ಭುವನತ್ರಯೇಽಪಿ ॥೯೭॥

ಶೈವೇನ ದತ್ತಂ ಫಲಮಂಬುಪತ್ರಂ
ಶುಷ್ಕಂ ನವಂ ವಾ ತ್ರುಟಿತಂ ಕ್ಷತಂ ವಾ ।
ಗೃಹ್ಣಾತಿ ಶಂಭುಃ ಶಿರಸಾ ದದಾತಿ
ತಸ್ಮಿನ್ ಫಲಾನ್ಯಮ್ಲಫಲಾನಿ ನಿತ್ಯಂ ॥೯೮॥

ಶಿವಪೂಜೆಗೆ ಬಹಳವಾಗಿ ಅಂಗಗಳು ಇರಬಹುದು. ಅಥವಾ ಅದಕ್ಕೆ ಸಾಧನಗಳೂ ಬಹಳವಿವೆ. ಆದರೂ ಅವುಗಳ ಮಧ್ಯೆ ಶಿವಭಕ್ತಿಯೂ ಒಂದು ಅಂಗವಾಗಿರುತ್ತದೆ. ಅಥವಾ ಅದಿಲ್ಲದೆ ಶಿವಪೂಜೆಯು ನೆರವೇರಬಹುದು. ಆದರೂ ಶಿವನಲ್ಲಿ ಭಕ್ತಿಯು ಬಹು ಮುಖ್ಯವಾದ ಅಂಗವೆಂದು ತಿಳಿಯಲ್ಪಟ್ಟಿರುತ್ತದೆ. ॥೯೬॥

ಯಾವನು ಆ ರೀತಿಯಾದ ಭಕ್ತಿಯನ್ನಿಟ್ಟು ಪ್ರಯತ್ನಪೂರ್ವಕವಾಗಿ ಶಿವಾರ್ಚನೆಯನ್ನು ಮಾಡುತ್ತಾನೆಯೋ, ಅಂತಹವನಿಗೆ ಎಲ್ಲ ಅಭೀಷ್ಟಗಳೂ ಸಿದ್ಧಿಸುವುವು. ಮತ್ತು ಮೂರು ಲೋಕಗಳಲ್ಲಿಯೂ ಅವನೇ ಧನ್ಯನೆನಿಸುವನು. ಅವನೇ ಶಿವಾರ್ಚನೆಗೆ ಅಧಿಕಾರಿಯೆನಿಸುವನು. ॥೯೭॥

ಶಿವಭಕ್ತನಾದವನು ಈಶ್ವರನಿಗೆ ಶುದ್ಧವಾದ ನೀರು, ಪತ್ರೆ, ಹೊಸದಾದ ಅಥವಾ ಒಣಗಿದ ಹಣ್ಣು, ಇವುಗಳನ್ನು ಭಕ್ತಿಯಿಂದ ಸಮರ್ಪಿಸಿದರೂ, ಈಶ್ವರನು ಅದನ್ನು ಪ್ರೀತಿಯಿಂದ ಸ್ವೀಕರಿಸಿ ಭಕ್ತನಿಗೆ ಯಾವಾಗಲೂ ನಾಶವಾಗದಂತಹ ಫಲವನ್ನು (ಮೋಕ್ಷವನ್ನು) ಕೊಡುತ್ತಾನೆ. ॥೯೮॥

ಯೋ ವಿಶ್ವಸ್ಯ ಮಹೇಶ್ವರಂ ತ್ರಿನಯನಂ ಲಿಂಗೇ ಸಮಭ್ಯರ್ಚಯೇ ।
ದ್ಭಕ್ತ್ಯಾ ಭೂತಿವಿಭೂಷಿತೋऽತಿಮುದಿತೋ ರುದ್ರಾಕ್ಷಭೂಷಾಶ್ರಯಃ ।
ತತ್ಪದಾಂಬುಜರೇಣುಭಿರ್ಜಗದಿದಂ ಪೂತಂ ಸುರಾಃ ಪಾವನಾಃ ।
ಸರ್ವೇ ವಿಷ್ಣುಚತುರ್ಮುಖಪ್ರಭೃತಯೋ ತಸ್ಮಾತ್ಸ ಧನ್ಯಃ ಸದಾ ॥೯೯॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ರಾಜಬಾಲಕ, ನಾರದಸಂವಾದೇ ಶಿವಪೂಜಾಮಹಿಮಾನು
ವರ್ಣನಂ ನಾಮ ಪಂಚಮೋऽಧ್ಯಾಯಃ

---

ಯಾವ ಮನುಷ್ಯನು ಭಸ್ಮದಿಂದಲೂ, ರುದ್ರಾಕ್ಷಿಯಿಂದಲೂ, ಅಲಂಕೃತನಾಗಿ ಹಸನ್ಮುಖಿಯಾಗಿ ಲಿಂಗದಲ್ಲಿ ಜಗತ್ಪತಿಯಾದ ಮಹೇಶ್ವರನನ್ನು ಭಕ್ತಿಯಿಂದ ಪೂಜಿಸುವನೋ, ಅಂತಹವನ ಪಾದರಜಸ್ಸಿನಿಂದ ಈ ಜಗತ್ತೂ, ಮಹೇಶ ಬ್ರಹ್ಮ, ವಿಷ್ಣು, ಮುಂತಾದ ಸಮಸ್ತ ದೇವತೆಗಳೂ ಸಹ ಪವಿತ್ರರಾಗುತ್ತಾರೆ. ಆದ್ದರಿಂದ ಆತನು ಯಾವಾಗಲೂ ಧನ್ಯನೆಂದೆನಿಸುವನೆಂದು ನಾರದನು ಆ ಬಾಲಕನಿಗೆ ಹೇಳಿದ ನೆಂಬುದಾಗಿ ಯಾಜ್ಞ್ಯವಲ್ಕ್ಯನು ಜನಕ ಮಹಾರಾಜನಿಗೆ ಶಿವಪೂಜಾಮಹಿಮೆ ಯನ್ನು ವಿವರಿಸಿದನು. ||೯೯||

ಎಂಬಲ್ಲಿಗೆ " ಹರ. ಎಂಬ ಹೆಸರುಳ್ಳ ಶಿವರಹಸ್ಯ ಪುರಾಣದ ಮೂರನೇ ಅಂಶದ ಉತ್ತರಾರ್ಧದಲ್ಲಿ ರಾಜ, ರಾಜನ ಮಗ, ಮತ್ತು ನಾರದ ಇವರ ಸಂವಾದರೂಪವಾದ ಶಿವಪೂಜಾಮಹಿಮೆಯ ವರ್ಣನವೆಂಬ ಐದನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಷಷ್ಠೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತಿ ತಸ್ಯ ವಚನಂ ಶ್ರುತ್ವಾ ಪ್ರಹೃಷ್ಟಃ ಸೋಽಪಿ ಬಾಲಕಃ ।
ಮಹಾವಿದ್ಯಾಂ ಪ್ರಯಚ್ಛೇತಿ ಪ್ರಣತೋ ನೃಪನಂದನಃ ||೧||

ಮಹಾವಿದ್ಯಾಪ್ರದಾನೇನ ಕೃತಾರ್ಥಂ ಕುರು ಮಾಂ ಗುರೋ ।
ಶಿವವಿಜ್ಞಾನಸಂಪನ್ನೋ ಗುರುರ್ದುರ್ಲಭ ಏವ ಹಿ ||೨||

ಉಪದಿಷ್ಟಾ ಮಹಾವಿದ್ಯಾ ಯದಿ ಸದ್ಗುರುಣಾ ತದಾ ।
ಮೋಕ್ಷೋಪಯುಕ್ತಾ ಸಾ ಸ್ಯಾದ್ಭವತೀತ್ಯೇವ ಮೇ ಮತಿಃ ||೩||

## ಆರನೆಯ ಅಧ್ಯಾಯ

ಈ ರೀತಿಯಾದ ನಾರದನ ಮಾತನ್ನು ಕೇಳಿ ಆ ರಾಜಬಾಲಕನು ಸಂತುಷ್ಟನಾಗಿ ಮಹಾವಿದ್ಯೆಯನ್ನು ಅನುಗ್ರಹಿಸಬೇಕೆಂದು ನಾರದಮಹರ್ಷಿಯನ್ನು ಹೀಗೆ ಕೇಳಿಕೊಂಡನು. ||೧||

"ಎಲೈ ಗುರುವೆ, ನಿನ್ನಂತಹ ಶಿವಜ್ಞಾನಿಯಾದ ಗುರುವು ಸಿಕ್ಕುವುದು ದುರ್ಲಭ. ಆದ್ದರಿಂದ ನೀನು ಆ ಮಹಾವಿದ್ಯೆಯನ್ನು ನನಗೆ ಉಪದೇಶಿಸಿ ಕೃತಾರ್ಥನನ್ನಾಗಿ ಮಾಡು. ||೨||

ಎಲೈ ಋಷಿಶ್ರೇಷ್ಠನೇ, ನೀನು ಸಕಲ ಉಪನಿಷದರ್ಥವನ್ನು ತಿಳಿದವರಲ್ಲಿ ನಿಷ್ಣಾತನಾಗಿದ್ದೀಯೆ. ನೀನು ನನಗೆ ಶಿವವಿದ್ಯೆಯನ್ನುಪದೇಶಿಸಿ ಕೃತಾರ್ಥನನ್ನಾಗಿ ಮಾಡಬೇಕು. ||೩||

ಸರ್ವವೇದಾಂತತತ್ವಜ್ಞಸ್ತ್ವಮದ್ಯ ಮುನಿಸತ್ತಮ ।
ಶಿವವಿದ್ಯಾಂ ಪ್ರಯಚ್ಛಾದ್ಯ ಕೃತಾರ್ಥಂ ಕುರು ಮಾಂ ಗುರೋ ॥೪॥

ಮದದೃಷ್ಟವಶೇನೈವ ತವಾತ್ರಾದ್ಯ ಸಮಾಗಮಃ ।
ಮಯ್ಯಸ್ತ್ವನುಗ್ರಹಃ ಶಂಭೋರಿತ್ಯನೇನ ಮಿತಂ ಖಲು ॥೫॥

ಯದ್ಯದ್ಯ ಶಾಂಭವೀಂ ವಿದ್ಯಾ ಮಹ್ಯಂ ದಾಸ್ಯಸಿ ಸಾದರಂ ।
ತದಾ ಸ್ಯಾಜ್ಜಲದಾನಂ ಮೇ ದೂತೀಭೋಜನಮಸ್ಯ ತು ॥೬॥

ಯಮಸಿಂಹಾಸನೇ ವಾರ್ತಾ ಸಂಸ್ಥಿತೇನ ಮಯಾ ಶ್ರುತಾ ।
ತಾಂ ವಾರ್ತಾಮಧುನಾ ವಕ್ಷ್ಯೇಶೃಣು ನಾರದ ಸಾದರಂ ॥೭॥

ಮಯಿ ತತ್ರ ಸ್ಥಿತೇ ಕೋಽಪಿ ಸಮಾನೀತೋ ಭಟೈಸ್ತದಾ ।
ತಂ ದೃಷ್ಟ್ವಾ ಪ್ರಾಹ ಕಾಲೋಽಪಿ ಚಿತ್ರಗುಪ್ತಂ ಮಹಾಮತಿಂ ॥೮॥

ಕಿಮನೇನ ಮಹಾವಿದ್ಯಾ ಪ್ರಾಪ್ತಾ ನೇತ್ಯತಿಸತ್ವರಂ ।
ತತಸ್ತೇನಾಪಿ ನ ಪ್ರಾಪ್ತಾ ಸಾ ವಿದ್ಯೇತ್ಯುಕ್ತಮಾದರಾತ್ ॥೯॥

---

ಆ ಮಹಾವಿದ್ಯೆಯನ್ನು ಸದ್ಗುರುವಿನಿಂದ ಉಪದೇಶವಾಗಿ ಪಡೆದದ್ದೇ ಆದರೆ ಅದು ಮೋಕ್ಷೋಪಯೋಗಿಯಾಗುವುದೆಂದು ನನ್ನ ಅಭಿಪ್ರಾಯ. ॥೪॥

ನನಗೆ ಶಂಭುವಿನ ಅನುಗ್ರಹವುಂಟುಮಾಡಲೋಸುಗ ನನ್ನ ಅದೃಷ್ಟ ವಿಶೇಷದಿಂದಲೇ ಇಲ್ಲಿಗೆ ನೀನು ಬಂದಂತಾಯಿತು. ॥೫॥

ನೀನು ನನಗೆ ಶಿವವಿದ್ಯೆಯನ್ನು ಉಪದೇಶಿಸುವುದಾದರೆ ಜಲಪಾನ, ಮತ್ತು ದೂತಿಯರು ಕೊಡುವ ಆಹಾರಭೋಜನವೂ ಸಹ ನನ್ನಿಂದ ದೂರವಾಗುತ್ತದೆ. ॥೬॥

ನಾನು ಯಮನ ಸಿಂಹಾಸನದಲ್ಲಿ ಕುಳಿತು ಯಾವ ವಾರ್ತೆಯನ್ನು ಕೇಳಿದೆನೋ ಆ ಮಾತನ್ನು ನಾನು ಈಗ ಹೇಳುತ್ತೇನೆ ಕೇಳು. ॥೭॥

ನಾನು ಅಲ್ಲಿದ್ದಾಗ ಯಮಭಟರು ಯಾವನೋ ಒಬ್ಬನನ್ನು ಅಲ್ಲಿಗೆ ಕರೆತಂದರು. ಆತನನ್ನು ಕಂಡು ಯಮನು ಚಿತ್ರಗುಪ್ತನನ್ನು ಕುರಿತು ಇವನಿಗೆ "ಮಹಾವಿದ್ಯೆಯು ಉಪದೇಶವಾಗಿದೆಯೇ, ಅಥವಾ ಇಲ್ಲವೇ" ಎಂದು ಕೇಳಿದನು. ಅದಕ್ಕೆ ಚಿತ್ರಗುಪ್ತನು ಇಲ್ಲವೆಂದು ಉತ್ತರಕೊಟ್ಟನು. ॥೮-೯॥

ತತಃ ಪರಂ ಯಮಃ ಕ್ರೂರಃ ತಂ ದೃಷ್ಟ್ವಾ ಭೀಮಶಾಸನಃ ।
ಕೋಪಾಗ್ನಿನಾ ಪರಂ ದಗ್ಧ್ವಾ ನ ಶಾಂತಃ ಕೋಪಸಂಕುಲಃ ॥೧೦॥

ತತಸ್ತಂ ಪ್ರೇಷಯಾಮಾಸ ಕುಂಭೀಪಾಕಾಯ ಸಾದರಂ ।
ಪಚ್ಯತಾಂ ಖಾದ್ಯತಾಂ ತೀವ್ರೈರಗ್ನಿಶಸ್ತ್ರೈರ್ಮುಹುಮುಹುಃ ॥೧೧॥

ನ ಪ್ರಾಪ್ತಾ ಶಾಂಭವೀ ವಿದ್ಯಾ ತೇನ ತಾವದ್ದುರಾತ್ಮನಾ ।
ಅತಸ್ತೇನೈವ ತದ್ದುಃಖಮಶೈವಃ ಪ್ರಾಪ ದುರ್ಮತಿಃ ॥೧೨॥

ಶಿವವಿದ್ಯಾವಿನಿರ್ಮುಕ್ತೋ ನ ಮುಕ್ತೋ ಭವತಿ ಧ್ರುವಂ ।
ತಯೈವ ವಿದ್ಯಯಾ ಪೂರ್ವಂ ಗಣತ್ವಂ ಪ್ರಾಪ್ತಮಾಸ್ತಿಕೈಃ ॥೧೩॥

ಶಿವವಿದ್ಯಾಮನುಪ್ರಾಪ್ಯ ಶಿವಾರ್ಚನಪರೋ ಯದಿ ।
ತದಾ ಸಂಸಾರಮೋಕ್ಷಸ್ಸ್ಯಾದಿತಿ ಶ್ರುತಮನೇಕಧಾ ॥೧೪॥

ಅನಂತರ ಯಮನು ಭಯಂಕರನಾದ ಶಾಸನವನ್ನು ಮಾಡತಕ್ಕವನೂ ಕ್ರೂರನೂ ಆಗಿ ಆತನನ್ನು ಕೋಪಾಗ್ನಿಯಿಂದ ಭಸ್ಮಮಾಡಿದನು. ಆದರೂ ಅವನ ಕೋಪವು ಶಾಂತವಾಗಲಿಲ್ಲ. ॥೧೦॥

ಹಾಗೆಯೇ ಯಮನು ಆತನನ್ನು ಬಾರಿಬಾರಿಗೂ ಅಗ್ನಿಯಿಂದ ಬೇಯಿಸುವಂತೆಯೂ, ಶಸ್ತ್ರಗಳಿಂದ ಹೊಡೆಯುವಂತೆಯೂ ಭಟರಿಗೆ ಆಜ್ಞಾಪಿಸಿ ಕುಂಭೀಪಾಕಕ್ಕೆ ಕಳುಹಿಸಿದನು. ॥೧೧॥

ದುರಾತ್ಮನೂ, ಶಿವನಲ್ಲಿ ಭಕ್ತಿಯಿಲ್ಲದವನೂ ಆದ ಆತನಿಗೆ ಶೈವವಿದ್ಯೆಯು ಬರಲಿಲ್ಲವಾದುದರಿಂದ ಆತನು ಅಂತಹ ದುಃಖವನ್ನು ಹೊಂದಿದನು. ॥೧೨॥

ಶಿವವಿದ್ಯಾಹೀನನಾದವನು ಖಂಡಿತವಾಗಿಯೂ ಮುಕ್ತನಾಗಲಾರನು. ಪೂರ್ವದಲ್ಲಿ ಆಸ್ತಿಕರೆಲ್ಲರೂ ಆ ವಿದ್ಯೆಯಿಂದಲೇ ಗಾಣಾಪತ್ಯಪದವಿಯನ್ನು ಹೊಂದಿದರು. ॥೧೩॥

ಮನುಷ್ಯನು ಶಿವವಿದ್ಯೆಯನ್ನು ತಿಳಿದು ಶಿವಾರ್ಚನೆಯಲ್ಲಿ ಆಸಕ್ತನಾದರೆ, ಆಗ ಆತನು ಸಂಸಾರದಿಂದ ಬಿಡುಗಡೆಯಾಗುತ್ತಾನೆಂದು ಹೇಳಲ್ಪಟ್ಟಿದೆ. ॥೧೪॥

ಶೈವವಿದ್ಯಾಸಮಾನಾ ತು ನ ವಿದ್ಯಾ ಸರ್ವಥೇತ್ಯಪಿ ।
ವದಂತಿ ವೇದವೇದಾಂತಪಾರಗಾಃ ಶಿವಪೂಜಕಾಃ ॥೧೫॥

ಮದೀಯೇನೈವ ಭಾಗ್ಯೇನ ತ್ವಯಾ ತಾವದಿಹಾಗತಂ ।
ಅತಃಪರಂ ಶೈವವಿದ್ಯಾ ಪ್ರದಾನಂ ಕುರು ಸಾದರಂ ॥೧೬॥

ಇತಿ ತದ್ವಚನಂ ಶ್ರುತ್ವಾ ರಾಜಾ ಸಂತುಷ್ಟಮಾನಸಃ ।
ಕೋಽಯಂ ನಾರದ ತತ್ತ್ವಜ್ಞ ಕಿಂಚ ಕಿಂ ನಾಸ್ಯ ಸೂತಕಂ ॥೧೭॥

ಶಿವಾರ್ಚನಪ್ರಭಾವೇನ ತತ್ತ್ವಜ್ಞೋಽಯಂ ನೃಪೋತ್ತಮ ।
ನ ಚಾಸ್ಯ ಸೂತಕಂ ನಾಪಿ ಶೌಚಮಾಗಂತುಕಂ ನೃಪ ॥೧೮॥

ಸ್ವತ ಏವ ವಿಶುದ್ಧಾತ್ಮಾ ಶಿವಪೂಜಾಪರಾಯಣಃ ।
ಅತೋಽಸ್ಯ ಶೌಚಕರ್ಮಾಣಿ ಶಂಕಿತಾನ್ಯಪಿ ನ ಧ್ರುವಂ ॥೧೯॥

ವೇದ, ಮತ್ತು ವೇದಾಂತಗಳಲ್ಲಿ ನಿಷ್ಣಾತರಾಗಿಯೂ, ಶಿವಾರ್ಚಕರಾಗಿಯೂ ಇರುವವರು ಶೈವವಿದ್ಯೆಗೆ ಸಮಾನವಾದ ವಿದ್ಯೆಯು ಮತ್ತೊಂದು ಯಾವುದೂ ಇಲ್ಲವೆಂದು ಹೇಳುತ್ತಾರೆ. ॥೧೫॥

" ನೀನು ನನ್ನ ಅದೃಷ್ಟವಿಶೇಷದಿಂದ ಇಲ್ಲಿಗೆ ಬಂದಿರುವೆ. ಆದ್ದರಿಂದ ದಯೆಯಿಟ್ಟು ನನಗೆ ಶಿವ ವಿದ್ಯೆಯನ್ನು ಅನುಗ್ರಹಿಸಬೇಕೆಂದು " ಬಾಲಕನು ಕೇಳಿಕೊಂಡನು. ॥೧೬॥

ಈ ಬಾಲಕನ ಮಾತುಗಳನ್ನು ಕೇಳಿ ರಾಜನು ಆಶ್ಚರ್ಯಗೊಂಡು ನಾರದನನ್ನು ಕುರಿತು " ಈ ಬಾಲಕನು ಯಾರು ? ಈತನಿಗೆ ಜಾತಾಶೌಚವಿಲ್ಲವೇ ?" ಎಂದು ಪ್ರಶ್ನಿಸಿದನು. ॥೧೭॥

ಆಗ ನಾರದನು ರಾಜನನ್ನು ಕುರಿತು—" ಎಲೈ ರಾಜನೇ - ಈ ನಿನ್ನ ಬಾಲಕನು ಶಿವಾರ್ಚನ ಪ್ರಭಾವದಿಂದ ತತ್ತ್ವಜ್ಞನಾಗಿರುತ್ತಾನೆ. ಅಂತಹವರಿಗೆ ಸೂತಕ, (ಜಾತಾಶೌಚ) ಮೊದಲಾದ ಅವಶ್ಯವಾದ ಶೌಚಕರ್ಮಗಳು, ಯಾವುವೂ ಸಲ್ಲವು. ॥೧೮॥

ಈತನು ಶಿವಪೂಜಾಸಕ್ತನಾದುದರಿಂದ ತಾನಾಗಿಯೇ ಪವಿತ್ರನಾಗಿದ್ದಾನೆ. ಆದುದರಿಂದ ಈತನಿಗೆ ಯಾವ ಶೌಚಕರ್ಮಗಳಲ್ಲಿಯೂ ನಿರ್ಬಂಧವಿಲ್ಲ. ॥೧೯॥

ಯಸ್ಯ ದೇಹಾಭಿಮಾನೋಽಸ್ತಿ ಗೌರೋಽಹಮಿತಿ ಧೀರಪಿ ।
ತಸ್ಯ ಶೌಚಂ ನ ತತ್ತ್ವಜ್ಞಃ ಸೂತಕೀತ್ಯವಧಾರಯ ॥೨೦॥

ಏತಸ್ಯ ಪುಣ್ಯಪುಂಜಸ್ಯ ದರ್ಶನಾದಪಿ ಸರ್ವಥಾ ।
ಅಶುಚಿಶ್ಚ ಶುಚಿರ್ನೂನಂ ಅಸ್ಯಾಶೌಚಂ ನ ಸರ್ವಥಾ ॥೨೧॥

ಶಿವಭಕ್ತಿವಿಹೀನಾ ಸ್ಸ್ಯು ರಶೌಚಾ ಏವ ಸರ್ವದಾ ।
ಮರಣಾಂತಂ ತದಾಶೌಚಂ ಮರಣಾನಂತರಂ ಚ ತತ್ ॥೨೨॥

ಅಶುಚಿರ್ವಾ ಶುಚಿರ್ವಾಽಪಿ ಯಃ ಸ್ಮರೇದ್ಗಿರಿಜಾಪತಿಂ ।
ಸ ಶುಚಿಸ್ತೇನ ಯುಕ್ತೋಽಪಿ ಶುಚಿರ್ಭವತಿ ಸರ್ವಥಾ ॥೨೩॥

ಅಶುಚಿತ್ವಂ ತಾವದೇವ ಯಾವನ್ನೈವ ಸ್ಮೃತಃ ಶಿವಃ ।
ಸ್ಮೃತೇ ಶಿವೇ ಶುಚಿಃಸ್ಯಾದ್ಯೋಽಪ್ಯನ್ಯಾಪೇಕ್ಷಾ ತತಸ್ತು ನ ॥೨೪॥

ಯಾವನು ದೇಹಾಭಿಮಾನಿಯಾಗಿಯೂ, ತಾನೇ ದೊಡ್ಡವನೆಂಬ ಅಹಂಕಾರಿಯಾಗಿಯೂ ಇರುವನೋ ಅವನು ತತ್ತ್ವಜ್ಞನಲ್ಲ. ಮತ್ತು ಆತನಿಗೆ ಸೂತಕಾದಿ ಆಶೌಚಗಳು ಇರುವುವೆಂದು ತಿಳಿ. ॥೨೦॥

ಎಂತಹ ಅಶುಚಿಯಾದವನೂ ಕೂಡ ಇಂತಹ ಪುಣ್ಯಾತ್ಮನ ದರ್ಶನದಿಂದಲೇ ಶುಚಿಯಾಗುತ್ತಾನೆ. ಆದ್ದರಿಂದ ಇವನಿಗೆ ಖಂಡಿತ ಯಾವ ಆಶೌಚವೂ ಇಲ್ಲ. ॥೨೧॥

ಮನುಷ್ಯರು ಎಲ್ಲಿಯವರೆಗೆ ಶಿವಭಕ್ತಿಶೂನ್ಯರಾಗಿರುತ್ತಾರೆಯೋ, ಅಲ್ಲಿಯವರೆಗೂ ಅವರು ಅಶುದ್ಧರೇ ಸರಿ. ಅವರಿಗೆ ಮಾತ್ರ ಮರಣಪರ್ಯಂತವಾಗಿಯೂ, ಮರಣಾನಂತರದಲ್ಲಿಯೂ ಸಹ ಆಶೌಚ ಉಂಟು. ॥೨೨॥

ಯಾವನು ಶುಚಿಯಾಗಿರಲೀ, ಅಶುಚಿಯಾಗಿರಲೀ, ಶಿವನನ್ನು ಭಕ್ತಿಯಿಂದ ಧ್ಯಾನಮಾಡುತ್ತಾನೋ ಅವನೂ ಮತ್ತು ಅವನೊಡನೆ ಇರತಕ್ಕವರೂ ಕೂಡ ಶುಚಿಯಾಗುತ್ತಾರೆ. ॥೨೩॥

ಶಿವನನ್ನು ಎಲ್ಲಿಯವರೆಗೆ ಸ್ಮರಿಸುವುದಿಲ್ಲವೋ ಅಲ್ಲಿಯವರೆಗೆ ಮಾತ್ರ ನರನು ಅಶುಚಿಯಾಗಿರುತ್ತಾನೆ. ಶಿವನನ್ನು ಸ್ಮರಿಸಿದ ಕೂಡಲೇ ಶುಚಿಯಾಗುತ್ತಾನೆ. ಆಗ ಆತನಿಗೆ ಯಾವ ಶೌಚಕರ್ಮವೂ ಬೇಕಿಲ್ಲ. ॥೨೪॥

ಯಃ ಶೈವಸ್ಮರಣೋದ್ಯುಕ್ತೋ ಸೋಽಪಿ ಪಾವನ ಪಾವನಃ ।
ಶುಚಿಃ ಸ್ಮೃತಃ ಶಿವೋ ಮರ್ತ್ಯಸ್ತತ್ರಾಪ್ಯಸ್ತಿ ಕಿಮದ್ಭುತಂ ॥೨೫॥

ಶಿವಪ್ರಭಾವಮಜ್ಞಾತ್ವಾ ನಿತ್ಯಸೂತಿಕತಾಂ ಗತಾಃ ।
ಸರ್ವಕರ್ಮಪರಿಭ್ರಷ್ಟಾಸ್ತೇ ಯಾಂತಿ ನರಕಂ ಧ್ರುವಂ ॥೨೬॥

ಇತಿ ತದ್ವಚನಂ ಶ್ರುತ್ವಾ ರಾಜಾ ಸಂತುಷ್ಟಮಾನಸಃ ।
ಶಿವದೀಕ್ಷಾಸಮಾರಂಭಮಹೋತ್ಸಾಹ ಸಮನ್ವಿತಃ ॥೨೭॥

ಅಲಂಕೃತ್ಯ ಮಹೇಶಸ್ಯ ಮಂಡಪಂ ರತ್ನಮಂಡಿತಂ ।
ಪುಷ್ಪಮಾಲ್ಯಾದಿಭಿರ್ವಸ್ತ್ರೈರ್ವಿವಿಧೈಸ್ತೋರಣೈರಪಿ ॥೨೮॥

ಮಹಾದೇವ ಮಹಾಪೂಜಾಂ ಕೃತ್ವಾ ಸ್ನಾನಾದಿಪೂರ್ವಕಂ ।
ಜಾತಕರ್ಮಾದಿಕಂ ಸರ್ವಂ ಸಮಾಪ್ಯ ಸ ತು ಭೂಪತಿಃ ॥೨೯॥

ನಾಭಿನಾಲಸ್ಯ ವಿಚ್ಛೇದಂ ಕೃತ್ವಾ ಬಾಲಸ್ಯ ಭೂಪತಿಃ ।
ಸ್ನಾಪಯಾಮಾಸ ತಂ ಬಾಲಂ ಶಿವತೀರ್ಥೈರ್ಮನೋಹರೈಃ ॥೩೦॥

ಯಾವನು ಶಿವಸ್ಮರಣದಲ್ಲಿ ಆಸಕ್ತನಾಗುವನೋ, ಅವನೇ ಪಾವನನು, ಮತ್ತು ಶುಚಿ ಎನ್ನಿಸಿಕೊಳ್ಳುವನು. ಅಲ್ಲದೆ ಕೊನೆಗೆ ಅವನು ಸಾಕ್ಷಾತ್ತಾಗಿ ಶಿವನೇ ಆಗುವನು. ಆದ್ದರಿಂದ ಇಲ್ಲಿ ಯಾವ ಆದ್ಭುತವೂ ಇಲ್ಲ ॥೨೫॥

ಶಿವಮಹಿಮೆಯನ್ನರಿಯದವರು ಯಾವಾಗಲೂ ಸೂತಕದಲ್ಲಿಯೇ ಇರತಕ್ಕವರು. ಸಕಲ ಕರ್ಮಗಳಿಂದಲೂ ಬಹಿಷ್ಕೃತರಾಗಿ ನರಕಕ್ಕೆ ಬೀಳುವರು "ಎಂಬುದಾಗಿ ನಾರದನು ಹೇಳಿದನು. ॥೨೬॥

ಈ ರೀತಿಯಾಗಿ ನಾರದರು ಹೇಳಿದ ಮಾತನ್ನು ಕೇಳಿ ರಾಜನು ಸಂತೋಷಗೊಂಡು, ಶಿವಪೂಜೆಯಲ್ಲಿ ಉತ್ಸಾಹಪಟ್ಟು ಶಿವಮಂತ್ರೋಪದೇಶವನ್ನು ಕೊಡಿಸಲು ಆ ರತ್ನಖಚಿತವಾದ ಮಂಡಪವನ್ನು ವಿಧವಿಧವಾದ ಪೂಮಾಲೆ ಮತ್ತು ತೋರಣಗಳಿಂದ ಅಲಂಕಾರಮಾಡಿಸಿದನು. ॥೨೭-೨೮॥

ಮತ್ತು ಸ್ನಾನಾದಿಗಳನ್ನು ತೀರಿಸಿಕೊಂಡು ಶಿವನಿಗೆ ಮಹಾಪೂಜೆಮಾಡಿ ಬಾಲಕನಿಗೆ ಜಾತಕರ್ಮಾದಿಗಳನ್ನು ನಡೆಸಿ ನಾಭಿನಾಲವನ್ನು ಕತ್ತರಿಸಿ ಮಂಗಳಕರಗಳಾದ ಆ ಶಿವತೀರ್ಥದಿಂದ ಬಾಲಕನಿಗೂ ಸ್ನಾನಮಾಡಿಸಿದನು. ॥೨೯-೩೦॥

ಭೂತ್ಯಾ ರುದ್ರಾಕ್ಷಮಾಲಾಭಿರಲಂಕೃತ್ಯ ಪ್ರಯತ್ನತಃ ।
ಕಲಶಸ್ಥಾಪನಂ ಕೃತ್ವಾ ಹುತ್ವಾ ವಹ್ನೌ ಘೃತಾದಿಭಿಃ ॥೩೧॥

ಶಿವಮಂತ್ರೈ ರ್ಧರ್ಮರೂಪೈಃ ಪಂಚಾಕ್ಷರಪುರಃಸರೈಃ ।
ಗೃಹೀತ್ವಾ ಬಾಲಕಂ ರಾಜಾ ಗತ್ವಾ ಶಂಕರಮಂದಿರಂ ॥೩೨॥

ಸ್ವಯಂ ಸಂಪೂಜ್ಯ ವಿಧಿವನ್ಮಹಾದೇವಂ ಸ್ವಸಾಧನೈಃ ।
ಪೂಜಯಿತ್ವಾ ಸುನೈವೇದ್ಯೈಃ ಭಕ್ಷ್ಯೈರಪಿ ಫಲಾದಿಭಿಃ ॥೩೩॥

ಕಾರಯಿತ್ವಾ ಬಾಲಕೇನ ಪೂಜಾಂ ದ್ರವ್ಯೈಃ ಮನೋಹರೈಃ ।
ಲಿಂಗಮೂರ್ತಿಂ ಮಹೇಶಸ್ಯ ನೃಪಃ ಸಂತೋಷಮಾಪ ಸಃ ॥೩೪॥

ತತಃ ಪರಂ ನಾರದೋಽಪಿ ಭಸ್ಮಸ್ನಾನಾದಿನಾ ಶುಚಿಃ
ದದೌ ದೀಕ್ಷಾಂ ಬಾಲಕಾಯ ನವನೀತಾದಿಭಿರ್ಮುದಾ ॥೩೫॥

ಮತ್ತು ಬಾಲಕನನ್ನು ವಿಭೂತಿ, ರುದ್ರಾಕ್ಷಿಗಳಿಂದ ಅಲಂಕರಿಸಿ ಕಲಶ ಸ್ಥಾಪನೆಮಾಡಿ ತುಪ್ಪವೇ ಮೊದಲಾದ ಉಕ್ತದ್ರವ್ಯಗಳಿಂದ ಅಗ್ನಿಯಲ್ಲಿ ಹೋಮ ಮಾಡಿದನು. ॥೩೧॥

ಅನಂತರ ರಾಜನು ಧರ್ಮಾಕಾರಗಳಾಗಿರುವ ಐದು ಅಕ್ಷರಗಳಿಂದ ಕೂಡಿರುವ ಶಿವಪಂಚಾಕ್ಷರೀಮಂತ್ರಪುರಸ್ಸರವಾಗಿ (ನಮಃ ಶಿವಾಯ) ಬಾಲಕನೊಡನೆ ಶಿವ ಮಂದಿರವನ್ನು ಪ್ರವೇಶಿಸಿದನು. ॥೩೨॥

ಅಲ್ಲಿ ಅಣಿಮಾಡಲ್ಪಟ್ಟಿದ್ದ ಪೂಜಾಸಾಮಗ್ರಿಗಳಿಂದ ತಾನು ವಿಧ್ಯನುಸಾರ ವಾಗಿ ಶಿವನನ್ನು ಪೂಜಿಸಿದನು. ಮತ್ತು ಭಕ್ಷ್ಯ, ಹಣ್ಣು ಇವೇ ಮೊದಲಾದ ನಿವೇದನ ಸಾಮಗ್ರಿಗಳನ್ನು ನಿವೇದಿಸಿದನು. ॥೩೩॥

ಅನಂತರ ಮನೋಹರಗಳಾದ ದ್ರವ್ಯಗಳಿಂದ ಬಾಲಕನಿಂದಲೂ ಶಿವಪೂಜೆ ಯನ್ನು ಮಾಡಿಸಿ ಸಂತೋಷಪಟ್ಟನು. ॥೩೪॥

ಅನಂತರ ನಾರದನೂ ಕೂಡ ಸ್ನಾನ ಮತ್ತು ಭಸ್ಮಾದಿಗಳಿಂದ ಶುಚಿಯಾಗಿ, ಬಾಲಕನಿಗೆ ನವನೀತವೇ ಮೊದಲಾದ ದ್ರವ್ಯಗಳಿಂದ ದೀಕ್ಷೆಯನ್ನು ವಹಿಸಿದನು. ॥೩೫॥

ತತಃಪರಾಂ ಮಹಾವಿದ್ಯಾಂ ಶೈವೀಂ ಪಂಚಾಕ್ಷರಾತ್ಮಿಕಾಂ ।
ತತಃ ಸ್ಮೃತ್ವಾ ಮಹಾದೇವಂ ಪಾರ್ವತೀಂ ಗಣನಾಯಕಂ ॥೩೬॥

ಸ್ಕಂದಂ ಚ ವೀರಭದ್ರಂ ಚ ಸ್ಮೃತ್ವಾ ಶ್ರೀಕಾಲಭೈರವಂ ।
ನಂದಿಕೇಶಾದಿಕಾನ್ ಸರ್ವಾನ್ಮಹಾಶಿವಗಣಾನಪಿ ॥೩೭॥

ಶೈವೀಂ ವಿದ್ಯಾಂ ಸುಸಂಪ್ರಾಪ್ಯ ರರಾಜ ಸ ತು ಬಾಲಕಃ ।
ತತಸ್ತದ್ದೇಹತಃ ಕಾಪಿ ಪಾಪಮೂರ್ತಿರ್ವಿನಿರ್ಗತಾ ॥೩೮॥

ಮಷೀವರ್ಣಾ ವಕ್ರದಂತಾ ವಕ್ರಪೃಷ್ಠಭುಜಾಂತರಾ ।
ವಕ್ರಕರ್ಣಾ ಕಾಣನೇತ್ರಾ ದೀರ್ಘಾಧಸ್ಥಶಿರೋರುಹಾ ॥೩೯॥

ತಾಂ ದೃಷ್ಟ್ವಾ ಸ ತು ಭೂಪಾಲೋ ಭೀತೋ ನಾರದಮಾಹ ಸಃ ।
ಕೇಯಮಿತ್ಯತಿಭೀತ್ಯೈವ ಮಂದಂ ಗದ್ಗದವಾಕ್ತದಾ ॥೪೦॥

ಅನಂತರ ಬಾಲಕನು ಮಹಾದೇವ, ಪಾರ್ವತಿ, ಗಣಪತಿ, ಸ್ಕಂದ, ವೀರಭದ್ರ, ಕಾಲಭೈರವ, ನಂದಿಕೇಶನೇ ಮೊದಲಾದ ಶಿವಗಣಗಳನ್ನೆಲ್ಲಾ ಸ್ಮರಿಸಿದನು. ||೩೬-೩೭||

ಅನಂತರ ನಾರದಮಹರ್ಷಿಯಿಂದ ಶಿವವಿದ್ಯೆಯನ್ನು ಪಡೆದು ಪ್ರಕಾಶಮಯವಾದ ಶರೀರವುಳ್ಳವನಾದನು. ಆಗ ಅವನ ದೇಹದಿಂದ ಪಾಪಮೂರ್ತಿಯು ಹೊರಟು ಹೋಯಿತು. ||೩೮||

ಆ ಪಾಪಮೂರ್ತಿಯು ರಕ್ತವರ್ಣವುಳ್ಳದ್ದಾಗಿಯೂ, ವಕ್ರಗಳಾದ ಹಲ್ಲುಗಳು, ಪೃಷ್ಠ, ಭುಜಮೂಲ, ಕಿವಿಗಳು ಇವುಗಳುಳ್ಳದ್ದಾಗಿಯೂ ಬಹಳ ಉದ್ದವಾಗಿ ಸುಟ್ಟಂತಿರುವ ಕೂದಲುಗಳಿಂದಲೂ ಕೂಡಿ ಭಯಂಕರವಾಗಿದ್ದಿತು. ||೩೯||

ಆಗ ಆ ರಾಜನು ಆ ಪಾದಮೂರ್ತಿಯನ್ನು ಕಂಡು ಗದ್ಗದಸ್ವರಯುಕ್ತನಾಗಿ ಹೆದರಿಕೆಯಿಂದ " ಎಲೈ ರಾಜನೇ, ಇದು ಏನು " ಎಂದು ಕೇಳಿದನು. ||೪೦||

|| ನಾರದ ಉವಾಚ ||

ಪಾಪಮೂರ್ತಿರಿಯಂ ಭೂಪ ಬಾಲದೇಹಾದ್ವಿನಿರ್ಗತಾ ।
ಶಿವವಿದ್ಯಾಗ್ನಿಸಂದಗ್ಧಾ ನಾರಕಂ ದೇಹಮಾಶ್ರಿತಾ ॥೪೧॥

ತತಃ ಪರಂ ಪಾಪಮೂರ್ತಿಸ್ತಮುವಾಚ ಮಹಾಮುನಿಂ ।
ಕ್ವ ಗಂತವ್ಯಂ ಮಯಾ ಸ್ವಾಮಿನ್ ಸ್ಥಿತಾ ತದ್ದೇಹಮಾಶ್ರಿತಾ ॥೪೨॥

ಶಿವವಿದ್ಯಾಪ್ರದೀಪ್ತಿರ್ಯಾ ತಯಾ ತತ್ರಸುರಾವೃತಾ ।
ಅತಃಪರಮವಸ್ಥಾನಮತ್ರ ಮೇ ದುರ್ಲಭಂ ಖಲು ॥೪೩॥

ಇತಿ ತದ್ವಚನಂ ಶ್ರುತ್ವಾ ರಾಜಾ ವಿಸ್ಮಯಮಾಗತಃ ।
ಬಾಲೋऽಪಿ ರಾಜಕೀಯಾಶ್ಚ ಮಂತ್ರಿಣೋऽಪಿ ದ್ವಿಜಾಅಪಿ ॥೪೪॥

ತಾಮಾಹ ನಾರದೋ ಧೀರಃ ಪ್ರಪೃಷ್ಟಾಂ ಚ ಪ್ರತಿಕ್ಷಣಂ ।
ಯಮಾಲಯಮಿತೋ ಯಾಹಿ ಯಾಹಿ ಸತ್ವರಮಿತ್ಯಪಿ ॥೪೫॥

ಆಗ ನಾರದನು "ಇದು ಈ ಬಾಲಕನ ದೇಹದಲ್ಲಿ ನರಕರೂಪವಾಗಿ ಇದ್ದು ಈಗ ಶೈವವಿದ್ಯೆಯಿಂದ ಪೆಟ್ಟುತಿಂದು ಹೊರಟಪಾಪಮೂರ್ತಿಯಾಗಿರುತ್ತದೆ." ಎಂದನು. ||೪೧||

ಒಡನೆಯೇ ಆ ಪಾಪಮೂರ್ತಿಯು "ಎಲೈ ಸ್ವಾಮಿಯೇ, ನಾನು ಇದು ವರೆಗೂ ಈ ದೇಹವನ್ನು ಆಶ್ರಯಿಸಿಕೊಂಡಿದ್ದೆನು. ಇನ್ನು ಮುಂದೆ ನಾನು ಎಲ್ಲಿಗೆ ಹೋಗಲಿ" ಎಂಬುದಾಗಿ ನಾರದನನ್ನು ಪ್ರಶ್ನಿಸಿತು. ||೪೨||

ಇಲ್ಲಿ ಈಗ ಆ ದೇಹದಲ್ಲಿ ಶಿವವಿದ್ಯೆಯ ಕಾಂತಿಯು ಆವರಿಸಿರುವುದರಿಂದ ಇಲ್ಲಿರಲು ನನಗೆ ಅವಕಾಶವಿಲ್ಲವಾಗಿದೆ. ||೪೩||

ಈ ಮಾತುಗಳನ್ನು ಅಲ್ಲಿದ್ದ ಆ ಬಾಲಕ, ರಾಜ, ರಾಜನ ಸಂಬಂಧಿಕರು, ಮಂತ್ರಿಗಳು, ಬ್ರಾಹ್ಮಣರು ಎಲ್ಲರೂ ಕೇಳಿ ವಿಸ್ಮಿತರಾದರು. ||೪೪||

ಇದನ್ನು ಕೇಳಿ ನಾರದನು ಆ ಪಾಪಮೂರ್ತಿಯನ್ನು ಕುರಿತು ನೀನು ಇಲ್ಲಿಂದ ಜಾಗ್ರತೆಯಾಗಿ ಯಮನ ಮನೆಗೆ ಹೋಗು ಎಂಬುದಾಗಿ ಹೇಳಿದನು.||೪೫||

ಏತದ್ದೇಶೇ ತ್ವಯಾ ತಾವನ್ನ ಸ್ಥೇಯಂ ದುರ್ಮುಖೇ ತ್ವಯಾ ।
ಇತಿ ತದ್ವಚನಂ ಶ್ರುತ್ವಾ ಪಾಪಮೂರ್ತಿರುವಾಚ ತಂ ॥೪೬॥

॥ ಪಾಪಮೂರ್ತಿರುವಾಚ ॥

ತತ್ವಜ್ಞೋಽಸಿ ಮುನಿಶ್ರೇಷ್ಠ ಶರಣಾಗತವತ್ಸಲ ।
ಅಪಾವನಾನಾಮನಿಶಂ ಪಾವನತ್ವಂ ತ್ವದೀಕ್ಷಣಾತ್ ॥೪೭॥

ದೃಷ್ಟೇಽಪಿ ಶಾಂಭವೇ ದೈವಾತ್ಪಾಪಶಂಕಾ ಕಥಂ ಭವೇತ್ ।
ಪವಿತ್ರಾಣಾಂ ಪವಿತ್ರತ್ವಮನಪೇಕ್ಷಿತಮೇವ ಹಿ ॥೪೮॥

ಅಪವಿತ್ರೇ ಪವಿತ್ರತ್ವಂ ಕರ್ತುಂ ಶಕ್ತಿಸ್ತವಾಧುನಾ ।
ಅತಃ ಪಾವಯ ಮಾಂ ದೀನಾಂ ಸದ್ಯಃ ಸುರಮುನೇ ಮುದಾ ॥೪೯॥

ಸ್ಥಿತಮೇನಂ ಸಮಾಶ್ರಿತ್ಯ ಬಹುಕಾಲಂ ಮಯಾ ಮುನೇ ।
ಅಪಾರಕಲ್ಪಗಣನಾ ಕರ್ತುಮೇವ ನ ಶಕ್ಯತೇ ॥೫೦॥

ಈ ಸ್ಥಳದಲ್ಲಿ ಇನ್ನು ನೀನು ಇರಕೂಡದು ಎಂಬುದಾಗಿ ನಾರದನು ಹೇಳಿದ ಮಾತನ್ನು ಕೇಳಿ ಆ ಪಾಪಮೂರ್ತಿಯು ಹೀಗೆ ಹೇಳಿತು. ॥೪೬॥

"ಎಲೈ ಋಷಿವರ್ಯನೇ, ನೀನು ಶರಣಾಗತವತ್ಸಲನಾಗಿಯೂ, ತತ್ವಜ್ಞನಾಗಿಯೂ ಇದ್ದೀಯೆ. ನಿನ್ನ ದರ್ಶನದಿಂದ ಎಂತೆಂತಹ ಪಾಪಿಗಳೂ ಕೂಡ ಪರಿಶುದ್ಧರಾಗುತ್ತಾರೆ. ॥೪೭॥

ಅದೃಷ್ಟವಿಶೇಷದಿಂದ ಈಶ್ವರನ ಪರಮಭಕ್ತನಾದವನನ್ನು ಕಂಡರೆ ಪಾಪ ಶಂಕೆಯಾದರೂ ಹೇಗಾದೀತು? ಪವಿತ್ರರಾದವರಿಗೆ ಪವಿತ್ರತೆಯಲ್ಲಪೇಕ್ಷೆ ಇರಲಾರದು. ॥೪೮॥

ಎಲೈ ದೇವರ್ಷಿಯೇ, ಪವಿತ್ರರಲ್ಲದವರನ್ನು ಪವಿತ್ರರನ್ನಾಗಿ ಮಾಡುವ ಶಕ್ತಿಯು ನಿನಗಿರುತ್ತದೆ. ಆದ್ದರಿಂದ ದೀನಳಾದ ನನ್ನನ್ನು ಪವಿತ್ರಳನ್ನಾಗಿ ಮಾಡು. ॥೪೯॥

ಎಲೈ ಮುನಿಯೇ, ನಾನು ಈತನನ್ನು ಆಶ್ರಯಿಸಿಕೊಂಡು ಬಹುಕಾಲದಿಂದಲೂ ಅಂದರೆ ಅಪಾರ ಕಲ್ಪಗಳಿಂದಲೂ ಇದ್ದೆನು. ಆ ಕಲ್ಪಗಳನ್ನು ಈಗ ಲೆಕ್ಕಮಾಡಲೂ ಸಹ ಆಗಲಾರದು. ॥೫೦॥

ಅನೇನ ಸಹ ವಾಸೋಽಪಿ ನರಕೇಷು ಕೃತೋ ಮಯಾ ।
ಅನಂತಬ್ರಹ್ಮಕಲ್ಪೇಷು ತೇಷಾಂ ತು ಗಣನಾಪಿ ನ ॥೫೧॥

ಪ್ರತಿಜನ್ಮನಿ ಪಾಪಾನಿ ಕೃತ್ವೈವಾಯಂ ಮುಹುರ್ಮುಹುಃ ।
ನರಕೇಷು ಪತತ್ಯೇವ ಲಜ್ಜಾ ನಾಸ್ಯಾಭವನ್ಮನೇ ॥೫೨॥

ನ ಶಿವಾರ್ಚನವಾರ್ತಾಽಪಿ ನ ಶ್ರುತಾನೇನ ಯತ್ನತಃ ।
ಶಿವಾರ್ಚಕೈರ್ನ ಸಂಗೋಽಪಿ ಕೃತೋ ಮಂಗಳದಾಯಕಃ ॥೫೩॥

ದೂರತೋಽಪಿ ನ ದೃಷ್ಟಾಸ್ತೇ ಶಾಂಭವಾಗ್ರೇಸರಾಃ ಪರಂ ।
ಅನೇನ ಮಂದಿರಂ ದೃಷ್ಟಂ ನ ಕದಾಪಿ ಶಿವಸ್ಯ ತು ॥೫೪॥

ನ ಪ್ರಾಸಾದಪ್ರಕಾರೋ ವಾ ಪ್ರಾಕಾರೋ ವಾ ಶಿವಸ್ಯ ತು ।
ತಥೋತ್ಸವೋಽಪಿ ನ ರಥೋ ದೃಷ್ಟೋಽನೇನ ದುರಾತ್ಮನಾ ॥೫೫॥

ಶಿವನಾಮ ನ ಜಾನಾತಿ ಸೋಽಯಂ ಶುನಕಸಂನಿಭಃ ।
ಶುನೀ ಯೋನಿಷು ಸಂಗೋಽಪಿ ಕೃತೋಽನೇನ ದುರಾತ್ಮನಾ ॥೫೬॥

ಈತನೊಡನೆ ಅನಂತವಾದ ಬ್ರಹ್ಮಮಾನದ ಕಲ್ಪಗಳಲ್ಲಿಯೂ ಸಹ ನರಕದಲ್ಲಿ ವಾಸಮಾಡಿದ್ದೇನೆ. ಅವುಗಳನ್ನು ಗಣನೆಮಾಡಲು ಅಸಾಧ್ಯ. ॥೫೧॥

ಈತನು ಪ್ರತಿಜನ್ಮದಲ್ಲಿಯೂ ಅನೇಕ ಪಾಪಗಳನ್ನು ಮಾಡಿ ನರಕದಲ್ಲಿಯೇ ಬೀಳುತ್ತಿದ್ದರೂ ಸಹ ಈತನಿಗೆ ಲಜ್ಜೆಯಿರಲಿಲ್ಲ. ॥೫೨॥

ಈತನು ಪ್ರಯತ್ನಪೂರ್ವಕವಾಗಿ ಶಿವಾರ್ಚನೆಯ ವಾರ್ತೆಯ ಶ್ರವಣವನ್ನಾಗಲೀ, ಶಿವಾರ್ಚಕರ ಸಹವಾಸವನ್ನಾಗಲೀ ಮಾಡಲಿಲ್ಲ. ॥೫೩॥

ಈತನು ಈಶ್ವರಾರಾಧಕರನ್ನು ದೂರದಿಂದಲೂ ನೋಡಲಿಲ್ಲ. ಮತ್ತು ಯಾವಾಗಲೂ ಶಿವನ ದೇವಸ್ಥಾನವನ್ನೂ ಸಹ ದರ್ಶನ ಮಾಡಲಿಲ್ಲ. ॥೫೪॥

ದುರಾತ್ಮನಾದ ಈತನು ಉಪ್ಪರಿಗೆಗೆ ಸದೃಶವಾಗಿರುವ ಶಿವನ ಪ್ರಾಕಾರವನ್ನೇ ಆಗಲಿ, ಶಿವ ರಥೋತ್ಸವವನ್ನೇ ಆಗಲಿ, ರಥವನ್ನೇ ಆಗಲಿ, ಒಂದನ್ನೂ ನೋಡಿದವನಲ್ಲ. ॥೫೫॥

ನಾಯಿಗೆ ಸದೃಶನಾದ ಈತನಿಗೆ ಶಿವನ ನಾಮವೂ ಸಹ ಗೊತ್ತಿರಲಿಲ್ಲ. ಆದರಿಂದಲೇ ಈತನು ಸ್ತ್ರೀನಾಯಿಯ ಯೋನಿಸಂಗವನ್ನು ಮಾಡಿರುತ್ತಾನೆ. ॥೫೬॥

ಅಟನಂ ದುಷ್ಟಗೇಹೇಷು ಕೃತಮೇತೇನ ಸರ್ವದಾ ।
ನೀಚಸಂಭಾಷಣೇನೈವ ಕಾಲೋ ನೀತೋ ದುರಾತ್ಮನಾ ॥೫೭॥

ನರೋಽಪಿ ಸೂಕರೀಯೋನಿಂ ಗರ್ದಭೀಯೋನಿಮನ್ವಹಂ ।
ಅನ್ವಿಷ್ಯೈವ ಸ್ಥಿತಃ ಸೋಯಮಸ್ತಿ ಕಾಮಾತುರೋ ಮುನೇ ॥೫೮॥

ನಾನಾವ್ರಣೈರ್ವ್ಯಾಧಿಭಿಶ್ಚ ಪೀಡಿತೋ ಕ್ಷುಧಿತೋ ಪ್ಯಯಂ ।
ಶುನೀಂ ರೇಮೇ ಸೂಕರೀಂ ಚ ಗಾರ್ದಭೀಮಪಿ ಕೋಟಿಶಃ ॥೫೯॥

ಬ್ರಾಹ್ಮಣ್ಯಮಪಿ ಸಂಪ್ರಾಪ್ಯ ಮಹಾಪಾತಕಕೋಟಿಭಿಃ ।
ಸಮಾಕ್ರಾಂತೋ ಯಾತನಾಂ ಚ ಭುಕ್ತ್ವಾಯಂ ಸ್ಥಿತ ಏವ ಹಿ ॥೬೦॥

ಸ್ಮಾರ್ತಂ ವಾ ವೈದಿಕಂ ಕರ್ಮ ನಾನೇನ ಜ್ಞಾತಮೇವ ಹಿ ।
ನಾಸ್ಯ ಪುಣ್ಯೇ ರತಿರ್ಜಾತಾ ಕದಾಪಿ ಮುನಿಸತ್ತಮ ॥೬೧॥

ಈತನು ಯಾವಾಗಲೂ ದುರಾಚಾರಿಗಳಾದವರ ಮನೆಯಲ್ಲಿಯೇ ತಿರುಗುತ್ತಿದ್ದನು. ತನ್ನ ಕಾಲವನ್ನೆಲ್ಲಾ ನೀಚರೊಡನೆ ಸಂಭಾಷಣಮಾಡುತ್ತಾ ಕಳೆಯುತ್ತಿದ್ದನು. ॥೫೭॥

ಎಲೈ ಮುನಿಯೇ—ಈತನು ಮನುಷ್ಯನಾಗಿದ್ದರೂ ಕಾಮಾತುರದಿಂದ ನಿತ್ಯವೂ, ಹಂದಿಯ, ಕತ್ತೆಯ, ಯೋನಿಗಳನ್ನೇ ಹುಡುಕುತ್ತಿದ್ದನು. ॥೫೮॥

ಈತನು ನಾನಾ ವ್ರಣಗಳಿಂದಲೂ, ವ್ಯಾಧಿಗಳಿಂದಲೂ, ಹಸಿವು ಬಾಯಾರಿಕೆಗಳಿಂದಲೂ ಪೀಡಿತನಾಗಿದ್ದರೂ, ಶ್ವಾನಸ್ತ್ರೀ, ಹೆಣ್ಣುಹಂದಿ, ಸ್ತ್ರೀಗರ್ದಭ ಇವುಗಳ ಸಂಭೋಗ ಸುಖಕ್ಕೆ ಆತುರಪಡುತ್ತಿದ್ದನು. ॥೫೯॥

ಈತನು ಬ್ರಾಹ್ಮಣಜಾತಿಯನ್ನು ಸಂಪಾದಿಸಿಕೊಂಡಿದ್ದರೂ, ಕೋಟ್ಯಂತರ ಮಹಾ ಪಾತಕಗಳಿಂದ ಕೂಡಿ ಯಾತನೆಗಳನ್ನು ಅನುಭವಿಸಿಕೊಂಡೇ ಇದ್ದನು. ॥೬೦॥

ಎಲೈ ಋಷಿವರ್ಯನೇ-- ಈತನಿಗೆ ಸ್ಮೃತಿಯಲ್ಲಿ ಹೇಳಿರತಕ್ಕ ಕರ್ಮಗಳೇ ಆಗಲಿ, ವೇದಗಳಲ್ಲಿ ಹೇಳಿರತಕ್ಕ ಆಚಾರಗಳಾಗಲಿ ಯಾವುವೂ ಗೊತ್ತಿರಲಿಲ್ಲ. ಯಾವಾಗಲೂ ಕೂಡ ಈತನಿಗೆ ಪುಣ್ಯಕರ್ಮಗಳಲ್ಲಿ ಆಸಕ್ತಿಯೇ ಹುಟ್ಟಲಿಲ್ಲ. ॥೬೧॥

ಯದ್ಯತ್ಕೃತಂ ಪುರಾ ಪಾಪಂ ತೇನ ಪಾಪಂ ಪುನಃಪುನಃ ।
ಪುನಃ ಪಾಪೇ ಪುನಃ ಪಾಪಮಾರ್ಜಿತಂ ಗಣನಾಸ್ಯ ನ ॥೬೨॥

ಭೂಪಾಂಸುಗಣನಾಪಿಸ್ಯಾತ್ಕದಾಚಿನ್ಮುನಿಸತ್ತಮ ।
ನ ಚೈತತ್ಪಾಪಗಣನಾಂ ಕರ್ತುಂ ಶಕ್ತೋ ಯಮೋಽಪಿ ಸಃ ॥೬೩॥

ಚಿತ್ರಗುಪ್ತಾದಯಃ ಶಾಂತಾಃ ತತ್ಪಾಪಾಮಿತಸಂಖ್ಯಯಾ ।
ಯಮದೂತಾಃ ಪರಿಶ್ರಾಂತಾಃ ತಾಡನೇನಾಸ್ಯ ಕೋಟಿಶಃ ॥೬೪॥

ಭಿನ್ನಾನಿ ಭಿಂಡಿಪಾಲಾನಿ ಶಸ್ತ್ರಾಣಿ ತ್ರುಟಿತಾನ್ಯಪಿ ।
ಏತದ್ದೇಹಾಭಿಘಾತೇನ ಸರ್ವದಾ ಯಮಮಂದಿರೇ ॥೬೫॥

ಪುನರ್ಜನಿಃ ಪುನರ್ಮೃತ್ಯುಃ ಪುನಶ್ಚ ಯಮಯಾತನಾ ।
ಏವಂ ಜನ್ಮಾನಿ ನೀತಾನಿ ಕಷ್ಟದಾನ್ಯೇವ ಕೋಟಿಶಃ ॥೬೬॥

ಪೂರ್ವದಲ್ಲಿ ಮಾಡಿದ್ದ ಪಾಪಗಳಿಂದ ಮತ್ತೆ ಮತ್ತೆ ಪಾಪಕಾರ್ಯಗಳಲ್ಲಿ ಆಸಕ್ತನಾಗುತ್ತಿದ್ದನು. ಅವುಗಳಿಂದ ಮತ್ತೆ ಮತ್ತೆ ಪಾಪಗಳನ್ನು ಆರ್ಜಿಸುತ್ತಿದ್ದನು. ಈರೀತಿಯಾಗಿ ಈತನು ಸಂಪಾದಿಸಿದ ಪಾಪಗಳನ್ನು ಗಣಿಸಲು ಸಾಧ್ಯವಿರಲಿಲ್ಲ. ॥೬೨॥

ಎಲೈ ಮುನೀಶ್ವರನೇ, ಭೂಮಿಯಲ್ಲಿರುವ ಧೂಳಿನಕಣಗಳನ್ನಾದರೂ ಲೆಕ್ಕ ಮಾಡಬಹುದು. ಈತನು ಮಾಡಿರತಕ್ಕ ಪಾಪಗಳನ್ನು ಲೆಕ್ಕಮಾಡಲು ಯಮನಿಗೂ ಅಸಾಧ್ಯವಾಗಿತ್ತು. ॥೬೩॥

ಈತನು ಮಾಡಿದ ಬಹು ಪಾಪಗಳನ್ನು ಎಣಿಸಿ ಎಣಿಸಿ ಶಾಂತಸ್ವಭಾವದ ಚಿತ್ರಗುಪ್ತನೇ ಮೊದಲಾದವರೂ ಶ್ರಾಂತರಾದರು. ಮತ್ತು ಕೋಟ್ಯಂತರ ಸಲ ಈತನನ್ನು ಹೊಡೆಯುವುದರಿಂದ ಯಮದೂತರೂ ಬಳಲಿ ಹೋದರು. ॥೬೪॥

ಯಾವಾಗಲೂ ಯಮಗೃಹದಲ್ಲಿ ಈತನ ದೇಹವನ್ನು ಹೊಡೆಯುತ್ತಿರುವುದರಿಂದ ಅಲ್ಲಿಯ ಬೇಡಿಗಳೆಲ್ಲವೂ ಹರಿದುಹೋದುವು. ॥೬೫॥

ಮತ್ತೆ ಮತ್ತೆ ಹುಟ್ಟುವುದು, ಸಾಯುವುದು, ಮತ್ತೆ ಯಮನ ಬಾಧೆಯನ್ನನುಭವಿಸುವುದು, ಈ ರೀತಿಯಾಗಿ ಈತನ ಕೋಟ್ಯಂತರ ಜನ್ಮಗಳೆಲ್ಲವೂ ಕಷ್ಟಕರಗಳಾಗಿಯೇ ಕಳೆದವು. ॥೬೬॥

ಪಾಪನಾಶಕರಂ ಕರ್ಮ ನ ಜ್ಞಾತಂ ನ ಕೃತಂ ಮುನೇ ।
ಪಾತಕಂ ತು ಪರಂ ಜ್ಞಾತಂ ಕೃತಂ ಚ ಮುಹುರಾದರಾತ್ ॥೬೭॥

ಭೂಭಾರಭೂತ ಏವಾಯಂ ಪಾಪರಾಶಿಸಮಾಶ್ರಯಃ ।
ನ ಪಾಪರಾಶಿಗಣನಾ ಪಾಪಾನಾಂ ಗಣನಂ ಕುತಃ ॥೬೮॥

ತಾನಿ ಸರ್ವಾಣಿ ಪಾಪಾನಿ ಸಾಯಂ ಶಂಕರ ದರ್ಶನಾತ್
ನಷ್ಟಾನಿ ನಾರ್ಜಿತಂ ಪುಣ್ಯಂ ತದ್ಭಿನ್ನಂ ಮುನಿಸತ್ತಮ ॥೬೯॥

ದೇಹಾರಂಭಕಪಾಪಾನಾಂ ಮೂರ್ತಿರೇಷಾ ಕ್ವ ಯಾಸ್ಯತಿ ।
ಏತಸ್ಯ ನಾಶಃ ಕೇನ ಸ್ಯಾತ್ಕದಾ ವಾ ತದ್ವದಾಧುನಾ ॥೭೦॥

ಇದಂ ಚರಮಮೇತಸ್ಯ ಶರೀರಮಿತಿ ನಿಶ್ಚಿತಂ ।
ಅತಃ ಪರಮನೇನ ಸ್ಯಾತ್ಸಂಗೋಽಸ್ಯತ್ಯಂತದುರ್ಲಭಃ ॥೭೧॥

ಎಲೈ ಮುನಿಯೇ, ಈತನು ಪಾಪನಾಶಕವಾದ ಕರ್ಮಗಳಾಗುವುವೆಂಬುದನ್ನು ತಿಳಿಯಲಿಲ್ಲ. ಅದನ್ನು ಆಚರಿಸಲೂ ಇಲ್ಲ. ಆದರೆ ಪಾಪಕರಗಳಾದ ಕರ್ಮಗಳನ್ನು ಮಾತ್ರ ತಿಳಿದೂ ಮಾಡುತ್ತಿದ್ದನು. ॥೬೭॥

ಈತನು ಪಾಪಸಮೂಹ ಯುಕ್ತನಾದುದರಿಂದ ಭೂಮಿಗೆ ಭಾರದಂತಿದ್ದನು. ಈತನು ಮಾಡಿದ ಪಾಪರಾಶಿಗಳನ್ನೇ ಲೆಕ್ಕಮಾಡಲು ಸಾಧ್ಯವಿಲ್ಲದಿರುವಾಗ ಕೇವಲ ಪಾಪಗಳ ಗಣನೆಯು ಹೇಗೆತಾನೆ ಸಾಧ್ಯ? ॥೬೮॥

ನಾರದಮಹರ್ಷಿಯೇ, ಅಷ್ಟು ರಾಶಿ ರಾಶಿ ಪಾಪಗಳೆಲ್ಲವೂ ಪ್ರದೋಷ ಕಾಲದಲ್ಲಿ ಶಿವದರ್ಶನಮಾಡಿದುದರಿಂದ ನಾಶವಾದವು." ಎಂದು ಆ ಪಾಪಮೂರ್ತಿಯು ಹೇಳಿತು. ॥೬೯॥

ದೇಹದಿಂದ ಸಂಪಾದಿಸಲ್ಪಟ್ಟ ಪಾಪಗಳ ಮೂರ್ತಿಯಾದ ನಾನು ಈಗ ಎಲ್ಲಿಗೆ ಹೋಗಲಿ? ಈ ನನ್ನ ದೇಹದ ಸ್ವರೂಪವು ನಾಶವಾಗುವುದು ಎಂದು? ಈ ವಿಚಾರವನ್ನು ಹೇಳು. ॥೭೦॥

ಇದೇ ಈತನಿಗೆ ಕೊನೆಯ ಶರೀರವಾಗಿರುವುದು. ಮುಂದೆ ಈತನೊಡನೆ ಸಹವಾಸಮಾಡುವುದೂ ನನಗೆ ಬಹು ದುರ್ಲಭವಾಗುವುದು. ॥೭೧॥

ಮಧ್ಯೇ ವಿಷತರೋರ್ಮಧ್ಯೇ ಯಥಾ ಕೀಟಃ ಸ್ಥಿತಃ ಸದಾ ।
ತಥಾ ಸ್ಥಿತಂ ಮಯಾ ದೇಹೇ ಬಾಲಸ್ಯಾಸ್ಯ ಮುನೀಶ್ವರ ॥೭೨॥

ಯಾನಿ ಕೀಟಶರೀರಾಣಿ ಕೀಟಕೇಷ್ವಸ್ಯ ತೇಷ್ವಪಿ ।
ಮಯಾ ಸ್ಥಿತಂ ಪಾಪಭಾಗ್ಯೈಃ ಕೇವಲಂ ನೀಯತೇ ದಿನಂ ॥೭೩॥

ಕಿಂಚೈತಜ್ಜನನಾದತ್ರ ಶಾಂಭವೈರಾಪ್ಲುತಾ ಮಹೀ ।
ಭವಿಷ್ಯತಿ ಮಯಾ ಕುತ್ರ ಸ್ಥಾತವ್ಯಂ ತದ್ವದಾಧುನಾ ॥೭೪॥

ನ ಪಾಪಿಷ್ಠಶರೀರಾಣಿ ರಾಷ್ಟ್ರೇಽಸ್ಮಿನ್ಮುನಿಪುಂಗವ ।
ಇತೋ ಬಹಿರ್ವಾ ಗಮನಂ ಮಮ ಶಕ್ಯಂ ನ ಸರ್ವಥಾ ॥೭೫॥

ಶಾಂಭವಾಗ್ರೇಸರೇ ದೃಷ್ಟೇ ಭೀತಿರಸ್ಯಾಃ ಪ್ರಜಾಯತೇ ।
ಪಲಾಯನಂ ಚ ಸಹಸಾ ನ ಭವಿಷ್ಯತಿ ಸರ್ವಥಾ ॥೭೬॥

ಎಲೈ ಮುನೀಶ್ವರನೇ, ವಿಷವೃಕ್ಷದ ನಡುಗಳ ಮಧ್ಯದಲ್ಲಿ ಹುಳುವು ಯಾವ ರೀತಿ ಇರುತ್ತದೆಯೋ ಅದೇ ರೀತಿ ನಾನು ಈ ಬಾಲಕನ ದೇಹದಲ್ಲಿ ಅಡಗಿದ್ದೆನು. ॥೭೨॥

ಒಂದು ಹುಳುವಿನ ದೇಹದಲ್ಲಿ ಮತ್ತೊಂದು ಹುಳುವು ಆವರಿಸಿಕೊಂಡಿರುವಂತೆ ನಾನೂ ಈ ಪಾಪಿ ದೇಹದಲ್ಲಿ ಅನೇಕ ದಿನಗಳನ್ನು ಕಳೆಯುತ್ತಾ ಇದ್ದೆನು. ॥೭೩॥

ಈತನು ಈ ರೀತಿಯಾಗಿ ಹುಟ್ಟಿದುದರಿಂದ ಇನ್ನು ಭೂಮಿಯೆಲ್ಲವೂ ಈಶ್ವರಭಕ್ತರಿಂದ ಕೂಡಿದುದಾಗುವುದು? ಆದ್ದರಿಂದ ನಾನು ಈಗ ಎಲ್ಲಿ ಇರಬೇಕೆಂಬುವನ್ನು ಹೇಳು. ॥೭೪॥

ಎಲೈ ಮುನಿವರ್ಯನೇ, ಈ ರಾಜ್ಯದಲ್ಲಿ ಪಾಪಿಷ್ಟರ ಶರೀರಗಳೇ ಕಾಣುವುದಿಲ್ಲ. ಆದರಿಂದ ನಾನು ಇಲ್ಲಿಂದ ಹೊರಗೆ ಹೋಗುವುದೂ, ಇಲ್ಲಿಯೇ ಇರುವುದೂ ಶಕ್ಯವಾಗಿಲ್ಲ. ॥೭೫॥

ಈ ನನಗೆ ಶಿವಭಕ್ತರನ್ನು ಕಂಡರೆ ಬಹು ಭೀತಿಯುಂಟಾಗುತ್ತದೆ. ಆದರೆ ಜಾಗ್ರತೆಯಾಗಿ ಓಡುವುದಕ್ಕೂ ಸಹ ನನ್ನಿಂದ ಆಗುವುದಿಲ್ಲ. ॥೭೬॥

ಮುಕ್ತಿಃ ಸಂಪಾದನೀಯಾ ಮೇ ಭೂತಿದಾನೇನ ಕೇವಲಂ ।
ವಿಭೂತಿಃ ಪಾಪಮೂರ್ತೀನಾಂ ನಾಶಾಯಾಶು ಪ್ರಜಾಯತೇ ॥೭೭॥

ವಿಭೂತಿಧಾರಣಾದೇವ ಮುಕ್ತಾಃ ಪೂರ್ವಂ ಮುನೀಶ್ವರಾಃ ।
ಪ್ರಾಪ್ತಂ ಮುನೀಶ್ವರತ್ವಂ ಚ ಕೇವಲಂ ಭೂತಿಧಾರಣಾತ್ ॥೭೮॥

ಐಶ್ವರ್ಯಂ ಪರಮಂ ಪ್ರಾಪ್ತಂ ಭೂತಿರುದ್ರಾಕ್ಷಧಾರಣಾತ್ ।
ನ ಭೂತಿಸದೃಶಂ ವಸ್ತು ಭೂತಿದತ್ವೇನ ಕೇವಲಂ ॥೭೯॥

ಭೂತಿರ್ವಿಭೂಷಣಂ ಯೇಷಾಂ ತೇ ಭೂತಪತಿಸೇವನಂ ।
ಕೃತ್ವಾ ಮುಕ್ತಿಪತಿಂ ಯಾಂತಿ ಮಹಾದೇವಂ ಕೃಪಾನಿಧಿಂ ॥೮೦॥

ಭೂತಿಪ್ರಭಾವೋ ನ ಜ್ಞಾತಃ ಕೇನಾಪಿ ಭುವಿ ಸರ್ವಥಾ ।
ಅತಃ ಸಂಸಾರಭಾರೇಣ ಭವಂತ್ಯೇವಾತಿಪೀಡಿತಾಃ ॥೮೧॥

ನಾನು ಸಕಲೈಶ್ವರ್ಯವನ್ನೂ ದಾನಮಾಡಿ ಮುಕ್ತಿಯನ್ನು ಸಂಪಾದಿಸಬೇಕು. ವಿಭೂತಿಯು (ಐಶ್ವರ್ಯವು) ಪಾಪಮೂರ್ತಿಗಳನ್ನು ನಾಶಮಾಡುವುದಕ್ಕೆ ಸಾಧಕವಾಗುವುದಲ್ಲವೆ? ॥೭೭॥

ಪೂರ್ವದಲ್ಲಿ ಮುನಿಗಳು ವಿಭೂತಿಧಾರಣೆಯಿಂದ ಮಾತ್ರವೇ ಮುಕ್ತಿಯನ್ನು ಪಡೆದರು. ಕೇವಲ ಭೂತಿಧಾರಣದಿಂದ ಮುನಿಗಳಿಗೆ ಶ್ರೇಷ್ಠತೆಯೂ ಬಂದಿತು.॥೭೮॥

ವಿಭೂತಿ ಮತ್ತು ರುದ್ರಾಕ್ಷಿಗಳನ್ನು ಧರಿಸುವುದರಿಂದ ಅಪಾರವಾದ ಐಶ್ವರ್ಯವು ಬರುತ್ತದೆ. ಐಶ್ವರ್ಯಸಂಪಾದನೆಗೆ ವಿಭೂತಿಸದೃಶವಾದ ವಸ್ತುವು ಮತ್ತೊಂದಿಲ್ಲ. ॥೭೯॥

ಯಾರು ಭಸ್ಮವನ್ನೇ ತಮ್ಮ ವಿಭೂಷಣವನ್ನಾಗಿ ತಿಳಿದು ಈಶ್ವರನನ್ನು ಸೇವಿಸುವರೋ, ಅವರು ದಯಾಮಯನಾಗಿ, ಮುಕ್ತಿದಾಯಕನೂ, ಆಗಿರುವ ಆ ಮಹಾದೇವನ ಸಾಯುಜ್ಯವನ್ನು ಪಡೆಯುತ್ತಾರೆ. ॥೮೦॥

ಭೂಲೋಕದಲ್ಲಿ ಜನರು ಆ ಭಸ್ಮದ ಮಹಿಮೆಯನ್ನು ಅರಿಯದೆ ಸಂಸಾರದ ಭಾರದಿಂದ ಬಹುವಾಗಿ ಹಿಂಸೆಪಡುತ್ತಾರೆ. ॥೮೧॥

ಇತಿ ತದ್ವಚನಂ ಶ್ರುತ್ವಾ ಕೃಪಾಲುರಪಿ ನಾರದಃ ।
ಕ್ವ ತೇ ಭೂತಿಃ ಕ್ವ ತೇ ಮುಕ್ತಿಃ ಮುಕ್ತಿವಾರ್ತಾಽಪಿ ದೂರತಃ ॥೮೭॥

ತ್ವಯಾ ನಿಷ್ಠುರಮೇವೋಕ್ತಂ ಬಾಲಕಸ್ಯ ಮಹಾತ್ಮನಃ ।
ಶಿವವಿದ್ಯಾದೀಕ್ಷಿತೋಽಯಮತ್ರ ತತ್ಪಾಪಸಾಧನಂ ॥೮೮॥

ಯಸ್ಯಾಸ್ತಿ ಶೈವವಿದ್ಯಾಯಾಂ ಬುದ್ಧಿಃ ಸೋಽಪಿ ಮಹಾನ್ ಖಲು ।
ತತ್ರ ನಿಷ್ಠುರಮುಕ್ತ್ವಾಂತೇ ನರಕಂ ಯಾತಿ ಸರ್ವಥಾ ॥೮೯॥

ಅಜ್ಞಾನೇನ ಪ್ರಮಾದಾದ್ವಾ ಪ್ರಸಂಗಾದ್ವಾ ಕದಾಚನ ।
ಶಿವಜ್ಞಾನಾನ್ವಿತಂ ದೃಷ್ಟ್ವಾ ನ ನಮೇದ್ಯಃ ಸ ಪಾಪಧೀಃ ॥೯೦॥

ಈ ರೀತಿಯಾಗಿ ಆ ಪಾಪಮೂರ್ತಿಯು ಹೇಳಿದ ಮಾತನ್ನು ಕೇಳಿ ನಾರದ ಮಹರ್ಷಿಯು ಕೃಪಾಮಯನಾದರೂ ಹೀಗೆಂದನು,"ನಿನಗೂ ಭೂತಿ ಮತ್ತು ಮುಕ್ತಿ, ಇವುಗಳಿಗೂ ಬಹಳ ಅಂತರವುಂಟು. ಆ ಮುಕ್ತಿಯ ಹೆಸರೂ ಸಹ ನಿನ್ನಿಂದ ಬಹು ದೂರವಿರುತ್ತದೆ. ||೮೭||

ಮತ್ತು ಈ ಬಾಲಕನು ಶಿವವಿದ್ಯೆಗಾಗಿ ದೀಕ್ಷೆಯನ್ನು ಪಡೆದಿದ್ದಾನೆ. ಆದ ರಿಂದಲೇ ಈತನು ಮಹಾತ್ಮನೆನಿಸಿರುವನು. ಅಂತಹ ಬಾಲಕನ ವಿಚಾರದಲ್ಲಿ ನೀನು ನಿಷ್ಠುರವಾಗಿ ನುಡಿದಿದ್ದೀಯೆ. ಆರೀತಿ ಮಹಾತ್ಮರ ವಿಚಾರದಲ್ಲಿ ನಿಷ್ಠುರವಾಗಿ ನುಡಿಯುವುದು ಪಾಪಸಾಧಕವಾಗುತ್ತದೆ. ||೮೮||

ಯಾವ ಮನುಜನು, ಶಿವವಿದ್ಯೆಯಲ್ಲಿ ತನ್ನ ಬುದ್ಧಿಯನ್ನು ಇಟ್ಟಿರುವನೋ ಅವನು ಮಹಾತ್ಮನೆಂದು ಪರಿಗಣಿಸಲ್ಪಡಬೇಕು. ಅಂತಹವನ ವಿಚಾರದಲ್ಲಿ ನಿಷ್ಠುರ ವಾಗಿ ನುಡಿದರೆ ಖಂಡಿತವಾಗಿ ನರಕಪ್ರಾಪ್ತಿಯಾಗುವುದು. ||೮೯||

ಯಾವ ಮನುಜನು ಅಜ್ಞಾನದಿಂದಲೇ ಆಗಲಿ, ಪ್ರಮಾದದಿಂದಲೇ ಆಗಲಿ, ಯಾವವಿಧದಲ್ಲಾಗಲೀ, ಶಿವವಿದ್ಯೆಯನ್ನು ತಿಳಿದಿರತಕ್ಕವನನ್ನು ನೋಡಿ, ಪುರಸ್ಕರಿಸು ವುದಿಲ್ಲವೋ ಅವನನ್ನು ಪಾಪಿಯೆಂದು ಗಣಿಸಬೇಕು. ||೯೦||

ಶೈವವಿದ್ಯಾದೂಷಕಾನಾಂ ನರಕೇ ವಸತಿಃ ಖಲು ।
ಅತಃ ಪರಂ ತ್ವಯಾಪ್ಯಾಶು ಗಂತವ್ಯಂ ನರಕೇ ಧ್ರುವಂ ॥೯೧॥

ಶೈವದೀಕ್ಷಾಪೂತದೇಹಃ ಪುಣ್ಯಪುಂಜ ಇತಿ ಸ್ಮೃತಃ ।
ತತ್ರ ನಿಷ್ಠುರಮುಕ್ತ್ವಾಂತೇ ಯಾಂತ್ಯೇವ ನರಕಂ ಧ್ರುವಂ ॥೯೨॥

ವಿಭೂತಿಧಾರಣೇ ಭಕ್ತಿಶ್ಶಾಂಕರೇ ಶಂಕರೇಽಪಿ ವಾ ।
ಯಸ್ಯ ಸ್ಯಾತ್ಸ ತು ಮುಕ್ತಃ ಸ್ಯಾದನ್ಯಸ್ಯ ತು ನ ಸಾ ಖಲು ॥೯೩॥

ಭಸ್ಮಧಾರಣಪೂತಾತ್ಮಾ ಯಃ ಪೂತಃ ಶಿವವಿದ್ಯಯಾ ।
ಸ ಏವ ತಾವದುತ್ಕೃಷ್ಟೋ ತತ್ರೇಷ್ಟಂ ಚೇಷ್ಟಭಾಷಣಂ ॥೯೪॥

ಶಿವವಿದ್ಯಾದೀಕ್ಷಿತೇಷು ವಿನಯೇನಾನುವರ್ತನಂ ।
ಸರ್ವಪಾಪವಿನಾಶಾಯ ಸದ್ಯ ಏವ ಪ್ರಜಾಯತೇ ॥೯೫॥

ಶಿವವಿದ್ಯೆಯನ್ನು ದೂಷಿಸತಕ್ಕವರಿಗೆ ನರಕವೇ ವಾಸಸ್ಥಾನವೆಂದು ನಿರ್ದಿಷ್ಟವಾಗಿರುವುದರಿಂದ ನೀನೂ ಸಹ ಖಂಡಿತ ಜಾಗ್ರತೆಯಾಗಿ ನರಕಕ್ಕೆ ಹೋಗಬೇಕು. ಏತಕ್ಕೆಂದರೆ, ॥೯೧॥

ಶಿವವಿಚಾರವಾಗಿ ದೀಕ್ಷೆಹೊಂದುವುದರಿಂದ ಮನುಷ್ಯನು ಪೂತನಾಗುತ್ತಾನೆ. ಆತನ ದೇಹವು ಪುಣ್ಯಸ್ವರೂಪವೆಂದು ಹೇಳಲ್ಪಟ್ಟಿದೆ. ಅಂತಹವರ ವಿಷಯದಲ್ಲಿ ನಿಷ್ಠುರವಾಗಿ ವರ್ತಿಸತಕ್ಕವರಿಗೆ ನಿಜವಾಗಿ ನರಕವೇ ಗತಿ ಎಂದು ಹೇಳಿರುತ್ತದೆ. ॥೯೨॥

ಯಾವ ಮನುಜನು ವಿಭೂತಿಯನ್ನು ಧರಿಸುವುದರಲ್ಲಿಯೂ, ಶಿವಭಕ್ತನಲ್ಲಿಯಾಗಲೀ, ಶಿವನಲ್ಲಿಯಾಗಲೀ, ಭಕ್ತಿಯನ್ನಿಡುವನೋ ಅಂತಹವನನ್ನು ಮುಕ್ತನೆಂದು ತಿಳಿಯಬೇಕು. ಇದಕ್ಕೆ ವಿಪರೀತನಾದವನಿಗೆ ಆ ಮುಕ್ತಿಯು ದೊರಕಲಾರದು. ॥೯೩॥

ಯಾವನು ಭಸ್ಮಧಾರಣೆಯಿಂದಲೂ ಮತ್ತು ಶಿವವಿದ್ಯೆಯಿಂದಲೂ ಪೂತನಾಗಿರುತ್ತಾನೋ ಅವನೇ ಉತ್ಕೃಷ್ಟನೆನಿಸುವನು. ಅವನೊಡನೆಯೇ, ಭಾಷಣ, ನಡತೆ, ಇವುಗಳೆಲ್ಲ ಯೋಗ್ಯವಾದವುಗಳು. ॥೯೪॥

ಶಿವವಿದ್ಯೆಯಲ್ಲಿ ದೀಕ್ಷಿತರಾಗಿರತಕ್ಕವರಲ್ಲಿ ವಿನಯದಿಂದ ವರ್ತಿಸಿದರೆ ಸದ್ಯದಲ್ಲಿಯೇ ಸಕಲ ಪಾಪಗಳೂ ನಾಶವಾಗುತ್ತವೆ. ॥೯೫॥

ಶಿವವಿದ್ಯಾಮಣಿಃ ಕಂಠೇ ಯದಾ ಯಸ್ಯಾಧಿತಿಷ್ಠತಿ ।
ತದಾ ತದ್ವಶಮಾಯಾಂತಿ ಸರ್ವೇ ಬ್ರಹ್ಮಾದಯಃ ಸುರಾಃ ॥೯೬॥

ಕಲ್ಪಾಂತವಹ್ನಿರೂಪಸ್ಯ ಬಾಲಸ್ಯಾಸ್ಯಾಽಧುನಾ ಮಯಾ ।
ತೇಜೋ ನ ಶಕ್ಯತೇ ಸೋಢುಂ ನಿಷ್ಠುರೋಕ್ತಿಸ್ತು ದೂರತಃ ॥೯೭॥

ಯಸ್ತು ಸ್ವಾಪೇಕ್ಷಯಾ ನೀಚಸ್ತತ್ರ ನಿಷ್ಠುರಭಾಷಣಂ ।
ಕದಾಚಿದುಚಿತಂ ತತ್ರಾಪ್ಯುಚಿತಂ ತತ್ಕಥಂ ಸದಾ ॥೯೮॥

ಸ್ವಾಧೀನಾಂ ರಸನಾಂ ಪ್ರಾಪ್ಯ ನಿಷ್ಠುರಂ ಯೋ ವದಿಷ್ಯತಿ ।
ಸ ನಾರಕೀತಿ ವಿಜ್ಞೇಯಃ ತಸ್ಯೈತಃ ಪಾಪಸಾಧನಂ ॥೯೯॥

ಮನುಜನು ಯಾವಾಗ ತನ್ನ ಕತ್ತಿನಲ್ಲಿ ಶಿವವಿದ್ಯೆಯೆಂಬ ಮಣಿಯನ್ನು (ರುದ್ರಾಕ್ಷಿಯನ್ನು) ಧರಿಸುತ್ತಾನೆಯೋ, ಆಗ ಬ್ರಹ್ಮನೇ ಮೊದಲಾದ ದೇವತೆಗಳೆಲ್ಲರೂ ಈತನ ವಶರಾಗುತ್ತಾರೆ. ॥೯೬॥

ಈ ಬಾಲಕನು ಪ್ರಳಯಕಾಲದ ಅಗ್ನಿಯಂತೆ ಇರುತ್ತಾನೆ. ಅದರಿಂದ ಈತನ ತೇಜಸ್ಸನ್ನು ತಡೆಯಲು ಸಾಧ್ಯವಿಲ್ಲ. ಇಂತಹುದರಲ್ಲಿ ನಿಷ್ಠುರೋಕ್ತಿಯು ಬಹು ದೂರವಾಗಿರಬೇಕು. ॥೯೭॥

ಯಾವನು ತನ್ನನ್ನು ಯೋಗ್ಯನೆಂದೂ ತನ್ನ ನಡತೆಗಳು ಉಚಿತವಾದುವುಗಳೆಂದೂ ತಿಳಿದು ಇತರರನ್ನು ತನಗಿಂತಲೂ ನೀಚರೆಂತಲೂ ಭಾವಿಸಿ ಅವರ ವಿಚಾರದಲ್ಲಿ ನಿಷ್ಠುರವಾಗಿ ವರ್ತಿಸುವನೋ, ಅದು ಅವನಿಗೆ ಹೇಗೆತಾನೆ ಉಚಿತವಾದೀತು ? ॥೯೮॥

ಯಾವ ಮನುಜನು ನಾಲಿಗೆಯನ್ನು ತನ್ನ ವಶದಲ್ಲಿಯೇ ಇಟ್ಟುಕೊಂಡಿದ್ದರೂ ಅದನ್ನು ನಿಷ್ಠುರವಾದ ವಾಣಿಯಲ್ಲಿ ಉಪಯೋಗಿಸುತ್ತಾನೆಯೋ, ಅಂತಹವನನ್ನು ನರಕಕ್ಕೆ ಯೋಗ್ಯನಾದವನನ್ನಾಗಿ ತಿಳಿಯಬೇಕು. ಏತಕ್ಕೆಂದರೆ, ಈ ರೀತಿ ಮಾಡುವುದು ಪಾಪಸಾಧಕವಾದುದು. ॥೯೯॥

ಶಿವನಾಮೋಚ್ಚಾರಣಾಯ ಸೃಷ್ಟಾ ಜಿಹ್ವಾ ವಿಶೇಷತಃ ।
ತತಸ್ತಯಾ ನಿಷ್ಠುರೋಕ್ತಿರಯುಕ್ತೋ ದೇಹಿನಾಂ ಖಲು ॥೧೦೦॥

ಮಧುರಾನ್ಮಧುರಂ ಮನೋಹರಂ
ಸುಕರಂ ಶಂಕರನಾಮ ಕೇವಲಂ ।
ವದತಿ ಶ್ರುತಿಭೂತಿಪಾವನೋ
ಮಧುರಾಸ್ವಾದನಲೋಲಜಿಹ್ವಯಾ ॥೧೦೧॥

ಮಧುರೋಕ್ತಿಭಿರೇವ ತೋಷಣಂ
ಮಧುರಾಲಾಪಸುಧಾರಸಜ್ಞಯಾ ।
ಅನಯಾ ಖಲು ಜಿಹ್ವಯಾ ಮುಹುಃ
ಶಿವನಾಮಾಮೃತಪಾನಮಿಪ್ಸಿತಂ ॥೧೦೨॥

ಆರೋಗ್ಯಂ ಪರಮಾಯುರುತ್ತಮಮತಿಃ ಸೌಭಾಗ್ಯವೃದ್ಧಿರ್ಯಶಃ
ಶ್ರೇಯೋರೂಪಮುದಾರತಾ ರತಿಸುಖಂ ಸಂತಾನವೃದ್ಧಿರ್ಮಹಃ ।

ಮನುಷ್ಯನಿಗೆ ನಾಲಗೆಯು ಮುಖ್ಯವಾಗಿ ಶಿವನಾಮವನ್ನು ಉಚ್ಚರಿಸುವುದಕ್ಕಾಗಿಯೇ ಸೃಜಿಸಲ್ಪಟ್ಟಿದೆ. ಅದನ್ನು ನಿಷ್ಠುರವಾಗಿ ನುಡಿಸುವುದಕ್ಕೆ ಉಪಯೋಗಿಸುವುದಾದರೆ ಅದು ಅಯುಕ್ತವಾದದ್ದು. ॥೧೦೦॥

ಶ್ರುತಿ (ಶಿವವಿದ್ಯೆ) ಯಿಂದಲೂ, ಮತ್ತು ವಿಭೂತಿಯಿಂದಲೂ, ಪರಿಶುದ್ಧನಾಗಿರತಕ್ಕ ಮನುಜನು ಮಧುರವಾದ ವಸ್ತುವನ್ನು ಆಸ್ವಾದನೆಮಾಡಬೇಕೆಂಬ ಅಭಿಲಾಷೆಯಿದ್ದಲ್ಲಿ ತನ್ನ ನಾಲಗೆಯಿಂದ, ಎಲ್ಲಾ ಮಧುರವಾದ ವಸ್ತುಗಳಿಗಿಂತಲೂ, ಮಧುರವಾಗಿಯೂ, ಮನೋಹರನಾಗಿಯೂ, ಸುಲಭವಾಗಿಯೂ, ಇರತಕ್ಕ ಶಿವನಾಮವನ್ನು ಉಚ್ಚರಿಸಬೇಕು. ॥೧೦೧॥

ಯಾವಾಗಲೂ ಮಧುರವಾದ ಉಕ್ತಿಗಳಿಂದ ಸಂತೋಷ ಪಡಿಸುತ್ತಿರುವುದೂ, ಮಧುರವಾಗಿರತಕ್ಕ ಮಾತುಗಳೆಂಬ ಅಮೃತದ ರಸವನ್ನು ತಿಳಿಸುತ್ತಿರುವುದೂ, ಶಿವನಾಮ ಎಂಬ ಅಮೃತಪಾನವೂ, ನಾಲಗೆಗೆ ಯೋಗ್ಯವಾದುದಲ್ಲವೇ ? ॥೧೦೨॥

ಶಿವ ಮಹಾವಿದ್ಯೆಯನ್ನು ತಿಳಿದು ನಿತ್ಯವೂ ಶಂಕರಪೂಜೆಯನ್ನು ಮಾಡತಕ್ಕ, ಮನುಜನು, ಆರೋಗ್ಯವನ್ನೂ ಆಯುರ್ವೃದ್ಧಿಯನ್ನೂ, ಒಳ್ಳೆಯ ಬುದ್ಧಿ

**ಕಾಂತಿಃ ಶೌರ್ಯಮಪಾರಶತ್ರುವಿಜಯೋ ವಿದ್ಯಾಽಪಿ ಸಂಪ್ರಾಪ್ಯತೇ**
**ನಿತ್ಯಂ ಶಂಕರಪೂಜಯಾ ಶಿವಮಹಾವಿದ್ಯಾವತಾ ಸರ್ವಥಾ ॥೧೦೩॥**

**ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ ನಾರದಾದ್ರಾಜಬಾಲಕಸ್ಯ ಶಿವವಿದ್ಯೋಪದೇಶ ಕಥಾಮಹಿಮಾವರ್ಣನಂ ನಾಮ ಷಷ್ಠೋಽಧ್ಯಾಯಃ**

ಯನ್ನೂ, ಸೌಭಾಗ್ಯ, ಶ್ರೇಯಸ್ಸು, ಔದಾರ್ಯವೂ, ರತಿಸುಖವೂ, ಪುತ್ರವೃದ್ಧಿಯೂ, ಕಾಂತಿಯೂ, ಶೌರ್ಯವೂ, ಅಪಾರವಾದ ಶತ್ರುಗಳನ್ನೂ ಸಹ ಗೆಲ್ಲಬಹುದಾದ ಸಾಮರ್ಥ್ಯ, ಇವುಗಳನ್ನೆಲ್ಲಾ ಖಂಡಿತವಾಗಿಯೂ ಹೊಂದುವನು ಎಂದು ನಾರದನು ರಾಜನಿಗೆ ಹೇಳಿದನೆಂಬುದಾಗಿ ಯಾಜ್ಞವಲ್ಕ್ಯನು ಹೇಳಿದನು. ||೧೦೩||

ಎಂಬಲ್ಲಿಗೆ ಹರ ಎಂಬ ಹೆಸರುಳ್ಳ ಶಿವರಹಸ್ಯದ ಮೂರನೇ ಅಂಶದ ಉತ್ತರಾರ್ಧದಲ್ಲಿ ನಾರದನಿಂದ ರಾಜಬಾಲಕನಿಗೆ ಉಪದೇಶಿಸಲ್ಪಟ್ಟ ಶಿವವಿದ್ಯೆಯ ಕಥೆಯ ಮಹಿಮಾ ವರ್ಣನೆ ಎಂಬ ಆರನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಸಪ್ತಮೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತ್ಯುದೀರಿತಮಾಕರ್ಣ್ಯ ಪಾಪಮೂರ್ತಿರುವಾಚ ತಂ ।
ಕೃತಾರ್ಥಂ ಕುರು ಮಾಂ ದೀನಾಂ ದೀನಬಂಧೋ ಮಹಾಮುನೇ ॥೧॥

ಅಜ್ಞಾನೇನಾಪರಾಧೇನ ಕಾರಣೇನ ಮುಹುರ್ಮುಹುಃ ।
ಕ್ಷಂತವ್ಯಾಸ್ತೇ ಮಹಾಭಾಗ ಕ್ಷಮಾಯುಕ್ತ ಮಹಾತ್ಮನಾಂ ॥೨॥

ಕೃತಾಪರಾಧೇ ಕುರ್ವಂತಿ ಕರುಣಾಂ ದೀನವತ್ಸಲಾಃ ।
ತದಭಾವೇ ತಯಾ ಕಿಂ ವಾ ಮುನೇ ಕರುಣಯಾ ವದ ॥೩॥

### ಏಳನೆಯ ಅಧ್ಯಾಯ

ಆ ನಾರದನ ಮಾತನ್ನು ಕೇಳಿ ಆ ಪಾಪಮೂರ್ತಿಯು ಮತ್ತೆ ನಾರದನನ್ನು ಕುರಿತು "ಎಲೈ ಮಹಾಮುನಿಯೇ ನೀನು ದೀನರಿಗೆಲ್ಲಾ ಬಂಧುವಾಗಿದ್ದೀಯೆ. ಆದರಿಂದ ದೀನಳಾಗಿರುವ, ನನ್ನನ್ನೂ ಕೃತಾರ್ಥಳನ್ನಾಗಿ ಮಾಡು" ಎಂಬುದಾಗಿ ಮತ್ತೆ ಹೀಗೆ ಕೇಳಿಕೊಂಡಿತು. ॥೧॥

ನಾನು ಅಜ್ಞಾನಿಯಾದ ಕಾರಣ ಅನೇಕ ಅಪರಾಧಗಳನ್ನು ಮಾಡಿರುವೆನು. ಮಹಾತ್ಮರಾಗಿಯೂ ಕ್ಷಮಾಶೀಲರಾಗಿಯೂ ಇರುವ ತಾವು ಆ ಅಪರಾಧಗಳನ್ನು ಮನ್ನಿಸಬೇಕು. ॥೨॥

ದೀನರಕ್ಷಕರಾದವರು ಮಹಾಪರಾಧ ಮಾಡಿದಂತಹವರನ್ನೂ ಕರುಣೆಯಿಂದ

ಯಮೋಽಪಿ ಕರುಣಾಹೀನಃ ಕರೋತಿ ಕರುಣಾಂ ಖಲು ।
ಕದಾಚಿದಿತಿ ಮೇ ತಾವದಪರಾಧಂ ಪ್ರಣಶ್ಯತು ॥೪॥

ಅಪಾರಪಾಪನಾಶೇ ಚೇತ್ಸಾಮರ್ಥ್ಯಂ ತರ್ಹಿ ಕಿಂ ಮಮ ।
ಅಪರಾಧಾಪಸರಣೇ ನ ಶಕ್ತಿಃ ಶಾಂಭವೋಽಸ್ಯ ತೇ ॥೫॥

ಕ್ಷಣಂ ವಾ ಯೇನ ಸಂಲಾಪಃ ಶಾಂಭವೇನ ಸಹಾದರಾತ್ ।
ಕೃತಸ್ತಸ್ಯಾಘನಿಲಯೋ ಭವತೀತ್ಯಪಿ ನಿಶ್ಚಿತಂ ॥೬॥

ಪಾಪರಾಶಿವಿನಾಶಾಯ ಶಾಂಭವಾಂಗಾನಿಲೋಽಪ್ಯಲಂ ।
ಗಂಗಾತರಂಗಾನಿಲವದ್ವಿಶೇಷೋ ನ ತಯೋರ್ಮತಃ ॥೭॥

---

ಮನ್ನಿಸುವರು. ಹಾಗಿಲ್ಲದಿದ್ದರೆ ಮುನಿಯೇ, ಆ ಕರುಣೆ ಎಂಬ ವಸ್ತುವಿನಿಂದ ಏನುತಾನೆ ಪ್ರಯೋಜನವಾದೀತೆಂದು ಹೇಳು. ॥೩॥

ಕರುಣಾಹೀನನಾಗಿರತಕ್ಕ ಯಮನೂ ಸಹ ಕೆಲವು ಸಲ ಕರುಣೆಯನ್ನು ತೋರುತ್ತಾನೆ. ಆದ್ದರಿಂದ ನೀವು ದಯವಿಟ್ಟು ನನ್ನ ಅಪರಾಧಗಳನ್ನು ಮನ್ನಿಸಿರಿ. ॥೪॥

ಶಿವಸೇವಕರಾದವರಿಗೆ ಅಸಂಖ್ಯಾತವಾದ ಪಾಪಗಳನ್ನೂ ನಾಶಮಾಡಲು ಸಾಮರ್ಥ್ಯವಿರುವುದಾದರೆ ಅಂತಹ ಶಕ್ತಿಯುಳ್ಳ ನಿನಗೆ ನನ್ನ ಅಪರಾಧಗಳನ್ನು ಹೋಗಲಾಡಿಸುವುದರಲ್ಲಿ ಶಕ್ತಿಯಿಲ್ಲವೆ ? ॥೫॥

ಯಾರು ಶಿವಕಿಂಕರರೊಡನೆ ಆದರದಿಂದ ಒಂದು ಕ್ಷಣವಾದರೂ ಸಲ್ಲಾಪ ಮಾಡುವರೋ, ಅಂತಹವರ ಪಾಪರಾಶಿಗಳೆಲ್ಲವೂ ನಾಶವಾಗುವುವೆಂದು ನಿಶ್ಚಿತವಾಗಿರುತ್ತದೆ. ॥೬॥

ಗಂಗಾನದಿಯ ಅಲೆಗಳಿಂದುಂಟಾಗುವ ಗಾಳಿಯು ಹೇಗೆ ಪಾಪರಾಶಿಯನ್ನು ನಾಶಪಡಿಸುತ್ತದೆಯೋ ಅದೇರೀತಿ ಶಿವಭಕ್ತನ ಅಂಗಸ್ಪರ್ಶದಿಂದ ಉಂಟಾಗತಕ್ಕ (ಆತನನ್ನು ಸ್ಪರ್ಶಿಸಿದ) ಗಾಳಿಯೂ ಕೂಡ ಪಾಪದ ರಾಶಿಗಳನ್ನು ಧ್ವಂಸಮಾಡುತ್ತದೆ. ॥೭॥

ಶೈವಾಂಗಾಲೋಕನಂ ಭಕ್ತ್ಯಾ ಸಕೃದ್ವಾ ಯಃ ಕರಿಷ್ಯತಿ ।
ಸ ಪೂತಃ ಕೃತಕೃತ್ಯಶ್ಚ ತತ್ಪುಣ್ಯಮಮಿತಂ ಖಲು ॥೮॥

ಶಾಂಗಾಂಗಸಂಗಃ ಖಲು ದುರ್ಲಭೋಽತ್ರ
ಲೋಕೋತ್ತರಃ ಪಾವನ ಪಾವನೋಽಯಂ ।
ತ್ವಂ ಶೈವವಿದ್ಯಾನಿಧಿರೇವ ಸಾಕ್ಷಾತ್
ನಿಧಾನಲಾಭೇ ಸುಖಮೇವ ನೂನಂ ॥೯॥

ಲಬ್ಧ್ವಾ ನಿಧಾನಾನಿ ಭವಂತಿ ಲೋಕೇ
ಬಹೂನಿ ತಾವತ್ಸುಖಿನಸ್ತಥಾ ಚ ।
ಅನೇಕಶಾಂಗಾಂಗಸಮಾಗಮೇನ
ಲಭ್ಯಾಸುಖಾನಾಂ ನ ಪರಂಪರಾ ಕಿಂ ॥೧೦॥

ಕಿಂ ಚಾಮುನಾ ಸಂನಿಹಿತಃ ಶಿವೋಽತ್ರ
ಲಿಂಗೇಷು ತುಂಗೇಷು ಮನೋಹರೇಷು ।
ತದ್ದರ್ಶನಾದೇವ ವಿಮುಕ್ತಿರದ್ಯ
ಜಾತಾ ಮಮೇತಿ ಪ್ರಮಿತಿಃ ಪ್ರವೃತ್ತಾ ॥೧೧॥

---

ಯಾವನು ಭಕ್ತಿಯಿಂದ ಒಂದಾವರ್ತಿಯಾದರೂ ಶಾಂಭವನ ಅವಯವಗಳನ್ನು ನೋಡುತ್ತಾನೆಯೋ ಅವನೇ ಪವಿತ್ರಪುರುಷನು. ॥೮॥

ಲೋಕದಲ್ಲಿ ಬಹು ಶ್ರೇಷ್ಠವಾಗಿಯೂ, ಅತಿ ಪವಿತ್ರವಾಗಿಯೂ, ಇರತಕ್ಕ ಪರಶಿವ ಭಕ್ತನ ಸಹವಾಸವು ಬಹು ದುರ್ಲಭವಾದುದು. ಅಂತಹ ಶಿವವಿದ್ಯೆಗೆ ನೀನು ಆಶ್ರಯಸ್ಥಾನನಾಗಿದ್ದೀಯೆ. ಸಕಲ ಸೌಖ್ಯಕ್ಕೆ ಕಾರಣನಾದ ನಿನ್ನ ಸಹವಾಸ ದೊರೆತ ಮೇಲೆ ನನಗೆ ಸುಖ ಉಂಟಾಗುವುದು ಖಂಡಿತ. ॥೯॥

ಲೋಕದಲ್ಲಿ ಅನೇಕರು ಮೇಲೆ ಹೇಳಿದಂತಹ ಕಾರಣಗಳನ್ನು ಪಡೆದು ಸುಖಿಗಳಾಗುತ್ತಾರೆ. ಇಂತಹ ಅನೇಕ ಶಿವಭಕ್ತರ ಸಹವಾಸಗಳನ್ನು ಪಡೆದಮೇಲೆ ಸುಖದ ಪರಂಪರೆಯು ಸಿಕ್ಕಲಾರದೇ? ॥೧೦॥

ಆದುದರಿಂದ ಮನೋಹರಗಳಾಗಿಯೂ, ಎತ್ತರವಾಗಿಯೂ, ಇರತಕ್ಕ ಈ ಶಿವಲಿಂಗಗಳಲ್ಲಿ ಶಿವನು ಸಂನಿಹಿತನಾಗಿದ್ದಾನೆ. ಅವನ ದರ್ಶನದಿಂದಲೇ ಈಗ ನನಗೆ ಮುಕ್ತಿಯು ಉಂಟಾಗಿದೆ ಎಂದು ನಾನು ನಂಬಿರುತ್ತೇನೆ. ॥೧೧॥

ಅತಃ ಪರಂ ದೇಹವಿಸರ್ಜನಾಯ
ತಾವದ್ವಿಲಂಬೋಽಸ್ತು ತತಸ್ತು ಕಿಂ ನೋ
ಕಿಂ ಚಾಧುನಾ ಲಿಂಗಶರೀರನಾಶೋ
ಲಿಂಗೇಷು ದೃಷ್ಟೇಷ್ವಘುನೈವ ವೃತ್ತಃ ॥೧೨॥

ಲಿಂಗಾನಿ ದೃಷ್ಟಾನಿ ಯದೈವ ಯೇನ
ತದೈವ ಪಾಪಾನಿ ಲಯಂ ಗತಾನಿ ।
ಗತೇಷು ಪಾಪೇಷು ನ ಲಿಂಗದೇಹಃ
ಪಾಪಾನುಬದ್ಧಃ ಖಲು ಲಿಂಗದೇಹಃ ॥೧೩॥

ಯದಿಂದುಮೌಲಿಸ್ಥಲಮಾತ್ರಮೇವ
ದೃಷ್ಟಂ ಮಹಾಘಪ್ರಲಯಾಯ ಶಕ್ತಂ ।
ಅತಃ ಪರಂ ಲಿಂಗವಿಲೋಕನೇನ
ಪಾಪಸ್ವರೂಪಾನ್ನ ಭಯಂ ಭವಾಬ್ಧೌ ॥೧೪॥

ಶರೀರದಲ್ಲಿ ಲಿಂಗಶರೀರವೆಂಬ ಒಂದು ಅವಾಂತರ ಶರೀರವು ಇರುತ್ತದೆ. ಅದು ಪುಣ್ಯ ಫಲಾನುಭವಕ್ಕೆ ತಕ್ಕುದಾಗಿಯೂ ಶಿಕ್ಷಾರ್ಹವಾದುದಾಗಿಯೂ ಇರುತ್ತದೆ. ಆ ಲಿಂಗ ಶರೀರವು ನಾನು ಮಾಡಿದ ಈ ಶಿವಲಿಂಗ ದರ್ಶನದಿಂದ ನಾಶವಾಗಿರುತ್ತದೆ. ಆದ್ದರಿಂದ ಇನ್ನು ಈ ಶರೀರವು ಹೋಗುವುದಕ್ಕೆ ಸಾವಕಾಶ ವಿಲ್ಲ. ಆದರಿಂದ ನನಗೆ ಯಾವ ನಷ್ಟವೂ ಇಲ್ಲ. ॥೧೨॥

ಯಾವಾಗ ಶಿವಲಿಂಗಗಳನ್ನು ದರ್ಶನ ಮಾಡುತ್ತಾರೆಯೋ, ಆ ಕ್ಷಣದಲ್ಲಿಯೇ ಸಕಲ ಪಾಪಗಳೂ ನಾಶವಾಗುತ್ತವೆ. ಮೇಲೆ ಹೇಳಿದಂತೆ ಆ ಲಿಂಗದೇಹವು ಪಾಪ ಗಳನ್ನು ಅನುಸರಿಸಿರುವುದಾದ್ದರಿಂದ ಆ ಪಾಪಗಳು ನಾಶವಾದನಂತರ ಲಿಂಗದೇಹವು ಇರುವುದಿಲ್ಲ. ॥೧೩॥

ಈಶ್ವರನು ಇರತಕ್ಕ ಸ್ಥಳವನ್ನು ದರ್ಶನಮಾಡಿದರೂ ಮಹಾಮಹಾ ಪಾಪಗಳೂ ನಾಶವಾಗುತ್ತವೆ. ಅದರಿಂದ ಸಾಕ್ಷಾತ್ತಾಗಿ ಲಿಂಗವನ್ನೇ ದರ್ಶನ ಮಾಡಿರುವುದರಿಂದ ಪಾಪಸ್ವರೂಪವೇ ನಾಶವಾಗಿ ಸಂಸಾರದಲ್ಲಿ ಜನರಿಗೆ ಯಾವ ಭಯವೂ ತಟ್ಟುವುದಿಲ್ಲ. ॥೧೪॥

ಭಾಗ್ಯಾನಿ ಲಿಂಗಾನವಲೋಕನೇನ
ನಶ್ಯಂತಿ ತಾವದ್ವಿಲಯಸ್ಯ ಬೀಜಂ ।
ತದೇವ ಯಸ್ಮಾದಿತಿ ನಿಶ್ಚಯಂ ಹಿ
ಲಿಂಗೇಷು ದೃಷ್ಟೇಷು ಸುಖಾನಿ ನೂನಂ ॥೧೫॥

ಸುಖಾನಿ ಲಿಂಗಪ್ರಭವಾನಿ ತಾನಿ
ಲಿಂಗಾದ್ಭವಂತ್ಯೇವ ವಿಲೋಕನೇನ ।
ಅತಃ ಪರಂ ಮೇ ಸುಖಸಂಗತಿಃ ಸ್ಯಾ
ದತ್ರಾಂತರಾಯಸ್ತು ನ ಸರ್ವಥಾಪಿ ॥೧೬॥

ಶಾಂಗಾಂಗಸಂಗಸ್ತ್ವತಿದುರ್ಲಭೋ ಹಿ
ಲಿಂಗಾನುಷಂಗಸ್ತದಪೇಕ್ಷಯಾ ಹಿ ।
ದೈವಾದ್ದ್ವಯೋರತ್ರ ಸಮಾಗಮೇನ
ಪುನ ಪುನಃ ಸ್ಯಾತ್ಸುಖಕಲ್ಪವಲ್ಲೀ ॥೧೭॥

ಶಾಂಗಾನಿ ಲಿಂಗಾನಿ ಚರಾಣಿ ಯಾನಿ
ಸ್ಥಿರಾಣಿ ತೇಷಾಮವಲೋಕನೇನ ।

ಶಿವಲಿಂಗದರ್ಶನಮಾಡದೇ ಇರುವುದರಿಂದ ಭಾಗ್ಯಗಳು ನಷ್ಟವಾಗುತ್ತವೆ. ಅಥವಾ ನಾಶಕ್ಕೆ ಪ್ರಾರಂಭವಾಗುತ್ತದೆ. ಈರೀತಿ ನಿಶ್ಚಿತವಾಗಿರುವುದರಿಂದ ಶಿವಲಿಂಗ ದರ್ಶನದಿಂದ ಶಾಶ್ವತ ಸುಖವುಂಟಾಗುತ್ತದೆ. ||೧೫||

ಸುಖವು ಶಿವಲಿಂಗದರ್ಶನದಿಂದಲೇ ಉಂಟಾಗಬೇಕಾಗಿರುವುದರಿಂದಲೂ ಈಗ ನಾನು ಲಿಂಗದರ್ಶನ ಮಾಡಿದುದರಿಂದಲೂ, ನನಗೆ ಯಾವ ವಿಘ್ನವೂ ಇಲ್ಲದೆ ಸುಖವು ಈಗಲೇ ಉಂಟಾಗುತ್ತದೆ. ||೧೬||

ಶಿವಭಕ್ತನ ಅಂಗಸಂಗವು ಬಹು ದುರ್ಲಭವಾದುದು. ಶಿವಲಿಂಗದರ್ಶನ ವಾಗುವುದಂತೂ ಮತ್ತೂ ಕಷ್ಟ. ಪ್ರಕೃತ ಇವೆರಡೂ ಏಕಕಾಲದಲ್ಲಿ ನನಗೆ ದರ್ಶನ ಕೊಟ್ಟಿರುವಾಗ ಯಾವ ಸೌಖ್ಯಕ್ಕೆ ತಾನೆ ನನಗೆ ಕೊರತೆಯಿದ್ದೀತು ? ||೧೭||

ಲಿಂಗಗಳು ಚರಗಳೇ ಆಗಲಿ, (ಜಂಗಮ ರೂಪಿಯಾದ ಶಿವಯೋಗಿ) ಸ್ಥಿರಗಳೇ ಆಗಲೀ, (ಪ್ರತಿಷ್ಠಿತವಾದ ಶಿವಲಿಂಗ) ಅವುಗಳನ್ನು ನೋಡುವುದರಿಂದ

ಆನಂದರಾಶಿಃ ಸಮುದೇತಿ ನೂನಂ
ಅತಃ ಕುತಃ ಸ್ಯಾದ್ಭಯರಾಶಿಭೀತಿಃ ॥೧೮॥

ಇತಿ ತದ್ವಚನಂ ಶ್ರುತ್ವಾ ನಾರದೋ ಹೃಷ್ಟಮಾನಸಃ ।
ದದೌ ಭೂತಿಕಣಾನ್ ತಸ್ಯೈ ತದಾ ತಲ್ಲಿಂಗಮಂಡಪೇ ॥೧೯॥

ದ್ವಿತ್ರೈರಪಿ ಪವಿತ್ರೈಸ್ತೈ ರ್ಯುತಾ ಭಸ್ಮಕಣೈಃ ಕ್ಷಣಾತ್ ।
ತತ್ಯಾಜ ತಾಂ ತನುಂ ಘೋರಾಂ ಕುರೂಪಾಂ ಕುತ್ಸಿತಾಮಪಿ ॥೨೦॥

ತತಃ ಪಾಪಶರೀರಸ್ಯ ನಾಶೇ ತದ್ದೇಹದೇವತಾ ।
ತದ್ಭೂತಿಕಣಯೋಗೇನ ದಿವ್ಯಂ ರೂಪಮವಾಪ ಚ ॥೨೧॥

ಸೂರ್ಯಮಂಡಲಸಂಕಾಶಾಂ ತನುಂ ಪ್ರಾಪ್ಯ ಮನೋಹರಾಂ ।
ಪೌರುಷಂ ರೂಪಮಾಸಾದ್ಯ ಬಭೌ ವಿಸ್ಮಾಪಯನ್ ಜನಂ ॥೨೨॥

ಖಂಡಿತವಾಗಿಯೂ ಆನಂದದ ರಾಶಿಯು ಹೆಚ್ಚುತ್ತದೆ. ಆದ್ದರಿಂದ ಪುನಃ ಭಯವು ಹೇಗೆತಾನೆ ಉಂಟಾದೀತು ? ಎಂಬುದಾಗಿ ಆ ಪಾಪಮೂರ್ತಿಯು ನಾರದನನ್ನು ಕುರಿತು ಹೇಳಿತು. ॥೧೮॥

ಈ ರೀತಿ ಆ ಪಾಪಮೂರ್ತಿಯು ಆಡಿದ ಮಾತನ್ನು ಕೇಳಿ ನಾರದನು ಸಂತೋಷದಿಂದ ಆ ಲಿಂಗಮಂಟಪದಲ್ಲಿಯೇ ಆ ಮೂರ್ತಿಗೆ ವಿಭೂತಿಯ ಕಣಗಳನ್ನು ಕೊಟ್ಟನು. ॥೧೯॥

ಪಾಪಮೂರ್ತಿಯು ಆ ಎರಡು ಅಥವಾ ಮೂರು ಭಸ್ಮಕಣಗಳನ್ನು ಧರಿಸಿಕೊಳ್ಳುತ್ತಲೇ ಭಯಂಕರವಾಗಿಯೂ, ಕುರೂಪವಾಗಿಯೂ, ಕುತ್ಸಿತವಾಗಿಯೂ ಇದ್ದ ಅದರ ದೇಹವು ಮಾಯವಾಯಿತು. ॥೨೦॥

ಆ ಪಾಪಶರೀರವು ನಾಶವಾದ ನಂತರ ಆ ದೇಹದ ದೇವತೆಯು ಆ ವಿಭೂತಿಯ ಕಣಗಳ ಸಂಸರ್ಗದಿಂದ ದಿವ್ಯರೂಪವನ್ನು ಪಡೆಯಿತು, ॥೨೧॥

ಆ ರೂಪವು ಸೂರ್ಯಮಂಡಲದಂತೆ ಕಾಂತಿಯುಳ್ಳದ್ದಾಗಿಯೂ ಮನೋಹರವಾಗಿಯೂ, ಇದ್ದು ಪುರುಷಶರೀರವನ್ನು ಹೊಂದಿರುವ ಆ ಆಕಾರವು ಜನರಿಗೆಲ್ಲಾ ವಿಸ್ಮಯವನ್ನುಂಟುಮಾಡುವಂತೆ ಬೆಳಗುತ್ತಿತ್ತು. ॥೨೨॥

ತತೋ ವಿಭೂತಿಪೂತಾಂಗೋ ರುದ್ರಾಕ್ಷಾಭರಣಾನ್ವಿತಃ ।
ಪ್ರಣಮ್ಯ ದಂಡವದ್ಭೂಮೌ ಪೂಜಯಾಮಾಸ ಶಂಕರಂ ॥೨೩॥

ತತಸ್ತಂ ಪುರುಷಂ ದೃಷ್ಟ್ವಾ ಭೂಪಾಲಃ ಪ್ರೀತಮಾನಸಃ ।
ಪೂರ್ವಪೂರ್ವಭವೇ ಕಾಯಂ ತದ್ವದೇತ್ಯಾಹ ನಾರದಂ ॥೨೪॥

॥ ನಾರದ ಉವಾಚ ॥

ದೃಷ್ಟಂ ತಾವತ್ತ್ವಯಾ ರಾಜನ್ನತಿವಿಸ್ಮಯಸಾಧನಂ ।
ಶಿವವಿದ್ಯಾಪ್ರಭಾವೋಽಪಿ ಜ್ಞಾತಃ ಖಲು ವಿಶೇಷತಃ ॥೨೫॥

ರಾಜನ್ ಅನಾದಯಃ ಸರ್ವೇ ಜೀವಾಸ್ತಾವದ್ವಿಶೇಷತಃ ।
ಜೀವಾನಾಂ ದೇಹಭೇದೋಽಪಿ ನಟಸ್ಯೇವಾನುವರ್ತತೇ ॥೨೬॥

ನಟೋ ಬಹೂನಿ ರೂಪಾಣಿ ಗೃಹ್ಣಾತ್ಯೇಕಸ್ತಥಾ ಖಲು ।
ದೇಹದ್ವಯಂ ಸಮಾಸಾದ್ಯ ಸರ್ವದಾಪ್ಯಧಿತಿಷ್ಠತಿ ॥೨೭॥

ಅನಂತರ ತನ್ನ ಅಂಗಗಳನ್ನು ವಿಭೂತಿಯಿಂದ ಪವಿತ್ರವನ್ನಾಗಿ ಮಾಡಿಕೊಂಡು ರುದ್ರಾಕ್ಷಿಯೆಂಬ ಆಭರಣವನ್ನು ಧರಿಸಿ, ದಂಡದಂತೆ ಭೂಮಿಯಲ್ಲಿ ನಮಸ್ಕರಿಸಿ ಈಶ್ವರನನ್ನು ಪೂಜಿಸಿತು. ॥೨೩॥

ಅನಂತರ ರಾಜನು ಸಂತೋಷದಿಂದ ಆ ಪುರುಷನನ್ನು ಕಂಡು, ಎಲೈ ನಾರದನೇ, ಹಿಂದಿನ ಜನ್ಮಗಳಲ್ಲಿದ್ದ ಶರೀರಗಳಾವುವೆಂಬುದನ್ನು ತಿಳಿಸು ಎಂದು ಪ್ರಶ್ನಿಸಿದನು. ॥೨೪॥

ಎಲೈ ರಾಜನೇ, ಈಗ ನೀನು ಬಹು ವಿಸ್ಮಯಜನಕವಾಗಿರತಕ್ಕ ದೃಶ್ಯವನ್ನು ಕಂಡಿದ್ದೀಯೆ. ಮತ್ತು ಶಿವವಿದ್ಯೆಯ ಪ್ರಭಾವವನ್ನೂ ಕೂಡ ಚೆನ್ನಾಗಿ ನೀನು ತಿಳಿದಿರಬಹುದು. ॥೨೫॥

ಎಲೈ ರಾಜನೇ, ಸಮಸ್ತ ಜೀವಗಳೂ ಸಹ ಅನಾದಿಯಾದವುಗಳೇ. ನಾಟಕದಲ್ಲಿ ನಟನು ಒಬ್ಬನೇ ಆದರೂ ಯಾವರೀತಿ ಅನೇಕ ರೂಪಗಳನ್ನು ಧರಿಸುವನೋ, ಅದರಂತೆ ಆ ಜೀವಗಳಿಗೂ ಸಹ ಅನೇಕ ದೇಹಗಳುಂಟು. ಆದರೆ ಯಾವಾಗಲೂ ಅವುಗಳು (ಯಾವ ತರಹ ದೇಹವನ್ನಾಶ್ರಯಿಸಿದಾಗ್ಯೂ) ಎರಡು ದೇಹಗಳನ್ನು ಒಳಗೊಂಡಿರುತ್ತವೆ. ॥೨೬-೨೭॥

ಭಿನ್ನಾ ಲಿಂಗಶರೀರಸ್ಯ ದೇವತಾ ಕಾಚಿದೇವ ಸಾ ।
ದೇವತಾ ಸ್ಥೂಲದೇಹಸ್ಯ ಸಾಪಿ ಭಿನ್ನೈವ ತಿಷ್ಠತಿ ॥೨೮॥

ಸ್ಥೂಲದೇಹಸ್ಯ ವಿಲಯೋ ಲಿಂಗದೇಹೋಽನುವರ್ತತೇ ।
ಲಿಂಗದೇಹಲಯಸ್ತ್ವಾವನ್ಮುಕ್ತಿಕಾಲೇ ಪ್ರಜಾಯತೇ ॥೨೯॥

ದ್ವಿವಿಧೋ ಮುಕ್ತಿಕಾಲೋಽಪಿ ಜೀವನ್ಮುಕ್ತಿರಿಹಾಪರಾ ।
ಜ್ಞೇಯಾ ಪರಮಮುಕ್ತಿಃ ಸ್ಯಾತ್ಸರ್ವಥಾ ಸಾ ವಿಲಕ್ಷಣಾ ॥೩೦॥

ಜೀವನ್ಮುಕ್ತಿದಶಾಯಾಂ ಚ ಶಿವವಿದ್ಯಾಪ್ರಭಾವತಃ ।
ಲಿಂಗದೇಹವಿನಾಶೋಽಪಿ ಕಸ್ಯಚಿಜ್ಜಾಯತೇ ನೃಪ ॥೩೧॥

ಲಿಂಗದೇಹಾಭಿಮಾನೋಽಪಿ ಭೂತಿಸಂಗಾದ್ವಿನಶ್ಯತಿ
ತದ್ದೇಹದೇವತಾಯಾಶ್ಚ ತದ್ವಿನಾಶೇನ ಕೇವಲಂ ॥೩೨॥

ಅವುಗಳಲ್ಲಿ ಒಂದಕ್ಕೆ ಲಿಂಗಶರೀರವೆಂದೂ ಇನ್ನೊಂದಕ್ಕೆ ಸ್ಥೂಲಶರೀರವೆಂದೂ ಹೆಸರು. ಎರಡಕ್ಕೂ ಸಹ ಭಿನ್ನಗಳಾದ ಬೇರೆ ಒಂದೊಂದು ದೇವತೆಯು ಇರುತ್ತದೆ. ॥೨೮॥

ಅವುಗಳಲ್ಲಿ ಸ್ಥೂಲದೇಹವು ಮಾತ್ರ ನಾಶವಾಗಿ ಆ ಲಿಂಗದೇಹವು ಪ್ರತಿಸ್ಥೂಲದೇಹಗಳನ್ನು ಅನುಸರಿಸುತ್ತಾ ಇರುತ್ತದೆ. ಮುಕ್ತಿಕಾಲದಲ್ಲಿ ಮಾತ್ರ ಆ ಲಿಂಗದೇಹವು ನಾಶವಾಗುತ್ತದೆ. ॥೨೯॥

ಆ ಮುಕ್ತಿಯೂ ಕೂಡ "ಜೀವನ್ಮುಕ್ತಿ, ಪರಮ ಮುಕ್ತಿ," ಎಂಬುದಾಗಿ ಎರಡು ಭೇದವುಳ್ಳದ್ದಾಗಿರುತ್ತದೆ. ಆದರೆ ಪರಮ ಮುಕ್ತಿಯು ಬಹು ವಿಲಕ್ಷಣವಾದುದು. ॥೩೦॥

ಅದರಲ್ಲಿ ಜೀವನ್ಮುಕ್ತಿ (ಜೀವಸಿದ್ಧರೂ ಸಹ ಇಹ ವ್ಯಾಪಾರಗಳಿಲ್ಲದೇ ಆ ಪರಮ ದೈವದಲ್ಲೇ ಆಸಕ್ತವಾಗಿ ಮುಕ್ತನಾಗುವುದಕ್ಕೆ ಜೀವನ್ಮುಕ್ತಿ ಎಂದು ಹೆಸರು) ಸಮಯದಲ್ಲಿ ಶಿವವಿದ್ಯಾಮಹಿಮೆಯಿಂದ ಕೆಲವರಿಗೆ ಮಾತ್ರ ಆ ಲಿಂಗದೇಹದ ನಾಶವು ಆಗುವುದುಂಟು. ॥೩೧॥

ವಿಭೂತಿಯ ಸಂಸರ್ಗದಿಂದ ಆ ಲಿಂಗದೇಹಾಭಿಮಾನವೂ ಮತ್ತು ಆ ದೇಹದ ದೇವತೆಯ ಅಭಿಮಾನವೂ ಸಹ ನಾಶವಾಗುತ್ತದೆ. ॥೩೨॥

ತಪಸಾ ದೇವತಾ ರಮ್ಯಂ ಧೃತ್ವಾ ದೇಹಂ ವಿಶೇಷತಃ ।
ಸ್ವೇಚ್ಛಯಾ ಚರತಿ ಪ್ರೀತ್ಯಾ ಸತ್ಯಲೋಕಾದಿಷು ಧ್ರುವಂ ॥೩೩॥

ಅತಃ ಪರಮಯಂ ತಾವತ್ಪುರುಷೋ ಭೂತಿಪಾವನಃ ।
ಶಿವನಾಮಾನುಸಂಧಾನಸುಧಾಪಾನರತೋ ಭವೇತ್ ॥೩೪॥

ಅತಃ ಪರಂ ನ ದೇಹೇಷು ಸ್ಪೃಹಾಸ್ಯಸ್ಯ ಭವಿಷ್ಯತಿ ।
ಅಯಂ ದೇಹಃ ಪುಣ್ಯರೂಪೋ ಯತ್ರ ಕುತ್ರಾಪಿ ಸಂಚರನ್ ॥೩೫॥

ಸಂಚಾರೇ ಶಿವನಾಮಾನಿ ಗಾಯನ್ನೇವ ಮುಹುರ್ಮುಹುಃ ।
ಪಾಪದೇಹಸ್ಯ ವಿಲಯೋ ನ ಪುನಃ ಪಾಪಸಂಗಮಃ ॥೩೬॥

ದೇಹಾಸ್ಯಂತ್ಯಾ ಪಾಪದೇಹಃ ಪರಿತ್ಯಕ್ತಃ ಶಿವಾಜ್ಞಯಾ ।
ಅತಃ ಪರಂ ನ ಚಾಸ್ಯಾಸ್ತು ಸಂಗಃ ಸರ್ವಾತ್ಮನಾ ಮಮ ॥೩೭॥

ಮುಕ್ತೋಽಹಂ ಕೃತಕೃತ್ಯೋಽಹಂ ದ್ವಿತ್ರೈರ್ಭೂತಿಕಣೈರಪಿ ।
ಕೃಪಾವೈಶಿಷ್ಟ್ಯ ಮಹೇಶಸ್ಯ ದೇವದೇವಸ್ಯ ಶೂಲಿನಃ ॥೩೮॥

ಬಹುಕಾಲ ತಪಸ್ಸುಮಾಡುವುದರಿಂದ ಆ ದೇವತೆಯು ಒಂದು ರಮ್ಯವಾದ ದೇಹವನ್ನು ಧರಿಸಿ, ತನ್ನ ಮನಬಂದಂತೆ ಸಂತೋಷದಿಂದ ಸತ್ಯಲೋಕವೇ ಮೊದಲಾದ ಲೋಕಗಳಲ್ಲಿ ತಿರುಗುತ್ತದೆ. ॥೩೩॥

ಆನಂತರ ಈತನಿಗೆ ದೇಹಗಳಲ್ಲಿ ಅಭಿರುಚಿಯು ಹುಟ್ಟುವುದಿಲ್ಲ. ಈ ದೇಹವು ಪುಣ್ಯಸ್ವರೂಪವಾಗಿ ಎಲ್ಲಿಯಾದರೂ ಸಂಚರಿಸುತ್ತಾ ಇರುವುದು. ॥೩೫॥

ಆ ರೀತಿ ಸಂಚರಿಸುತ್ತಾ ಬಾರಿಬಾರಿಗೂ ಶಿವನಾಮಗಳನ್ನೇ ಗಾನಮಾಡುತ್ತಿರುವನು. ಪಾಪದೇಹವಾದ ಲಿಂಗದೇಹವು ನಾಶವಾದನಂತರ ಪುನಃ ಪಾಪಸಂಗಮವೇ ಆಗುವುದಿಲ್ಲ. ॥೩೬॥

ಶಿವನ ಅಪ್ಪಣೆಯಂತೆ ನನ್ನ ಅಭ್ಯಾಸವಿಶೇಷದಿಂದ ಪಾಪದೇಹವು ನಾಶವಾಗಿರುತ್ತದೆ. ಇನ್ನು ಮತ್ತೆ ಆ ದೇಹದ ಸಹವಾಸವು ಆಗದಿರಲಿ. ॥೩೭॥

ಮಹಾತ್ಮನಾದ ಮತ್ತು ದೇವತೆಗಳಿಗೂ ದೇವನಾಗಿರುವ ಈಶ್ವರನ ಕೃಪೆಯು ಬಹು ದೊಡ್ಡದು. ಅದರ ದೆಸೆಯಿಂದ ನಾನು ಈ ಕೇವಲ ಎರಡು ಅಥವಾ ಮೂರು ಭಸ್ಮಕಣಗಳಿಂದಲೇ ಕೃತಕೃತ್ಯನೂ ಮುಕ್ತನೂ ಆಗಿದ್ದೇನೆ. ॥೩೮॥

ಅತಃ ಪರಂ ನ ಕಾಲಾದ್ವಾ ಮಮ ಭೀತಿರಿತಃ ಪರಂ ।
ಯತ್ರ ಕುತ್ರಾಪಿ ಸಂಚಾರೋ ಲೋಕೇಷು ವಿಗತಸ್ಪೃಹಃ ॥೩೯॥

ಅತಃ ಪರಂ ನ ಚಾದಾನಂ ನ ವಿಸರ್ಗೋಽಪಿ ಕುತ್ಸಿತೇ ।
ನ ಪ್ರವೃತ್ತಿರ್ನಿವೃತ್ತಿಶ್ಚ ನಿರ್ಗಮಸ್ಥಿತಿರೇವ ವಾ ॥೪೦॥

ನ ಕಾರ್ಯಂ ಕಾರಣಂ ವಾಸ್ಯ ತದಾಕಾಂಕ್ಷಾಪಿ ನ ಧ್ರುವಂ ।
ನ ಸಂಗತಿರಸಂಗೋ ವಾ ಸ್ವಾನಂದಾನುಭವೇ ಸತಿ ॥೪೧॥

ಮಹಾಶಾಂಭವದತ್ತೇನ ಭಸ್ಮನಾ ಲಿಂಗದರ್ಶನೈಃ ।
ಪ್ರಾಪ್ತಮೇತನ್ಮಹದ್ಭಾಗ್ಯಂ ದುರ್ಲಭಂ ಖಲು ಸರ್ವಥಾ ॥೪೨॥

ಅನೇಕಕಲ್ಪಪರ್ಯಂತಂ ದೇಹಬಂಧಃ ಸ್ಥಿತೋ ಮಮ ।
ಅತಃ ಪರಂ ಜಿತಂ ನೂನಂ ನಷ್ಟಾ ಸಂಸಾರಶೃಂಖಲಾ ॥೪೩॥

---

ಆ ರೀತಿ ನಾನು ಮುಕ್ತನಾದ್ದರಿಂದ ನನಗೆ ಇನ್ನು ಯಮನಿಂದಲೂ ಯಾವ ಭೀತಿಯೂ ಇಲ್ಲ. ಆಶಾರಹಿತನಾಗಿ ಯಾವ ಲೋಕದಲ್ಲಿ ಬೇಕಾದರೂ ಸಂಚರಿಸ ಬಹುದು. ॥೩೯॥

ಅನಂತರ ಯಾವ ಸ್ವೀಕಾರವೇ ಆಗಲಿ, ದುಃಸ್ವಭಾವವುಳ್ಳದುದೋ ಅಥವಾ ಸರಿಯಾದುದೇ ಆಗಲಿ, ಯಾವ ಪದಾರ್ಥದಲ್ಲಿಯೂ ಪ್ರವೃತ್ತಿ, ನಿವೃತ್ತಿ ಇವುಗ ಳಿಲ್ಲದೆ ಆನಂದಮಯನಾಗಿರುವೆನು. ॥೪೦॥

ಇಲ್ಲಿ ಸ್ವ ಎಂಬುದಕ್ಕೆ ಶಿವನು ಅರ್ಥ. ಶಿವೋಽಹಂ ಎಂಬ ಜ್ಞಾನಾನಂದವನ್ನು ಅನುಭವಿಸುತ್ತಿರಲಾಗಿ, ಈ ಪ್ರಪಂಚದ ಯಾವ ಕಾರ್ಯ, ಕಾರಣಗಳೂ ತಿಳಿಯು ಲಾರವು. ತಿಳಿಯಬೇಕೆಂಬ ಅಭಿಲಾಷೆಯೂ ನಹ ಉಂಟಾಗಲಾರದು. ಅವುಗಳಲ್ಲಿ ಆಸಕ್ತಿಯಾಗಲೀ, ಅನಾಸಕ್ತಿಯಾಗಲೀ ಯಾವುದೂ ಇರುವುದಿಲ್ಲ. ॥೪೧॥

ಮಹಾಶಿವಭಕ್ತನಾದ ನೀನು ಕೊಟ್ಟಂತಹ ಭಸ್ಮದಿಂದಲೂ ಮತ್ತು ಈ ಈಶ್ವರಲಿಂಗದ ದರ್ಶನಗಳಿಂದಲೂ ಬಹು ದುರ್ಲಭವಾದ ಈ ಮಹಾಭಾಗ್ಯವು ನನಗೆ ದೊರಕಿತು. ॥೪೨॥

ನನಗೆ ಈ ದೇಹವು ಅನೇಕ ಕಲ್ಪದ ವರೆಗೂ ಇದ್ದಿತು. ಇನ್ನು ಅದನ್ನು ನಾನು ದೂರಮಾಡಿದೆನು. ಅಲ್ಲದೆ ಸಂಸಾರವೆಂಬ ಬಂಧನವೂ ಇನ್ನು ನಾಶವಾ ಯಿತು. ॥೪೩॥

ಚಿರಂ ಕುತ್ಸಿತಗರ್ಭೇಷು ಸ್ಥಿತಂ ದುಃಖೇನ ಸರ್ವದಾ ।
ನಿರ್ಗತಂ ಕುತ್ಸಿತೇನೈವ ಯೋನಿಮಾರ್ಗೇಣ ಕೋಟಿಶಃ

ಸಹಸ್ರಕೋಟಿಸಂಖ್ಯಾಕಯೋನಿಮಾರ್ಗವಿನಿರ್ಗಮಾತ್ ।
ಭುಕ್ತಾನ್ಯಪಾರದುಃಖಾನಿ ತಾನಿ ನಾತಃ ಪರಂ ಖಲು ॥೪೫॥

ಸಂಗಃ ಸಮಭವದ್ಯೋಽಯಂ ಶಾಂಭವೈಃ ಸಹ ತೇನ ಮೇ ।
ಸಂಸಾರಬಂಧಮೋಕ್ಷೋಽಭೂತ್ ಕೃತಕೃತ್ಯೋಽಸ್ಮಿ ಸರ್ವಥಾ ॥೪೬॥

ನ ಚ ಬ್ರಹ್ಮತ್ವವಾಂಛಾ ಮೇ ವಿಷ್ಣುತ್ವಂ ನಾಭಿವಾಂಛಿತಂ ।
ಕಾಲೋ ನೇಯಃ ಪ್ರಯತ್ನೇನ ಶಿವನಾಮಾನುಗಾಯನೈಃ ॥೪೭॥

ಸಿತಭಸ್ಮಸ್ವರೂಪೇಣ ಸುಧಾನಿಧಿರುಪಾಗತಃ ।
ತೇನ ತೃಪ್ತೋಽಸ್ಮಿ ಸತತಂ ನಿವೃತ್ತಾ ಸಾ ತೃಷಾ ಮಮ ॥೪೮॥

ನೀಚವಾದ ಪಶು ಗರ್ಭಗಳಲ್ಲಿ ಬಹು ದುಃಖದಿಂದ ಬಹಳಕಾಲ ಇದ್ದೆನು. ಅದೇ ವಿಧದಲ್ಲಿ ಅನೇಕಾವರ್ತಿ ಕುತ್ಸಿತವಾದ ಯೋನಿಮಾರ್ಗದಿಂದಲೇ ಜನ್ಮ ತಾಳಿದೆನು. ||೪೪||

ಈ ರೀತಿ ಅಸಂಖ್ಯಾತಗಳಾದ ಯೋನಿಮಾರ್ಗದಿಂದ ಜನ್ಮತಾಳಿದ ದುಃಖಗಳನ್ನು ಅನುಭವಿಸಿದ್ದೇನೆ. ಆದರೆ ಇನ್ನು ಮುಂದೆ ಆ ತರಹ ದುಃಖಗಳು ನನಗೆ ಇರುವುದಿಲ್ಲ. ||೪೫||

ನನಗೆ ಈಗ ಈ ಶಿವಭಕ್ತರೊಡನೆ ಸಹವಾಸವು ಒದಗಿದ್ದರಿಂದ ನಾನು ಸಂಸಾರಬಂಧನದಿಂದ ಬಿಡುಗಡೆ ಹೊಂದಿದವನಾಗಿಯೂ ಕೃತಕೃತ್ಯನಾಗಿಯೂ ಆಗಿದ್ದೇನೆ. ||೪೬||

ನನಗೆ ಬ್ರಹ್ಮನಾಗಬೇಕೆಂದಾಗಲಿ, ವಿಷ್ಣುವಾಗಬೇಕೆಂಬ ಅಭಿಲಾಷೆಯೇ ಆಗಲಿ ಇಲ್ಲ. ಮತ್ತೆ ಯತ್ನಪೂರ್ವಕವಾಗಿ ಶಿವನಾಮಗಾನಮಾಡುತ್ತಾ ಕಾಲಕಳೆಯಬೇಕೆಂದಿರುವೆನು. ||೪೭||

ನನಗೆ ದೊರೆತ ಈ ಶುಭ್ರ ಭಸ್ಮವು ಸುಧಾನಿಧಿಯಾದ ಚಂದ್ರನಂತೆ ಪ್ರಕಾಶಿಸುತ್ತಿರುವುದು. ಇದರ ಕಾಂತಿಯಿಂದ ನಾನು ತೃಪ್ತನಾಗಿ ದಾಹಶಾಂತಿಯನ್ನು ಪಡೆದಿರುವೆನು. ||೪೮||

ಕ್ಷುಧಯಾದಗ್ಧಮುದರಂ ತೃಷಯಾಪಿ ಪುನಃ ಪುನಃ ।
ಯಾಚ್ಞಾ ದೈನ್ಯಾನ್ನ ಭೂತ್ಯಾದಿ ದಗ್ಧೋ ದೇಹಃ ಪುರಾ ಖಲು ॥೪೯॥

ಅಕಸ್ಮಾದ್ದೇಹಸಂಬಂಧವಿಶ್ಲೇಷಃ ಕಿಮುಭೂನ್ಮಮ ।
ಅಹೋ ಕಲ್ಯಾಣಕಾಲೋಽಯಂ ಕಲ್ಯಾಣಪತಿದರ್ಶನಾತ್ ॥೫೦॥

ಸ ಸರ್ವಮಂಗಳಾಕಾಂತಃ ಲಿಂಗರೂಪೇಣ ಭಾಗ್ಯತಃ ।
ದೃಷ್ಟಃ ಕಷ್ಟವಿನಾಶಾಯ ಕೋಽಯಮಸ್ಯ ಮಹೋದಯಃ ॥೫೧॥

ಲಿಂಗದರ್ಶನಕಾಲೋಽಯಂ ಸ ಮಹಾಭ್ಯುದಯಪ್ರದಃ ।
ದುರ್ಲಭಃ ಸರ್ವಕಾಲೇಷು ಮಹತಾಮಪಿ ದುರ್ಲಭಃ ॥೫೨॥

ಅತಃ ಪರಂ ಯತ್ರ ಯತ್ರ ಶಿವಲಿಂಗಾನಿ ತತ್ರ ಮೇ ।
ಸಂಚಾರಃ ಸುಖದಸ್ತತ್ರ ನಿವಾಸೋಽಪಿ ಕದಾಚನ ॥೫೩॥

ಪೂರ್ವದಲ್ಲಿ ನನ್ನ ದೇಹವು ಹಸಿವು, ಬಾಯಾರಿಕೆ, ಮತ್ತೊಬ್ಬರೊಡನೆ ಯಾಚಿಸುವುದು, ದೈನ್ಯ ಇತ್ಯಾದಿ ದುಃಖಾನುಭವಗಳಿಂದ ಜರ್ಝರಿತವಾಗಿ ಹೋಯಿತು. ॥೪೯॥

ಈಗ ನನಗೆ ಅಕಸ್ಮಾತ್ತಾಗಿ ದೇಹಕ್ಕೂ ನನಗೂ ಇದ್ದ ಸಂಬಂಧವು ತೊರೆದು ಹೋಯಿತು. ಆದರಿಂದಲೂ, ಕಲ್ಯಾಣವತಿಯಾದ ಈಶ್ವರನ ದರ್ಶನ ಒದಗಿದುದರಿಂದಲೂ ಈ ಸಮಯವು ನನ್ನ ಪಾಲಿಗೆ ಮಂಗಳವನ್ನುಂಟುಮಾಡ ತಕ್ಕುದಾಗಿದೆ. ॥೫೦॥

ಸಕಲ ಮಂಗಳದಾಯಕನಾಗಿರುವ ಪಾರ್ವತೀರಮಣನು ನನ್ನ ಕಷ್ಟ ನಿವಾರಣೆಗಾಗಿ ಲಿಂಗರೂಪದಿಂದ ಗೋಚರಿಸುತ್ತಿರಬೇಕಾದರೆ ಅದು ನನ್ನ ಭಾಗ್ಯ ವಲ್ಲದೆ ಮತ್ತೇನು ? ॥೫೧॥

ಈಗ ಶಿವಲಿಂಗದರ್ಶನ ಮಾಡುವಂತಹ ಸುಸಮಯ ನನಗೆ ಒದಗಿರುತ್ತದೆ. ಇದು ಎಂತಹ ಮಹಾತ್ಮರಿಗೂ ದುರ್ಲಭವಾದುದು. ಅಂತಹುದು ನನಗೆ ಒದಗಿರು ವುದರಿಂದ ಬಹಳವಾದ ಅಭ್ಯುದಯವು ಪ್ರಾಪ್ತವಾದಂತಾಯಿತು. ॥೫೨॥

ಆದ್ದರಿಂದ ಇನ್ನು ಮುಂದೆ ಶಿವಲಿಂಗಗಳು ಎಲ್ಲೆಲ್ಲಿವೆಯೋ ಅಲ್ಲಲ್ಲಿ ಸಂಚಾರ ಮಾಡುವುದೂ, ಕೆಲವು ವೇಳೆ ಅಲ್ಲಿಯೇ ವಾಸಮಾಡುವುದೂ, ಇವುಗಳಿಂದ ಸೌಖ್ಯ ಉಂಟಾಗುತ್ತದೆ. ॥೫೩॥

ಶಿವಲಿಂಗಾನಿ ದೃಷ್ಟ್ವೈವ ಕಾಲೋ ನೇಯೋ ಮಯಾ ಮುಹುಃ ।
ಶಿವಾರ್ಚನಂ ಚ ಕರ್ತವ್ಯಂ ಪ್ರಮಾದೇನ ವಿನಾ ಮಯಾ ॥೩೪॥

ಶಾಂಭವೈರೇವ ಸಂಗೋಽಪಿ ಕರ್ತವ್ಯಶ್ಚ ಪುನಃ ಪುನಃ ।
ಮಹಾದೇವಧ್ಯಾನಮೇವ ಕರ್ತವ್ಯಂ ಸಂತತಂ ಮಯಾ ॥೩೫॥

ಮಹಾದೇವಕಥಾಸಿಂಧುರ್ಯತ್ರ ಯತ್ರ ಪ್ರವರ್ತತೇ ।
ತತ್ರ ತತ್ರ ಮಯಾ ಸ್ಥೇಯಂ ಪ್ರಮಾದೇನ ವಿನಾ ಖಲು ॥೩೬॥

ಶಿವಸ್ನಾನಪರಿತ್ಯಾಗೋ ನ ಕರ್ತವ್ಯೋ ವಿಶೇಷತಃ
ಶಿವತೀರ್ಥೇಷು ಸತತಂ ಕರ್ತವ್ಯಮವಗಾಹನಂ ॥೩೭॥

ಶಿವಲಿಂಗಾರ್ಚನೇನೈವ ಕಾಲೋ ನೇಯೋ ಮಯಾ ಮುಹುಃ ।
ಶೈವಸಂಗಪರಿತ್ಯಾಗೇ ಬುದ್ಧಿರ್ನಾಸ್ತು ಮಮಾಧುನಾ ॥೩೮॥

ನಾನು ನನ್ನ ಸಮಯವನ್ನು ಶಿವಲಿಂಗಗಳನ್ನು ದರ್ಶನಮಾಡುವುದು, ಆಲಸ್ಯವಿಲ್ಲದೆ ಶಿವಾರ್ಚನೆಯನ್ನು ಮಾಡುವುದು, ಇವುಗಳಿಂದಲೇ ಕಳೆಯಬೇಕು. ॥೩೪॥

ನಾನು ಬಾರಿಬಾರಿಗೂ ಶಿವಭಕ್ತರಸಂಗವನ್ನೇ ಮಾಡುತ್ತಲೂ, ಈಶ್ವರನ ಧ್ಯಾನವನ್ನೇ ನೆರವೇರಿಸುತ್ತಲೂ ಇರಬೇಕು. ಇದೇ ನನಗೆ ಕಲ್ಯಾಣಕರ. ॥೩೫॥

ನಾನು ಶಿವಕಥೆಯು ಎಲ್ಲೆಲ್ಲಿ ನಡೆಯುತ್ತದೆಯೋ, ಅಲ್ಲಲ್ಲಿ ಭಕ್ತಿ, ಆಸಕ್ತಿ ಇವುಗಳನ್ನು ತೋರ್ಪಡಿಸುತ್ತಾ ಪ್ರಮಾದರಹಿತನಾಗಿರಬೇಕು. ॥೩೬॥

ಹೆಚ್ಚುಕಾಲ ಶಿವಸ್ನಾನವನ್ನು ಬಿಡಕೂಡದು. ಮತ್ತು ಯಾವಾಗಲೂ ಶಿವತೀರ್ಥಗಳಲ್ಲಿಯೇ ಸ್ನಾನಮಾಡಬೇಕು. ॥೩೭॥

ನಾನು ಶಿವಲಿಂಗವನ್ನು ಪೂಜಿಸುವುದರಲ್ಲಿಯೇ ಕಾಲವನ್ನು ಕಳೆಯಬೇಕು. ನನಗೆ ಅವನ್ನೂ ಶಿವಭಕ್ತರ ಸಹವಾಸವನ್ನೂ ಸಹ ಬಿಡುವುದರಲ್ಲಿ ಬುದ್ಧಿಯುಂಟಾಗದಿರಲಿ. ॥೩೮॥

ಅಮೃತತ್ವಪ್ರಾಪಕಾನಿ ಶಿವನಾಮಾನಿ ಸಂತತಂ ।
ಜಪನೀಯಾನಿ ಯತ್ನೇನ ತೇನ ಕಾಲಭಯಂ ಕುತಃ ॥೫೯॥

ಸೌಭಾಗ್ಯಭೋಗಕಾಲೋಽಯಂ ಸಂಪ್ರತ್ಯಸ್ಯಾನುವರ್ತತೇ
ಶಿವಪ್ರಸಾದಾದೇತಸ್ಯ ವೃದ್ಧಿರಸ್ತು ಸದಾ ಮಮ ॥೬೦॥

ದೇವೋತ್ತಮೇ ಮಹಾದೇವೇ ಭಕ್ತಿರವ್ಯಭಿಚಾರಿಣೀ ।
ಮಮಾಸ್ತು ತಾವತಾ ನಿತ್ಯಂ ಆನಂದೋಽಪಿ ಪ್ರವರ್ಧತಾಂ ॥೬೧॥

ಅಶೈವಮಾರ್ಗಪ್ರಲಯಪ್ರವೃತ್ತಿಃ ।
ಅತಃ ಪರಂ ತಾವದುಮಾಸಹಾಯಃ ।
ಭವಿಷ್ಯತಿ ಪ್ರಾಯಶಏವ ಯಸ್ಮಾ ।
ನ್ಮಮಾಪ್ಯಯಂ ಲಿಂಗಶರೀರನಾಶಃ ॥೬೨॥

ಕಲ್ಪಾವಸಾನೇ ಖಲು ಮುಕ್ತಿಕಾಲೇ
ಭವೇದಯಂ ಲಿಂಗಶರೀರಭಂಗಃ ।

ಶಿವನಾಮಗಳನ್ನು ಯಾವಾಗಲೂ ಜಪಿಸುತ್ತಿರುವುದರಿಂದ ಅವು ನಮಗೆ ಅಮೃತದಂತೆ ಸೌಖ್ಯವನ್ನುಂಟುಮಾಡುತ್ತವೆ. ಯತ್ನದಿಂದ ಅವುಗಳನ್ನು ಜಪಿಸುತ್ತಿದ್ದರೆ, ಯಮನ ಭೀತಿಯು ಹೇಗೆತಾನೆ ಉಂಟಾದೀತು? ॥೫೯॥

ಈ ಸಮಯದಲ್ಲಿ ನನಗೆ ಸಕಲ ಸೌಭಾಗ್ಯಗಳನ್ನೂ ಅನುಭವಿಸಲು ಯೋಗ್ಯವಾಗಿದೆ. ಆದ್ದರಿಂದ ಶಿವಾನುಗ್ರಹದಿಂದ ನನಗೆ ಈ ಕಾಲವೇ ಅಭಿವರ್ಧಿಸಲಿ. ॥೬೦॥

ದೇವೋತ್ತಮನಾದ ಶಿವನು ನನಗೆ ಯಾವಾಗಲೂ ಸ್ಥಿರವಾದ ಭಕ್ತಿಯನ್ನೂ ಮತ್ತು ಆನಂದವನ್ನೂ ಸಹ ವೃದ್ಧಿಹೊಂದಿಸಲಿ. ॥೬೧॥

ಈ ಲಿಂಗಶರೀರವು ನನಗೂ ಸಹ ನಾಶವಾಗಿರುತ್ತದೆ. ಆದ್ದರಿಂದ ಉಮಾ (ಪಾರ್ವತೀ) ಸಮೇತನಾದ ಶಿವನು ನನ್ನ ಪಾಲಿಗೆ ಶಿವಸಂಬಂಧವಿಲ್ಲದ ಮಾರ್ಗದಲ್ಲಿ ಚಲಿಸುವ ದುರ್ಬುದ್ಧಿಯನ್ನು ಖಂಡಿತ ನಾಶಮಾಡುತ್ತಾನೆ. ॥೬೨॥

ಕಲ್ಪದ ಕೊನೆಯಲ್ಲಿ ಮೋಕ್ಷಕಾಲವು ಒದಗುವಾಗ ಮಾತ್ರ ಈ ಲಿಂಗ

ಮಮಾಧುನಾ ಶಾಂಭವದತ್ತಭೂತ್ಯಾ
ದತ್ತಃ ಪರಂ ಲಿಂಗಶರೀರನಾಶಃ ॥೬೩॥

ಕಷ್ಟಾನಿ ಮೇ ಲಿಂಗಶರೀರಯೋಗಾ
ದ್ಬಹೂನಿ ದುಃಖಾನ್ಯಪಿ ಯೋನಿಯೋಗೇ ।
ತಸ್ಯ ಪ್ರಣಾಶೇ ನ ತು ಯೋನಿಯೋಗೇ
ನ ಯಾತನಾ ನಾಪಿ ಶರೀರಬಂಧಃ ॥೬೪॥

ನ ಶಾಂಭವಾನಾಮಪಿ ಸಂಗಮೋ ಮೇ
ಕದಾಪಿ ಪಾಪಕ್ಷಯಹೇತುಭೂತಃ ।
ಅದ್ಯಾಧುನಾ ದೈವವಶಾತ್ಪ್ರಸೃತ್ತಃ
ತೇನಾಸ್ಮಿ ತಾವತ್ಕೃತಕೃತ್ಯ ಏವ ॥೬೫॥

ಕಲ್ಯಾಣಕಾಲೋದಯಮುಪಾಸಹಾಯ
ದೃಷ್ಟಾ ಯತಃ ಶಾಂಭವಪುಂಗವಾಸ್ತೆ ।
ದೃಷ್ಟಾಃ ಸಮಸ್ತೇಷ್ಟನಿಧಾನಭೂತಾಃ
ಶ್ರೀಮನ್ಮಹಾದೇವಕೃಪಾಕಟಾಕ್ಷೈಃ ॥೬೬॥

ಶರೀರವು ನಾಶವನ್ನು ಹೊಂದುತ್ತದೆ. ಆದರೆ ನನಗಾದರೋ ಶಿವಭಕ್ತನು ಕೊಟ್ಟ ಈ ವಿಭೂತಿಯ ಮಹಿಮೆಯಿಂದ ಈಗಲೇ ಲಿಂಗಶರೀರವು ನಾಶವಾಯಿತು. ॥೬೩॥

ನನಗೆ ಈ ವರೆವಿಗೂ ಲಿಂಗಶರೀರದ ಸಂಬಂಧವಿದ್ದುದರಿಂದಲೂ ಮತ್ತು ಯೋನಿಮಾರ್ಗದಲ್ಲಿ ಆವಿರ್ಭವಿಸುತ್ತಿದ್ದುದರಿಂದಲೂ ಬಹಳ ದುಃಖಗಳನ್ನು ಅನುಭವಿಸಿದೆನು. ಈಗಲಾದರೋ ಆ ಲಿಂಗಶರೀರವು ನಾಶವಾಗಿರುವುದರಿಂದ ಆ ಯೋನಿಯ ಯೋಗವೇ ಆಗಲಿ, ಆ ಯಾತನೆಯೇ ಆಗಲಿ, ಶರೀರಧಾರಣೆಯೇ ಆಗಲಿ, ಯಾವುದೂ ಸಹ ಇರುವುದಿಲ್ಲ. ॥೬೪॥

ನಿನ್ನಂತಹ ಪರಶಿವಭಕ್ತರೊಡನೆ ಸಹವಾಸವು ನನಗೆ ಎಂದೂ ಒದಗಲಿಲ್ಲ. ಅದರಿಂದಲೇ ಈ ಪಾಪದೇಹವು ನಾಶವಾಗಲಿಲ್ಲ. ಈಗ ನನ್ನ ಅದೃಷ್ಟವಿಶೇಷದಿಂದ ಅಂತಹ ಸಹವಾಸವು ಒದಗಿತು. ಆದುದರಿಂದಲೇ ನಾನು ಕೃತಕೃತ್ಯನಾದೆನು. ॥೬೫॥

ಪಾರ್ವತೀಸಮೇತನಾದ ಪರಮೇಶ್ವರನೇ, ನಿನ್ನ ಕೃಪಾಕಟಾಕ್ಷಗಳಿಂದ ನನಗೆ ನಿನ್ನ ಭಕ್ತರೂ ಅದರಲ್ಲಿಯೂ ಭಕ್ತಶ್ರೇಷ್ಠರಾದವರ ದರ್ಶನ ಲಾಭವು

ಆನಂದಾವಾಪ್ತಿಹೇತುಃ ಶಿವಭಜನರತಾನುಂಘ್ರಿಪಾದಾರವಿಂದ
ಶ್ರೀಗಂಧಂ ಗಂಧವಾಹಃ ಸ್ಪೃಶತಿ ಜನಿಜರಾಮೃತ್ಯುದುಃಖಾಪನುತ್ತ್ಯೈ ।
ಆಯಾತ್ಯಾಗತ್ಯ ದೇಹಂ ಸ್ಪೃಶತಿ ಪುನರಯಂ ದೇವತಾನಾಂ ಚ ದೇಹಾ
ನ್ಮುಕ್ತಿಂ ಸಂಪಾದಯಿಷ್ಯತ್ಯಪಿ ಸಿತಭಸಿತೈಃ ಪ್ರೋತ ಏವಾನುವಾದಂ ॥೬೭॥

ಇತ್ಯುದೀರಿತಮಾಕರ್ಣ್ಯ ಸ ರಾಜಾ ವಿಸ್ಮಯಂ ಗತಃ ।
ಬಾಲೋಽಪಿ ವಿಸ್ಮಯಃ ಪಶ್ಚಾತ್ತಮೇವಾಹ ಸ ನಾರದಃ ॥೬೮॥

ಅದ್ಯಪ್ರಭೃತಿ ಯತ್ನೇನ ಸಂವಸಾತ್ರೈವ ಸರ್ವದಾ ।
ಕೃತ್ವಾತ್ಯಂತಪ್ರಯತ್ನೇನ ಪಿಶಾಚಾನಾಂ ನಿವಾರಣಂ ॥೬೯॥

ಒದಗಿರುತ್ತದೆ. ಇದು ನನಗೆ ಮಂಗಳದಾಯಕವಾದ ಕಾಲವಾಗಿರುವುದಲ್ಲದೆ, ಸಕಲ ಇಷ್ಟಾರ್ಥಗಳಿಗೂ ಕಾರಣಭೂತವಾಗಿದೆ. ||೬೬||

ವಾಯುವು ಲೋಕದಲ್ಲಿ ಜರಾಮರಣರೂಪವಾದ ದುಃಖಗಳನ್ನು ಹೋಗಲಾಡಿಸಿ, ಮುಕ್ತಿರೂಪವಾದ ಆನಂದವನ್ನು ಸಂಪಾದಿಸುವ ಅಭಿಲಾಷೆಯಿಂದ, ಶಿವಭಜನಾಸಕ್ತರಾದ ಭಕ್ತರ ಚರಣಕಮಲಗಳನ್ನು ಸೇವಿಸುತ್ತದೆ. ಹಾಗೆಯೇ ಸಿತಭಸ್ಮಗಳಿಂದ ವ್ಯಾಪ್ತವಾದ ದೇಹವುಳ್ಳ ದೇವತೆಗಳನ್ನು ಸ್ಪರ್ಶಿಸುತ್ತಾ ತಾನು ಆನಂದವನ್ನು ಪಡೆಯುವುದು. ಅದೇ ವಾಯುವು ಸರ್ವರ ದೇಹಗಳನ್ನು ಸ್ಪರ್ಶಿಸಿ ಉಳಿದವರಿಗೂ ಮೋಕ್ಷವನ್ನು ಸಂಪಾದಿಸಿಕೊಡುತ್ತದೆ. ಹೀಗೆ ಶಂಭುಭಕ್ತರ ಅಂಗಸ್ಪರ್ಶವೂ ಪಾಪನಾಶಕವಾದದ್ದೆಂದು ಹೇಳಬಹುದು ಎಂಬುದಾಗಿ ಆ ಪುರುಷನು ನಾರದನನ್ನು ಕುರಿತು ಹೇಳಿದನು. ||೬೭||

ಈ ರೀತಿ ಆ ಪಾಪಮೂರ್ತಿಯು ಹೇಳಿದ ಮಾತನ್ನು ಕೇಳಿ ಅಲ್ಲಿ ನಿಂತಿದ್ದ ರಾಜನೂ, ಬಾಲಕನೂ ವಿಸ್ಮಿತರಾದರು. ಆಗ ನಾರದನು ಆ ಪುರುಷನನ್ನು (ಪಾಪಮೂರ್ತಿಯಾಗಿದ್ದು ಅನಂತರ ಪುರುಷನಾದವನು) ಕುರಿತು ಹೀಗೆ ಹೇಳಿದನು. ||೬೮||

'ನೀನು ಈ ಮೊದಲುಗೊಂಡು ಸರ್ವ ಪ್ರಯತ್ನದಿಂದಲೂ ಇಲ್ಲಿರುವ ಪಿಶಾಚಿಗಳನ್ನು ದೂರಓಡಿಸುತ್ತಾ, ಇಲ್ಲಿಯೇ ವಾಸಮಾಡಿಕೊಂಡಿರು. ||೬೯||

ಬಾಲಗ್ರಹಾದಯಃ ಸರ್ವೇ ವಾರಣೀಯಾಃ ಪ್ರಯತ್ನತಃ ।
ಶಾಕಿನಿ ಡಾಕಿನೀ ಮುಖ್ಯಾಃ ದುಷ್ಟಗ್ರಹಸಮನ್ವಿತಾಃ ॥೭೦॥

ಸರ್ವದಾ ಕುರು ಯತ್ನೇನ ಮಹೋತ್ಪಾತನಿವಾರಣಂ ।
ಆಧಿವ್ಯಾಧಿಭಯಂ ಚಾತ್ರ ನಿವಾರಯ ವಿಶೇಷತಃ ॥೭೧॥

ಅತ್ಯುಚ್ಚೈಃ ಕುರು ಯತ್ನೇನ ಶಿವನಾಮಾನುಗಾಯನಂ ।
ತಾವತಾ ನ ಪಿಶಾಚಾನಾಂ ಪ್ರವೇಶೋऽತ್ರ ಭವಿಷ್ಯತಿ ॥೭೨॥

ಭಸ್ಮನಾಂ ರಾಶಯಃ ಸಂತಿ ಸ್ಪೃಶತಾಮನುವಾಸರಂ ।
ನಿರ್ಮಾಲ್ಯ ಬಿಲ್ವಪತ್ರಾಣಾಂ ಆಘ್ರಾಯಾಘ್ರಾಯ ಸಾದರಂ ॥೭೩॥

ದತ್ವಾ ನೈವೇದ್ಯಮೀಶಾಯ ಬಲಿದಾನೇ ಕೃತೇ ಸತಿ ।
ಬಲಿನ್ನೈವೇದ್ಯಮಾಸಾದ್ಯ ಭುಕ್ತ್ವಾ ತುಷ್ಟೋ ಭವಾನ್ವಹಂ ॥೭೪॥

ಇಲ್ಲಿಯೇ ವಾಸಮಾಡಿಕೊಂಡಿದ್ದು ಬಾಲಗ್ರಹ, ಶಾಕಿನೀ, ಡಾಕಿನೀ, ಎಂಬ ಹೆಸರುಳ್ಳ, ಅನೇಕ ದುಷ್ಟಗ್ರಹಗಳನ್ನು ನಿವಾರಿಸುತ್ತಿರು. ॥೭೦॥

ಮತ್ತು ಮಹೋತ್ಪಾತವನ್ನೂ, ಮನೋವ್ಯಥೆಯೇ ಮೊದಲಾದ ಸಕಲ ವ್ಯಾಧಿಗಳ ಭಯವನ್ನೂ ನಿವಾರಿಸುತ್ತಿರು. ನಿನ್ನ ಸೇವೆಯಿಂದ ಭಕ್ತರು ತಮ್ಮ ಮನೋದುಃಖವನ್ನು ಕಳೆದುಕೊಳ್ಳಲಿ. ॥೭೧॥

ಆ ಕಾಲದಲ್ಲಿ ನೀನು ಗಟ್ಟಿಯಾಗಿ ಶಿವನಾಮವನ್ನು ಗಾನಮಾಡು. ಹೀಗೆ ಮಾಡಿದರೆ ಇಲ್ಲಿಗೆ ಪಿಶಾಚಿಗಳು ಪ್ರವೇಶಿಸುವುದಿಲ್ಲ. ಅವುಗಳ ಭಯವೂ ತಪ್ಪುತ್ತದೆ. ॥೭೨॥

ಇಲ್ಲಿ ಅನೇಕ ಭಸ್ಮರಾಶಿಗಳಿವೆ. ಪ್ರತಿ ದಿನವೂ ಅದನ್ನು ಮುಟ್ಟುತ್ತಿರು. ಈಶ್ವರನಿಗೆ ಸಮರ್ಪಿಸಿದ ಬಿಲ್ವಪತ್ರೆಗಳನ್ನು ಆಘ್ರಾಣಿಸು. ॥೭೩॥

ಈಶ್ವರನಿಗೆ ನೈವೇದ್ಯವನ್ನು ಮಾಡು. ಅನಂತರ ಬಲಿದಾನ ಮಾಡು. ಈ ರೀತಿಯಾಗಿ ಅರ್ಪಿಸಿದ ನೈವೇದ್ಯ ಶೇಷವನ್ನು ತಿಂದು ನಿತ್ಯವೂ ಸಂತುಷ್ಟನಾಗಿರು. ॥೭೪॥

ಸಂಸಾರಬಂಧನಾಶಾಯ ಶಿವನ್ನೈವೇದ್ಯಭೋಜನಂ ।
ಕಲ್ಪಿತಂ ಗಿರಿಶೇನೇದಂ ಅಂತತೋ ಮುಕ್ತಿಸಾಧನಂ ॥೭೫॥

ಮುಕ್ತಿಸಾಧನಭೂತೇಷು ಶ್ರೇಷ್ಠಾನಿ ದಶ ತಾನಿ ತು ।
ಸೇವನೀಯಾನಿ ಯತ್ನೇನ ಮುಮುಕ್ಷುಭಿರಹರ್ನಿಶಂ ॥೭೬॥

ಶಿವತೀರ್ಥಂ ವಿಭೂತಿಶ್ಚ ರುದ್ರಾಕ್ಷಶ್ಚ ಶಿವಾರ್ಚಕಃ ।
ಶಿವಲಿಂಗಂ ಬಿಲ್ವಪತ್ರಂ ಶಿವನ್ನೈವೇದ್ಯಭೋಜನಂ । ॥೭೭॥

ಜಪಃ ಪಂಚಾಕ್ಷರಸ್ಯಾಽಪಿ ಶೈವಸ್ಯಾಽಪಿ ಶಿವಾರ್ಚನಂ ।
ಸದಾ ಶಿವಕಥಾಲಾಪೋಽಪ್ಯೇತೇ ದಶ ವಿಮುಕ್ತಿದಾಃ ॥೭೮॥

ಮುಕ್ತಿದಂ ದಶಕಂ ಸೇವ್ಯಮಪ್ರಮಾದೇನ ಸಾದರಂ ।
ಏತಸ್ಮಾದಧಿಕಂ ನಾಸ್ತಿ ಮುಕ್ತಿದತ್ವೇನ ಕೀರ್ತಿತಂ ॥೭೯॥

ಶಿವನಿಗೆ ನಿವೇದಿಸಿದ ನೈವೇದ್ಯವನ್ನು ಭುಜಿಸುವುದು ಸಂಸಾರವೆಂಬ ಬಂಧನದಿಂದ ಬಿಡುಗಡೆ ಹೊಂದಿ ಮುಕ್ತಿಯನ್ನು ಸಾಧಿಸುವುದಕ್ಕಾಗಿ. ಅದಕ್ಕಾಗಿಯೇ ಈಶ್ವರನು ಹಾಗೆ ನಿಯಮಿಸಿದ್ದಾನೆ. ॥೭೫॥

ಮೋಕ್ಷಾಭಿಲಾಷಿಗಳು ಮೋಕ್ಷಸಾಧಕಗಳಾಗಿಯೂ, ಶ್ರೇಷ್ಠಗಳಾಗಿಯೂ ಇರತಕ್ಕ ಈ ಹತ್ತು ಸಾಧನಗಳನ್ನು ಹಗಲೂ ರಾತ್ರಿ ಸೇವಿಸುತ್ತಿರಬೇಕು. ॥೭೬॥

ಶಿವತೀರ್ಥ, ವಿಭೂತಿ, ರುದ್ರಾಕ್ಷಿ, ಶಿವಾರ್ಚನೆ ಮಾಡುವುದು, ಶಿವಲಿಂಗ, ಬಿಲ್ವಪತ್ರೆ, ಶಿವನ ನೈವೇದ್ಯವನ್ನು ಭುಜಿಸುವುದು, ಐದು ಅಕ್ಷರಗಳುಳ್ಳ ನಮಃ ಶಿವಾಯ ಎಂಬ ಪಂಚಾಕ್ಷರೀ ಮಂತ್ರವನ್ನು ಜಪಿಸುವುದು, ಶಿವಭಕ್ತನನ್ನು ಅರ್ಚಿಸುವುದು, ಯಾವಾಗಲೂ ಶಿವಕಥೆಯ ಸಂಬಂಧವಾದ ಮಾತುಗಳನ್ನಾಡುತ್ತಿರುವುದು, ಈ ಹತ್ತು ಮೋಕ್ಷದಾಯಕಗಳಾಗಿರುತ್ತವೆ. ॥೭೭-೭೮॥

ಈ ಹತ್ತು ಸಾಧನಗಳನ್ನು ಬಿಟ್ಟು ಮುಕ್ತಿಯನ್ನುಂಟುಮಾಡುವಂತಹ ಸಾಧನಗಳು ಯಾವುವೂ ಇಲ್ಲ. ಆದ್ದರಿಂದ ಇವುಗಳನ್ನು ಆದರದಿಂದ ಸೇವಿಸುತ್ತಿರು. ॥೭೯॥

ಮುಕ್ತಿದೇಷು ಪ್ರಮಾದಂ ಯಃ ಕರಿಷ್ಯತಿ ವಿಮೋಹತಃ ।
ನರೋ ನ ಮುಚ್ಯತೇ ನೂನಂ ಘೋರಸಂಸಾರಸಾಗರೈಃ ॥೮೦॥

ಭಾಗ್ಯಾದನ್ಯಾನುಬಂಧಾದ್ವಾ ಮುಕ್ತಿದಂ ದಶಕಂ ಯದಿ ।
ಪ್ರಾಪ್ತಂ ತದಾ ಪ್ರಾಪ್ತಮೇವ ಶಿವಂ ಶಿವಪದಂ ಪರಂ ॥೮೧॥

ನ ಜಾನಂತಿ ವಿಮೂಢಾಸ್ತೇ ದಶಕಂ ಪಾಪನಾಶಕಂ ।
ಮುಕ್ತಿದಂ ಚ ತತೋ ಜನ್ಮ ಪ್ರಾಪ್ನುವಂತಿ ನರಾಧಮಾಃ ॥೮೨॥

ಮುಕ್ತಿದತ್ವೇನ ವಿಜ್ಞಾತಂ ದಶಕಂ ಯೋಽನುಕೀರ್ತಯೇತ್ ।
ಸೋಽಪಿ ಮುಕ್ತಿಮವಾಪ್ನೋತಿ ತಸ್ಮಾತ್ತತ್ಸೇವನಂ ಪರಂ ॥೮೩॥

ತತ್ಸೇವನಂ ನಿತ್ಯಮೇವ ತತ್ರೈಕಮಪಿ ಯಸ್ತ್ಯಜೇತ್ ।
ಸ ಸಂಸಾರೀ ಭವತ್ಯೇವ ತಸ್ಮಾನ್ಮುಕ್ತಿರ್ನ ಸರ್ವಥಾ ॥೮೪॥

ಈ ಮುಕ್ತಿದಾಯಕಗಳಾದ ಸಾಧನಗಳಲ್ಲಿ ಉದಾಸೀನರಾದವರು ಖಂಡಿತ ಸಂಸಾರಸಾಗರದಿಂದ ಬಿಡುಗಡೆಯನ್ನು ಹೊಂದುವುದಿಲ್ಲ. ॥೮೦॥

ಅದೃಷ್ಟದಿಂದಲೇ ಆಗಲಿ, ದೋಷದಿಂದಲೇ ಆಗಲಿ, ಮೋಕ್ಷದಾಯಕಗಳಾದ ಹತ್ತು ಸಾಧನಗಳು ಮನುಷ್ಯನಿಗೆ ಒದಗಿದರೆ ಆತನಿಗೆ ಶಿವಪದವು ಬಂದಂತೆಯೇ ಸರಿ. ॥೮೧॥

ಜನರು ತಮ್ಮ ಮೌಢ್ಯದಿಂದ ಪಾಪನಾಶಕಗಳಾಗಿಯೂ, ಮೋಕ್ಷದಾಯಕಗಳಾಗಿಯೂ ಇರುವ ಹತ್ತು ಸಾಧನಗಳನ್ನು ತಿಳಿಯಲಾರರು. ಆದ್ದರಿಂದ ಅವರು ಮತ್ತೆ ಮತ್ತೆ ಪಾಪಸಾಧಕಗಳಾದ ಜನ್ಮಗಳನ್ನೇ ಪಡೆಯುತ್ತಾರೆ. ॥೮೨॥

ಯಾವ ಮನುಷ್ಯನು ಮೋಕ್ಷದಾಯಕಗಳಾದ ಈ ಹತ್ತು ಸಾಧನಗಳನ್ನೂ ಕೀರ್ತನೆ ಮಾಡುತ್ತಾನೆಯೋ ಅವನೂ ಕೂಡ ಮುಕ್ತನಾಗುತ್ತಾನೆ. ಆದ್ದರಿಂದ ಆತನ ಸೇವೆಯೂ ಕೂಡ ಶ್ರೇಷ್ಠವಾದುದು. ॥೮೩॥

ಯಾವನು ನಿತ್ಯಕರ್ಮಗಳೆನಿಸಿದ ಈ ಸೇವೆಯನ್ನು ಮಾಡುವುದಿಲ್ಲವೋ ಅವನು ಮತ್ತೆ ಸಂಸಾರಿಯಾಗುತ್ತಾನೆ. ಮತ್ತೆ ಪಾಪಮಾಡುತ್ತಾನೆ. ಹೀಗಾಗಿ ಅವನು ಖಂಡಿತ ಮುಕ್ತನಾಗಲಾರನು. ॥೮೪॥

ಮುಕ್ತಿಕಾಮೈರ್ಮುನಿವರ್ಯೈರ್ಮುಕ್ತಿದಂ ದಶಕಂ ಮುಹುಃ ।
ಸೇವ್ಯತೇ ಸೇವಯಾ ತಸ್ಯ ಮುಕ್ತಿರೇವ ಭವಿಷ್ಯತಿ ॥೮೫॥

ವೇದೇಷ್ವಪ್ಯಯಮೇವಾರ್ಥೋ ನಿಶ್ಚಿತೋ ದಶಕಾತ್ಮಕಃ ।
ಸೇವನೀಯಾ ಇತಿ ಜ್ಞಾತ್ವಾ ತತ್ಸೇವಾನಿರತೋ ಭವ ॥೮೬॥

ಯೋ ನ ತದ್ದಶಕಾಭ್ಯಾಸಂ ಕರಿಷ್ಯತಿ ಪುನಃ ಪುನಃ ।
ಸ ವಾರಣೀಯೋ ನಗರಾದ್ದೇಶಾದಪಿ ವಿಶೇಷತಃ ॥೮೭॥

ದಶಕಾಭ್ಯಾಸನಿರತಾಃ ಸೇವನೀಯಾಃ ಪ್ರಯತ್ನತಃ ।
ತೇಷಾಂ ಯೋ ದುಃಖದೋ ಮರ್ತ್ಯಃ ಸ ಯಾತಿ ನರಕಂ ಧ್ರುವಂ॥೮೮॥

ದಶಕಾಭ್ಯಾಸಹೀನಾನಾಂ ನಾರಕೇಷ್ವನಿಶಂ ಸ್ಥಿತಿಃ ।
ತದರ್ಥಾನ್ಯೇವ ನರಕಾಣ್ಯಪಾರಾಣೀತಿ ನಿಶ್ಚಯಃ ॥೮೯॥

ಮೋಕ್ಷಾಭಿಲಾಷಿಗಳಾದ ಮುನಿಶ್ರೇಷ್ಠರೆಲ್ಲರೂ ಮೋಕ್ಷಸಾಧನೆಗಳೆನಿಸಿದ ಈ ಹತ್ತು ಕರ್ಮಗಳನ್ನು ಸೇವಿಸುತ್ತಾರೆ. ಅದರಿಂದ ಅವರಿಗೆ ಮೋಕ್ಷವು ಲಭಿಸುತ್ತದೆ. ॥೮೫॥

ಇದೇ ರೀತಿ ವೇದಗಳಲ್ಲಿಯೂ ಕೂಡ ಮೋಕ್ಷಾಭಿಲಾಷಿಗಳು ಈ ಹತ್ತನ್ನು ಸೇವಿಸಬೇಕೆಂದು ನಿಶ್ಚಿತವಾಗಿದೆ. ಆದ್ದರಿಂದ ನೀನು ಅವುಗಳ ಸೇವೆಯಲ್ಲಿಯೇ ಆಸಕ್ತನಾಗಿರು. ॥೮೬॥

ನರನು ಈ ಹತ್ತು ಸಾಧನಗಳನ್ನು ಮತ್ತೆ ಮತ್ತೆ ಅಭ್ಯಸಿಸುತ್ತಿರಬೇಕು. ಆ ರೀತಿ ಮಾಡದೇ ಇದ್ದ ಮನುಜನನ್ನು ನಗರ ಮತ್ತು ದೇಶದಿಂದ ಹೊರಕ್ಕೆ ಕಳುಹಿಸಬೇಕು. ॥೮೭॥

ಆ ಹತ್ತು ಸಾಧನಗಳಲ್ಲಿ ನಿರತರಾದವರನ್ನು ಪ್ರಯತ್ನಪೂರ್ವಕವಾಗಿ ಜನರು ಸೇವಿಸಬೇಕು. ಆ ರೀತಿ ಸೇವಿಸತಕ್ಕ ಜನರಿಗೆ ದುಃಖವನ್ನುಂಟುಮಾಡುವವನು ಖಂಡಿತ ನರಕಕ್ಕೆ ಹೋಗುತ್ತಾನೆ. ॥೮೮॥

ಆ ಹತ್ತು ಸಾಧನಗಳನ್ನು ಅಭ್ಯಾಸ ಮಾಡದೇ ಇರತಕ್ಕವರಿಗೆ ಯಾವಾಗಲೂ ನರಕವಾಸವೇ ಗತಿ. ಅಂತಹವರಿಗೆ ಮಾತ್ರವೇ ಅಪಾರವಾದ ನರಕಗಳು ಪ್ರತ್ಯೇಕವಾಗಿ ಸೃಜಿಸಲ್ಪಟ್ಟಿವೆ ಎಂಬುದು ನಿಶ್ಚಯ. ॥೮೯॥

ಮುಕ್ತಿದೇಷು ಪ್ರಮಾದಂ ಯಃ ಕರಿಷ್ಯತಿ ವಿಮೋಹತಃ ।
ನರೋ ನ ಮುಚ್ಯತೇ ನೂನಂ ಘೋರಸಂಸಾರಸಾಗರೈಃ ॥೮೦॥

ಭಾಗ್ಯಾದನ್ಯಾನುಬಂಧಾದ್ವಾ ಮುಕ್ತಿದಂ ದಶಕಂ ಯದಿ ।
ಪ್ರಾಪ್ತಂ ತದಾ ಪ್ರಾಪ್ತಮೇವ ಶಿವಂ ಶಿವಪದಂ ಪರಂ ॥೮೧॥

ನ ಜಾನಂತಿ ವಿಮೂಢಾಸ್ತೇ ದಶಕಂ ಪಾಪನಾಶಕಂ ।
ಮುಕ್ತಿದಂ ಚ ತತೋ ಜನ್ಮ ಪ್ರಾಪ್ನುವಂತಿ ನರಾಧಮಾಃ ॥೮೨॥

ಮುಕ್ತಿದತ್ವೇನ ವಿಜ್ಞಾತಂ ದಶಕಂ ಯೋಽನುಕೀರ್ತಯೇತ್ ।
ಸೋಽಪಿ ಮುಕ್ತಿಮವಾಪ್ನೋತಿ ತಸ್ಮಾತ್ತತ್ಸೇವನಂ ಪರಂ ॥೮೩॥

ತತ್ಸೇವನಂ ನಿತ್ಯಮೇವ ತತ್ರೈಕಮಪಿ ಯಸ್ತ್ಯಜೇತ್ ।
ಸ ಸಂಸಾರೀ ಭವತ್ಯೇವ ತಸ್ಮಾನ್ಮುಕ್ತಿರ್ನ ಸರ್ವಥಾ ॥೮೪॥

ಈ ಮುಕ್ತಿದಾಯಕಗಳಾದ ಸಾಧನಗಳಲ್ಲಿ ಉದಾಸೀನರಾದವರು ಖಂಡಿತ ಸಂಸಾರಸಾಗರದಿಂದ ಬಿಡುಗಡೆಯನ್ನು ಹೊಂದುವುದಿಲ್ಲ. ॥೮೦॥

ಅದೃಷ್ಟದಿಂದಲೇ ಆಗಲಿ, ದೋಷದಿಂದಲೇ ಆಗಲಿ, ಮೋಕ್ಷದಾಯಕಗಳಾದ ಹತ್ತು ಸಾಧನಗಳು ಮನುಷ್ಯನಿಗೆ ಒದಗಿದರೆ ಆತನಿಗೆ ಶಿವಪದವು ಬಂದಂತೆಯೇ ಸರಿ. ॥೮೧॥

ಜನರು ತಮ್ಮ ಮೌಢ್ಯದಿಂದ ಪಾಪನಾಶಕಗಳಾಗಿಯೂ, ಮೋಕ್ಷದಾಯಕಗಳಾಗಿಯೂ ಇರುವ ಹತ್ತು ಸಾಧನಗಳನ್ನು ತಿಳಿಯಲಾರರು. ಆದ್ದರಿಂದ ಅವರು ಮತ್ತೆ ಮತ್ತೆ ಪಾಪಸಾಧಕಗಳಾದ ಜನ್ಮಗಳನ್ನೇ ಪಡೆಯುತ್ತಾರೆ. ॥೮೨॥

ಯಾವ ಮನುಷ್ಯನು ಮೋಕ್ಷದಾಯಕಗಳಾದ ಈ ಹತ್ತು ಸಾಧನಗಳನ್ನು ಕೀರ್ತನೆ ಮಾಡುತ್ತಾನೆಯೋ ಅವನೂ ಕೂಡ ಮುಕ್ತನಾಗುತ್ತಾನೆ. ಆದ್ದರಿಂದ ಆತನ ಸೇವೆಯೂ ಕೂಡ ಶ್ರೇಷ್ಠವಾದುದು. ॥೮೩॥

ಯಾವನು ನಿತ್ಯಕರ್ಮಗಳೆನಿಸಿದ ಈ ಸೇವೆಯನ್ನು ಮಾಡುವುದಿಲ್ಲವೋ ಅವನು ಮತ್ತೆ ಸಂಸಾರಿಯಾಗುತ್ತಾನೆ. ಮತ್ತೆ ಪಾಪಮಾಡುತ್ತಾನೆ. ಹೀಗಾಗಿ ಅವನು ಖಂಡಿತ ಮುಕ್ತನಾಗಲಾರನು. ॥೮೪॥

ಮುಕ್ತಿಕಾಮೈರ್ಮುನಿವರೈರ್ಮುಕ್ತಿದಂ ದಶಕಂ ಮುಹುಃ ।
ಸೇವ್ಯತೇ ಸೇವಯಾ ತಸ್ಯ ಮುಕ್ತಿರೇವ ಭವಿಷ್ಯತಿ ॥೮೫॥

ವೇದೇಷ್ವಪ್ಯಯಮೇವಾರ್ಥೋ ನಿಶ್ಚಿತೋ ದಶಕಾತ್ಮಕಃ ।
ಸೇವನೀಯಾ ಇತಿ ಜ್ಞಾತ್ವಾ ತತ್ಸೇವಾನಿರತೋ ಭವ ॥೮೬॥

ಯೋ ನ ತದ್ದಶಕಾಭ್ಯಾಸಂ ಕರಿಷ್ಯತಿ ಪುನಃ ಪುನಃ ।
ಸ ವಾರಣೀಯೋ ನಗರಾದ್ದೇಶಾದಪಿ ವಿಶೇಷತಃ ॥೮೭॥

ದಶಕಾಭ್ಯಾಸನಿರತಾಃ ಸೇವನೀಯಾಃ ಪ್ರಯತ್ನತಃ ।
ತೇಷಾಂ ಯೋ ದುಃಖದೋ ಮರ್ತ್ಯಃ ಸ ಯಾತಿ ನರಕಂ ಧ್ರುವಂ॥೮೮॥

ದಶಕಾಭ್ಯಾಸಹೀನಾನಾಂ ನಾರಕೇಷ್ವನಿಶಂ ಸ್ಥಿತಿಃ ।
ತದರ್ಥಾನ್ಯೇವ ನರಕಾಣ್ಯಪಾರಾಣೀತಿ ನಿಶ್ಚಯಃ ॥೮೯॥

ಮೋಕ್ಷಾಭಿಲಾಷಿಗಳಾದ ಮುನಿಶ್ರೇಷ್ಠರೆಲ್ಲರೂ ಮೋಕ್ಷಸಾಧನೆಗಳೆನಿಸಿದ ಈ ಹತ್ತು ಕರ್ಮಗಳನ್ನು ಸೇವಿಸುತ್ತಾರೆ. ಅದರಿಂದ ಅವರಿಗೆ ಮೋಕ್ಷವು ಲಭಿಸುತ್ತದೆ. ||೮೫||

ಇದೇ ರೀತಿ ವೇದಗಳಲ್ಲಿಯೂ ಕೂಡ ಮೋಕ್ಷಾಭಿಲಾಷಿಗಳು ಈ ಹತ್ತನ್ನು ಸೇವಿಸಬೇಕೆಂದು ನಿಶ್ಚಿತವಾಗಿದೆ. ಆದ್ದರಿಂದ ನೀನು ಅವುಗಳ ಸೇವೆಯಲ್ಲಿಯೇ ಆಸಕ್ತನಾಗಿರು. ||೮೬||

ನರನು ಈ ಹತ್ತು ಸಾಧನಗಳನ್ನು ಮತ್ತೆ ಮತ್ತೆ ಅಭ್ಯಸಿಸುತ್ತಿರಬೇಕು. ಆ ರೀತಿ ಮಾಡದೇ ಇದ್ದ ಮನುಜನನ್ನು ನಗರ ಮತ್ತು ದೇಶದಿಂದ ಹೊರಕ್ಕೆ ಕಳುಹಿಸಬೇಕು. ||೮೭||

ಆ ಹತ್ತು ಸಾಧನಗಳಲ್ಲಿ ನಿರತರಾದವರನ್ನು ಪ್ರಯತ್ನಪೂರ್ವಕವಾಗಿ ಜನರು ಸೇವಿಸಬೇಕು. ಆ ರೀತಿ ಸೇವಿಸತಕ್ಕ ಜನರಿಗೆ ದುಃಖವನ್ನುಂಟುಮಾಡುವವನು ಖಂಡಿತ ನರಕಕ್ಕೆ ಹೋಗುತ್ತಾನೆ. ||೮೮||

ಆ ಹತ್ತು ಸಾಧನಗಳನ್ನು ಅಭ್ಯಾಸ ಮಾಡದೇ ಇರತಕ್ಕವರಿಗೆ ಯಾವಾಗಲೂ ನರಕವಾಸವೇ ಗತಿ. ಅಂತಹವರಿಗೆ ಮಾತ್ರವೇ ಅಪಾರವಾದ ನರಕಗಳು ಪ್ರತ್ಯೇಕವಾಗಿ ಸೃಜಿಸಲ್ಪಟ್ಟಿವೆ ಎಂಬುದು ನಿಶ್ಚಯ. ||೮೯||

ದಶಕಾಭ್ಯಾಸನಿರತಾಃ ಸಭಾಗ್ಯಾಃ ಕೇವಲಂ ಭುವಿ ।
ತೈರೇವಾಲಂಕೃತಾ ಭೂಮಿಸ್ತದಪೇಕ್ಷಾಂ ಕರೋತಿ ಸಾ ॥೯೦॥

ಸರ್ವಪಾಪವಿನಾಶಾಯ ದಶಕಾಭ್ಯಾಸಕಾರ್ಚನಂ ।
ಕರ್ತವ್ಯಮತಿಯತ್ನೇನ ತೇನ ಮುಕ್ತಿಶ್ಚ ಜಾಯತೇ ॥೯೧॥

ಯೋ ವಾ ಕೋ ವಾತಿಯತ್ನೇನ ದಶಕಾಭ್ಯಾಸಸಪ್ರಿಯಃ ।
ನ ತಸ್ಯ ಗರ್ಭವಾಸಃ ಸ್ಯಾನ್ನರಕೋಽಪಿ ನ ಸರ್ವಥಾ ॥೯೨॥

ತದಭ್ಯಾಸೇ ರತಿಸ್ತಾವದಶೈವಾನಾಂ ನ ಜಾಯತೇ ।
ಅತಸ್ತೇ ದುಃಖಸಂವೀತಾಃ ಸರ್ವೇಽಪಿ ಪ್ರತಿಜನ್ಮನಿ ॥೯೩॥

ಏತಾವದೇವ ವಕ್ತವ್ಯಂ ಹಿತಾಯ ಹಿತಮಾಪರಾತ್ ।
ದಶಕಾಭ್ಯಾಸನಾದನ್ಯತ್ಕೇವಲಂ ಶ್ರಮಸಾಧನಂ ॥೯೪॥

ಆ ಹತ್ತು ಸಾಧನಗಳನ್ನು ಅಭ್ಯಾಸ ಮಾಡುವುದರಲ್ಲಿ ಆಸಕ್ತರಾದವರು ಭೂಮಿಯಲ್ಲಿ ಅದೃಷ್ಟಶಾಲಿಗಳೆನಿಸುತ್ತಾರೆ. ಅಂತಹವರು ಭೂಮಿಗೆ ಅಲಂಕಾರ ಪ್ರಾಯರಾಗಿರುತ್ತಾರೆ. ಭೂಮಿಯು ಕೂಡ ಅಂತಹವರನ್ನೇ ಅಪೇಕ್ಷೆ ಪಡುತ್ತದೆ. ||೯೦||

ಆ ಹತ್ತು ಸಾಧನಗಳನ್ನು ಅಭ್ಯಾಸ ಮಾಡುವವನ ಪೂಜೆಯು ಸಕಲ ಪಾಪ ಗಳನ್ನೂ ನಾಶಮಾಡುತ್ತದೆ. ಆದ್ದರಿಂದ ಅತಿ ಪ್ರಯತ್ನದಿಂದ ಆ ಪೂಜೆಯನ್ನು ಮಾಡಬೇಕು. ಆ ರೀತಿ ಪೂಜೆ ಮಾಡಿದಂತಹವನಿಗೆ ಮೋಕ್ಷವು ಲಭಿಸುತ್ತದೆ. ||೯೧||

ಯಾವನು ಅತಿಯತ್ನದಿಂದ ಹತ್ತು ಸಾಧನಗಳನ್ನು ಅಭ್ಯಾಸಿಸುವುದರಲ್ಲಿ ಆಸಕ್ತನಾಗುವನೋ, ಆವನಿಗೆ ಮತ್ತೆ ಗರ್ಭವಾಸವೂ, ನರಕವೂ ನಿಜವಾಗಿ ಉಂಟಾ ಗುವುದಿಲ್ಲ. ||೯೨||

ಶಿವಭಕ್ತರಲ್ಲದವರಿಗೆ ಹತ್ತು ಸಾಧನಗಳ ಅಭ್ಯಾಸದಲ್ಲಿ ಆಸಕ್ತಿಯು ಉಂಟಾಗು ವುದಿಲ್ಲ. ಆದ್ದರಿಂದ ಅವರು ಪ್ರತಿ ಜನ್ಮದಲ್ಲಿಯೂ ದುಃಖಿಗಳಾಗಿ ಜನಿಸುತ್ತಾರೆ. ||೯೩||

ಒಟ್ಟಿನಲ್ಲಿ ಹೇಳುವುದಾದರೆ–ಹಿತಾಭಿಲಾಷಿಯಾದವನಿಗೆ ಹಿತಕರವಾದುದು ಯಾವುವೆಂದರೆ–ಹತ್ತು ಸಾಧನಗಳ ಅಭ್ಯಾಸವೇ. ಅದಲ್ಲದೆ ಇತರ ಧರ್ಮಾಚರಣೆ ಗಳು ಕೇವಲ ಶ್ರಮ ಸಾಧಕಗಳು. ||೯೪||

ಅನಾಯಾಸೇನ ನಾಶಃ ಸ್ಯಾತ್ಪಾಪಾನಾಂ ದಶಕಾನ್ವಯಾತ್ ।
ಅತಃ ಪ್ರಯತ್ನತಃ ಸೇವ್ಯಂ ದಶಕಂ ಮುಕ್ತಿಕಾಂಕ್ಷಿಭಿಃ ॥೯೫॥

ಯನ್ಮುಕ್ತಿದಂ ದಶಕಮಸ್ತಿ ತದೇವ ತಾವ
ತ್ಸಂಸಾರದುಃಖವಿನಿವಾರಕಮಿತ್ಯಮೈಮಿ ।
ತಸ್ಮಾತ್ತದನ್ವಹಮುಪಾಸ್ಯಮುಮಾಸಹಾಯಃ
ತೇನೈವ ತಾವದದ್ಯಪಂಜರನಾಶಕಃ ಸ್ಯಾತ್ ॥೯೬॥

ಇತಿ ಶ್ರೀ ಹರಾಖ್ಯೇ ಶಿವರಹಸ್ಯೇ ತೃತೀಯಾಂಶೇ ಉತ್ತರಾರ್ಧೇ
ಪಾಪಮೂರ್ತಿಶರೀರಮೋಚನ ಮುಕ್ತಿದದಶಕ ವರ್ಣನಂ
ನಾಮ ಸಪ್ತಮೋಽಧ್ಯಾಯಃ

ಹತ್ತು ಸಾಧನಗಳ ಅಭ್ಯಾಸದಿಂದಲೇ ಅನಾಯಾಸವಾಗಿ ಸಕಲ ಪಾಪಗಳು ನಾಶವಾಗುತ್ತವೆ. ಆದರಿಂದ ಮೋಕ್ಷಾಭಿಲಾಷಿಗಳು ಪ್ರಯತ್ನದಿಂದ ಆ ಹತ್ತು ಸಾಧನಗಳನ್ನು ಸೇವಿಸಬೇಕು. ॥೯೫॥

ಯಾವ ಹತ್ತು ಸಾಧನಗಳು ಮೋಕ್ಷದಾಯಕಗಳಾಗಿವೆಯೋ ಅವುಗಳೇ ಸಂಸಾರವೆಂಬ ದುಃಖರೂಪದ ನಿವಾರಕಗಳಾಗಿ ಆಗುತ್ತವೆಂದು ನನ್ನ ಅಭಿಪ್ರಾಯ. ಆದ್ದರಿಂದ ನಿತ್ಯವೂ ಆ ಹತ್ತು ಸಾಧನಗಳಿಂದ ಶಿವನನ್ನು ಉಪಾಸನೆ ಮಾಡಿದರೆ ಅದು ಪಂಜರದಂತಿರುವ ಈ ದುಃಖ ಶರೀರದ ನಾಶಕ್ಕೂ ಸಹ ಸಾಧಕವಾಗುತ್ತದೆ. ಎಂದು ನಾರದನು ಆ ರಾಜನಿಗೆ ಹೇಳಿದನೆಂಬುನೆಂಬುದಾಗಿ ಯಾಜ್ಞ್ಯವಲ್ಕ್ಯನು ಜನಕಮಹಾರಾಜನಿಗೆ ಹೇಳಿದನು. ॥೯೬॥

ಎಂಬಲ್ಲಿಗೆ " ಹರಾ " ಎಂಬ ಹೆಸರುಳ್ಳ ಶಿವರಹಸ್ಯ ಗ್ರಂಥದಲ್ಲಿ ಮೂರನೆಯ
ಅಂಶದ ಉತ್ತರಾರ್ಧದಲ್ಲಿ ಪಾಪಮೂರ್ತಿಯ ಶರೀರನಾಶ ಮತ್ತು
ಮೋಕದಾಯಕಗಳಾದ ಹತ್ತು ಸಾಧನಗಳ ವರ್ಣನೆಯೆಂಬ
ಏಳನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಅಷ್ಟಮೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತಿ ತದ್ವಚನಂ ಶ್ರುತ್ವಾ ಪ್ರಣತಃ ಸೋಽಪಿ ನಾರದಃ ।
ಓಮಿತ್ಯುಕ್ತ್ವಾ ಸ್ಥಿತಸ್ತತ್ರ ದಿವ್ಯವೇಷಧರೋ ನೃಪಃ । ||೧||

ತತಃ ಪರಂ ಬಾಲಕಂ ಚ ನಿರೀಕ್ಷ್ಯ ನೃಪಸತ್ತಮಃ ।
ನಾರದಂ ಪ್ರಾಹ ತತ್ತ್ವಜ್ಞಂ ಶಿವಭಕ್ತಿರತಂ ತತಃ ||೨||

|| ನೃಪ ಉವಾಚ ||

ಅಸ್ಯ ಭಾವಿಕಮಗ್ರೇಽಪಿ ಭಾವುಕಂ ಮುನಿಸತ್ತಮ ।
ಕಿಂ ಯದಾಯುಃಪ್ರಮಾಣಂ ಚ ತತ್ಸರ್ವಂ ಮೇ ವದಾಧುನಾ ||೩||

## ಎಂಟನೆಯ ಅಧ್ಯಾಯ

ನಾರದಮಹರ್ಷಿಯ ಮಾತನ್ನು ಕೇಳಿ ದಿವ್ಯಾಂಬರಧಾರಿಯಾದ ಆ ರಾಜನು ನಾರದನಿಗೆ ನಮಸ್ಕರಿಸಿ, ತಾನು ಧನ್ಯನಾದೆನೆಂದು ತಿಳಿದನು. ||೧||

ಇದಾದನಂತರ ರಾಜನು ತನ್ನ ಬಾಲಕನನ್ನೂ ಚೆನ್ನಾಗಿ ದೃಷ್ಟಿಸಿ ನೋಡಿ, ತತ್ತ್ವಜ್ಞನೂ, ಶಿವಭಕ್ತನೂ ಆದ ನಾರದನನ್ನು ಕುರಿತು ಹೀಗೆಂದನು. ||೨||

"ಎಲೈ ಋಷಿವರ್ಯನೇ—ಈ ಬಾಲಕನ ಮುಂದಿನ ಭವಿಷ್ಯದ ವಿಷಯವನ್ನೂ ಮತ್ತು ಈತನ ಆಯುಃಪ್ರಮಾಣವನ್ನು ನನಗೆ ದಯೆಯಿಂದ ತಿಳಿಸು."||೩||

|| ನಾರದ ಉವಾಚ ||

ಅಸ್ಯ ಕಾಮಾನುಸಾರೇಣ ಜೀವನಂ ನೃಪಸತ್ತಮ ।
ಇಯತ್ತಾರಹಿತಂ ಭಾಗ್ಯಂ ಏತಸ್ಯಾಗ್ರೇ ಭವಿಷ್ಯತಿ ||೪||

ಸ್ಥಾಸ್ಯಂತ್ಯಸ್ಯ ಗೃಹದ್ವಾರಿ ಮತ್ತಮಾತಂಗಕೋಟಯಃ ।
ಮಾತಂಗಮದಧಾರಾಣಾಂ ಪೂರೈರ್ವ್ಯಾಪ್ತಾ ಧರಾ ಭವೇತ್ ||೫||

ಸದಾ ತುಂಗತುರಂಗಾಣಾಂ ಕೋಟಯೋಽಪಿ ಗೃಹಾಂಗಣೇ ।
ಸ್ಥಾಸ್ಯಂತ್ಯಸ್ಯ ಮಹೀಪಾಲ ಭೂಪಾಲೋಽಯಂ ಭವಿಷ್ಯತಿ ||೬||

ಸೌಂದರ್ಯನಿಧಿರಸ್ಯ ನಾಮ ನಾಮ್ನಾರ್ಥತೋಪ್ಯಯಂ ।
ಸೌಂದರ್ಯನಿಧಿರೇವಾಯಂ ಮನ್ಮಥಾಪರವಿಗ್ರಹಃ ||೭||

ಅಸ್ಮಿನ್ಭೂಪಾಲನೋದ್ಯುಕ್ತೇ ಶತ್ರುವಾರ್ತಾಪಿ ದೂರತಃ ।
ಸುವರ್ಣರತ್ನಕೋಶಾನಾಂ ವೃದ್ಧಿರಸ್ಯ ಭವಿಷ್ಯತಿ ||೮||

"ಎಲೈ ರಾಜನೇ, ಈತನಿಗೆ ಜೀವನವು ತನ್ನ ಇಚ್ಛಾನುಸಾರ ನಡೆಯುವುದು. ಮತ್ತು ಈತನ ಮುಂದಿನ ಭಾಗ್ಯವು ಇಷ್ಟೇ ಎಂದು ಹೇಳಲಸಾಧ್ಯವಾಗುವುದು." ಎಂದು ನಾರದನು ಬಾಲಕನ ಭವಿಷ್ಯವನ್ನು ವಿವರಿಸಲಾರಂಭಿಸಿದನು. ||೪||

ಈತನ ಮನೆಯ ಬಾಗಿಲಿನಲ್ಲಿ ಕೋಟ್ಯಂತರ ಮದಿಸಿದ ಆನೆಗಳು ನಿಲ್ಲುತ್ತವೆ. ಆ ರೀತಿಯಾದ ಗಜಗಳ ಮದೋದಕದ ಧಾರೆಗಳಿಂದ ಮನೆಯ ಅಂಗಳವೆಲ್ಲವೂ ಕೆಸರಾಗುತ್ತದೆ. ||೫||

ಈತನ ಮನೆಯ ಮುಂಭಾಗದಲ್ಲಿ ಯಾವಾಗಲೂ ಶ್ರೇಷ್ಠಗಳಾದ ಅಸಂಖ್ಯಾತ ಕುದುರೆಗಳು ಕಾಣುತ್ತವೆ. ಮತ್ತು ಈತನು ರಾಜಾಧಿರಾಜನೆನಿಸುವನು. ||೬||

ಈತನಿಗೆ "ಸೌಂದರ್ಯನಿಧಿ" ಎಂದು ಹೆಸರಾಗುವುದು. ಈತನು ತನ್ನ ಹೆಸರಿಗೆ ತಕ್ಕಂತೆ ಸೌಂದರ್ಯಸಹಿತನಾಗಿಯೂ ಮನ್ಮಥನ ಶರೀರದಂತೆ ಪ್ರಕಾಶಿಸುವ ಶರೀರವುಳ್ಳವನೂ ಆಗುವನು. ||೭||

ಈತನು ಭೂಪಾಲಕನಾಗಿರಲಾಗಿ ಶತ್ರು ವಾರ್ತೆಯೇ ದೂರವಾಗುವುದು. ಮತ್ತು ಕೋಶಾಗಾರವು ಸುವರ್ಣರತ್ನಾದಿಗಳಿಂದ ಸದಾ ಪೂರಿತವಾಗುವುದು. ||೮||

ರತ್ನಾಗಾರಪ್ರಭಾಪೂರ್ಣೈರಿದಂ ಮಂದಿರಮಂಡಲಂ ।
ಮಂಡಿತಂ ರಮಣೀಯಂ ಚ ಭವಿಷ್ಯತಿ ನೃಪೋತ್ತಮ ॥೯॥

ಗಂಧರ್ವರಾಜನಗರೇ ವಿಹಾರಾಯ ಪ್ರಯಾಸ್ಯತಿ ।
ತತ್ರ ಭಾವೀ ವಿವಾಹೋಽಸ್ಯ ಸಂಭ್ರಮೇಣ ಸ್ವಯಂವರೇ ॥೧೦॥

ಗಂಧರ್ವಕನ್ಯಕಾಃ ಸಂತಿ ಸಹಸ್ರಂ ರತಿವಿಗ್ರಹಾಃ ।
ಅಪೂರ್ವಕನ್ಯಕಾಸೃಷ್ಟಿರಷ್ಟಮೂರ್ತಿಕೃತಾ ಪುರಾ ॥೧೧॥

ಶಾಂಭವಾಗ್ರೇಸರಃ ಸೋಽಯಂ ಸರ್ವದಾ ಶಿವಪೂಜಕಃ ।
ಶಂಕರಾರ್ಚನಧಾರಾಭಿರಯಂ ಪೂತೋ ಭವಿಷ್ಯತಿ ॥೧೨॥

ಯಾವಜ್ಜೀವಂ ಶ್ರುತಿಸ್ತಾವದನೇನೈವ ಮಹಾತ್ಮನಾ ।
ಸಾರ್ಥಾ ಭವಿಷ್ಯತಿ ಪ್ರಾಯಃ ತಥಾನುಷ್ಠಾನಸಂಭವಾತ್ ॥೧೩॥

ಎಲೈ ರಾಜನೇ, ಈತನ ಮನೆಯು ಭಂಡಾರದ ರತ್ನಗಳಕಾಂತಿಯಿಂದ ತುಂಬಿ ಅಲಂಕೃತವಾಗಿಯೂ, ರಮಣೀಯವಾಗಿಯೂ ಆಗುವುದು. ॥೯॥

ಈತನಿಗೆ ವಿಹಾರಸ್ಥಾನವು ಗಂಧರ್ವರ ನಗರವಾಗುವುದು. ಅಲ್ಲಿಯೇ ಈತನ ಸ್ವಯಂವರವು ಸಂಭ್ರಮದೊಡನೆ ನಡೆಯುವುದು. ॥೧೦॥

ಪೂರ್ವದಲ್ಲಿ ಅಷ್ಟಮೂರ್ತಿಯು ಅಸದೃಶರಾದ ಕನ್ಯಕೆಯರನ್ನು ಸೃಜಿಸಿದ್ದಾನೆ. ಅವರು ಗಂಧರ್ವಕನ್ಯಕೆಯರಾಗಿ, ಸಾಕ್ಷಾತ್ ರತೀದೇವಿಯರಂತೆ ಶರೀರವುಳ್ಳವರಾಗಿ ಕಂಡುಬಂದರು. ಇಂತಹವರು ಸಾವಿರಾರು ಸ್ತ್ರೀಯರಿದ್ದಾರೆ. ॥೧೧॥

ಈತನು ಶಿವಭಕ್ತರಿಗೆಲ್ಲಾ ಅಗ್ರೇಸರನಾಗಿಯೂ, ಸದಾ ಶಿವಪೂಜಕನಾಗಿಯೂ ಶಿವಾರ್ಚನೆಯೆಂಬ ಅಮೃತ ಧಾರೆಗಳಿಂದ ಪೂತಾತ್ಮನಾಗಿಯೂ, ಆಗುತ್ತಾನೆ. ॥೧೨॥

ಹಾಗೆ ಈಶ್ವರಾರ್ಚನೆ ಮಾಡುವುದರಿಂದ ಈತನು ತನ್ನ ಜೀವಮಾನ ಪರ್ಯಂತವಾಗಿ ಶ್ರುತಿಯನ್ನು ಅರ್ಥ ಸಹಿತವಾಗಿ ತಿಳಿದಂತಾಗುವುದು. ವೇದೋಕ್ತ ಕರ್ಮಾನುಷ್ಠಾನದ ಫಲವು ಈತನಿಗೆ ಲಭಿಸುವುದು. ॥೧೩॥

ಅಪ್ರಾಮಾಣ್ಯಂ ಚ ನಾಸ್ಯ ಸ್ಯಾದನನುಷ್ಠಾನಲಕ್ಷಣಂ ।
ಯೇನ ಕೇನಾಪ್ಯನುಷ್ಠಾನೇ ತಸ್ಯಾಪ್ರಾಮಾಣ್ಯಸಂಭವಾತ್ ॥೧೪॥

ಪಶ್ಯ ಪಶ್ಯಾಧುನಾ ಭಾಗ್ಯಮೇತಸ್ಯ ನೃಪಸತ್ತಮ ।
ಶಿವವಿದ್ಯಾಪಿ ಸಂಪ್ರಾಪ್ತಾ ಮತ್ತೋ ಜನ್ಮದಿನೇ ಮುದಾ ॥೧೫॥

ಕೇನ ಜನ್ಮದಿನೇ ಪ್ರಾಪ್ತಾ ಶಿವವಿದ್ಯಾಪಿ ಮೋಕ್ಷದಾ ।
ಅಸ್ಯ ಪುಣ್ಯಸ್ಯ ನಾಂತೋಽಸ್ತಿ ಭಾಗ್ಯವಾನಯಮೇವ ಹಿ ॥೧೬॥

ಅಸ್ಯ ಪುತ್ರಾಶ್ಚ ಬಹವಃ ಶೂರಾಃ ಪರಮಸುಂದರಾಃ ।
ಭವಿಷ್ಯಂತಿ ಶಿವಾಚಾರನಿರತಾಃ ಶತಮಾಸ್ತಿಕಾಃ ॥೧೭॥

ನ ಚಾಸ್ಯ ರೋಗಪೀಡಾಸ್ಯಾತ್ಕದಾಪಿ ನೃಪಸತ್ತಮ ।
ಅನಾಹತಮತಿರ್ಲೋಕೇ ಲೋಕಾನಾಮುಪಕಾರಕಃ ॥೧೮॥

ವೇದೋಕ್ತವಾದ ಇತರ ಕರ್ಮಗಳನ್ನು ಅನುಷ್ಠಾನಮಾಡದಿದ್ದರೂ, ಈತನಿಗೆ ಕರ್ಮಾನುಷ್ಠಾನ ಲೋಪದ ದೋಷವು ಘಟಿಸಲಾರದು. ಏತಕ್ಕೆಂದರೆ, ವೇದಪ್ರತಿಪಾದ್ಯವಾದ ಶಿವಧರ್ಮಾನುಷ್ಠಾನದಿಂದಲೇ, ವೇದೋಕ್ತ ಕರ್ಮಾಚರಣೆಯ ಸಕಲ ಫಲವೂ ಲಭಿಸುವುದು. ॥೧೪॥

ಎಲೈ ರಾಜನೇ—ಈತನ ಭಾಗ್ಯವನ್ನು ನೋಡು. ಈತನಿಗೆ—ಶಿವವಿದ್ಯೆಯೂ ಹುಟ್ಟುವಾಗಲೇ ನನ್ನಿಂದ ಲಭಿಸಿರುತ್ತದೆ. ॥೧೫॥

ಈತನಿಗೆ ಶಿವವಿದ್ಯೆಯು ಹುಟ್ಟಿದ ದಿನದಲ್ಲಿಯೇ ಉಂಟಾಯಿತಾದ ಕಾರಣ ಇದು ಮೋಕ್ಷದಾಯಕವು. ಈತನ ಪುಣ್ಯಕ್ಕೆ ಅಂತ್ಯವೇ ಇಲ್ಲ. ಆದದರಿಂದ ಈತನೇ ಭಾಗ್ಯವಂತನು. ॥೧೬॥

ಈತನಿಗೆ, ಶೂರರೂ, ಪರಮ ಸುಂದರರೂ, ಈಶ್ವರ ಭಕ್ತರೂ, ಆಸ್ತಿಕರೂ ಆದ ನೂರಾರು ಪುತ್ರರು ಜನಿಸುವರು. ॥೧೭॥

ಎಲೈ ರಾಜನೇ—ಈತನಿಗೆ ಯಾವಾಗಲೂ ರೋಗಬಾಧೆಯುಂಟಾಗುವುದಿಲ್ಲ. ಅದಲ್ಲದೆ ಈತನು ಲೋಕದಲ್ಲಿ ಎಂದೂ ನಾಶವಾಗದಂತಹ ಬುದ್ಧಿಯುಳ್ಳವನಾಗಿಯೂ, ಜನರಿಗೆ ಉಪಕಾರ ಮಾಡುವವನಾಗಿಯೂ ಆಗುವನು. ॥೧೮॥

ಏತದ್ದರ್ಶನಮಾತ್ರೇಣ ಧನ್ಯಾಃ ಕೇಚಿನ್ಮಹೀಪತೇ ।
ಅನೇನ ಸಹ ಸಲ್ಲಾಪೈರ್ಗಮನಾಗಮನೈರಪಿ ॥೧೯॥

ಏತಾದೃಶಃ ಶಾಂಭವಸ್ತು ನ ಜಾತೋ ನ ಭವಿಷ್ಯತಿ ।
ಅಯಂ ಪ್ರತಿದಿನೇ ವೃದ್ಧಿಂ ಪ್ರಯಾಸ್ಯತಿ ಶಿವಾರ್ಚನಾತ್ ॥೨೦॥

ಶಿವಾರ್ಚನಜಪುಣ್ಯೇನ ಭಾಗ್ಯಮಸ್ಯ ಭವಿಷ್ಯತಿ ।
ತಸ್ಯ ಭಾಗ್ಯಸ್ಯ ವಿಲಯೋ ನ ಭವಿಷ್ಯತಿ ಸರ್ವಥಾ ॥೨೧॥

ಕಿಂ ಚಾಯಂ ಶಿವಸಾತ್ಸರ್ವಂ ಕರಿಷ್ಯತಿ ಧನಂ ನೃಪ ।
ತೇನ ಪುಣ್ಯೇನ ಕೋಶಾನಾಂ ವೃದ್ಧಿರೇವ ಕ್ಷಣೇ ಕ್ಷಣೇ ॥೨೨॥

ಆಯುಷೋ ವೃದ್ಧಿರಸ್ಯ ಸ್ಯಾನ್ನಿರಂತರಶಿವಾರ್ಚನಾತ್ ।
ಧನಧಾನ್ಯಾಭಿವೃದ್ಧಿಶ್ಚ ವೃದ್ಧಿಃ ಸ್ಯಾತ್ಸಂತತೇರಪಿ ॥೨೩॥

ಅನೇಕ ಜನರು ಈತನೊಡನೆ ಸಂಭಾಷಿಸುವುದರಿಂದಲೂ, ಒಡಗೂಡುವುದರಿಂದಲೂ, ದರ್ಶನಮಾಡುವುದರಿಂದಲೂ, ಧನ್ಯರಾಗುತ್ತಾರೆ. ॥೧೯॥

ಇವನಂತಹವನು ಹಿಂದೆ ಯಾವಾಗಲೂ ಹುಟ್ಟಿರಲಿಲ್ಲ. ಮುಂದೆ ಹುಟ್ಟುವುದೂ ಇಲ್ಲ. ಈತನು ಶಿವಾರ್ಚನೆ ಮಾಡುವುದರಿಂದಲೇ ದಿನದಿನಕ್ಕೂ ಅಭಿವೃದ್ಧಿಯನ್ನು ಹೊಂದುತ್ತಾನೆ. ॥೨೦॥

ಶಿವಾರ್ಚನೆಯಿಂದುಂಟಾದ ಪುಣ್ಯದಿಂದ ಈತನ ಭಾಗ್ಯವು ಅಧಿಕವಾಗುವುದು. ಆ ಭಾಗ್ಯದ ನಾಶವು ಎಂದೂ ಆಗುವುದಿಲ್ಲ. ॥೨೧॥

ಈತನು ತನ್ನ ಸಕಲ ಧನವನ್ನೂ ಶಿವನಿಗೇ ಅರ್ಪಿಸುತ್ತಾನೆ. ಆದಿಂದ ಈತನ ಕೋಶಗಳೆಲ್ಲ ಕ್ಷಣಕ್ಷಣಕ್ಕೂ ವೃದ್ಧಿಯಾಗುತ್ತದೆ. ॥೨೨॥

ನಿರಂತರವಾಗಿ ಶಿವಾರ್ಚನಮಾಡುವುದರಿಂದ ಈತನ ಆಯುಸ್ಸು ಅಭಿವೃದ್ಧಿಯಾಗುತ್ತದೆ. ಮತ್ತು ಧನ, ಸಂತತಿ ಇವೆಲ್ಲದುದರ ಏಳಿಗೆಯೂ ಲಭಿಸುತ್ತದೆ. ಎಂದು ನಾರದನು ಹೇಳಿದನು. ॥೨೩॥

ರಾಜೋವಾಚ

ಮುನಿಶ್ರೇಷ್ಠ ಮಹಾಭಾಗ ನಿರಂತರಶಿವಾರ್ಚನಂ ।
ಕಥಂ ಭವತಿ ಮರ್ತ್ಯಾನಾಂ ನಿದ್ರಾಲಸ್ಯಾದಿಸಂಭವಾತ್ ॥೨೪॥

ಜಲಧಾರಾ ಕಲ್ಪನೀಯಾ ಶಿವಲಿಂಗೇ ಶಿವಾತ್ಮಕೇ ।
ಮಣಿಕಾಪೂರಣೀಯಾಶ್ಚ ಸುಗಂಧೈಃ ಶೀತಲೈರ್ಜಲೈಃ ॥೨೫॥

ಶಿವಾರ್ಚಕಾಃ ಕಲ್ಪನೀಯಾಃ ಶತಶಃ ಶಿವಮಂದಿರೇ ।
ಕಾರಣೀಯಂ ಚ ತೈರೇವ ಶಿವಲಿಂಗಸಮರ್ಚನಂ ॥೨೬॥

ಕದಾಚಿತ್ಸ್ಯಾತ್ತದಾಲಸ್ಯನಿದ್ರಾಪಿ ಸ್ಯಾತ್ಕದಾಚನ ।
ಅನಾಲಸ್ಯೈಃ ಕಾರಣೀಯಮನ್ಯೈರೇವ ಶಿವಾರ್ಚನಂ ॥೨೭॥

ತೋಷಣೀಯಾಶ್ಚ ತೈರೇತೈಃ ಧನೈರ್ಗೋಭಿರ್ಗೃಹೈರಪಿ
ಶಿವನೈವೇದ್ಯದಾನೈಶ್ಚ ದುಕೂಲೈರ್ಭೂಷಣೈರಪಿ ॥೨೮॥

---

ಮುನಿಶ್ರೇಷ್ಠನೂ, ಮಹಾಭಾಗ್ಯಶಾಲಿಯಾಗಿಯೂ ಆದ ನಾರದನೇ— ಮರ್ತ್ಯರು (ಸಾಯುವ ಸ್ವಭಾವವುಳ್ಳ ಮನುಜರು) ನಿದ್ರೆ, ಆಲಸ್ಯ ಇತ್ಯಾದಿಗಳನ್ನು ಹೊಂದಿರುತ್ತಾರೆ. ಆದುದರಿಂದ ಅವರಿಗೆ ಅವಿಚ್ಛಿನ್ನವಾಗಿ ಶಿವಾರ್ಚನವು ಹೇಗೆ ತಾನೆ ನಡೆದೀತು ? ॥೨೪॥

ಶಿವಸ್ವರೂಪವಾದ ಶಿವಲಿಂಗದಲ್ಲಿ ಜಲದ ಧಾರೆಯಿಂದ ಅಭಿಷೇಕಮಾಡಬೇಕು. ಆ ಜಲಧಾರೆಯು ಸುಗಂಧಯುತವಾಗಿಯೂ, ಪರಿಶುದ್ಧವಾದ ಕ್ಷೇತ್ರದಿಂದ ಆಹೃತವಾಗಿಯೂ ಇರಬೇಕು. ॥೨೫॥

ಈಶ್ವರ ಗೃಹದಲ್ಲಿ ನೂರಾರು ಅರ್ಚಕರನ್ನು ನೇಮಕ ಮಾಡಿ ಅವರ ಮೂಲಕ ಶಿವಲಿಂಗದ ಅರ್ಚನೆಯನ್ನು ಬಹುಮುಖವಾಗಿ ಮಾಡಿಸಬೇಕು. ॥೨೬॥

ಆ ಶಿವಾರ್ಚಕರಲ್ಲಿ ಯಾರಿಗಾದರೂ ಯಾವಾಗಲಾದರೂ ನಿದ್ರೆ, ಆಲಸ್ಯ, ಇತ್ಯಾದಿಗಳಿಲ್ಲದಿರುವಂತೆ ಇತರರಿಂದ ಪೂಜೆಮಾಡಿಸಬೇಕು. ॥೨೭॥

ಮತ್ತು ಆ ಅರ್ಚಕರಿಗೆ ಧನ, ಗೋವು, ಮನೆ, ಶಿವನಿಗೆ ನಿವೇದಿಸಿದ ಪದಾರ್ಥ, ದುಕೂಲ (ಬಟ್ಟೆ) ಅಲಂಕಾರಸಾಮಗ್ರಿ, ಇತ್ಯಾದಿಗಳನ್ನು ದಾನವಾಗಿ ಕೊಟ್ಟು ಸಂತೋಷಪಡಿಸಬೇಕು. ॥೨೮॥

ಶಿವನಾಮಾನುಸಂಧಾನ ಕಥಾಶ್ರವಣಪೂರ್ವಕಂ ।
ಕಾಲೋ ವಿನೇಯಃ ಸರ್ವೋಽಪಿ ನಿದ್ರಾಪಿ ಸ್ಯಾತ್ಕದಾಚನ ॥೨೯॥

ಕಿಂ ಚ ಮೃತ್ಯುಂ ಸದಾ ಪಶ್ಯನ್ ಕೋ ವಾ ನಿದ್ರಾಂ ಕರಿಷ್ಯತಿ ।
ಮೃತ್ಯುಭೀತ್ಯಾ ನ ನಿದ್ರಾಪಿ ಭೋಜನೇಽಪಿ ರತಿಃ ಕುತಃ ॥೩೦॥

ಕದಾ ವಾ ಮರಣಮಸ್ಯ ಸ್ಯಾತ್ಕದಾ ವಾ ಯಮಯಾತನಾ ।
ಇತ್ಯೇವಂ ಚಿಂತಯಾ ಕಿಂ ಚ ನೀಯತೇ ದಿನಮಾಸ್ತಿಕೈಃ ॥೩೧॥

ನಾಸ್ತಿಕಾನಾಂ ತಯಾ ಜನ್ಮ ತೇಷಾಂ ನ ಶಿವಪೂಜನಂ ।
ಅತೋ ಮೃತ್ಯುಭಯಂ ತೇಷಾಂ ಯಾತನಾಭಯಮುಸ್ವಪಂ ॥೩೨॥

ಮೃತ್ಯುಂ ತರತಿ ಮರ್ತ್ಯೋಽಪಿ ಮಹಾಮೃತ್ಯುಂಜಯಾರ್ಚನಾತ್ ।
ಅತೋ ಮೃತ್ಯುಂಜಯೋ ನಿತ್ಯಂ ಪೂಜನೀಯಃ ಪ್ರಯತ್ನತಃ ॥೩೩॥

ಯಾವಾಗಲೂ ಶಿವನಾಮವನ್ನೇ ಧ್ಯಾನಮಾಡುತ್ತಲೂ, ಆ ಕಥೆಯನ್ನೇ ಕೇಳುತ್ತಲೂ ತನ್ನ ಕಾಲವನ್ನೆಲ್ಲಾ ಕಳೆಯಬೇಕು. ಒಂದೊಂದುವೇಳೆ ನಿದ್ದೆಯೂ ತೊಂದರೆಮಾಡಬಹುದು. ||೨೯||

ಮೃತ್ಯುದೇವತೆಯನ್ನು ಎದುರು ನೋಡುವವನಾಗಿ ಯಾವನು ತಾನೆ ನಿದ್ದೆಯನ್ನು ಮಾಡಿಯಾನು? ಆ ಮೃತ್ಯುವಿನ ಭೀತಿಯಿದ್ದರೆ, ನಿದ್ದೆ, ಮತ್ತು ಭೋಜನ ಇವುಗಳಲ್ಲಿ ಆಸಕ್ತಿಯೂ ಸಹ ಉಂಟಾಗಲಾರದು. ||೩೦||

ಆಸ್ತಿಕರಾದವರೂ ಕೂಡ ಯಾವಾಗ ಮರಣವು ಸಂಭವಿಸುತ್ತದೆಯೋ, ಯಾವಾಗ ಯಮಯಾತನೆಯೊದಗುತ್ತದೆಯೋ, ಎಂಬುದಾಗಿಯೇ ಆಲೋಚಿಸುತ್ತಾ ಕಾಲವನ್ನು ಕಳೆಯುತ್ತಾರೆ. ||೩೧||

ನಾಸ್ತಿಕರಾದವರು ಮೇಲೆ ಹೇಳಿದಂತೆ ಚಿಂತಿಸುತ್ತಿದ್ದರೂ ಶಿವಪೂಜೆಯನ್ನು ಮಾತ್ರ ಮಾಡುವುದಿಲ್ಲ. ಅದರಿಂದಲೇ ನಿತ್ಯವೂ ಅವರಿಗೆ ಮರಣಭಯವೂ ಯಮಯಾತನೆಯೂ ತಪ್ಪುವುದಿಲ್ಲ. ||೩೨||

ಮರ್ತ್ಯನಾದರೂ (ಮರಣಸ್ವಭಾವವುಳ್ಳವನಾದರೂ) ಮಹಾಮೃತ್ಯುಂಜಯನನ್ನು ಪೂಜಿಸಿದರೆ ಮೃತ್ಯುವನ್ನೂ ಸಹ ದಾಟುತ್ತಾನೆ. ಆದುದರಿಂದ ಜನರು ಪ್ರಯತ್ನಪೂರ್ವಕವಾಗಿ ಮೃತ್ಯುಂಜಯನನ್ನು ಅರ್ಚಿಸಬೇಕು. ||೩೩||

ಮೃತ್ಯುಂಜಯಾರ್ಚನೇನೈವ ಯದಿ ಸ್ಯಾದಾಯುಷಃ ಕ್ಷಯಃ ।
ತದಾ ತದಾಯುಃ ಸಫಲಂ ತದನ್ಯಂ ನಿಷ್ಫಲಂ ಖಲು ॥೩೪॥

ಪುರಾ ಕಿಲಾಯುರ್ಮೂರ್ತೀನಾಂ ಸಮೂಹೋ ಯುಗಪತ್ಕ್ವಚಿತ್ ।
ಉಪಸ್ಥಿತಸ್ತದಾ ತತ್ರ ಯಮೋಽಪಿ ಸಮುಪಾಗತಃ ॥೩೫॥

ಅಟನ್ ಲೋಕಾನ್ ಭಟೈಃ ಸಾಕಂ ರಟನ್ನಾಮಚ ಶಾಂಭವಂ ।
ಮಧ್ಯೇ ಮಧ್ಯೇ ನಟನ್ನೇವ ಸ್ಮರನ್ ನಿಟಿಲಲೋಚನಂ ॥೩೬॥

ತದಾ ತಮಾಗತಂ ದೃಷ್ಟ್ವಾ ಯಮಃ ಕಂಪಮುಪಾಗತಃ ।
ಯಮೋ ದೃಷ್ಟ್ವೈವ ತಾಃ ಪ್ರಾಹ ಚಿತ್ರಗುಪ್ತಂ ವಿಚಕ್ಷಣಂ ॥೩೭॥

॥ ಯಮ ಉವಾಚ ॥

ಆಯುರ್ಮೂರ್ತಿರಿಯಂ ಭಾತಿ ಚಂದ್ರವದ್ಭಾನುವಲ್ಲಭ ।
ಇಯಂ ಪಾವಕವದ್ಭಾತಿ ಸಾ ವಿಭಾತಿ ತಥೈವ ಸಾ ॥೩೮॥

---

ಮನುಷ್ಯನು ತನ್ನ ಆಯುಸ್ಸನ್ನು ಶಿವಪೂಜೆಮಾಡುವುದರಲ್ಲಿಯೇ ಕಳೆಯುವುದಾದರೆ ಆಗ ಅವನ ಆ ಆಯುಸ್ಸು ಸಾರ್ಥಕವೆನಿಸುವುದು. ಇಲ್ಲದಿದ್ದರೆ ನಿಜವಾಗಿಯೂ ಅವನ ಆಯುಸ್ಸು ನಿಷ್ಫಲವಾದುದೇ. ॥೩೪॥

ಪೂರ್ವದಲ್ಲಿ ಒಂದಾನೊಂದು ಸಲ ಆಯುರ್ಮೂರ್ತಿಗಳು ಒಟ್ಟಿಗೆ ಒಂದುಕಡೆ ಸೇರಿದ್ದವು. ಆಗ ಅಲ್ಲಿಗೆ ಯಮನೂ ಬಂದನು. ॥೩೫॥

ಆ ಯಮನು ಭಟರೊಡನೆ ಶಿವನ ಹೆಸರನ್ನು ಹೇಳುತ್ತಲೂ ಮಧ್ಯಮಧ್ಯದಲ್ಲಿ ನಾಟ್ಯವಾಡುತ್ತಲೂ, ಶಿವನನ್ನು ಸ್ಮರಿಸುತ್ತಲೂ ಸಕಲ ಲೋಕಗಳಲ್ಲಿಯೂ ತಿರುಗುತ್ತಿದ್ದನು. ॥೩೬॥

ಆಗ ಆ ಆಯುರ್ಮೂರ್ತಿಯು ಅಲ್ಲಿಗೆ ಬಂದ ಯಮನನ್ನು ಕಂಡು ನಡುಗುವುದಕ್ಕೆ ಆರಂಭಿಸಿತು. ಯಮನೂ ಅವುಗಳನ್ನು ಕಂಡು ಬಹು ಬುದ್ಧಿಶಾಲಿಯಾದ ಚಿತ್ರಗುಪ್ತನನ್ನು ಕುರಿತು ಹೀಗೆಂದನು. ॥೩೭॥

ಎಲೈ ಚಿತ್ರಗುಪ್ತನೇ, ಈ ಆಯುರ್ಮೂರ್ತಿಯು ಚಂದ್ರನಂತೆ ಪ್ರಕಾಶಿಸುತ್ತಲೂ, ಅಗ್ನಿಯಂತೆ ಉರಿಯುತ್ತಲೂ, ಸೂರ್ಯನಂತೆ ಬೆಳಗುತ್ತಲೂ ಇರುವುದು. ॥೩೮॥

ತಾರಾವದ್ಭಾತಿ ಸಾ ಕಾಪಿ ಭಾತಿ ವಿದ್ಯುಲ್ಲತೇವ ಸಾ ।
ಗಾಢಾಂಧಕಾರವದ್ಭಾತಿ ಸಾಪಿಸಾ ಸಾಪಿ ಸಾಪಿಸಾ ॥೩೯॥

ಉಲ್ಕಾವದ್ಭಾತಿ ಸಾ ಕಾಪಿ ಕಾಪಿ ಸಾ ಕಾಪಿ ಕಾಪಿ ಸಾ ।
ಸಾಪಿ ಸಾ ಸಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾ ಪಿಸಾ ॥೪೦॥

ಪರಮಾನಂದಪೂರ್ಣಾ ಸಾ ಸಾಪಿ ಸಾ ಸಾಪಿ ಸಾಪಿ ಸಾ ।
ಸಾಪಿಸಾ ಸಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾಪಿಸಾ ॥೪೧॥

ಸುಸ್ಮೇರವದನಾ ಕಾಪಿ ಸಾಪಿ ಸಾಸಾಪಿ ಸಾಪಿ ಸಾ ।
ಸಾಪಿಸಾ ಸಾಪಿ ಸಾಸಾಪಿ ಸಾಪಿಸಾ ಸಾಪಿ ಸಾಪಿಸಾ ॥೪೨॥

ಶಿವಗಾನರತಾ ಕ್ವಾಪಿ ಸಾಪಿ ಸಾ ಸಾಪಿ ಸಾಪಿ ಸಾ ।
ಸಾಪಿ ಸಾ ಸಾಪಿ ಸಾ ಸಾಪಿ ಸಾಪಿಸಾ ಸಾಪಿ ಸಾಪಿಸಾ ॥೪೩॥

ಆನಂದಾಶ್ರುಸಮಾಕೀರ್ಣಾ ಕಾಪಿ ಸಾ ಸಾಪಿ ಸಾಪಿ ಸಾ ।
ಸಾಪಿ ಸಾ ಸಾಪಿ ಸಾಸಾಪಿ ಸಾಪಿಸಾ ಸಾಪಿ ಸಾಪಿಸಾ ॥೪೪॥

ಅಲ್ಲದೆ ನಕ್ಷತ್ರದಂತೆ ಹೊಳೆಯುತ್ತಿರುವುದು. ಮಿಂಚಿನ ಬಳ್ಳಿಯಂತೆ ಸ್ಫುರಿತ್ತಿರುವುದು. ಒಂದು ಕಗ್ಗತ್ತಲೆಯಂತೆ ಕಪ್ಪಾಗಿಯೂ ಕಾಣುವುದು. ಅಲ್ಲದೆ ಆ ಉಪಮಾನ ವಸ್ತುಗಳೇ ಇವೋ, ಎಂಬ ಭ್ರಾಂತಿಯನ್ನು ಸಹ ಕೊಡುವಂತಿದೆ. ||೩೯||

ಮತ್ತು ಈ ಆಯುಮೂರ್ತಿಯು ಉರಿಯುವ ಕೊಳ್ಳಿಯಂತೆ ಪ್ರಕಾಶಿಸುತ್ತಿದೆ. ಅದೇ ಇದೋ ಎಂಬ ಭ್ರಾಂತಿಯುಂಟಾಗಿದೆ. ಮತ್ತೊಂದು ಮೂರ್ತಿಯು, ಆನಂದಮಯವಾಗಿಯೂ, ನಗುಮುಖವುಳ್ಳದ್ದಾಗಿಯೂ, ವಿಶಾಲವದನವುಳ್ಳದ್ದಾಗಿಯೂ, ಪ್ರಕಾಶಿಸುತ್ತಿರುವುದು. ||೪೦-೪೧-೪೨||

ಈ ಒಂದು ಮೂರ್ತಿಯು ಶಿವಗಾನದಲ್ಲಿ ಆಸಕ್ತವಾದುದಾಗಿಯೂ, ಆನಂದಾಶ್ರು (ಸಂತೋಷ ಬಾಷ್ಪ)ಗಳಿಂದ ಕೂಡಿದುದಾಗಿಯೂ, ಪ್ರಕಾಶಿಸುತ್ತಿದೆ. ಅವುಗಳ ಅಭೇದವೇ ಇದರಲ್ಲಿ ಕಂಡುಬರುತ್ತಿದೆ. ||೪೩-೪೪||

ರುದ್ರವೀಣಾಂ ಗೃಹೀತ್ವಾ ಸಾ ಕಾಪಿ ಗಾನಂ ಕರೋತಿ ಸಾ ।
ಸಾಪಿ ಸಾ ಸಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾ ಪಿಸಾ ॥೪೫॥

ಸಾ ನೃತ್ಯತಿ ವಿಲಾಸೇನ ಸಾಪಿ ಸಾ ಸಾಪಿ ಸಾ ಪಿ ಸಾ ।
ಸಾಪಿ ಸಾ ಸಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾ ಪಿಸಾ ॥೪೬॥

ಧ್ಯಾನಂ ಕರೋತಿ ಸಾ ಕಾಪಿ ಮಂದಸ್ಮೇರಾ ಮನೋಹರಾ ।
ಸಾಪಿ ಸಾ ಸಾಪಿ ಸಾ ಸಾಪಿ ಸಾ ಪಿ ಸಾ ಸಾಪಿ ಸಾ ಪಿಸಾ ॥೪೭॥

ಶಿವನಾಮಾನಿ ಜಪತಿ ಕಾಪಿ ಸಾ ಸಾಪಿ ಸಾಪಿ ಸಾ ।
ಸಾಪಿ ಸಾ ಸಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾ ಪಿ ಸಾ ॥೪೮॥

ವಿಲೋಕ್ಯ ದರ್ಪಣಂ ಫಾಲೇ ತ್ರಿಪುಂಡ್ರರಚನಾದರಾ ।
ಸಾಪಿ ಸಾ ಸಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾ ಪಿ ಸಾ ॥೪೯॥

ರುದ್ರಾಕ್ಷಮಾಲಿಕಾ ಕಾ ಯಾ ಕಾಪಿ ಸಾ ಸಾಪಿ ಸಾಪಿ ಸಾ ।
ಸಾಪಿ ಸಾ ಸಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾಪಿ ಸಾ ॥೫೦॥

ಶಿವಲಿಂಗಾರ್ಚನರತಾ ಬಿಲ್ವಪಲ್ಲವಕೋಟಿಭಿಃ ।
ಸಾಪಿ ಸಾ ಸಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾಪಿ ಸಾ ಪಿಸಾ ॥೫೧॥

ಕಾಪಿ ಸಾ ಪಿಬತಿ ಪ್ರೀತ್ಯಾ ಮಹೇಶ್ವರಕಥಾಸುಧಾಂ ।
ಸಾಪಿ ಸಾ ಸಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾಪಿ ಸಾ ॥೫೨॥

---

ಆ ಆಯುರ್ಮೂರ್ತಿಯು ರುದ್ರವೀಣೆಯನ್ನು ತೆಗೆದುಕೊಂಡು ಅನಿರ್ವಚನೀಯವಾದ ಗಾನಮಾಡುತ್ತಿದೆ. ಸಂತೋಷದಿಂದ ನರ್ತನ ಮಾಡುತ್ತಿದೆ. ಮತ್ತು ಸ್ಮೇರಾನನದಿಂದ ಮನೋಹರವಾಗಿ ಶಿವಧ್ಯಾನ ಮಾಡುತ್ತಿದೆ. ||೪೫-೪೬-೪೭||

ಈ ಆಯುರ್ಮೂರ್ತಿಯು ಶಿವನಾಮಗಳನ್ನು ಜಪಿಸುತ್ತದೆ. ಕನ್ನಡಿಯಲ್ಲಿ ನೋಡಿಕೊಂಡು ಹಣೆಯಲ್ಲಿ ತ್ರಿಪುಂಡ್ರವನ್ನು ಧರಿಸಿಕೊಳ್ಳುತ್ತಿದೆ. ರುದ್ರಾಕ್ಷಿಮಾಲಿಕೆಗಳಿಂದ ಶರೀರವನ್ನು ಅಲಂಕರಿಸಿಕೊಂಡಿದೆ. ||೪೮-೪೯-೫೦||

ಆ ಆಯುರ್ಮೂರ್ತಿಯು ಚಿಗುರಿದ ಕೋಟಿ ಬಿಲ್ವಪತ್ರೆಗಳಿಂದ ಶಿವಲಿಂಗಾರ್ಚನೆಯಲ್ಲಿ ಆಸಕ್ತವಾದುದಾಗಿಯೂ, ಆದರದಿಂದ ಶಿವಕಥೆ ಎಂಬ ಅಮೃತವನ್ನು

ಶಿವವಾರ್ತಾರಸರಸಾಂ ದೃಷ್ಟ್ವಾ ಹೃಷ್ಟ್ವಾಪಿ ಕಾಪಿ ಸಾ ।
ಸಾಪಿ ಸಾ ಸಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾಪಿ ಸಾ ॥೫೩॥

ದೃಷ್ಟ್ವಾ ಪೂಜಿತಲಿಂಗಾನಿ ಸ್ಪೃಷ್ಟ್ವಾ ಹೃಷ್ಟಾ ಮುಹುರ್ಮುಹುಃ ।
ಸಾಪಿ ಸಾ ಸಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾಪಿ ಸಾ ॥೫೪॥

ಸಾ ಹರ್ಷವರ್ಷಧಾರಾಭಿ ರಾಪ್ಲುತಾ ಶಂಕರಸ್ಮೃತೇಃ ।
ಸಾಪಿ ಸಾ ಕಾಪಿ ಸಾ ಸಾಪಿ ಸಾಪಿ ಸಾ ಸಾಪಿ ಸಾಪಿ ಸಾ ॥೫೫॥

ಅಯಂ ಸಮೂಹೋಽಸ್ಯ ಮನೋಹರೋ ಮೇ ।
ಮಹೇಶ್ವರಾರಾಧನತತ್ಪರತ್ವಾತ್ ।
ಏತತ್ಸಮೂಹಾನುವಿಲೋಕನೇನ ।
ದಿನಾನಿ ನೇಯಾನಿ ಮಯಾ ಸದಾತ್ರ ॥೫೬॥

ಅಪಾರಪಾಪಾನಲದಹ್ಯಮಾನಾಃ
ಪುನಃ ಪುನರ್ಗರ್ಭನಿವೇಶಭೀತಾಃ ।
ಸ್ಮರಂತಿ ಯೇ ಶಾಂಭವಸಂಘಮಾಶು
ತರಂತಿ ತೇ ಭೀತಿಮಹಾರ್ಣವೌಘಂ ॥೫೭॥

ಪಾನಮಾಡುತ್ತಲೂ, ಮತ್ತು ಶಿವವಾರ್ತೆಯಲ್ಲಿರುವ ತಿರುಳನ್ನು (ಮುಖ್ಯ ಭಾಗವನ್ನು) ಕಂಡು ಸಂತೋಷ ಚಿತ್ತವುಳ್ಳದ್ದಾಗಿಯೂ ಇರುತ್ತದೆ. ॥೫೧-೫೨-೫೩॥

ಮತ್ತು ಪೂಜೆಮಾಡಿದ ಶಿವಲಿಂಗಗಳನ್ನು ಸ್ಪರ್ಶಮಾಡುತ್ತಾ ಸಂತೋಷ ಸಾಗರದಲ್ಲಿ ಮುಳುಗಿರುತ್ತದೆ. ಶಂಕರನ ಸ್ಮರಣೆಯೆಂಬ ಸಂತೋಷ ವೃಷ್ಟಿಯಲ್ಲಿ ಮುಳುಗಿದ್ದಾಗಿ ಆನಂದಪಡುತ್ತಿರುವುದು. ॥೫೪-೫೫॥

ಈ ಮೂರ್ತಿಯು ಮಹೇಶ್ವರನ ಆರಾಧನೆಯಲ್ಲಿ ಆಸಕ್ತವಾಗಿರುತ್ತಾದ ಕಾರಣ ನನಗೆ ಬಹಳ ಮನೋಹರವಾಗಿ ಕಾಣುತ್ತಿದೆ. ನಾನು ಯಾವಾಗಲೂ ಇದನ್ನು ನೋಡುತ್ತಲೇ ಇನ್ನೂ ಅನೇಕ ದಿನಗಳನ್ನು ಕಳೆಯಬೇಕು. ॥೫೬॥

ಬಹುವಾದ ಪಾಪವೆಂಬ ಅಗ್ನಿಯಿಂದ ಪರಿತಪಿಸುವರೂ, ಬಾರಿಬಾರಿಗೂ ಗರ್ಭದಲ್ಲಿ ಬೀಳುವುದರಿಂದ ದುಃಖ ಭಾಗಿಗಳಾಗಿರುವವರೂ ಕೂಡಲೇ ಈಶ್ವರ ಭಕ್ತರನ್ನು ಸ್ಮರಿಸುವುದಾದರೆ, ಅವರು ಭಯವೆಂಬ ಮಹಾಸಮುದ್ರವನ್ನು ನಿಜವಾಗಿಯೂ ದಾಟುತ್ತಾರೆ. ॥೫೭॥

ಅದ್ಯಾಧುನಾ ಧನ್ಯಮಭೂದ್ದಿನಂ ಮೇ
ಶಿವಾರ್ಚಕಾಲೋಕನಲೋಚನಸ್ಯ ।
ಇದಂ ಚ ಧನ್ಯಂ ಮಮ ಲೋಚನಂ ಚ
ಧನ್ಯಂ ಪರಂ ಜೀವನಮಸ್ಯ ಭಾಗ್ಯಂ ॥೫೮॥

ಅಯಂ ಕಥಂ ನೀಚಕರಾಶಿತುಲ್ಯಃ
ಸಂಘೋ ರುದತ್ಯಶ್ರುಜಲಾಕುಲೋಽಸೌ ।
ಧಿಗ್ಧಿಗ್ಧಿಗಾಪದ್ವಶಯಾತಿಪೀಡಾ
ಜಾತಾನಿ ಜಾತಾನಿ ನ ಜಾತು ಜಾನೇ ॥೫೯॥

ಇತಿ ತದ್ವಚನಂ ಶ್ರುತ್ವಾ ಚಿತ್ರಗುಪ್ತೋಽತಿವಿಸ್ಮಿತಃ ।
ವಿಸ್ಮಾಪಯನ್ ಯಮಂ ಪ್ರಾಹ ಶೃಣು ಕೌತುಕಮಿತ್ಯಪಿ ॥೬೦॥

॥ ಚಿತ್ರಗುಪ್ತ ಉವಾಚ ॥

ಶೃಣು ಶಾಂಭವಸಂಘಾನಾಂ ವಾರ್ತಾಂ ಶ್ರೋತ್ರಮನೋಹರಾಂ ।
ಯದ್ವಾರ್ತಾಶ್ರವಣೇನಾಪಿ ಶಿವಭಕ್ತಿರ್ದೃಢಾ ಭವೇತ್ ॥೬೧॥

ಶಿವಾರ್ಚಕನನ್ನು ನೋಡುವುದರಲ್ಲಿಯೇ ತೃಪ್ತಿ ಹೊಂದುವ ನನ್ನ ಕಣ್ಣುಗಳು ಇಂದಿಗೆ ಧನ್ಯವಾದುವು. ಮತ್ತು ಅಂತಹ ಯೋಗವು ನನ್ನ ಕಣ್ಣುಗಳಿಗೆ ಲಭಿಸಿದುದರಿಂದ ನಾನೂ ಕೃತಾರ್ಥನಾದೆನು. ನನ್ನ ಜೀವನವೂ ಸಾರ್ಥಕವೆನಿಸಿತು. ॥೫೮॥

ನವಿಲುಗರಿಯ ಕಣ್ಣಿನಂತೆ ಕಪ್ಪಾಗಿರುವ ಈ ಆಯುಮೂರ್ತಿಯು ಅಶ್ರುಜಲಗಳಿಂದ ಕೂಡಿದುದಾಗಿ ಅಳುತ್ತಿದೆ. ಯಾವ ಕಷ್ಟಸ್ಥಿತಿಗೆ ಸಿಕ್ಕಿ ಅಳುತ್ತಿದೆ ಎಂಬುದೇ ನನಗೆ ತಿಳಿಯದಲ್ಲಾ.'' ॥೫೯॥

ಎಂದು ಯಮನು ಹೇಳಿದ ಈ ಮಾತುಗಳನ್ನು ಕೇಳಿ ಚಿತ್ರಗುಪ್ತನು ಬಹು ವಿಸ್ಮಿತನಾದನು. ಮತ್ತು ಯಮನಿಗೆ ಆಶ್ಚರ್ಯವನ್ನುಂಟುಮಾಡುತ್ತಾ ಆಶ್ಚರ್ಯವೇನೆಂಬುದನ್ನು ಕೇಳು ಎಂದು ಹೀಗೆ ನುಡಿದನು. ॥೬೦॥

ಈಶ್ವರಭಕ್ತರ ಗುಂಪಿನ ಈ ವಾರ್ತೆಗಳನ್ನು ಕೇಳು. ಇದು ಕಿವಿಗಳಿಗೆ ಬಹು ಇಂಪಾಗಿರುವುದು. ಇದರ ಶ್ರವಣಮಾತ್ರದಿಂದಲೇ ಶಿವನ ಭಕ್ತಿಯು ಅಃ ಯಾಗುತ್ತದೆ. ॥೬೧॥

ಶಾಂಭವಾನಾಮಯಂ ಸಂಘಃ ಸುಧಾರಾಶಿರಿವಾಧುನಾ ।
ದೃಷ್ಟೋಽಸ್ಯಾನಂದಪೀಯೂಷಮಯೂಖಾನ್ ಜನಯತ್ಯಹೋ॥೬೨॥

ಕ್ಷಣಮಪ್ಯಾಯುಷೋ ನಾಸ್ಯ ವೈಯರ್ಥ್ಯಂ ಶಿವಪೂಜಯಾ ।
ಆಯುಃ ಕ್ಷೀಣಮಭೂದಸ್ಯ ಪ್ರತಿಕ್ಷಣಶಿವಾರ್ಚನಾತ್ ॥೬೩॥

ಸುಧಾಧಾರಾಭಿಷೇಕೇಣ ಶಿವಪೂಜಾ ಪ್ರತಿಕ್ಷಣಂ ।
ತಯಾ ಕ್ಷಣಸಹಸ್ರಾಂಶೋಽಪ್ಯಸ್ಯ ನಾಭೂದ್ವೃಥಾ ಯಮಃ ॥೬೪॥

ತೇನ ಪುಣ್ಯೇನ ಮಹತಾ ನೃತ್ಯಂತಿ ಪ್ರಹಸಂತಿ ಚ ।
ಲಿಂಗಪೂಜಾಂ ಚ ಕುರ್ವಂತಿ ಪುನಃ ಪುನರಿಹಾಂತಕ ॥೬೫॥

ಏತತ್ಸಂಘಾಶ್ರಯಾಣಾಂ ತು ಧನಾನಿ ವಿವಿಧಾನ್ಯಪಿ ।
ಜಾತಾನಿ ಶಿವಪೂಜಾರ್ಥಂ ತೇನ ಗಾಯಂತಿ ಕೋಟಿಶಃ ॥೬೬॥

ಈಶ್ವರಭಕ್ತರ ಗುಂಪು ಅಮೃತರಾಶಿಯಂತೆ, ನೋಡುತ್ತಿರುವಾಗಲೇ ತನ್ನ ತೇಜಸ್ಸನ್ನು ಬೀರಿ ಆನಂದಾಶ್ರುಗಳನ್ನು ಉಂಟುಮಾಡಿಸುತ್ತದೆ. ||೬೨||

ಈಶ್ವರ ಸೇವಕನ ಆಯುಸ್ಸು ಒಂದು ಕ್ಷಣವಾದರೂ ವ್ಯರ್ಥವಾಗುವುದಿಲ್ಲ. ಏತಕ್ಕೆಂದರೆ ಈತನು ಸದಾ ಶಿವಪೂಜೆಯನ್ನು ಮಾಡುವನು. ಶಿವಪೂಜೆಮಾಡುವುದರಲ್ಲಿಯೇ ಕಳೆದ ಈತನ ಆಯುಸ್ಸು ಎಂದಿಗೂ ಕ್ಷೀಣವಾಗದು. ||೬೩||

ಈ ಮೂರ್ತಿಯಾದರೋ ಅಮೃತಧಾರೆಗಳಿಂದ ಅಭಿಷೇಕಮಾಡಿ ಪ್ರತಿಕ್ಷಣದಲ್ಲಿಯೂ ಶಿವಪೂಜೆಯನ್ನು ಮಾಡಿರುವುದು. ಅದರಿಂದ ಎಲೈ ಯಮನೇ, ಈತನ ಜೀವನದಲ್ಲಿ ಒಂದುಕ್ಷಣದ ಸಾವಿರದ ಒಂದಂಶವೂ ಸಹ ವ್ಯರ್ಥವಾಗಲಿಲ್ಲ. ||೬೪||

ಎಲೈ ಯಮನೇ, ಆ ಪೂಜೆಯಿಂದುಂಟಾದ ಮಹತ್ತಾದ ಪುಣ್ಯದಿಂದ ನಗುತ್ತಾರೆ. ನಾಟ್ಯಮಾಡುತ್ತಾರೆ. ಮತ್ತೆ ಮತ್ತೆ ಶಿವಲಿಂಗಪೂಜೆಯನ್ನು ಮಾಡಲು ತೊಡಗುತ್ತಾರೆ. ಅದರಿಂದ ಪುನಃ ಪುನಃ ಸಂತೋಷಸಾಗರದಲ್ಲಿ ಮುಳುಗುತ್ತಾರೆ. ||೬೫||

ಇವನು ಸಂಪಾದಿಸಿದ್ದ ವಿಧವಿಧವಾದ ಧನಗಳು ಶಿವಪೂಜೆಗೋಸ್ಕರವಾಗಿಯೇ ವ್ಯಯವಾಗಿರುತ್ತವೆ. ಆದ್ದರಿಂದಲೇ ಇವನನ್ನು ಅನೇಕರು ಅನೇಕ ರೀತಿಯಲ್ಲಿ ಹೊಗಳುತ್ತಿರುವರು. ||೬೬||

ಏತತ್ಸಂಘಸಮಾಶ್ರಯಾಮಿತಧನೈರಭ್ಯರ್ಚಿತಃ ಶಂಕರೋ
ನಿತ್ಯಂ ಚಂದನಬಿಲ್ವಪಲ್ಲವಲಸನ್ಮಂದಾರಕುಂದಾದಿಭಿಃ ।
ನೈವೇದ್ಯೈರಮಿತೈರನುಕ್ಷಣಮತೋ ನೃತ್ಯಂತಿ ಗಾಯಂತಿ ಚ
ತೇಷಾಮೇವ ಧನೈಃ ಶಿವಾರ್ಚನಮಭೂತ್ಪಂಚಾಮೃತೈಃ ಶೋಧಿತೈಃ ॥೬೭॥

ಶುದ್ಧೈಸ್ತೈಃ ಕಪಿಲಾಘೃತೈರಪಿ ಸದಾ ಧಾರಾಪಿ ಲಿಂಗೇ ಮುದಾ
ವಿಚ್ಛಿನ್ನಾನುಭವತ್ಯನಂತವಿಭವಾ ಸಾ ಮುಕ್ತಿಧಾರಾ ಪರಾ ।
ಗೋಕ್ಷೀರಾದಿಕಧಾರಯಾಪಿ ಗಿರಿಶಃ ಸಂತುಷ್ಟ ಏವಾನ್ವಹಂ
ರತ್ನಾಗಾರವಿಶೇಷನಿರ್ಮಿತಮಹಾಲಿಂಗಪ್ರಭಾಪೂರದ್ಯೈಃ
ತದ್ದ್ರವ್ಯೈರಮಿತೈಶ್ಶಿವಾರ್ಚನಫಲೈಃ ಸಾಂಗೈರಮೋಘೈರಪಿ ॥೬೮॥

ಈಶ್ವರಭಕ್ತರು ತಮ್ಮ ಅಪರಿಮಿತವಾದ ಧನಗಳಿಂದ ಪ್ರತಿನಿತ್ಯವೂ ಚಂದನ, ಬಿಲ್ವಪತ್ರೆಯ ಚಿಗುರು, ಮಂದಾರ, ಕೋಲುಮಲ್ಲಿಗೆ ಮೊದಲಾದ ಪುಷ್ಪಗಳನ್ನು ಸಂಪಾದಿಸಿ, ಅಪರಿಮಿತವಾದ ನೈವೇದ್ಯಗಳಿಂದ ಸರ್ವದಾ ಶಂಕರನನ್ನು ಅರ್ಚಿಸುತ್ತಾರೆ. ಅದರಿಂದ ಅವರು ಬಹು ಹರ್ಷಚಿತ್ತವುಳ್ಳವರಾಗಿರುವುದಲ್ಲದೆ, ಆ ಪೂಜೆಯಿಂದ ಒದಗಿದ ಧನಗಳಿಂದಲೂ, ಶುದ್ಧವಾದ ಪಂಚಾಮೃತಗಳಿಂದಲೂ ಪುನಃ ಪುನಃ ಹರ್ಷಗೊಳ್ಳುತ್ತಾರೆ. ॥೬೭॥

ಇವರು ಸಂತೋಷದಿಂದ ಯಾವಾಗಲೂ ಶುದ್ಧವಾಗಿರತಕ್ಕ ಮತ್ತು ಭಸ್ಮಯುಕ್ತವಾದ ನೀರಿನ ಧಾರೆಗಳಿಂದ ಅವಿಚ್ಛಿನ್ನವಾಗಿ ಲಿಂಗದಲ್ಲಿ ಅಭಿಷೇಕಮಾಡುತ್ತಾರೆ. ಇದರಿಂದ ಜಲಧಾರೆಯನ್ನು ಅಭಿಷೇಕಮಾಡುತ್ತಿದ್ದಂತೆ ಮುಕ್ತಿಯ ಧಾರೆಯೂ ಇವರಿಗೆ ಲಭಿಸುತ್ತದೆ. ಮತ್ತು ಇವರು ಶಿವನನ್ನು ಹಸುವಿನ ಹಾಲೇ ಮೊದಲಾದ ಅಭಿಷೇಕದ್ರವ್ಯಗಳ ಧಾರೆಯಿಂದಲೂ, ರತ್ನಖಚಿತವಾದ ಮನೆಯಲ್ಲಿ ವಿಶೇಷ ಪ್ರಯತ್ನದಿಂದ ನಿರ್ಮಿಸಿರತಕ್ಕ ಕಾಂತಿಯುಕ್ತಗಳಾದ ಪೂಜಾದ್ರವ್ಯಗಳಿಂದಲೂ ವಿಶೇಷವಾಗಿ ಶಿವಲಿಂಗವನ್ನು ಅರ್ಚಿಸುತ್ತಾರೆ. ಅದರಿಂದುಂಟಾಗತಕ್ಕ ಅಮೋಘವಾದ ಫಲಗಳಿಂದ, ಅಂತ್ಯದಲ್ಲಿ ವಿಶೇಷವಾಗಿ ಸಂತೋಷಗೊಳ್ಳುತ್ತಾರೆ. ॥೬೮॥

ತೇನೈತೇ ಶಿವಪೂಜನೋತ್ಸವರಸಾ ಸಾನಂದಧಾರಾವೃತಾಃ
ಕಲ್ಯಾಣಾಶ್ರಯಪೂಜನಾಯ ಸತತಂ ನೃತ್ಯಂತಿ ಗಾಯಂತಿ ಚ ।
ತತ್ಸಂಘಾಶ್ರಿತನಿತ್ಯಪೂಜನಫಲೈಸ್ತಾವತ್ಪ್ರನೃತ್ಯಂತ್ಯಹೋ
ಗಾಯಂತ್ಯೇವ ಹಸಂತಿ ಸಂತತಮಮೀ ಶ್ರೀರುದ್ರವೀಣಾಧರಾಃ ॥೬೯॥

ಶಂಭೋ ಶಂಕರ ಚಂದ್ರಶೇಖರ ಮಹಾದೇವೇತಿ ಸಪ್ತಸ್ವರ
ವ್ಯಾಪಾರಪ್ರಕರಪ್ರಚಾರನಖರವ್ಯಾಪಾರಸಾರಾದರೈಃ ।
ಸ್ವಪ್ನೇಪ್ಯಂಬುಜಬಿಲ್ವಪಲ್ಲವಜಲೈರಭ್ಯರ್ಚಯಂತೀ ಶಿವಂ
ನಿದ್ರಾಯಾಮಪಿ ಚಿತ್ರಮೇತದಪರಂ ನಿದ್ರಾಪಿ ತೇಷಾಂ ಕ್ಷಣಂ ॥೭೦॥

ಆಯುರ್ವೃದ್ಧಿಮುಪೈತಿ ಶಂಕರಪದಾಂಭೋಜಾರ್ಚನಾದನ್ವಹಂ
ತಸ್ಯ ಕ್ಷೀಣದಶಾ ಕದಾಪಿ ನ ಭವತ್ಯರ್ಧೇಂದುಮೌಳಿಸ್ಮೃತೇಃ ।
ತೇಷಾಂ ತಾವದಪಾರಶಂಕರಕಥಾಪೀಯೂಷಪಾನಾತ್ತಸುಃ
ಪೀನಾಪೀನತರಾಪಿ ತೇ ಮುಹುರುಮಾ ಕಾಂತಾಂಬಿಕಾನಾಯಕಂ ॥೭೧॥

ಇವರು ಶಿವಪೂಜೆಯಿಂದುಂಟಾದ ಸಂತೋಷದ ಮತ್ತು ಶಿವನಾಮಾಮೃತದ ಧಾರೆಗಳಿಂದ ಕೂಡಿದವರಾಗಿ, ಮತ್ತೆ ಮತ್ತೆ ಶಂಕರಪೂಜೆಮಾಡುವುದಕ್ಕಾಗಿ ನರ್ತನ ಮತ್ತು ಗಾನದಲ್ಲಿ ಮಗ್ನರಾಗುವರು. ಅಂತಹ ಭಕ್ತರು ತಾವು ಮಾಡಿದ ಪೂಜೆ ಯಿಂದುಂಟಾದ ಫಲಗಳಿಂದ ಯಾವಾಗಲೂ ನಗುತ್ತಲೂ ಮತ್ತು ರುದ್ರವೀಣಾ ಧ್ವನಿಯಿಂದ ಗಾನಮಾಡುತ್ತಲೂ ನರ್ತನಮಾಡುತ್ತಾರೆ. ॥೬೯॥

ಇವರು ರುದ್ರವೀಣೆಯಲ್ಲಿ ಶಂಭೋ, ಶಂಕರ, ಚಂದ್ರಶೇಖರ, ಮಹಾದೇವ, ಎಂಬುದಾಗಿ ತಮ್ಮ ಉಗುರುಗಳಿಂದ ಸಪ್ತಸ್ವರಗಳನ್ನು ಪ್ರಚಾರಪಡಿಸುತ್ತಾ ಗಾನ ಮಾಡುತ್ತಾರೆ. ಮತ್ತು ಇವರು ಸ್ವಪ್ನದಲ್ಲಿಯೂ ಸಹ ಕಮಲ, ಬಿಲ್ವಪತ್ರೆ, ನೀರು ಇವುಗಳಿಂದ ಶಿವಲಿಂಗವನ್ನು ಪೂಜಿಸುತ್ತಿರುವಂತೆ ಕಾಣುತ್ತಾರೆ. ಇವರಿಗೆ ನಿದ್ರೆ ಕೂಡ ಒಂದು ಕ್ಷಣಕಾಲ ಮಾತ್ರ. ಆಗಲೂ ಸಹ ಇದೇ ರೀತಿ ಶಿವಧ್ಯಾನಾಸಕ್ತ ರಾಗುತ್ತಾರೆ. ॥೭೦॥

ಪ್ರತಿನಿತ್ಯವೂ ಶಿವನ ಪಾದಕಮಲಗಳನ್ನು ಪೂಜಿಸುವುದರಿಂದಲೂ, ಅರ್ಧೇಂ ದುವನ್ನು ತಲೆಯಲ್ಲಿ ಧರಿಸಿರುವ ಚಂದ್ರಶೇಖರನ ಸ್ಮರಣೆಯಿಂದಲೂ, ಇವರ

ಸ್ಮೃತ್ವಾ ಚೇತಸಿ ಸಂತತಂ ಕಥನಮಪಿ ತ್ವಾಮೇವ ದೇವೋತ್ತಮಂ
ಮತ್ವಾ ಶಂಕರನಾಮಧೇಯಸುಸುಧಾಪಾನೈರ್ನಯಾಮೋ ದಿನಂ ।
ತೇಷಾಮಾಯುರಸುಕ್ಷಣಂ ಗಣಗಣೈರ್ವೇಶ್ಯಾಮುಖಾಲೋಕನೈಃ
ಮದ್ಯಸ್ತ್ರೀಪರಿಸೇವನೇನ ಚ ಗತಂ ಪಣ್ಯಾಂಗನಾಲಾಪನೈಃ ॥೭೨॥

ಕೇನಾಶು ವ್ಯಥಯಾ ನಯಂತಿ ದಿವಾಸಾಂಸ್ತೇ ನೇಚಕಾಕಾರತಾಂ
ಸಂಪ್ರಾಪ್ಯಾಽಪಿ ಮುಹುರ್ಮುಹುಃ ಶಿವಕಥಾಲಾಪೋಽಪಿ ತೈರ್ನ ಶ್ರುತಃ ।
ಹಾ ಹಂತಾಮಿತವಿತ್ತನಾಶನಕರವ್ಯಾಪಾರಭಾರಾದರೈಃ
ನೀತಂ ತದ್ದಿನಮಂಧಕಾರಿವಿಮುಖೈರ್ದುಃಖೋಪಕಾರಾದರೈಃ ॥೭೩॥

ಆಯುಸ್ಸು ಅಭಿವೃದ್ಧಿಯಾಗುತ್ತದೆ. ಯಾವಾಗಲೂ ಅದು ಕ್ಷಯಿಸುವುದಿಲ್ಲ. ಮತ್ತು ಅವರ ಶರೀರವು ಅಪಾರವಾದ ಶಿವಕಥಾಮೃತದ ಶ್ರವಣದಿಂದ ಕ್ಷೀಣವಾಗುತ್ತದೆ. ಅಂತಹವರು, ॥೭೧॥

ಮನಸ್ಸಿನಲ್ಲಿ ಉಮಾಕಾಂತನಾದ ಶಿವನನ್ನು ನೀನೇ ದೇವಶ್ರೇಷ್ಠನೆಂದು ಹೊಗಳುತ್ತಾ ಬಹು ಶ್ರಮದಿಂದಲಾದರೂ ನಹ ಶಿವನಾಮಾಮೃತಪಾನದಲ್ಲಿ ನಿರತರಾಗುವರು. ಪಾಪಿಗಳಾದ ಕೆಲವರ ಆಯುಸ್ಸು, ಪ್ರತಿಕ್ಷಣದಲ್ಲಿಯೂ ಧಾನ್ಯ ಸಮೂಹದ ಯೋಚನೆಯಿಂದಲೂ, ವೇಶ್ಯಾಮುಖಸಂದರ್ಶನದಿಂದಲೂ, ಮದ್ಯಪಾಯಿನಿಯರಾದ ಸ್ತ್ರೀಜನರ ನಹವಾಸದಿಂದಲೂ ಮತ್ತು ಪಣ್ಯಸ್ತ್ರೀಯರೊಡನೆ ಆಲಾಪನೆಮಾಡುವುದರಿಂದಲೂ ನಾಶವಾಗುತ್ತದೆ. ॥೭೨॥

ಅವರು ತಮ್ಮ ದಿನಗಳನ್ನು ಕೇವಲ ವ್ಯಥೆಯಿಂದಲೇ ಕಳೆಯುತ್ತಾರೆ. ಎಷ್ಟೇ ಸುಂದರವಾಗಿದ್ದರೂ ಅವರಲ್ಲಿ ಶಿವವರ್ಚಸ್ಸಿಲ್ಲದುದರಿಂದ ಕಪ್ಪಾಗುತ್ತಾರೆ. ಆದರೂ ಸಹ ಅವರು ಶಿವಕಥಾಲಾಪಗಳನ್ನು ಕೇಳುವುದಿಲ್ಲ. ಮತ್ತೆ ಅವರು ಅಪರಿಮಿತವಾಗಿ ಹಣವನ್ನು ನಾಶಪಡಿಸತಕ್ಕಂತಹ ವ್ಯಾಪಾರಗಳಲ್ಲಿಯೂ ಮತ್ತು ಶಿವನಿಗೆ ತೃಪ್ತಿಕರವಲ್ಲದ ಕಾರ್ಯಗಳಲ್ಲಿಯೂ, ಮನೋದುಃಖವನ್ನುಂಟುಮಾಡುವ ಉದ್ಯಮಗಳಲ್ಲಿಯೂ, ನಿರತರಾಗಿ ಆದರದಿಂದ ತಮ್ಮ ದಿನಗಳನ್ನು ಕಳೆಯುತ್ತಾರೆ. ॥೭೩॥

ಆರಾಧ್ಯಃ ಶಿವ ಇತ್ಯಪಾರವಿಭವೋ ನೈವಾನುಭೂತೋ ಭವೋ
ಭಾವ್ಯೈಃ ಸಾಕಮಭೂಷಣಂ ಚ ಕೃತಮಿತ್ಯಜ್ಞಃ ಪರಂ ಕ್ಲಿಶ್ಯತಿ ।
ಅಜ್ಞಾನಾದ್ಗಿರಿಶಾರ್ಚನಂ ಚ ನ ಕೃತಂ ಲಿಂಗಂ ಚ ನಾಲೋಕಿತಂ
ಲಿಂಗಾಗಾರಮಹೋತ್ಸವೋಽಪಿ ನ ಕೃತೋ ದೃಷ್ಟಾ ನ ದೀಪಾವಲೀ ॥೨೪॥

ಲಿಂಗಾಗಾರವಿನಿರ್ಮಿತಾ ವಿಧಿವಶಾದ್ಧೂಪಪ್ರಧೂಮಾವಲೀ
ದೃಷ್ಟಾ ನೇತ್ಯತಿಚಿಂತಯಾ ಪರಮಯಂ ಸದ್ಯಃ ಸ್ವಯಂ ಕ್ಲಿಶ್ಯತಿ ।
ನಾನಾಪಾಪವಿನಾಶಿನೀ ಶಿವಕಥಾ ನಾಕರ್ಣಿತಾ ನ ಶ್ರುತಂ
ನಾಮಾಪಿ ಸ್ಮರವೈರಿಣಃ ಸಕರುಣಶ್ರೀಶೂಲಪಾಣೇಃ ಕ್ಷಣಂ ॥೨೫॥

ನೈವಾಂತಃಕರಣಾಂಬುಜೇ ಸ್ಮೃತ ಇತಿ ವ್ಯರ್ಥಂ ವಯೋ ನಿರ್ಗತಂ
ಹಾ ಹಾ ಹಂತವೃಥಾವಯೋಗತಮಿತಿ ವ್ಯರ್ಥಂ ರುದಂತ್ಯಸ್ತ್ವತೇ ।
ಆಯುರ್ವ್ಯರ್ಥಮಿದಂ ಗತಂ ಶಿವಪದಂ ನ ಧ್ಯಾತಮೇವಾದರಾತ್
ಲಿಂಗೇ ಬಿಲ್ವದಲಂ ಪ್ರಸೂನಮಮಲಂ ಗಂಗಾಜಲಂ ವಾ ಮುದಾ ॥೨೬॥

---

ಶಿವನೇ ಆರಾಧ್ಯನು; ಮತ್ತು ಶಿವನು ಅಪಾರವಾದ ಸಂಪತ್ತುಳ್ಳವನು ಎಂಬುದಾಗಿ ನನಗೆ ಅನುಭವ ಬರಲಿಲ್ಲ. ಶಿವನನ್ನು ಸಕಲ ಸಾಮಗ್ರಿಗಳೊಡನೆ ಭೂಷಿಸಲಿಲ್ಲ. ಅಜ್ಞಾನದಿಂದ ಶಿವಾರ್ಚನೆಯನ್ನು ನಡೆಸಲಿಲ್ಲ. ಲಿಂಗದರ್ಶನವನ್ನು ಮಾಡಲಿಲ್ಲ. ಲಿಂಗಾಶ್ರಯವಾದ ದೇವಸ್ಥಾನದ ಉತ್ಸವವನ್ನೂ ನೆರವೇರಿಸಲಿಲ್ಲ. ದೇವರಮುಂದೆ ದೀವಿಗೆಗಳನ್ನು ಹೊತ್ತಿಸಿ, ಆ ದೀಪಾವಲಿಯನ್ನು ನೋಡಲಿಲ್ಲ. ಹೀಗೆಂದು ಅಜ್ಞರು ದುಃಖಾನುಭವಕಾಲದಲ್ಲಿ ನೊಂದುಕೊಳ್ಳುತ್ತಾರೆ. ॥೨೪॥

ಮತ್ತು ದುರದೃಷ್ಟದಿಂದ ನಾನು ಶಿವಾಲಯವನ್ನು ನಿರ್ಮಿಸಲಿಲ್ಲ. ಅಲ್ಲಿ ಧೂಪದ ಹೊಗೆಯನ್ನೂ ಹಾಕಲಿಲ್ಲ. ಮತ್ತು ನಾನಾವಿಧವಾದ ಪಾಪಗಳನ್ನು ನಾಶ ಮಾಡತಕ್ಕ ಶಿವಕಥೆಯನ್ನು ಕೇಳಲಿಲ್ಲ. ಸ್ಮರವೈರಿಯೂ, ಕರುಣಾಮಯನೂ, ಶೂಲಪಾಣಿಯೂ ಆದ ಶಿವನ ಹೆಸರನ್ನು ಒಂದು ಕ್ಷಣವಾದರೂ ಕೇಳಲಿಲ್ಲವೆಂದು ನೊಂದುಕೊಳ್ಳುತ್ತಾರೆ. ॥೨೫॥

ನಾನು ಮನಸ್ಸಿನಲ್ಲಿ ಶಿವನನ್ನು ಸ್ಮರಿಸಲಿಲ್ಲ. ಅದರಿಂದ ನನ್ನ ವಯಸ್ಸು ವ್ಯರ್ಥವಾಯಿತು. ಶಿವನ ಚರಣಕಮಲಗಳನ್ನು ನಾನು ಆದರದಿಂದ ಧ್ಯಾನಿಸಲಿಲ್ಲ.

ನ ಕ್ಷಿಪ್ತಂ ನ ಚ ವೀಕ್ಷಿತಂ ಚ ನಗರಂ ವಿಶ್ವೇಶ್ವರಸ್ಯಾದರಾತ್
ಇತ್ಥಂ ತೇ ಪ್ರಲಪಂತಿ ಹಂತ ಬತ ತೇ ತೇ ತೇಪಿ ತೇ ತೇಪಿತೇ ।
ಶ್ರೀವಿಶ್ವೇಶ್ವರಲಿಂಗಮುತ್ತಮತಮಂ ಶ್ರೀಚಂದನೇನಾನಘೈಃ
ಪುಷ್ಪೈರ್ಬಿಲ್ವದಲೈಶ್ಚ ನಾರ್ಚಿತಮಹೋ ಕ್ಷೀಣಂ ವಯಃ ಸರ್ವಥಾ ॥೭೭॥

ಹಾ ಹಂತಾಮಿತಪಾತಕಾರ್ಜನರತಂ ಚಿತ್ತಂ ವಯೋ ನಿರ್ಗತಂ
ಕಿಂ ಕರ್ತವ್ಯಮಿತಿ ಪ್ರತಿಕ್ಷಣಮಮೀ ದುಃಖಾತುರಾಃ ಕಾತರಾಃ ।
ಶ್ರೀವಿಶ್ವೇಶ್ವರಪೂಜನಂ ಚ ನ ಕೃತಂ ದ್ವಿತ್ರೈಃ ಪವಿತ್ರೈರ್ನವೈಃ
ಬಿಲ್ವೀಕೋಮಲಪಲ್ಲವೈರಭಿನವೈರ್ದೂರ್ವಾಂಕುರೈರ್ಭಸ್ಮನಾ ॥೭೮॥

ನೋ ದೃಷ್ಟಂ ವಿಕಲಾಪದಾಂಬುಜಯುಗಂ ನಾರಾಧಿತಂ ಚಂದನೈಃ
ಮಲ್ಲೀಮಾಲಿಕಯಾ ದುಕೂಲಕಲಿತೈರಿತ್ಯನ್ವಹಂ ದುಃಖಿತಾಃ ।
ನ ಸ್ನಾತಂ ಮಣಿಕರ್ಣಿಕಾಂಭಸಿ ನ ಚೈವೋದ್ಧೂಳಿತೇಯಂ ತನುಃ
ಭೂತ್ಯಾ ಫಾಲಮಪಿ ತ್ರಿಪುಂಡ್ರರಚನೈರ್ನಾಲಂಕೃತಂ ಭಸ್ಮನಾ ॥೭೯॥

---

ಮತ್ತು ಶಿವಲಿಂಗದಲ್ಲಿ ಸಂತೋಷದಿಂದ ಬಿಲ್ವದಳವನ್ನೇ ಆಗಲಿ ನಿರ್ಮಲವಾದ ಹೂವನ್ನೇ ಆಗಲಿ ಜಲಧಾರೆಯನ್ನಾಗಲಿ ಹಾಕಲಿಲ್ಲ. ॥೭೬॥

ವಿಶ್ವಾಸದಿಂದ ಶ್ರೀವಿಶ್ವೇಶ್ವರನ ನಗರವಾದ ವಾರಾಣಸಿಯನ್ನು ನೋಡಲಿಲ್ಲ. ಮತ್ತು ಸರ್ವಶ್ರೇಷ್ಠವಾದ ಲಿಂಗವನ್ನು ಮನೋಹರವಾದ ಚಂದನದಿಂದಲೂ, ಹೂಗಳಿಂದಲೂ, ಬಿಲ್ವದಳಗಳಿಂದಲೂ, ಅರ್ಚಿಸಲಿಲ್ಲ ಅದರಿಂದ ವ್ಯರ್ಥವಾಗಿ ನನ್ನ ವಯಸ್ಸೆಲ್ಲಾ ಹಾಳಾಯಿತಲ್ಲಾ ಎಂದು ಗೋಳಿಡುವರು. ॥೭೭॥

ಅಯ್ಯೋ, ನನ್ನ ಮನಸ್ಸು ಅಪರಿಮಿತವಾದ ಪಾತಕಗಳನ್ನು ಸಂಪಾದಿಸುವುದರಲ್ಲಿಯೂ, ಮತ್ತು ನನ್ನ ವಯಸ್ಸು ಪ್ರತಿಕ್ಷಣದಲ್ಲಿಯೂ ಏನು ಮಾಡಬೇಕು ಎಂಬ ದುಃಖಾತುರತೆಯಿಂದಲೂ, ಕಳೆದುಹೋಯಿತು. ನೂತನವೂ, ಪರಿಶುದ್ಧವೂ ಆದ ಕೋಮಲವಾದ ಮೂರು-ನಾಲ್ಕು ಬಿಲ್ವದ ಚಿಗುರುಗಳಿಂದಾದರೂ, ದೂರ್ವಾಂಕುರಗಳಿಂದಾದರೂ, ಭಸ್ಮದಿಂದಾಗಲಿ ವಿಶ್ವೇಶ್ವರಾರ್ಚನೆಯನ್ನು ನೆರವೇರಿಸಲಿಲ್ಲ. ಎಂದು ಇವರು ಕಾತುರರಾಗಿರುತ್ತಾರೆ. ॥೭೮॥

ನಾನು ಪರಶಿವನ ಚರಣಕಮಲಯುಗಳವನ್ನು ನೋಡಲಿಲ್ಲ. ಚಂದನಗಳಿಂದಲೂ ಮಲ್ಲಿಗೆ ಹೂವಿನ ಮಾಲಿಕೆಯಿಂದಲೂ, ಪೂಜಿಸಲಿಲ್ಲ. ಮತ್ತು ಮಣಿ

ರುದ್ರಾಕ್ಷೈರ್ಚ ನ ವಿಭೂಷಿತಾ ತನುರಹೋ ವ್ಯರ್ಥಂ ಗತಂ ಜೀವನಂ
ಹಾ ಹಂತೇತಿ ಬತೇತಿ ದೈವಹತಮಿತ್ಯೇತೇ ರುದಂತಿ ಸ್ವತಃ ।
ವೀರೇಶಾಯ ನ ಕಲ್ಪಿತಾತಿರುಚಿರಾ ಸಾ ನೀರಧಾರಾ ಮುಹುಃ
ಶ್ರೀವೀರೇಶ್ವರಲಿಂಗಮುಸಕೃನ್ನಾಭ್ಯರ್ಚಿತಂ ಚಂದನೈಃ ॥೮೦॥

ಸಾಯಂ ನ ಪ್ರಣತಂ ಚ ನೇಕ್ಷಿತಮಹೋ ಭೂತೋಪವಾಸೈರ್ನಿಶಾ
ನೀತಾನೇತಿ ರುದಂತಿ ಹಂತ ಸತತಂ ತೇ ಕಾಲಭೀತ್ಯಾ ತವ ।
ಕಾಶ್ಯಾಮೇವ ನ ಕಾಲಭೈರವದಿನೇ ಕಾಲಾಷ್ಟಮೀನಾಮಕೇ
ಕೃತ್ವಾ ಜಾಗರಣಂ ಮುಹುರ್ಮುಹುರಯಂ ದೃಷ್ಟೋ ಮಯಾ ಭೈರವಃ ॥೮೧॥

ಕಾಲೇಶೋಽಪಿ ನ ವೀಕ್ಷಿತೋ ಮುಹುರಹೋ ಹಾ ಹಂತ ಹಂತೇತ್ಯಮೀ ।
ದುಃಖೇನೈವ ನಯಂತ್ಯನುಕ್ಷಣಮಹೋ ತೇ ಕಾಲ ಭೀತ್ಯಾ ತವ ॥೮೨॥

ಕರ್ಣಿಕಾ ತೀರ್ಥದ ನೀರಿನಲ್ಲಿ ಸ್ನಾನಮಾಡಲಿಲ್ಲ. ವಿಭೂತಿಯಿಂದ ಈ ಶರೀರವನ್ನು ಉದ್ಧೂಲನಮಾಡಿಕೊಳ್ಳಲಿಲ್ಲ. ಹಣೆಯನ್ನು ತ್ರಿಪುಂಡ್ರರಚನೆಯಿಂದಲೂ ಮತ್ತು ಭಸ್ಮದಿಂದಲೂ ಅಲಂಕರಿಸಲಿಲ್ಲಾ ಎಂಬುದಾಗಿ ದಿನವೂ ದುಃಖಗೊಳ್ಳುತ್ತಾರೆ.॥೭೯॥

ಈ ಶರೀರವನ್ನು ರುದ್ರಾಕ್ಷಿಗಳಿಂದ ಅಲಂಕರಿಸಲಿಲ್ಲಾ, ಅಯ್ಯೋ-ಜೀವನವೇ ವ್ಯರ್ಥವಾಯಿತು. ಅಯ್ಯೋ, ದೈವವು ನನ್ನನ್ನು ಹಾಳುಮಾಡಿತು. ಮತ್ತೆ ಮತ್ತೆ ಮನೋಹರವಾಗಿ ನೀರನ್ನು ಧಾರಾಕಾರವಾಗಿ ವೀರೇಶನಾದ ಶಿವತೃಪ್ತಿಗಾಗಿ ಕಲ್ಪಿಸಲಿಲ್ಲ. ಆ ದೊಡ್ಡದಾದ ಲಿಂಗವನ್ನು ಅನೇಕಾವರ್ತಿ ಚಂದನಾದಿಗಳಿಂದ ಪೂಜಿಸಲಿಲ್ಲ. ಎಂದು ತಾವಾಗಿಯೇ ಅಳುತ್ತಾರೆ. ॥೮೦॥

ಸಾಯಂಕಾಲದಲ್ಲಿ ಶಿವನನ್ನು ನಮಸ್ಕರಿಸಲಿಲ್ಲ. ಭೂತೋಪವಾಸಗಳಿಂದ ರಾತ್ರಿಯನ್ನು ಕಳೆಯಲಿಲ್ಲ. ಮತ್ತು ಕಾಶಿಯಲ್ಲಿ ಕಾಲಾಷ್ಟಮೀ ಎಂಬ ಹೆಸರುಳ್ಳ ಕಾಲಭೈರವನ ದಿನದಲ್ಲಿ ಜಾಗರಣೆಮಾಡಿ, ಆಗಾಗ ಭೈರವದರ್ಶನವನ್ನು ಮಾಡಲಿಲ್ಲ. ಆದರಿಂದ ಯಮನ ಭಯವು ನಮಗೆ ತಪ್ಪುವುದು ಹೇಗೆ? ಎಂದು ಸರ್ವದಾ ಅಳುವರು. ॥೮೧॥

ಕಾಲೇಶನನ್ನೂ ದರ್ಶನಮಾಡಲಿಲ್ಲ. ಅಯ್ಯೋ ಎಂಬುದಾಗಿ ಯಾವಾಗಲೂ ಅಳುತ್ತಾ, ತಿಳಿವಳಿಕೆ ಇಲ್ಲದವರು ಮೇಲ್ಕೆಹೇಳಿದಂತೆ ದುಃಖದಿಂದ ನಿನ್ನ ಭಯವನ್ನೇ

ಇತಿ ತದ್ವಚನಂ ಶ್ರುತ್ವಾ ಯಮೋ ವಿಸ್ಮಿತಮಾನಸಃ ।
ಶಿವಭಕ್ತಗಣಂ ದೃಷ್ಟ್ವಾ ಪೂಜಯಾಮಾಸ ಸಂಸ್ತುವನ್ ॥೮೩॥

ಧನ್ಯಂ ಕುಲಮಿದಂ ದೃಷ್ಟಂ ಶಿವಭಕ್ತ್ಯಾಯುತಂ ಮಯಾ ।
ಧನ್ಯಂ ಧನ್ಯಮಿದಂ ತಾವಜ್ಜೀವನಂ ನಯನಾಂಬುಜಂ ॥೮೪॥

ಏತದಾಲೋಕನೇನೈವ ವಿನೇಯಃ ಸಮಯೋ ಮಯಾ ।
ಅಪೂರ್ವೋಯಂ ಶಿವಗಣಃ ಶಿವನಾಮಮಹೋತ್ಸವಃ ॥೮೫॥

ಕಥಂ ಗಾಯಂತಿ ದಿವ್ಯಾನಿ ಶಿವನಾಮಾನಿ ಕೋಟಿಶಃ ।
ಆನಂದೋದ್ಬೋಧಕಾನ್ಯೇವ ಮುಹುರ್ಮುಹುರತಂದ್ರಿತಾಃ ॥೮೬॥

ಏತೇ ಧನ್ಯಾಃ ಪರಂ ಧನ್ಯಾಃ ಸರ್ವೇ ತದ್ವೀಕ್ಷಣಾದರಾಃ ।
ಧನ್ಯಸ್ತುರಂಗವಾತೋಽಪಿ ಮುಕ್ತಿಕಾಂತಾಸುಕರ್ಷಕಃ ॥೮೭॥

ನಿರೀಕ್ಷಿಸುತ್ತಾ ಪ್ರತಿಕ್ಷಣವನ್ನು ಕಳೆಯುತ್ತಿರುವರು. ಎಂಬುದಾಗಿ ಚಿತ್ರಗುಪ್ತನು ಯಮನಿಗೆ ಹೇಳಿದನು. ॥೮೨॥

ಈ ರೀತಿಯಾದ ಚಿತ್ರಗುಪ್ತನ ಮಾತನ್ನು ಕೇಳಿ ಯಮನು ವಿಸ್ಮಿತನಾಗಿ ಆ ಶಿವಭಕ್ತರ ಗುಂಪನ್ನು ಕಂಡು ಸ್ತೋತ್ರಮಾಡುತ್ತಾ ಪೂಜಿಸಿದನು. ॥೮೩॥

ಈ ಧನ್ಯವಾಗಿರತಕ್ಕ ಈಶ್ವರಭಕ್ತರ ಗುಂಪನ್ನು ಇಂದು ನಾನು ಕಂಡೆನು. ಅದರಿಂದ ನನ್ನ ಜೀವನವೂ ಮತ್ತು ಕಣ್ಣುಗಳೂ ಸಾರ್ಥಕತೆಯನ್ನು ಪಡೆದುವು. ॥೮೪॥

ಈ ರೀತಿ ಈ ಶಿವಗಣವು ಬಹು ಅಪೂರ್ವವಾದುದು. ಮತ್ತು ಶಿವನಾಮವು ಮಹದಾನಂದದಾಯಕವು. ಅಂತಹ ಶೈವಗಣವನ್ನು ನೋಡುತ್ತಲೇ ನಾನು ನನ್ನ ಸಮಯವನ್ನು ಕಳೆಯಬೇಕು. ॥೮೫॥

ಇವರು ಕೋಟ್ಯಂತರ ಸಕಲ ದಿವ್ಯವಾದ ಶಿವನಾಮವನ್ನು ಎಷ್ಟು ಗಂಭೀರವಾಗಿ ಗಾನಮಾಡುತ್ತಿರುವರು! ಅವು ಮತ್ತೆಮತ್ತೆ ತೊಂದರೆಯಿಲ್ಲದೆ ಹೇಗೆ ಆನಂದವನ್ನು ಹುಟ್ಟಿಸುತ್ತವೆ. ನೋಡು! ॥೮೬॥

ಇವರೆಲ್ಲರೂ ಶಿವದರ್ಶನದಲ್ಲಿಯೇ ಆಸಕ್ತರಾಗಿರುತ್ತಾರೆ. ಅದರಿಂದ ಇವರೇ ಬಹು ಧನ್ಯರು. ಮತ್ತು ಆ ಶಿವಭಕ್ತರ ಅಂಗಸ್ಪರ್ಶ ಮಾಡಿದ ವಾಯುವೂ ಕೂಡ ಧನ್ಯವಾದುದು. ಆ ವಾಯುವೂ ಮೋಕ್ಷದಾಯಕವಾಗುತ್ತದೆ. ॥೮೭॥

ಸಂಗೋಽಪಿ ತಾವತ್ಕರ್ತವ್ಯಸ್ತಾವದಂತ್ಯೈಃ ಸಹಾನ್ವಹಂ ।
ಏತತ್ಸಂಗಾನುಷಂಗೋಽಪಿ ಭುಕ್ತಿಮುಕ್ತಿಪ್ರದೋ ಭವೇತ್ ॥೮೮॥

ಧನ್ಯಂ ಧನ್ಯಮಿದಂ ಶರೀರಮಧುನಾ ಧನ್ಯಾಂಗಸಂಗಾದಯಂ
ಧನ್ಯಃ ಶಾಂಕರಸಂಗ ಇತ್ಯವಗತೋ ಬ್ರಹ್ಮಾದಿದೇವಸ್ತುತಃ ।
ಅಸ್ಮಾಕಂ ಗಿರಿಜಾಮನೋಹರಪದಾಂಭೋಜಾರ್ಚನೇ ಜಾಯತೇ
ಬುದ್ಧಿಃ ಸಿದ್ಧಿಕರೋತ್ತಮೋತ್ತಮತಮಾ ಮುಕ್ತಿಪ್ರದಾನೋದ್ಯತಾ ॥೮೯॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಯಮ ಚಿತ್ರಗುಪ್ತಸಂವಾದೇ ಆಯುರ್ಮೂರ್ತಿ ಶಿವಭಕ್ತ್ಯುತ್ಕರ್ಷ
ವರ್ಣನಂ ನಾಮ ಅಷ್ಟಮೋಽಧ್ಯಾಯಃ

ಅಂತಹ ಭಕ್ತರೊಡನೆ ನಿತ್ಯವೂ ವಾಸಮಾಡಬೇಕು. ಇವರ ಸಹವಾಸವು ಭುಕ್ತಿ (ಐಹಿಕ ಸೌಖ್ಯ) ಮುಕ್ತಿ, (ಆಮುಷ್ಮಿಕ ಸುಖ) ಇವುಗಳನ್ನು ಉಂಟುಮಾಡುವುದಲ್ಲವೆ! ॥೮೮॥

ಈಗ ಹರ ಭಕ್ತರಾದ ಪೂಜ್ಯರೊಡನೆ ಸಂಗವು ಲಭಿಸಿದುದರಿಂದ ನಮ್ಮ ಈ ಶರೀರವು ಮತ್ತು ಪವಿತ್ರವಾಯಿತು. ಮತ್ತು ಈಶ್ವರ ಭಕ್ತರೊಡನೆ ಸಹವಾಸವೂ ಮುಕ್ತಿ ಪ್ರದವಾದುದು ಎಂಬುದಾಗಿ ಬ್ರಹ್ಮಾದಿ ದೇವತೆಗಳೂ ಸಹ ಶಿವನನ್ನು ಸ್ತೋತ್ರ ಮಾಡುತ್ತಾರೆ. ಅಂತಹ ಪಾರ್ವತಿಯ ಮನೋಲ್ಲಾಸಕನಾದ ಶಿವನ ಚರಣ ಕಮಲಗಳನ್ನು ಪೂಜಿಸುವುದೇ ಸಿದ್ಧಿಯನ್ನುಂಟುಮಾಡುವುದೂ, ಮುಕ್ತಿಯನ್ನು ಕೊಡುವುದೂ ಆಗಿದೆ. ಎಂದು ಚಿತ್ರಗುಪ್ತನು ಯಮನಿಗೆ ಹೇಳಿದನೆಂದು ಯಾಜ್ಞ್ಯವಲ್ಕ್ಯನು ಜನಕಮಹಾರಾಜನಿಗೆ ತಿಳಿಸಿದನು. ॥೮೯॥

ಎಂಬಲ್ಲಿಗೆ "ಹರ" ಎಂಬ ಹೆಸರುಳ್ಳ ಮೂರನೇ ಅಂಶದ ಶಿವರಹಸ್ಯ ಉತ್ತರಾರ್ಧದಲ್ಲಿ
ಯಮ, ಚಿತ್ರಗುಪ್ತ ಇವರ ಸಂವಾದರೂಪವಾಗಿ ಆಯುರ್ಮೂರ್ತಿ, ಮತ್ತು ಶಿವಭಕ್ತಿ
ಇವುಗಳ ಉತ್ಕರ್ಷವರ್ಣನೆ ಎಂಬ ಎಂಟನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ನವಮೋಽಧ್ಯಾಯಃ



|| ಯಾಜ್ಞವಲ್ಕ್ಯ ಉವಾಚ ||

ಏತಸ್ಮಿನ್ನಂತರೇ ಕಾಲೇ ವಿಮಾನವರಸಂಶ್ರಿತಾಃ ।
ದೇವಾಃ ಸಮಾಗತಾಸ್ತತ್ರ ಕೌತುಕಂ ದ್ರಷ್ಟುಮುದ್ಯತಾಃ ||೧||

ತೇ ತತ್ರ ಶಿವಭಕ್ತಾನಾಮಾಯುರ್ಮೂರ್ತಿವಿಲೋಕನೈಃ ।
ಪ್ರಹೃಷ್ಟಾಃ ಪ್ರಸ್ಥಿತಾಸ್ತೇಽಪಿ ಕೃತಾಂಜಲಿಪುಟಾಃ ಸುರಾಃ ||೨||

ತತಃ ಪ್ರಹರ್ಷಮತುಲಂ ಪ್ರಾಪ್ತಾಸ್ತತ್ತದ್ವಿಲೋಕನಾತ್ ।
ಧನ್ಯಮಾಯುರಿದಂ ತೇಷಾಂ ಕ್ಷೀಣಂ ಶಂಕರಪೂಜಯಾ ||೩||

### ಒಂಬತ್ತನೆಯ ಅಧ್ಯಾಯ

ಅಷ್ಟರಲ್ಲಿಯೇ ದಿವ್ಯವಿಮಾನಾರೂಢರಾಗಿ ದೇವತೆಗಳೆಲ್ಲರೂ ಅಲ್ಲಿಗೆ ಈ ಕೌತುಕವನ್ನು ನೋಡಲು ಬಂದರು. ||೧||

ಮತ್ತು ಅವರು ಪರಮೇಶ್ವರಭಕ್ತರ ಆಯುರ್ಮೂರ್ತಿಯನ್ನು ಕಂಡು ಬಹು ಸಂತೋಷದಿಂದ ಕೈಮುಗಿದು ನಿಂತರು. ||೨||

ಅವರ ಸಂತೋಷಕ್ಕೆ ಪಾರವೇ ಇರಲಿಲ್ಲ. ಈಶ್ವರಭಕ್ತರ ಆಯುಸ್ಸು ಶಂಕರ ಪೂಜೆಯಿಂದಲೇ ಕ್ಷೀಣವಾಗಿ ಧನ್ಯವೆನಿಸಿದೆ. ಎಂದು ಹೊಗಳಿದರು. ||೩||

ಏತದ್ಭಾಗ್ಯಸ್ಯ ನಾಂತೋಽಸ್ತಿ ಕೃತಕೃತ್ಯಮಿದಂ ಖಲು ।
ಸುಮೇರುಸ್ವರ್ಣದಾನೇಽಪಿ ಕ್ಷಣಾರ್ಧಾರ್ಧಾಯುರಪ್ಯಹೋ ॥೪॥

ದುರ್ಲಭಂ ತದ್ಗತಂ ಭೂಯೋ ನಾಯಾತ್ಯೇವ ಗತಂಗತಂ ।
ಶಿವಾರ್ಚನೇನ ವಿಲಯೇ ತತ್ತಾವತ್ಸಫಲಂ ಖಲು ॥೫॥

ಆಯುಃ ಸಂಪಾದಿತಂ ಪೂರ್ವಂ ಶಿವಪೂಜನಸಾಧನಂ ।
ಶಿವಾರ್ಚನೋಪಯುಕ್ತಂ ಚ ಸಫಲಂ ನಾತ್ರ ಸಂಶಯಃ ॥೬॥

ತದೇವಾಯುಸ್ತಾವತ್ಸಫಲಮಮಲಂ ಪುಣ್ಯನಿಲಯಂ ।
ತದೇವಾಯುರ್ವಂದ್ಯಂ ಕ್ಷಣಮಪಿ ಯದೇವಾದರಪರೈಃ ।
ಮುಹುರ್ಲಿಂಗಂ ತುಂಗಂ ಪ್ರಣಮತಿ ಪುನಃ ಪಶ್ಯತಿ ಪುನಃ
ಸ್ಪೃಶತ್ಯಾಲಿಂಗ್ಯಾಂಗೈರಭಿನವಜಲೈಃ ಸಿಂಚತಿ ಮುದಾ ॥೭॥

ಮತ್ತು ಈ ಆಯುಸ್ಸಿನ ಭಾಗ್ಯಕ್ಕೆ ಕೊನೆಯೇ ಇಲ್ಲ. ಇದು ಕೃತಕೃತ್ಯ ವಾದುದು. ಮೇರುಪರ್ವತದಷ್ಟು ಚಿನ್ನವನ್ನು ದಾನಮಾಡಿದರೂ, ದಾನಕಾಲದ ಅರ್ಧಕ್ಷಣದ ಆಯುಸ್ಸೂ ಕೂಡ ಸಫಲವೆನಿಸಲಾರದು. ॥೪॥

ದುರ್ಲಭವಾದ ವಸ್ತುವು ಕಳೆದುಹೋದರೆ ಹೋದಂತೆಯೇ ಸರಿ. ಮತ್ತೆ ಬರಲಾರದು. ಆದರೆ ಆ ಆಯುಸ್ಸು ಶಿವಾರ್ಚನೆಯಿಂದ ಕಳೆದುಹೋಗುವುದಾದರೆ ಆಗ ಅದು ಸಫಲವೆನಿಸುವುದಲ್ಲವೆ ? ॥೫॥

ಮೊದಲು ಸಂಪಾದಿಸಿದ ಆಯುಸ್ಸು ಶಿವಪೂಜೆಗೆ ಸಾಧನವಾದುದಾಗಿ ಶಿವಾರ್ಚನೆಯಲ್ಲಿ ಉಪಯೋಗವಾಗುವುದಾದರೆ ಅದು ಸಫಲವಾಗುವುದರಲ್ಲಿ ಸಂಶಯ ವಿಲ್ಲ. ॥೬॥

ಯಾವ ಆಯುಸ್ಸು ಪರಿಶುದ್ಧವಾದ ಪುಣ್ಯಸಾಧನೆಗೆ ಕಾರಣವಾಗುವುದೋ, ಯಾವ ಜೀವಿತಕಾಲವು ಶಿವಲಿಂಗಾರಾಧನೆಯಲ್ಲಿ ಕಳೆದುಹೋಗುವುದೋ, ಯಾರು ತಮ್ಮ ಆಯುಸ್ಸನ್ನು ಶಿವಲಿಂಗಸ್ಪರ್ಶನ, ದರ್ಶನ, ಅಭಿಷೇಕಾದಿಗಳಿಂದ ಕಳೆಯು ವರೋ, ಅಂತಹ ಆಯುಸ್ಸೇ ಧನ್ಯವಾದುದು. ಮಾನ್ಯವಾದುದು. ಅದೇ ಸಾರ್ಥಕ ವಾದುದು. ॥೭॥

ಯದೇವಾಯುಃ ಪುಣ್ಯೈರಮಿತವಿಭವೈರಾರ್ಜಿತಮಭೂ
ತ್ತದಾಯುಃ ಕ್ಷೀಣಂ ಚೇದ್ಗಿರಿಶಭಜನೇನ ಕ್ಷಣಮಪಿ ।
ತದಾ ಧನ್ಯಂ ಮನ್ಯೇ ತದಿತಿ ನ ತತೋಽಪ್ಯನ್ಯದಧಿಕಂ
ಯತೋ ವಂದ್ಯಂ ವೇದೈರಪಿ ಸುರಗಣೈರ್ವಾ ಮುನಿಗಣೈಃ ॥೮॥

ಅಪಾರಾಯುಃ ಪ್ರಾಪ್ಯ ಪ್ರಮಥಪತಿಲಿಂಗಾರ್ಚನರತಂ
ಮನಃ ಕೃತ್ವಾ ಕೃತ್ವಾ ಶಿವಭಜನಮೇವ ಪ್ರತಿಲವಂ ।
ಮುಹುರ್ಬಿಲ್ವೈರ್ನೀರೈ ರತಿರುಚಿತಕರ್ಪೂರರಚಿತೈಃ
ವಯೋ ನೇಯಂ ಲಿಂಗಸ್ನಪನವಿಧಿನಾ ಕೇವಲಮಿದಂ ॥೯॥

ಲಸದ್ಬಿಲ್ವೀಮಲ್ಲೀಕಮಲಕನಕಾರ್ಕಾದಿಕುಸುಮೈ
ರ್ಮುಹುಸ್ತುಂಗಂ ಲಿಂಗಂ ವಿಮಲಕಮಲಾಭ್ಯುಕ್ಷಿತಮಹಂ ।
ಪ್ರಪಶ್ಯಂಸ್ತತ್ಪೂಜಾರಚನಚತುರಂ ಶಂಕರಪದಂ
ಮುದಾ ಮಂದಂ ಮಂದಂ ಮಧುರನಿನದೈರೇವ ಕಲಯೇ ॥೧೦॥

ಯಾವ ಆಯುಸ್ಸು ಅಪರಿಮಿತವಾದ ದ್ರವ್ಯರಾಶಿಯನ್ನು ಸಂಪಾದಿಸಿ ಕ್ಷೀಣವಾಗುವುದೋ, ಅಂತಹ ಆಯುಸ್ಸು ಒಂದು ಕ್ಷಣವಾದರೂ ಶಿವಭಜನೆಯಿಂದ ಕಳೆಯುವುದಾದರೆ ಆಗ ಅದು ಧನ್ಯವೆನಿಸುವುದು. ಇದನ್ನೇ ವೇದಗಳೂ, ದೇವಾದಿ ದೇವತೆಗಳೂ, ಋಷಿವರ್ಯರೂ ಸಹ ಘೋಷಿಸುತ್ತಿರುವರು. ಆದುದರಿಂದ ಇದಕ್ಕಿಂತಲೂ ಉತ್ಕೃಷ್ಟವಾದ ಪದಾರ್ಥವು ಮತ್ತೊಂದಿಲ್ಲ. ||೮||

ಮನುಷ್ಯನು ಅಧಿಕವಾದ ಆಯುಸ್ಸನ್ನು ಸಂಪಾದಿಸಿ ಅದನ್ನು ಪ್ರತಿ ಕ್ಷಣದಲ್ಲಿಯೂ, ಪ್ರಮಥಗಣಗಳಿಗೆ ಅಧಿಪತಿಯಾದ ಶಿವನ ಅರ್ಚನೆಯಲ್ಲಿ ವಿನಿಯೋಗ ಮಾಡುತ್ತಾ, ಬಾರಿಬಾರಿಗೂ, ಬಿಲ್ವದಲಗಳಿಂದ, ಪೂಜೆಮಾಡುವುದು, ಮತ್ತು ಮನೋಹರವಾದ ಪಚ್ಚಕರ್ಪೂರ ಯುಕ್ತವಾದ ನೀರಿನಿಂದ ಅಭಿಷೇಕ ಮಾಡುವುದು, ಇವುಗಳಿಂದ ಮಾತ್ರವೇ ತನ್ನ ವಯಸ್ಸನ್ನು ಕಳೆಯಬೇಕು. ಇಂತಹ ಆಯುಸ್ಸೇ ಶ್ರೇಷ್ಠತಮವೆನಿಸುವುದು. ||೯||

ಚೊಕ್ಕಟವಾಗಿರತಕ್ಕ ಬಿಲ್ವ, ಮಲ್ಲಿಗೆ, ಕಮಲ, ಚಿನ್ನದಂತಿರತಕ್ಕ ಅರ್ಕಪುಷ್ಪ, ಈ ಹೂಗಳಿಂದ ಅಲಂಕೃತವಾಗಿ ನಿರ್ಮಲವಾದ ನೀರಿನಿಂದ ಅಭಿಷೇಕ ಮಾಡಲ್ಪಟ್ಟ ಉತ್ತಮವಾದ ಲಿಂಗರೂಪವಾಗಿರುವ ಶಿವನನ್ನು ಬಾರಿಬಾರಿಗೂ

ಮಹದ್ಭಾಗ್ಯಂ ಯೋಗ್ಯಂ ಯದಿ ಗಿರಿಶಪೂಜೋಪಕರಣಂ
ತದೇವಾಯುಸ್ತಾವದ್ಯದಿ ಗಿರಿಶಸೇವೋಪಕರಣಂ ।
ತದನ್ಯತ್ತದ್ವ್ಯರ್ಥಂ ವ್ಯಥಯತಿ ಕಥಂ ವಾ ನ ವಿತಥಂ
ಮನಸ್ತಸ್ಮಾತ್ತಸ್ಮಾತ್ಸ್ಮರಹರಪದಂ ನಸ್ಮರತಿ ಮೇ ॥೧೧॥

ಸ್ಮರಾರೇ ಪಾಪಾರೇ ಹರ ಹರ ಯಮಾರೇ ಕರುಣಯಾ ।
ಮಹಾಸಂಸಾರಾರೇ ಸ್ಮರಹರ ಮನೋ ಮೇ ನಿಜಪದಂ ।
ಯಥಾ ನೇದಂ ವ್ಯರ್ಥಂ ಕಥಮಪಿ ಕಥಂ ವಾ ಕಥಯ ಮೇ
ತಥಾ ಗೌರೀನಾಥಪ್ರಮಥಗಣನಾಥಾತಿಶಪಥೈಃ ॥೧೨॥

ತ್ವದೀಯಂ ಮತ್ವಾ ಮಾಮಯಮತಿಶಿಶುಃ ಶೋಕಕಲಿತಃ
ಶನೈಃ ಶಾಂತಿಂ ಯಾತು ಶ್ರಮಜನಕಸಂಸಾರನಿರತಃ ।
ಭವತ್ವಿತ್ಯುತ್ಸಾಹಾದುಪದಿಶ ಮಹೇಶ ತ್ರಿದಶತಾ
ಪ್ಯಪಾಸ್ಯಾ ಕಸ್ಯಾಸ್ಯಾಂ ರತಿರಪಿ ಶಿವೇತಿ ಪ್ರಲಪತಃ ॥೧೩॥

ನೋಡುತ್ತಾ, ಶಿವಪೂಜಾಸಕ್ತನಾಗಿರುವವನೇ ಧನ್ಯನು. ನಾನೂ ಸಹ ಅದೇ ವಿಧವಾದ ಭಾವನೆಯಿಂದ ಪರಶಿವನನ್ನು ಸ್ಮರಿಸುತ್ತೇನೆ. ॥೧೦॥

ಈಶ್ವರ ಪೂಜೆಗೆ ಸಾಧಕವಾದ ವಸ್ತುವೇ ಧನ್ಯವೆನಿಸುವುದು. ಹಾಗೆಯೇ ಶಿವಸೇವಾನಿರತವಾದ ಆಯುಸ್ಸೇ ಸಾರ್ಥಕವಾಗುವುದು. ಶಿವಪೂಜೋಪಕರಣವಲ್ಲದ ವಸ್ತುವಿನಂತೆ, ಶಿವಪೂಜಕವಲ್ಲದ ಆಯುಸ್ಸು ವ್ಯರ್ಥವಾಗುವುದು. ನನ್ನ ಮನಸ್ಸು ಇಂತಹ ಈಶ್ವರ ಸ್ಮರಣೆಯಲ್ಲಿ ಸದಾ ಆಸಕ್ತವಾಗಿಲ್ಲವಲ್ಲಾ ಎಂದು ಯೋಚನೆಯಾಗಿದೆ. ॥೧೧॥

ಎಲೈ— ಮನ್ಮಥಾರಿಯೇ, ಪಾಪನಾಶಕನೇ, ಯಮಭಂಜಕನೇ, ನೀನು ಮಂಗಳಾಪತಿಯಲ್ಲವೇ ! ಕರುಣಾಳುವೆನಿಸಿರುವೆ. ಈ ನನ್ನ ಮನಸ್ಸು ವ್ಯರ್ಥವಾಗಿ ಮಹಾಸಂಸಾರದಲ್ಲಿ ಹೇಗೂ ಪ್ರವರ್ತಿಸದಂತೆಯೂ, ಸದಾ ನಿನ್ನ ಪಾದಸೇವೆಯಲ್ಲಿ ತೊಡಗಿರುವಂತೆಯೂ, ಅತಿ ತೀಕ್ಷ್ಣಗಳಾದ ಶಪಥಗಳೊಡನೆ ಪ್ರತಿಜ್ಞೆಮಾಡುವಂತೆ ಬುದ್ಧಿಯನ್ನು ದಯಪಾಲಿಸು. ॥೧೨॥

ನನ್ನನ್ನು ನಿನ್ನವನ್ನಾಗಿ ತಿಳಿದು "ಇವನು ಕೇವಲ ಶಿಶುವಾಗಿ ಶೋಕ ಮೋಹಿತನಾಗಿರುವನು. ಈತನು ಶಾಂತಿಯನ್ನು ಹೊಂದಲಿ, ಶ್ರಮದಾಯಕವಾದ

ಕದಾ ತುಂಗಂ ಲಿಂಗಂ ಕನಕಕುಸುಮಾಭ್ಯರ್ಚಿತಮಿದಂ
ಮುಹುರ್ದೃಷ್ಟ್ವಾ ತತ್ತ್ವಂ ಶಿವ ಶಿವ ಮಹೇಶಾಮರಪತೇ ।
ಮಹೇಶೇತಿ ಸ್ವಾಮಿನ್ನಿತಿ ಸತತಮೇವಾನುವದತೋ
ಭವತ್ವಾಯುಃ ಕ್ಷೀಣಂ ಶಿವ ಶಿವ ಶಿವಾವಲ್ಲಭ ವಿಭೋ ॥೧೪॥

ಮಹಾಸಂಸಾರೇ ಕಿಮಪಿ ನ ತವಾಶಕ್ಯಮಿತಿ ಮೇ
ಮನೋ ನೂನಂ ನೂನಂ ತ್ರಿನಯನಭವತ್ಪಾದಭಜನೇ ।
ಪ್ರವೃತ್ತಂ ಸಂಸಾರವ್ಯಸನಭವಭಂಗಾಯ ಭಗವನ್
ಅಯಂ ನೇಯಃ ಕಾಲಃ ಕಥಮಪಿ ಶಿವಾರಾಧನಧನೈಃ ॥೧೫॥

ಮಹದ್ಭಾಗ್ಯಂ ರತ್ನಾನ್ಯಮಿತಧನಧಾನ್ಯಾದಿಕಮಪಿ
ಪ್ರಭಾವೋಽಪ್ಯೇತನ್ಮೇ ಶಿವಶಿವಶಿವಾರಾಧನಮಿತಿ ।

---

ಸಂಸಾರದಲ್ಲಿ ಅನಾಸಕ್ತನಾಗಲಿ" ಎಂಬ ಕರುಣೆಯಿಂದ ನನಗೆ ದಿವ್ಯಮಾರ್ಗವನ್ನು ಪದೇಶಿಸು. ಶಿವನಾಮೋಚ್ಚಾರಣೆಮಾಡಿ ಶಿವಪ್ರೀತಿಯನ್ನು ಸಂಪಾದಿಸುವವನಿಗೆ ದೇವತೆಗಳ ಪದವಿಯಲ್ಲಿಯೂ ಆಸೆಯಿರಲಾರದು. ಆ ರೀತಿ ನನ್ನಲ್ಲಿ ಅನುಗ್ರಹ ವಿಡು. ॥೧೩॥

ಎಲೈ ಪಾರ್ವತೀವಲ್ಲಭನಾಗಿಯೂ, ದೇವತೆಗಳಿಗೆ ಪೂಜ್ಯನಾಗಿಯೂ ಇರುವ ಪರಶಿವನೇ, ಉತ್ತಮವಾಗಿಯೂ, ಚಿನ್ನದಂತಿರುವ ಕುಸುಮಗಳಿಂದ ಪೂಜಿಸಲ್ಪಟ್ಟುದಾಗಿಯೂ ಇರುವ ಶಿವಲಿಂಗವನ್ನು ಬಾರಿಬಾರಿಗೂ ನೋಡಿ, ಶಿವ, ಶಿವ ಎಂದು ನಮಸ್ಕರಿಸುತ್ತಲೂ ಮತ್ತು ಮಹೇಶ, ಸ್ವಾಮಿನ್, ಎಂಬುದಾಗಿ ಹೇಳುತ್ತಲೂ ನನ್ನ ಆಯುಸ್ಸು ಕ್ಷೀಣವಾಗಲಿ. ಹಾಗೆ ವರಕೊಡು. ॥೧೪॥

ಭಗವಂತನಾದ ಈಶ್ವರನೇ—ಈ ಮಹಾಸಂಸಾರದಲ್ಲಿ ನಿನಗೆ ಅಶಕ್ಯವಾದುದು ಯಾವುದೂ ಇಲ್ಲವೆಂದು ತಿಳಿದು ನನ್ನ ಮನಸ್ಸು ಸಂಸಾರವೆಂಬ ವ್ಯಸನದಿಂದ ಪಾರಾಗಲು ತವಕಪಡುತ್ತಿದೆ. ನಿನ್ನ ಪಾದಭಜನೆಯಲ್ಲಿ ಆಸಕ್ತವಾಗಿ ಶಿವಾರಾಧನವೆಂಬ ಧನದಿಂದ ತ್ರಿಲೋಚನನಾದ ಈಶ್ವರನ ಭಜನೆಯಲ್ಲಿ ಪ್ರವರ್ತಿಸಲಿ. ಅದರಿಂದ ನನ್ನ ಆಯುಸ್ಸೆಲ್ಲಾ ಕಳೆದುಹೋಗಲಿ. ॥೧೫॥

ಎಲೈ ಶಿವನೇ, ಈಶ್ವರನ ಅರ್ಚನೆಯೇ ನನ್ನ ಪಾಲಿಗೆ ಒಂದು ದೊಡ್ಡ ಭಾಗ್ಯವಾಗಿಯೂ, ರತ್ನಗಳಾಗಿಯೂ, ಧನ ಧಾನ್ಯಾದಿಗಳಾಗಿಯೂ ಆಗಲಿ. ಬಿಲ್ವಪತ್ರೆ

ಪ್ರಬೋಧೋಪ್ಯತ್ರೋಽಯಂ ಪ್ರಬಲಮಹಿಮಾಯಂ ಭವತು ಮೇ
ವನೇ ಬಿಲ್ವವ್ಯಾಪ್ತೇ ಶಿವಶಿವಶಿವೇತಿ ಪ್ರಜಪತಃ ॥೧೬॥

ಇತ್ಯುಕ್ತ್ವಾ ತೇ ಸುರಾಃ ಸರ್ವೇ ತೈಃ ಸರ್ವೈಃ ಸಹ ಸತ್ವರಂ
ವಿಮಾನಾನಿ ಸಮಾರುಹ್ಯ ಸ್ವರ್ಗಮಾರ್ಗಂ ಯಯುರ್ಮುದಾ ॥೧೭॥

ಪಶ್ಚಾತ್ಪಾಪಸ್ವರೂಪಾಣಾಮಸ್ಯಾಯುರ್ಮೂರ್ತಯಃ ಶನೈಃ ।
ಮತ್ರೈರ್ಯಮಭಟೈರ್ನೀತಾಃ ಕುಂಭೀಪಾಕಾಲಯಂ ಪ್ರತಿ ॥೧೮॥

ತಸ್ಮಾತ್ಪ್ರತಿಕ್ಷಣಂ ಪೂಜಾ ಶಂಕರಸ್ಯ ಯಥಾ ತಥಾ ।
ಯತ್ನಃ ಕಾರ್ಯೋ ಧೀಮತಾ ತು ಬಂಧಃ ಸ್ಯಾದನ್ಯಥಾ ಖಲು ॥೧೯॥

ವರಮೇವಾತ್ಮಹನನಂ ಸುರಾಪಾನಂ ವರಂ ವರಂ ।
ನ ವರಂ ಶ್ರೀಮಹಾದೇವಧ್ಯಾನಹೀನಂ ವಯಃ ಪ್ರಿಯಂ ॥೨೦॥

ಗಳಿಂದ ವ್ಯಾಪ್ತವಾಗಿರತಕ್ಕ ಕಾಡಿನಲ್ಲಿ ಶಿವ, ಶಿವ ಎಂದು ಜಪಮಾಡುವಂತಹ ಪ್ರಬಲವಾದ ಪ್ರವೃತ್ತಿಯೂ ಕೂಡ ಒಂದು ದಿವ್ಯಜ್ಞಾನವೇ ಅಲ್ಲವೇ! ||೧೬||

ಈ ರೀತಿಯಾಗಿ ಹೇಳಿ ದೇವತೆಗಳು ಜಾಗ್ರತೆಯಾಗಿ ವಿಮಾನಗಳನ್ನು ಹತ್ತಿ ಸಂತೋಷದಿಂದ ಸ್ವರ್ಗದ ದಾರಿಯಲ್ಲಿ ಪ್ರಯಾಣ ಬೆಳೆಸಿದರು. ||೧೭||

ಅನಂತರ ನಿಷ್ಕರುಣರಾದ ಆ ಯಮಭಟರು ಮೆಲ್ಲನೆ ಪಾಪಿಗಳ ಆಯು ಮೂರ್ತಿಗಳನ್ನು ಕುಂಭೀಪಾಕ ನರಕಕ್ಕೆ ತೆಗೆದುಕೊಂಡು ಹೋದರು. ||೧೮||

ಆದುದರಿಂದ ಬುದ್ಧಿವಂತನಾದವನು ಸಾಧ್ಯವಾದಮಟ್ಟಿಗೂ ಪ್ರತಿಕ್ಷಣದಲ್ಲಿಯೂ ಈಶ್ವರ ಪೂಜೆಗೆ ಪ್ರಯತ್ನವನ್ನು ಮಾಡಬೇಕು. ಹಾಗೆ ತಪ್ಪಿದಲ್ಲಿ ಸಂಸಾರದಿಂದ ಬಂಧಿತನಾಗುವನು. ||೧೯||

ಆತ್ಮಹತ್ಯ (ತನ್ನನ್ನು ತಾನೇ ಹನನ ಮಾಡಿಕೊಳ್ಳುವುದು) ಮತ್ತು ಸುರಾ ಪಾನ ಇವುಗಳೂ ಶ್ರೇಷ್ಠಗಳಾಗಬಹುದು. ಆದರೆ ಈಶ್ವರನ ಧ್ಯಾನ ಶೂನ್ಯವಾದ ವಯಸ್ಸು ಮಾತ್ರ ಯಾರಿಗೂ ಪ್ರೀತಿಪಾತ್ರವೆನಿಸದು. ಮತ್ತು ಉತ್ತಮವೆನಿಸುವು ದಿಲ್ಲ. ||೨೦||

ಗೋಮಾಂಸಭಕ್ಷಣಂ ವಾಪಿ ವರಮೇವ ದುರಾತ್ಮನಾಂ ।
ನ ವರಂ ಶ್ರೀಮಹಾದೇವಧ್ಯಾನಹೀನಂ ವಯಃ ಪ್ರಿಯಂ ॥೨೧॥

ಸ್ವರ್ಣಸ್ತೇಯಂ ವರಂ ಮನ್ಯೇ ವರಂ ಬ್ರಹ್ಮವಧಂ ತಥಾ ।
ನ ವರಂ ಶ್ರೀಮಹಾದೇವಧ್ಯಾನಹೀನಂವಯಃ ಪ್ರಿಯಂ ॥೨೨॥

ಗುರುದಾರಾಭಿಗಮನಂ ವರಂ ಮದ್ಯಪಸೇವನಂ ।
ನ ವರಂ ಶ್ರೀಮಹಾದೇವಧ್ಯಾನಹೀನಂವಯಃ ಪ್ರಿಯಂ ॥೨೩॥

ನಾನಾವಿಧಾನಾಂ ಪಾಪಾನಾಂ ಕರಣಂ ವಾ ವರಂ ಪರಂ ।
ನ ವರಂ ಶ್ರೀಮಹಾದೇವಧ್ಯಾನಹೀನಂವಯಃ ಪ್ರಿಯಂ ॥೨೪॥

ಅಹೋ ಪಾತಕಿನಃ ಸರ್ವೇ ಭವಿಷ್ಯಂತಿ ಕಲೌ ಯುಗೇ ।
ಸರ್ವಾರ್ಥದಾಯಕಂ ದೇವಂ ನ ಜಾನಂತಿ ವಿಶೇಷತಃ

ಅತಃ ಪ್ರಯಾಂತಿ ಸರ್ವೇಽಪಿ ನರಕಂ ನಾತ್ರ ಸಂಶಯಃ ।
ನ ವರಂ ಶ್ರೀಮಹಾದೇವಧ್ಯಾನಹೀನಂವಯಃ ಪ್ರಿಯಂ ॥೨೬॥

ದುರಾತ್ಮರಾದವರಿಗೆ ಹಸುವಿನ ಮಾಂಸ ಭಕ್ಷಣೆಯೂ ಸಹ ಶ್ರೇಷ್ಠವಾಗ ಬಹುದು. ಆದರೆ ಈಶ್ವರನ ಧ್ಯಾನ ಶೂನ್ಯವಾದ ವಯಸ್ಸು ಮಾತ್ರ ಶ್ರೇಷ್ಠವೆನಿಸ ಲಾರದು. ॥೨೧॥

ಈ ಈಶ್ವರನ ಧ್ಯಾನರಹಿತವಾದ ವಯಸ್ಸಿಗಿಂತಲೂ, ಚಿನ್ನದ ಕಳವು, ಬ್ರಹ್ಮಹತ್ಯ, ಗುರುಪತ್ನೀ ಗಮನ, ಮದ್ಯಪಾಯಿಯಾದವನ ಸೇವೆ ಇವು ಶ್ರೇಷ್ಠ ವೆನಿಸುವುವು. ॥೨೨-೨೩॥

ಮತ್ತು ಈಶ್ವರನ ಧ್ಯಾನ ಶೂನ್ಯವಾಗಿರುವುದಕ್ಕಿಂತಲೂ ನಾನಾ ವಿಧವಾದ ಪಾಪಾಚರಣೆಯಲ್ಲಿ ತೊಡಗುವುದೂ ನಹ ಒಂದು ವೇಳೆ ಯುಕ್ತವೆನಿಸೀತು. ॥೨೪॥

ಅಯ್ಯೋ-- ಈ ಕಲಿಯುಗದಲ್ಲಿ ಸಕಲ ಇಷ್ಟಾರ್ಥಗಳನ್ನು ಉಂಟುಮಾಡ ತಕ್ಕ ಈಶ್ವರ ಮಹಿಮೆಯನ್ನು ತಿಳಿಯದೆ ಸಮಸ್ತರೂ ಪಾಪಿಗಳಾಗುತ್ತಾರೆ. ॥೨೫॥

ಅದರಿಂದಲೇ ಸಮಸ್ತರಿಗೂ ನರಕ ಪ್ರಾಪ್ತಿಯುಂಟಾಗುವುದರಲ್ಲಿ ಸಂಶಯ ವಿಲ್ಲ. ಒಟ್ಟಿನಲ್ಲಿ ಶಿವಧ್ಯಾನರಹಿತವಾದ ವಯಸ್ಸು ಫನೂ ಪ್ರಯೋಜನವಿಲ್ಲ. ॥೨೬॥

ಉಮಾಸಹಾಯಪೂಜಾಯಾಮಾಲಸ್ಯಂ ಯಃ ಕರಿಷ್ಯತಿ ।
ಸ ಯಾತಿ ನರಕಂ ಘೋರಂ ಪುನರಾವೃತ್ತಿದುರ್ಲಭಂ ॥೨೭॥

ಉಮಾಸಹಾಯಭಜನಂ ಯೇ ಕುರ್ವಂತಿ ಪ್ರಯತ್ನತಃ ।
ತೇ ಯಾಂತಿ ಪರಮಂ ಸ್ಥಾನಂ ಕೈಲಾಸಂ ಶಂಕರಾಲಯಂ ॥೨೮॥

ಅನಾಯಾಸೇನ ಯಾಂತ್ಯೇತೇ ಶಿವಮಂದಿರಮಾಸ್ತಿಕಾಃ ।
ಶಿವಾಚಾರರತಾಃ ಸತ್ಯಂ ಸತ್ಯಂ ಸತ್ಯಂ ನ ಸಂಶಯಃ ॥೨೯॥

ಯಃ ಶಿವಾಚಾರನಿರತಃ ಸ ಧನ್ಯೋ ಧನ್ಯಕೃತ್ತಮಃ ।
ತದ್ದರ್ಶನೇನ ನಶ್ಯಂತಿ ಪಾತಕಾನಿ ಬಹೂನ್ಯಪಿ ॥೩೦॥

ಪುರಾ ಮಗಧದೇಶೇಷು ಕಶ್ಚಿದ್ರಾಜಾತಿಧಾರ್ಮಿಕಃ ।
ಸರ್ವಸೌಭಾಗ್ಯಸಂಪನ್ನಃ ಶಿವಪೂಜಾರತಃ ಸದಾ ॥೩೧॥

---

ಯಾವ ಮನುಷ್ಯನು ಪಾರ್ವತೀ ಸಮೇತನಾದ ಈಶ್ವರನ ಪೂಜೆಯಲ್ಲಿ ಅಲಸನಾಗುತ್ತಾನೆಯೋ, ಅಂತಹವನು ಮತ್ತೆ ಸದ್ಗತಿಯನ್ನು ಹೊಂದಲಾರದಂತಹ ಘೋರವಾದ ನರಕಕ್ಕೆ ಹೋಗುತ್ತಾನೆ. ॥೨೭॥

ಯಾರು ಯತ್ನದಿಂದ ಈಶ್ವರನನ್ನು ಭಜಿಸುವರೋ ಅಂತಹವರು ಈಶ್ವರನ ಗೃಹವೂ ಮತ್ತು ಉತ್ಕೃಷ್ಟವಾದ ಸ್ಥಾನವೂ ಆಗಿರತಕ್ಕ ಕೈಲಾಸಕ್ಕೆ ಹೋಗುತ್ತಾರೆ. ॥೨೮॥

ಈಶ್ವರನ ಸೇವೆಯಲ್ಲಿ ತತ್ಪರರಾದ ಶಿವಧರ್ಮಾನುಯಾಯಿಗಳಿಗೆ ಈಶ್ವರನ ಸ್ಥಾನವು (ಕೈಲಾಸವು) ಅನಾಯಾಸವಾಗಿಯೇ ಲಭಿಸುತ್ತದೆ ಎಂಬುದರಲ್ಲಿ ಸಂಶಯವಿಲ್ಲ. ॥೨೯॥

ಈಶ್ವರ ಸೇವಾಸಕ್ತನಾದ ಮನುಜನು ಬಹು ಧನ್ಯನೆನಿಸುವನು. ಅಂತಹವನ ದರ್ಶನದಿಂದ ಬಹು ಪಾಪಗಳೂ ನಾಶವಾಗುತ್ತವೆ. ॥೩೦॥

ಹಿಂದೆ ಮಗಧ ದೇಶದಲ್ಲಿ ಒಬ್ಬ ರಾಜನು ಬಹಳ ಧಾರ್ಮಿಕನಾಗಿಯೂ, ಸಕಲ ಸೌಭಾಗ್ಯಗಳಿಂದ ಕೂಡಿದವನಾಗಿಯೂ, ಯಾವಾಗಲೂ ಈಶ್ವರ ಪೂಜಾಸಕ್ತನಾಗಿಯೂ, ರಾಜ್ಯಭಾರ ಮಾಡುತ್ತಿದ್ದನು. ॥೩೧॥

ಶಿವನೈವೇದ್ಯಶೇಷೇಣ ಕುರ್ವನ್ ಜೀವನರಕ್ಷಣಂ ।
ಅನ್ಯದ್ಭಾಗ್ಯಂ ಮಹೇಶಾಯ ದತ್ತಮಿತ್ಯವಗಮ್ಯತೇ ॥೩೨॥

ತೇನ ಯತ್ಪೂಜನಂ ಪೂರ್ವಂ ಕೃತಮಾಸೀನ್ಮಹಾತ್ಮನಾ ।
ತೇನ ಪುಣ್ಯಪ್ರಭಾವೇನ ಭವೇತ್ಪ್ರಮಥಮಧ್ಯಗಃ ॥೩೩॥

ತಸ್ಯ ಭೂಪಸ್ಯ ನಿಲಯೇ ಶಿವಲಿಂಗಾನಿ ಕೋಟಿಶಃ ।
ರತ್ನಮಂದಿರನಿರ್ಮಾಣಂ ಶಂಕರಾರ್ಥಂ ಚಕಾರ ಸಃ ॥೩೪॥

ಯಾವತ್ತೇನಾರ್ಜಿತಂ ದ್ರವ್ಯಂ ತತ್ಸರ್ವಂ ಶಾರ್ವಮಿತ್ಯಪಿ ।
ಸ ಶರ್ವಾರಾಧನೇನೈವ ಸರ್ವಾಯುಃ ಕಲನೋದ್ಯತಃ ॥೩೫॥

ಕ್ಷಣಮಾತ್ರಂ ಚ ತಸ್ಯಾಯುರ್ನ ಶಿವಾರಾಧನಂ ವಿನಾ ।
ಶಿವಾರಾಧನಮಾತ್ರಂ ತು ತಸ್ಯ ವ್ರತಮನುತ್ತಮಂ ॥೩೬॥

---

ಆತನು ಈಶ್ವರನಿಗೆ ಸಮರ್ಪಿಸಿ ಉಳಿಯುವ ನೈವೇದ್ಯ ಭಾಗದಿಂದ ಜೀವವನ್ನು ರಕ್ಷಿಸಿಕೊಳ್ಳುತ್ತಲಿದ್ದನು. ಮತ್ತು ತನ್ನ ಇತರ ಐಶ್ವರ್ಯಗಳೆಲ್ಲವನ್ನೂ ಈಶ್ವರನಿಗೇ ಅರ್ಪಿಸಿರುವನಂತೆ ಭಾವಿಸಿದ್ದನು. ॥೩೨॥

ಮಹಾತ್ಮನಾದ ಆ ರಾಜನು ಹಾಗೆ ಮಾಡಿದ ಪೂಜೆಯ ಪುಣ್ಯ ವಿಶೇಷದಿಂದ ಪ್ರಮಥಗಣದಲ್ಲಿ ಒಬ್ಬನಾಗಿ ಗಣಿಸಲ್ಪಟ್ಟನು. ॥೩೩॥

ಆ ರಾಜನು ತನ್ನ ಮನೆಯಲ್ಲಿ ಕೋಟ್ಯಂತರ ಲಿಂಗಗಳನ್ನು ಪೂಜೆಗಾಗಿ ಇಟ್ಟುಕೊಂಡಿದ್ದನು. ಮತ್ತು ರತ್ನಗಳಿಂದ ಈಶ್ವರನಿಗೋಸ್ಕರ ಒಂದು ಮಂದಿರವನ್ನು ನಿರ್ಮಿಸಿದ್ದನು. ॥೩೪॥

ಮತ್ತು ತಾನು ಸಂಪಾದಿಸಿದ ದ್ರವ್ಯವನ್ನೆಲ್ಲಾ ಈಶ್ವರನದೆಂದು ತಿಳಿಯುತ್ತಾ, ಆತನು ತನ್ನ ಆಯುಸ್ಸನ್ನೆಲ್ಲ ಈಶ್ವರನ ಪೂಜೆಯಿಂದಲೇ ಕಳೆದನು. ॥೩೫॥

ಆತನ ಆಯುಸ್ಸಿನಲ್ಲಿ ಒಂದು ಕ್ಷಣಕಾಲವೂ ಕೂಡ ಶಿವಾರ್ಚನೆಯನ್ನು ದೂರಮಾಡಿರಲಿಲ್ಲ. ಈ ರೀತಿ ಶಿವಪೂಜೆ ಮಾತ್ರ ಮಾಡುವುದೇ ಆತನಿಗೆ ಒಂದು ಸರ್ವೋತ್ಕೃಷ್ಟವಾದ ವ್ರತವಾಗಿದ್ದಿತು. ॥೩೬॥

ಶಿವಾರಾಧನರೂಪೇಣ ವ್ರತೇನೈವ ಮುಹುರ್ಮುಹುಃ ।
ನಯತ್ಯಾಯುರ್ವಯಸ್ತಸ್ಯ ಶಿವಪೂಜನಸಾಧನಂ ॥೩೭॥

ತಸ್ಯ ತಾವತ್ಕೃತಾರ್ಥಸ್ಯ ಶಿವಪೂಜಾರುಚಿರ್ಯಥಾ ।
ತಥಾ ರುಚಿರ್ನ ದಾರೇಷು ಕುಮಾರೇಷು ಧನೇಷ್ವಪಿ ॥೩೮॥

ತಸ್ಯಾರ್ಜುನೇನ ತುಲ್ಯಾನಿ ಧನಾನಿ ವಿವಿಧಾನ್ಯಪಿ ।
ಸಪಾತ್ರೇಷು ಧನತ್ಯಾಗೇ ಯವಸಂ ಮನುತೇ ಧನಂ ॥೩೯॥

ತಸ್ಯ ಪುಣ್ಯಪ್ರಭಾವಸ್ಯ ಶಾಂಕರಸ್ಯ ಗೃಹಂ ಪರಂ ।
ದ್ರಷ್ಟುಮಭ್ಯಾಗತೋ ದೈವಾತ್ಕಶ್ಯಪೋ ಮುನಿಸತ್ತಮಃ ॥೪೦॥

ತಂ ದೃಷ್ಟ್ವಾ ಕಶ್ಯಪಂ ಹಾರಂ ಹಾರಕೋಟಿಸಮಾವೃತಂ ।
ಸಂತುಷ್ಟಃ ಪ್ರಣತೋ ಭಕ್ತ್ಯಾ ಕೃತಾರ್ಥೋಽಸ್ಮೀತಿ ಭೂಪತೇ॥೪೧॥

ಈಶ್ವರನ ಅರ್ಚನೆ ಎಂಬ ವ್ರತಾಚರಣೆಯಿಂದಲೇ ಆತನ ಆಯಸ್ಸು ಶಿವಾರ್ಚನೆಗೆ ಸಾಧಕವಾಗಿ ಕಳೆಯುತ್ತಿತ್ತು ಎಂದು ತಿಳಿಯುವುದು. ॥೩೭॥

ಆತನು ಈಶ್ವರ ಭಕ್ತನಾದುದರಿಂದ ಕೃತಾರ್ಥನಾಗಿದ್ದಾನೆ. ಆತನಿಗೆ ಈಶ್ವರನ ಪೂಜೆಯಲ್ಲಿರುವಂತೆ ಅಭಿರುಚಿಯು ತನ್ನ ಪತ್ನಿಯರಲ್ಲಿಯೇ ಆಗಲಿ ತನ್ನ ಕುಮಾರರಲ್ಲಿಯೇ ಆಗಲಿ ತನ್ನ ಐಶ್ವರ್ಯಗಳಲ್ಲಿಯೇ ಆಗಲಿ ಇರಲಿಲ್ಲ. ॥೩೮॥

ಅವನು ಐಶ್ವರ್ಯದಲ್ಲಿ ಕಾರ್ತವೀರ್ಯಾರ್ಜುನನಿಗೆ ಸಮಾನನೆನಿಸಿದ್ದನು. ಆದರೂ ಸತ್ಪಾತ್ರದಲ್ಲಿ ಧನತ್ಯಾಗಮಾಡುವುದನ್ನು, ತೃಣಕ್ಕೆ ಸಮಾನವೆಂದು ತಿಳಿಯುತ್ತಿದ್ದನು. ॥೩೯॥

ಒಂದುಸಾರಿ ಈಶ್ವರ ಭಕ್ತನಾದ ಈ ಪುಣ್ಯಾತ್ಮನ ಗೃಹವನ್ನು ನೋಡಲು ಅಕಸ್ಮಾತ್ತಾಗಿ ಋಷಿಶ್ರೇಷ್ಠರಾದ ಕಶ್ಯಪರು ಬಂದರು. ॥೪೦॥

ಒಡನೆಯೇ ರಾಜನು ಅನೇಕ ಶಾಂಭವರೊಡಗೂಡಿ ಬಂದ ಋಷಿಯನ್ನು ಕಂಡು ತಾನು ಧನ್ಯನಾದೆನೆಂದು ಭಾವಿಸುತ್ತಾ ಆ ಋಷಿಗೆ ಭಕ್ತಿಯಿಂದೆರಗಿದನು. ॥೪೧॥

ತತಃ ಪರಂ ಸ ರಾಜಾ ತು ಸರ್ವಾನ್ ಹಾರಾನುದಾರಧೀಃ ।
ಹಾರೋಪಚಾರೈಃ ಸಂತುಷ್ಟಾನ್ ಚಕಾರ ನೃಪಸತ್ತಮ ॥೪೨॥

ಹಾರೋಪಹಾರಾದರಹಾರಸಂಘಂ
ವಿಲೋಕ್ಯ ರಾಜಾ ವಿನಯಾನತಃ ಸನ್ ।
ಪಪ್ರಚ್ಛ ಭಕ್ತ್ಯಾ ಪರಮಂ ಸಹಾರಂ
ಧರ್ಮಂ ವಿಶೇಷೇಣ ಸಹಾರವೀರಃ ॥೪೩॥

॥ ಕಶ್ಯಪ ಉವಾಚ ॥

ಧರ್ಮೇಷು ಸರ್ವೇಷ್ವಪಿ ಹಾರರೂಪೋ
ಧರ್ಮಃ ಪರತ್ವೇನ ವಿನಿಶ್ಚಿತೋಽತಃ ।
ತಂ ಧರ್ಮಮಾಶ್ರಿತ್ಯ ಪರಂ ಪ್ರಯಾಂತಿ
ಹಾರಂ ಪದಂ ಹಾರವಿಶೇಷಸೇವ್ಯಂ ॥೪೪॥

ಹಾರಾ ಏವ ಭವಂತಿ ಹಾರಚರಣಾಂಭೋಜಾರ್ಚನಾರಾಧನ ।
ಧ್ಯಾನಾಂತಃಕರಣಾಃ ಕ್ಷಣಂ ಯದಿ ವಯಃ ಕ್ಷೀಣಂ ಶಿವಾರಾಧನೈಃ ।

ಆ ಸಂತೋಷ ಭರದಲ್ಲಿ ರಾಜನು ಉದಾರ ಬುದ್ಧಿಯುಳ್ಳವನಾಗಿ ಸಕಲರನ್ನೂ ಹಾರಾದ್ಯುಪಚಾರಗಳಿಂದ ಸಂತುಷ್ಟರನ್ನಾಗಿ ಮಾಡಿದನು. ॥೪೨॥

ಹಾಗೆ ರಾಜದತ್ತವಾದ ಉಪಹಾರಾದಿಗಳಿಂದ ಸಂತುಷ್ಟರಾದ ಆ ಶಂಕರ ಪೂಜಕರನ್ನು, ರಾಜನು ಅಂಜಲಿಬದ್ಧನಾಗಿ ಪ್ರಾರ್ಥಿಸುತ್ತಾ, ಉತ್ಕೃಷ್ಟವಾದ ಶಿವಧರ್ಮವನ್ನು ಉಪದೇಶಿಸುವಂತೆ ಕೇಳಿಕೊಂಡನು. ॥೪೩॥

ಆಗ ಕಶ್ಯಪರು ರಾಜನಿಗೆ ಹೀಗೆ ಧರ್ಮೋಪದೇಶ ಮಾಡಿದರು. "ಸಕಲ ಧರ್ಮಗಳಲ್ಲಿಯೂ ಈಶ್ವರನಿಗೆ ಭಕ್ತನಾಗುವುದೆಂಬ ಒಂದು ಧರ್ಮವು ಸರ್ವ ಶ್ರೇಷ್ಠವಾದುದೆಂದು ನಿಶ್ಚಿತವಾಗಿದೆ. ಅದರಿಂದ ಈ ಧರ್ಮವನ್ನು ಆಶ್ರಯಿಸಿದವರು ಈಶ್ವರನ ಸ್ಥಾನವನ್ನೇ ಪಡೆಯುತ್ತಾರೆ. ಆದರಿಂದಲೇ ಸರ್ವರೂ ವಿಶೇಷವಾಗಿ ಅದನ್ನೇ ಸೇವಿಸುತ್ತಾರೆ. ॥೪೪॥

ಈಶ್ವರನ ಚರಣ ಕಮಲಗಳನ್ನು ಅರ್ಚಿಸುವುದು, ಧ್ಯಾನಿಸುವುದು, ಈ ರೀತಿ ಅಂತಃಕರಣವುಳ್ಳವರು ತಮ್ಮ ವಯಸ್ಸನ್ನು. ಈಶ್ವರನ ಅರ್ಚನೆಯಿಂದಲೇ

**ಸಂಸಾರಸ್ಯ ಚ ದುಃಖನಾಶಕರಣಂ ಶ್ರೇಷ್ಠಂ ತದೇವಾದರಾತ್**
**ಪುಣ್ಯೈರಾರ್ಜಿತಮಿತ್ಯನ್ಯೈಮಿ ಪುನರಪ್ಯಾಯುಸ್ತದೇವೇಪ್ಸಿತಂ ॥೪೫॥**

**ಆಯುಸ್ತಾವದಶೇಷದೋಷಕರಣೋಪಾಯೋ ಹಿ ದುಷ್ಟಾತ್ಮನಾಂ**
**ಸ್ವಾಯುಃ ಪುಣ್ಯವತಾಂ ವಿಲಕ್ಷಣಮಭೂದಾಯುಃ ಶಿವಾರಾಧನೈಃ ।**
**ಕ್ಷೀಣಂ ಯಸ್ಯ ಭವಿಷ್ಯತಿ ಪ್ರತಿದಿನಂ ತಸ್ಮೈ ನಮೋಽಸ್ತ್ವಾಯುಷೇ**
**ತತ್ತಾವತ್ಖಲು ದುರ್ಲಭಂ ಭುವಿ ನೃಣಾಂ ತದ್ವಂದ್ಯಮೇವಾನ್ವಹಂ ॥೪೬॥**

**ಅಸ್ಮಾಕಂ ಗಿರಿಶಾರ್ಚನವ್ರತಮತಸ್ತೇನೈವ ನೇಯಂ ವಯಃ**
**ತಸ್ಮಾದಪ್ಯಧಿಕಂ ನ ಮೇ ವ್ರತಮಿತಿ ಜ್ಞಾತಂ ಮುಹುರ್ವೈದಿಕಂ ।**
**ತತ್ತಾವದ್ವ್ರತಮಿತ್ಯನ್ಯೈಮಿ ಬಹುಧಾ ತತ್ತುಲ್ಯಮನ್ಯದ್ವ್ರತಂ**
**ನಾಸ್ತೀತ್ಯೇವ ಮತಿರ್ಮಮಾಪಿ ವಿಧಿತೋ ಜಾತಾಮತಿಸ್ತಾದೃಶೀ ॥೪೭॥**

ಕಳೆಯುವುದಾದರೆ ಅವರು ಸಾಕ್ಷಾತ್ತಾಗಿ ಈಶ್ವರಸ್ವರೂಪರೇ ಆಗುವರು. ಶಿವನ ಅರ್ಚನೆ ಮತ್ತು ಧ್ಯಾನ ಇವುಗಳನ್ನು ಮಾಡುವುದೇ ಸಂಸಾರದ ದುಃಖ ನಾಶಕ್ಕೆ ಕಾರಣವಾಗುವುದು. ಇದು ಪುಣ್ಯವಿಶೇಷದಿಂದ ಲಭಿಸುವುದೇ ಹೊರತು ಅನ್ಯಥಾ ದೊರೆಯಲಾರದು. ||೪೫||

ಲೋಕದಲ್ಲಿ ದುರಾತ್ಮರಾದವರಿಗೆ ಆಯುಸ್ಸು ಅನೇಕ ಪಾಪಗಳ ಸಂಪಾದನೆಗೆ ಸಾಧಕವಾದುದು. ಆದರೆ ಪುಣ್ಯವಂತರಿಗೆ ಇದೇ ಆಯುಸ್ಸು ಈಶ್ವರಾರ್ಚನೆಮಾಡುವುದರಿಂದ ವಿಲಕ್ಷಣವಾದ ಪುಣ್ಯಸಂಪಾದನೆಗೆ ಸಾಧಕವಾಗುವುದು. ಯಾವ ಆಯುಸ್ಸು ಈಶ್ವರಾರ್ಚನೆಮಾಡುವುದರಿಂದಲೇ ಕಳೆಯುತ್ತದೆಯೋ ಅಂತಹ ಆಯುಸ್ಸು ಜನರಿಗೆ ದುರ್ಲಭ. ಆದ್ದರಿಂದಲೇ ಅದು ನಿತ್ಯವೂ ವಂದನೀಯವಾದುದು. ಅಂತಹ ಆಯುಸ್ಸಿಗೆ ನಮಸ್ಕಾರ. ||೪೬||

ನಮಗೆ ಈಶ್ವರಾರ್ಚನೆಯೆಂಬುದು ಒಂದು ವ್ರತವಾಗಿರುತ್ತದೆ. ಆದುದರಿಂದ ನಮ್ಮ ವಯಸ್ಸೆಲ್ಲಾ ಆ ವ್ರತಾಚರಣೆಯಿಂದಲೇ ಕಳೆಯಬೇಕು. ವೇದೋಕ್ತವಾಗಿ ಇದಕ್ಕಿಂತಲೂ ಉತ್ತಮವಾದ ವ್ರತವೇ ಆಗಲಿ ಇದಕ್ಕೆ ಸದೃಶವಾದ ಮತ್ತೊಂದು ವ್ರತವೇ ಆಗಲಿ ಇಲ್ಲವೇ ಇಲ್ಲವೆಂದು ನನಗೆ ತಿಳಿಯಬಂದಿರುತ್ತದೆ. ||೪೭||

ಸಂಸಾರವ್ರಣನಾಶನಾರ್ಥಮುಸಕೃದ್ದೃಷ್ಟಂ ಮಯಾಪ್ಯೌಷಧಂ
ವೇದಾಂತೇಷು ಭಿಷಕ್ತಮರ್ಚನಮಿತಿ ಬ್ರಹ್ಮಾದಿಕಾನಾಮಪಿ ।
ಅಸ್ಮಾಕಂ ಸುತರಾಮತಃ ಪರಮುಮಾಕಾಂತಾರ್ಚನಂ ಕೇವಲಂ
ಸಂಸಾರೋರುತರುಪ್ರಮೂಲಹುತಭುಗ್ವಿಶ್ವೇಶ್ವರಾರಾಧನಂ ॥೪೮॥

ಕಾಶೀವಾಸರತಂ ಮನೋಽಸ್ತು ಸತತಂ ವಿಶ್ವೇಶ್ವರಾರಾಧನೇ
ಡುಂಢೀಶಾರ್ಚನಪೂರ್ವಕಂ ಯದಿ ಮನಃ ಸ್ಯಾದನ್ನಪೂರ್ಣಾಲಯೇ ।
ದೃಷ್ಟ್ವಾ ತಾಂ ಗಿರಿರಾಜರಾಜತನಯಾಂ ವೀರೇಶ್ವರಾಲೋಕನೈಃ
ನೇಯಂ ಸ್ಯಾದಿದಮಾಯುರಿತ್ಯನುದಿನಂ ಚಿಂತಾಪರಂ ವರ್ಧತೇ ॥೪೯॥

ಅಸ್ಮದ್ಭಾಗ್ಯವಶೇನ ಶಂಕರಪುರೀ ಜಾತಾ ಶಿವಾರಾಧನಂ
ತಸ್ಯಾಂ ಚೇದಘಕೋಟಿಕೋಟಿವಿಲಯೇ ದೇಹವ್ಯಯೇ ಸತಿ ।
ತಸ್ಯಾಂ ಮುಕ್ತಿರುಮಾಸಹಾಯಚರಣೇ ದೃಷ್ಟೇ ಭವಿಷ್ಯತ್ಯಪಿ
ಪ್ರಾಣಸ್ಯೋತ್ಕ್ರಮಣೋತ್ತರಂ ಸ ಗಿರಿಶಃ ಪಂಚಾಕ್ಷರಂ ದಾಸ್ಯತಿ ॥೫೦॥

ಸಂಸಾರವೆಂಬ ವ್ರಣ (ಗಾಯ)ಕ್ಕೆ ನಾಶಕವಾದ ಒಂದು ಔಷಧಿಯನ್ನು ನಾನು ನೋಡಿದ್ದೇನೆ. ಅದು ಯಾವುದೆಂದರೆ, ವೇದಾಂತಿಗಳು ಬ್ರಹ್ಮನೇ ಮೊದಲಾದವರಿಗೂ ಕೂಡ ಈಶ್ವರಾರ್ಚನೆಯೇ ಮುಖ್ಯವೆಂದು ಹೇಳಿರುತ್ತಾರೆ. ಆದ್ದರಿಂದ ನಮಗೂ ಸಹ ಅದೇ ರೀತಿ ಸಂಸಾರದುಃಖವೆಂಬ ವೃಕ್ಷದ ಬುಡಕ್ಕೆ ಬೆಂಕಿಯಂತಿರುವ ಈಶ್ವರನ ಅರ್ಚನೆಯೇ ಔಷಧವು. ॥೪೮॥

ನನ್ನ ಮನಸ್ಸು ವಿಶ್ವೇಶ್ವರ (ಈಶ್ವರ)ನ ಆರಾಧನೆಯಲ್ಲಿಯೂ ಮತ್ತು ಕಾಶಿಯಲ್ಲಿ ವಾಸಮಾಡುವುದರಲ್ಲಿಯೂ, ಆಸಕ್ತವಾದುದಾಗಲಿ. ಅನ್ನಪೂರ್ಣಾಲಯದಲ್ಲಿ ಢುಂಢೀಶ್ವರಾರ್ಚನಪೂರ್ವಕವಾಗಿ ಕಾಲಕಳೆಯುವಂತಾಗಲಿ. ಈಶ್ವರ ಮತ್ತು ಪಾರ್ವತಿಯ ದರ್ಶನಮಾಡುವುದರಿಂದ ನಿತ್ಯವೂ ಆಯುಸ್ಸು ಕ್ಷೀಣವಾಗುತ್ತ ಬರಲಿ ಎಂಬ ಅಭಿಪ್ರಾಯವು ಹೆಚ್ಚುತ್ತಿದೆ. ॥೪೯॥

ಶಿವಾರಾಧನೆಯಿಂದ ಪಾಪರಾಶಿಯನ್ನು ಕಳೆದುಕೊಂಡು, ಸುಲಭವಾಗಿ ಮುಕ್ತಿಯನ್ನು ಸಂಪಾದಿಸಲು ಮುಖ್ಯಸಾಧನವಾದ ಈ ಕಾಶೀಕ್ಷೇತ್ರವು ನಮಗೆ ದೊರಕಿದುದು ನಮ್ಮ ಭಾಗ್ಯವೇ ಸರಿ. ಪ್ರಾಣವಿರುವ ಪರ್ಯಂತ ಶಿವಾರಾಧನೆಯಲ್ಲಿ

**ಮಂತ್ರಾಣಾಂ ಸ ಶಿರೋಮಣಿಃ ಶಿವಮನುಸ್ತತ್ರಾಪಿ ಪಂಚಾಕ್ಷರಃ**
**ತತ್ರಾಪ್ಯಕ್ಷರಯುಗ್ಮರೂಪಮಮೃತಂ ತದ್ದುರ್ಲಭಂ ಕೇವಲಂ ।**
**ಯಚ್ಛುದ್ಧಂ ಶಿವನಾಮಕಂ ಶಿವಕರಂ ತನ್ಮೋಕ್ಷದಾನೋದ್ಯತಂ**
**ತತ್ಸಾಮರ್ಥ್ಯಮಮೋಘಮೇವ ನ ಮಯಾ ಜ್ಞಾತಂ ಪರಂ ತತ್ತ್ವತಃ॥೫೧॥**

**ವೇದೈಃ ಕಿಂ ಶಿವನಾಮತುಲ್ಯಮಮೃತಂ ಕಿಂ ಚಾಮೃತಂ ತತ್ಪರಂ**
**ಸಂಸಾರೌಷಧಮಿತ್ಯವೈಮಿ ತದಿದಂ ಬ್ರಹ್ಮಾದಿಭಿಶ್ಚಿಂತಿತಂ ।**
**ತತ್ರಾವತ್ಸುಲಭೇನ ಮೋಕ್ಷಜನನೋಪಾಯಃ ಪ್ರಿಯಃ ಸರ್ವಥಾ**
**ಶ್ರೀಮೃತ್ಯುಂಜಯಪೂಜಕಸ್ಯ ಸುತರಾಂ ಮೃತ್ಯುಂಜಯಾಯಾಪಿ ತತ್॥೫೨॥**

ನಿರತರಾಗಿದ್ದರೆ, ಪ್ರಾಣೋತ್ಕ್ರಮಣಕಾಲದಲ್ಲಿ ಶಂಕರನು ಪಂಚಾಕ್ಷರೀ ಉಪದೇಶದಿಂದ ನಮಗೆ ಸಾಯುಜ್ಯವನ್ನು ಕೊಡುವನು. ||೫೦||

ಮಂತ್ರಗಳಿಗೆಲ್ಲಾ ಈಶ್ವರನ ಮಂತ್ರವು ಶಿರೋಭೂಷಣದಂತೆ ಕಾಣುತ್ತದೆ. ಆ ರೀತಿ ಶಿವಮಂತ್ರಗಳು ಅನೇಕವಿರಬಹುದು. ಅದರಲ್ಲಿಯೂ ಪಂಚಾಕ್ಷರಮಂತ್ರವು ಬಹು ಮುಖ್ಯವಾದುದು. ಇಷ್ಟೆಲ್ಲಕ್ಕಿಂತಲೂ ಎರಡೇ ಎರಡು ಅಕ್ಷರಗಳುಳ್ಳ "ಶಿವ" ಎಂಬ ನಾಮಾಮೃತವು ಬಹು ದುರ್ಲಭವಾದುದು. "ಶಿವ" ನಾಮವು ಪರಿಶುದ್ಧವಾಗಿಯೂ, ಸೌಖ್ಯದಾಯಕವಾಗಿಯೂ ಮತ್ತು ಮೋಕ್ಷದಾನಮಾಡುವುದರಲ್ಲಿ ಸಮರ್ಥವಾದುದಾಗಿಯೂ ಇದೆ. ಇದರ ಸಾಮರ್ಥ್ಯವು ಬಹುವಾದುದು. ಈ ಶಿವನಾಮವು ನಿಜವಾಗಿಯೂ ಇಷ್ಟು ಸಾಮರ್ಥ್ಯವುಳ್ಳದ್ದೆಂದು ನನಗೆ ತಿಳಿದಿರಲಿಲ್ಲ. ||೫೧||

ಶಿವನಾಮವು ಅಮೃತದಂತೆ ಇರುವುದು. ಇದರಷ್ಟು ಮಹಿಮೆಯುಳ್ಳದ್ದು ವೇದಗಳೂ ಅಲ್ಲ. ಇಂತಹ ಶಿವನಾಮವನ್ನು ಬ್ರಹ್ಮಾದಿಗಳೂ ಸಹ ಚಿಂತಿಸುತ್ತಾರೆ. ಆದುದರಿಂದ ಸಂಸಾರವೆಂಬ ವ್ಯಾಧಿಗೆ ಔಷಧಿಯು ಈ ಶಿವನಾಮವೇ ಆಗಿರುತ್ತದೆ. ಒಟ್ಟಿನಲ್ಲಿ ಸುಲಭವಾಗಿ ಮೋಕ್ಷವನ್ನು ಪಡೆಯಬೇಕಾದರೆ ಖಂಡಿತವಾಗಿಯೂ ಮೃತ್ಯುಂಜಯ (ಈಶ್ವರ)ನ ಅರ್ಚನೆ ವಿನಾ ಬೇರೆ ಉಪಾಯವಿಲ್ಲ. ಈ ಪೂಜೆಯು ಮೃತ್ಯುವನ್ನು ಜಯಿಸುವುದಕ್ಕೂ ಸಮರ್ಥವಾಗುವುದು. ||೫೨||

ಹೇಮೃತ್ಯುಂಜಯ ಹೇ ಮಹೇಶ್ವರ ಮಹಾದೇವೇತಿ ನಾಮಾದರಾತ್
ಆರಾದೇವ ಕುಮಾರದಾರಧರಿಣೀಧಾನ್ಯಾದಿವಾಂಛಾಪಿ ನ ।
ಸಂಸಾರಃ ಸುತರಾಂ ನ ವಾಂಛಿತ ಇತಿ ಸ್ತ್ರಾಯಃ ಶಿವಾರಾಧನೇ
ವಾಂಛಾ ಕಲ್ಪತರುಃ ಸ ಏವ ಸಕಲಾಭೀಷ್ಟಪ್ರದಾನೋದ್ಯತಃ ॥೫೩॥

ಯಾವತ್ಪುಷ್ಟಿರದೃಷ್ಟಕೋಟಿಘಟಿತಾ ದೇಹೇ ಭವೇದಕ್ಷಯಾ
ತಾವತ್ತದ್ಗಿರಿಶಾರ್ಚನಾರ್ಥಮಸಕೃದ್ಯತ್ನೋಽಪಿ ಕಾರ್ಯೋ ನರೈಃ ।
ಆಲಸ್ಯಂ ಪರಿಹಾಯ ತದ್ಯದಿ ಭವೇತ್ತತ್ತದ್ವಿಷಂ ಜಾಯತೇ
ತತ್ತಾವದ್ವಿಷಮಿತ್ಯವೈಮಿ ಬಹುಧಾ ತತ್ತ್ಯಜ್ಯಮೇವಾನ್ವಹಂ ॥೫೪॥

ಭಸ್ಮೋದ್ಧೂಲನಪೂರ್ವಕಂ ಪ್ರತಿದಿನಂ ರುದ್ರಾಕ್ಷಪೂತೋ ಮುದಾ
ಶ್ರೀಮೃತ್ಯುಂಜಯಪೂಜನಾಯ ಯತತೇ ಬಿಲ್ವಾದಿಭಿಃ ಸಾಧನೈಃ ।
ತದ್ಯತ್ನೈಃ ಖಲು ಪಾಪಸಂಘವಿಲಯಸ್ತಸ್ಮಿನ್ಕೃತೇ ತತ್ಕ್ಷಣಾತ್
ಜೀವನ್ಮುಕ್ತಿರತಃ ಪರಂ ಪ್ರತಿದಿನಂ ತತ್ಸಂತತಂ ವೈದಿಕಂ ॥೫೫॥

ಮೃತ್ಯುಂಜಯ, ಮಹೇಶ್ವರ, ಮಹಾದೇವ, ಎಂಬ ಈ ನಾಮಗಳನ್ನು ಬಿಟ್ಟು ಇನ್ನು ಕುಮಾರರು, ಪತ್ನಿ, ಭೂಮಿ, ಧಾನ್ಯ ಇತ್ಯಾದಿಗಳಲ್ಲಿ ಅಭಿಲಾಷೆ ಯಿಡುವುದು ಸರಿಯಲ್ಲ. ಸಂಸಾರದಲ್ಲಿಯೂ ಅನುರಾಗವಿಡುವುದು ತರವಲ್ಲ. ಆದರೆ ಈಶ್ವರನನ್ನು ಆರಾಧಿಸುವುದರಲ್ಲಿ ಮಾತ್ರ ಇಚ್ಛೆಯು ಉಂಟಾಗಲಿ. ಆ ಈಶ್ವರಾರಾಧನೇಚ್ಛೆಯೇ ಸಕಲ ಇಷ್ಟಾರ್ಥಗಳನ್ನೂ ಉಂಟುಮಾಡತಕ್ಕ ಕಲ್ಪವೃಕ್ಷ ದಂತಿರುವುದು. ॥೫೩॥

ಮನುಜರು ತಮ್ಮ ಅದೃಷ್ಟದಿಂದ ತಮ್ಮ ದೇಹದಲ್ಲಿ ಪುಷ್ಟಿಯಿರುವವರೆಗೂ ಬಾರಿಬಾರಿಗೂ ಈಶ್ವರನ ಪೂಜೆಗೋಸ್ಕರವಾಗಿಯೇ ಪ್ರಯತ್ನ ಮಾಡಬೇಕು. ಆ ರೀತಿ ಅನಾಲಸ್ಯದಿಂದ ಈಶ್ವರಾರ್ಚನೆಮಾಡಿದುದೇ ಆದರೆ ಅದು ಸಾರ್ಥಕವೆನಿ ಸದು. ಅದಲ್ಲದೇ ಆಲಸ್ಯದಿಂದಿದ್ದು ಶಿವಾರ್ಚನೆಯನ್ನು ದೂರಮಾಡುವುದಾದರೆ ಅದು ವಿಷದಂತಾಗುತ್ತದೆ. ಆದರಿಂದ ಯಾವ ಫಲವೂ ಲಭಿಸಲಾರದು. ಆದುದು ರಿಂದ ನಿಜವಾಗಿಯೂ ಅಂತಹ ಆಲಸ್ಯವನ್ನು ಬಿಡಬೇಕು. ॥೫೪॥

ಮನುಜನು ದಿನವೂ ವಿಭೂತಿಯನ್ನು ಹಚ್ಚುವುದು, ರುದ್ರಾಕ್ಷಿಯನ್ನು ಧರಿಸುವುದು, ಇವುಗಳಿಂದ ಪೂತನಾಗಿ ಬಿಲ್ವಾದಿಸಾಧನೆಗಳೊಡನೆ ಮೃತ್ಯುಂಜಯನ

ಯಾವಜ್ಜೀವಮುಮಾಸಹಾಯಭಜನೇ ನೇಯಂ ವಯಸ್ತತ್ಸದಾ
ಕರ್ತವ್ಯಂ ದ್ವಿಜಪುಂಗವೈರಿತಿ ಮುಹುಸ್ತತ್ರಾಪಿ ಯೇ ಬ್ರಾಹ್ಮಣಾಃ ।
ತೈಸ್ತತ್ಸಂತತಮೇವ ಕಾರ್ಯಮಿತಿ ಮೇ ಬುದ್ಧಿಸ್ತತಸ್ತದ್ಯದಿ
ತ್ಯಕ್ತಂ ಸ್ಯಾತ್ಪತಿತೋ ಭವತ್ಯಪಿ ಭವೇತ್ತಸ್ಯೈವ ಸಾ ಯಾತನಾ ॥೫೭॥

ನಾನಾಯೋನಿಷು ಜನ್ಮ ತಾವದಸಕೃದ್ಭುಕ್ತಂ ಚ ದುಃಖಂ ಮುಹುಃ
ಘೋರಾ ಸಾ ಯಮಯಾತನಾಪಿ ಬಹುಧಾ ಲಜ್ಜಾ ತಥಾಪ್ಯಸ್ಯ ನ ।
ಜೀವಸ್ಯಾಶು ಶಿವಾರ್ಚನೇ ಜನಿಜರಾರೋಗಾಗ್ನಿರೂಪೇ ಮುಹುಃ
ಕಿಂ ವಕ್ತವ್ಯಮತಃ ಪರಂ ಶಿವರತೋ ಧನ್ಯೋಽಸ್ತಿ ಯಃ ಕೋಽಪಿ ಸಃ ॥೫೮॥

ಪೂಜೆಗೆ ಪ್ರಯತ್ನಿಸುವುದಾದರೆ ಆ ಯತ್ನಗಳಿಂದಲೇ ಅನೇಕ ಪಾಪಗಳು ನಾಶವಾಗುತ್ತವೆ. ಮತ್ತೆ ಪೂಜಿಸಿದುದೇ ಆದರೆ ಜೀವನ್ಮುಕ್ತನೆನಿಸುತ್ತಾನೆ. (ಜೀವಿಸಿದ್ದರೂ ಸಹ ಮುಕ್ತನಾದಂತೆಯೇ ಆನಂದಾನುಭವದಿಂದಿರುವವನಿಗೆ ಜೀವನ್ಮುಕ್ತನೆಂದು ಹೆಸರು.) ಆದರಿಂದ ದಿನವೂ ತಪ್ಪದೆ ಈ ವೇದೋಕ್ತವಾದ ಶಿವಾರಾಧನಕಾರ್ಯವನ್ನು ನಡೆಸಲೇಬೇಕು. ॥೫೬॥

ದ್ವಿಜ ಶ್ರೇಷ್ಠರು ತಮ್ಮ ವಯಸ್ಸನ್ನು ಸಂಪೂರ್ಣವಾಗಿ ಈಶ್ವರನ ಸೇವೆಯಲ್ಲಿಯೇ ಕಳೆಯಬೇಕು. ಅದರಲ್ಲಿಯೂ ಬ್ರಹ್ಮ ಮಾರ್ಗಾನುಷ್ಠಾನಪರರಾದ ಬ್ರಾಹ್ಮಣರು ಈ ಪೂಜೆಯನ್ನು ಯಾವಾಗಲೂ ತಪ್ಪದೆ ಆಚರಿಸಲೇಬೇಕೆಂದು ನನ್ನ ಅಭಿಪ್ರಾಯ. ಹಾಗಲ್ಲದೆ, ಈ ಸೇವೆಯನ್ನು ನಡೆಸದಿದ್ದಲ್ಲಿ ಅಂತಹವನು ಪತಿತನಾಗುವುದು ಮಾತ್ರವಲ್ಲವೆ ಅವನು (ಹಿಂದೆ ಈಶ್ವರ ಭಕ್ತರಲ್ಲದವರಿಗಾಗಿಯೇ ವಿಧಾನ ಮಾಡಿರತಕ್ಕ) ಕಠಿಣವಾದ ಯಾತನೆಗೂ ಸಹ ಪಾತ್ರನಾಗುತ್ತಾನೆ. ॥೫೭॥

ಜೀವಿಯು ಬಾರಿಬಾರಿಗೂ ಅನೇಕ ತರಹ ಯೋನಿಗಳಲ್ಲಿ ಜನ್ಮವೆತ್ತುವಂತಹ ದುಃಖಗಳನ್ನೂ, ಕಠೋರವಾದ ಆ ಯಮಯಾತನೆಯನ್ನೂ ಸಹ ಅನೇಕಾವರ್ತಿ ಅನುಭವಿಸಿರುತ್ತಾನೆ. ಅಷ್ಟಾದರೂ ಇವನಿಗೆ ಲಜ್ಜೆಯಿಲ್ಲ. ಈತನು ಇದೇರೀತಿ (ಶಿವನನ್ನು ಅರ್ಚಿಸದೆ) ಇದ್ದರೆ ಪುನಃ ಜನನ, ಮರಣ, ವ್ಯಾಧಿ ಮೊದಲಾದ ಕಷ್ಟಗಳೆಂಬ ಅಗ್ನಿಯಲ್ಲಿ ಬೀಳುತ್ತಾನೆಂದು ಮತ್ತೆ ಹೇಳಬೇಕೆ? ಆದುದರಿಂದ ಶಿವಧ್ಯಾನಾಸಕ್ತನಾದವನಿಗಿಂತಲೂ ಧನ್ಯನಾದವನು ಬೇರೆ ಯಾವನುತಾನೆ ಇದ್ದಾನೆ? ॥೫೮॥

ಗರ್ಭವಾಸಮತೀವ ದುಸ್ಸಹಮಿತಿ ಜ್ಞಾತ್ವಾಪಿ ಮೂಢೋ ದೃಢಂ
ಶೈಲಾಧೀಶ್ವರಕನ್ಯಕಾಪರಿವೃಢಂ ನಾರಾಧಯೇತ್ಯಾದರಾತ್ ।
ಗೌರೀಕಾಂತಪದಾರವಿಂದಭಜನಾನ್ಮುಕ್ತಿಃ ಪರಂ ಜಾಯತೇ
ಸಾ ಕಸ್ಯಾಪ್ಯನಪೇಕ್ಷಿತಾ ಖಲು ಮಹಾಸಂಸಾರಮಗ್ನಾತ್ಮನಾಂ ॥೫೮॥

ಸಂಸಾರವಿಷಪಾನಾಯ ಯತತೇ ಮನುಜಃ ಸದಾ ।
ಶಿವನಾಮಾಮೃತಂ ಪಾತುಂ ನ ಯತ್ನಂ ಕುರುತೇ ಜನಃ ॥೫೯॥

ಮಲಾಶನಾಯ ಯತತೇ ಸೂಕರೋ ವಾ ಖರೋಽಪಿ ವಾ ।
ತಥಾ ನರೋಽಪಿ ಯತತೇ ಸಂಸಾರಾಯ ಪರಂ ಖರಃ ॥೬೦॥

ಕ್ರೂರೋ ನರಃ ಖರೋ ಲೋಕೇ ಸಂಸಾರಮಲಮಿಚ್ಛತಿ ।
ಶಿವಾರ್ಚನಸುಧಾಪಾನೇ ತಸ್ಯೇಚ್ಛಾ ಜಾಯತೇ ಕಥಂ ॥೬೧॥

---

ಗರ್ಭದಲ್ಲಿ ವಾಸಮಾಡುವುದು ಬಹಳ ದುಃಖಕರವೆಂದು ತಿಳಿದಿದ್ದರೂ ಕೂಡ ಯಾವನು ಪಾರ್ವತಿಯಿಂದ ಆಲಿಂಗಿಸಲ್ಪಟ್ಟ ಈಶ್ವರನನ್ನು ಆದರದಿಂದ ಸೇವಿಸುವುದಿಲ್ಲವೋ, ಆತನು ನಿಜವಾಗಿಯೂ ಮೂಢನೆನಿಸುವನು. ಕೇವಲ ಗೌರೀ ಪತಿಯಾದ ಪರಮೇಶ್ವರನ ಚರಣಕಮಲಗಳ ಸೇವೆಯಿಂದಲೇ ಮುಕ್ತಿಯು ಲಭಿಸುತ್ತದೆ. ಆದರೆ ಅಂತಹ ಮುಕ್ತಿಯು ಈ ಕಠೋರವಾದ ಸಂಸಾರದಲ್ಲಿಯೇ ಮುಳುಗಿರತಕ್ಕವರಿಗೆ ಯಾರಿಗೂ ಸುಲಭಸಾಧ್ಯವೆನಿಸುವುದಿಲ್ಲ. ॥೫೮॥

ಜನರಿಗೆ ಸಂಸಾರವು ವಿಷಮಯವಾಗಿಯೂ, ಶಿವನಾಮವು ಅಮೃತಮಯವಾಗಿಯೂ ಇರುತ್ತದೆ. ಆದರೆ ಜನರು ಇದನ್ನು ತಿಳಿಯದೆ ಸಂಸಾರವೆಂಬ ವಿಷಪಾನದಲ್ಲಿ ಯತ್ನಿಸುತ್ತಾರೆಯೇ ಹೊರತು ಈಶ್ವರನಾಮವೆಂಬ ಅಮೃತಪಾನದಲ್ಲಿ ತೊಡಗುವುದೇ ಇಲ್ಲ. ॥೫೯॥

ಹಂದಿ ಮತ್ತು ಕತ್ತೆ ಇವು ಯಾವಾಗಲೂ ಕೊಳಕು ಪದಾರ್ಥಗಳನ್ನು ತಿನ್ನಲು ಅಪೇಕ್ಷಿಸುತ್ತವೆ. ಅದರಂತೆ ಮಾನವನೂ ಕೂಡ ಸಂಸಾರವನ್ನು ಹೊಂದಲು ಬಯಸುತ್ತಾನೆ. ಆದರಿಂದ ಈತನೂ ಕತ್ತೆಯಂತಲ್ಲವೆ! ॥೬೦॥

ಕತ್ತೆಯಂತೆ ಮೂಢನಾದ ನರನು ಸಂಸಾರವೆಂಬ ಕೊಳಕನ್ನು ಇಚ್ಛಿಸುತ್ತಾನೆಯೇ ಹೊರತು, ಅವನಿಗೆ ಈಶ್ವರಾರ್ಚನೆಯೆಂಬ ಅಮೃತಪಾನದಲ್ಲಿ ಅಭಿಲಾಷೆಯು ಉಂಟಾಗುವುದೇ ಇಲ್ಲ. ॥೬೧॥

ಶಿವಾರ್ಚನಸುಧಾ ಸಾ ಚೇತ್ಪೀತಾ ಮುಹುರಹರ್ನಿಶಂ ।
ತೃಪ್ತೋ ನ ಕ್ಷುಧಿತೋ ನಾಪಿ ತೃಷಿತೋಽಪಿ ಪ್ರತಿಕ್ಷಣಂ ॥೬೨॥

ಸಂಸಾರವಿಷಸರ್ಪೇಣ ದಷ್ಟಃ ಕಷ್ಟಮವಾಪ್ನುಯಾತ್ ।
ಪುನಃ ಪುನಃ ಸ ಸಂಸಾರೀ ಮೃತ್ಯುಮಾಪ್ನೋತಿ ದುಃಖಿತಃ ॥೬೩॥

ಅಂತಕಾಲಃ ಕಥಂ ಭಾವಿ ಮರಣೋತ್ತರಮಸ್ಯ ಕಿಂ ।
ಭವಿಷ್ಯತೀತಿ ಸಹಸಾ ನ ವಿಚಾರಂ ಕರೋತಿ ಚ ॥೬೪॥

ಚಾತುರ್ಯಮಸ್ಯ ಸಂಸಾರವಿಚಾರೇಷ್ವೇವ ಜಾಯತೇ ।
ನ ಶಂಕರಾರಾಧನೇಷು ನರಸ್ಯಾಪಿ ದುರಾತ್ಮನಃ ॥೬೫॥

ದುರ್ಬುದ್ಧಿರೇವ ಸಂಸಾರಸರ್ಪಮೇವಾನುಸರ್ಪತಿ ।
ತದಾಶಾವಿಷ್ಟದೇಹೋಽಪಿ ನ ತಸ್ಮಾದ್ವಿಮುಖೋ ಭವೇತ್ ॥೬೬॥

ಅಹೋರಾತ್ರಿಯೂ ಆಗಾಗ ಈಶ್ವರಾರ್ಚನೆ ಎಂಬ ಅಮೃತವನ್ನು ಪಾನಮಾಡಿದವನಿಗೆ ಯಾವ ಕ್ಷಣದಲ್ಲಿಯೂ ಹಸಿವು, ಬಾಯಾರಿಕೆಗಳಾಗದೆ ಸರ್ವದಾ ತೃಪ್ತನಾಗಿರುತ್ತಾನೆ. ॥೬೨॥

ಸರ್ಪವು ವಿಷಮಯವಾದುದು. ಹಾಗೆಯೇ ಸಂಸಾರವೆಂಬುದೂ ಒಂದು ಸರ್ಪ. ಸರ್ಪದಷ್ಟನಾದ ಮನುಜನು ಮೃತನಾಗುವನು. ಸಂಸಾರಕ್ಕೆ ಸಿಕ್ಕಿದವನಾದರೋ ಮತ್ತೆ ಮತ್ತೆ ಮೃತನಾಗುತ್ತಲೂ ಪದೇ ಪದೇ ಜನಿಸುತ್ತಲೂ ಕಷ್ಟವನ್ನನುಭವಿಸುವನು. ॥೬೩॥

ಸಂಸಾರಿಯು ತನಗೆ ಕೊನೆಗಾಲವು ಹೇಗೆ ಆಗುತ್ತದೆ? ಮರಣಾನಂತರ ಏನು ಸಂಭವಿಸುತ್ತದೆ? ಪ್ರಕೃತ ನಾನೇನುಮಾಡಬೇಕು? ಎಂದು ಯೋಚಿಸುವುದೇ ಇಲ್ಲ. ॥೬೪॥

ನರನಾದರೂ ದುರಾತ್ಮನಾಗಿದ್ದರೆ ಅಂತಹವನ ಬುದ್ಧಿವಂತಿಕೆಯೆಲ್ಲಾ ಈಶ್ವರಾರ್ಚನೆಯಲ್ಲಿ ಮುಂದುವರಿಯದೆ, ಕೇವಲ ಸಂಸಾರ ವಿಚಾರಗಳಲ್ಲಿಯೇ ಮುಗಿಯುತ್ತದೆ. ॥೬೫॥

ದುರಾಚಾರಿಯಾದ ಬುದ್ಧಿಯೂ ಕೂಡ ಸಂಸಾರವೆಂಬ ಸರ್ಪವನ್ನೇ ಅನುಸರಿಸಿರುತ್ತದೆ. ಅಂತಹ ಬುದ್ಧಿಯಿಂದ ಕೂಡಿರುವ ಶರೀರವೂ ಕೂಡ. ಆ ಸಂಸಾರಸರ್ಪದಿಂದ ಕಚ್ಚಲ್ಪಟ್ಟು ದುಃಖಪಡುತ್ತಿರುವುದು. ॥೬೬॥

ಇದಮೇವ ಕಿಲಾಶ್ಚರ್ಯಂ ದಂಶಶೂಕಾಭಿದಂಶನೇ ।
ಮೃತಃ ಪುನಃ ಪುನರ್ದೋಷೈಃ ತದ್ದರ್ಶನಮಪೇಕ್ಷತೇ ॥೬೭॥

ಯೇನ ಮಾರ್ಗೇಣ ಮರಣಂ ಭವತೀತಿ ವಿನಿಶ್ಚಿತಂ ।
ಮೃಗೈರಪಿ ಸ ಮಾರ್ಗಸ್ತು ತ್ಯಜ್ಯತೇ ನ ನರೈಃ ಪರಂ ॥೬೮॥

ಜನ್ಮಮೃತ್ಯುಜರಾರೋಗದಂದಶೂಕಾಭಿವೇಷ್ಟಿತಾಃ ।
ನ ಕುರ್ವಂತಿ ದುರಾಚಾರಾಃ ಶಂಕರಾರಾಧನಂ ಪರಂ ॥೬೯॥

ಅನಾರಾಧ್ಯ ಮಹಾದೇವಂ ಕೋ ವಾ ಮುಕ್ತೋ ಭವೇದ್ಭುವಿ ।
ಮುಕ್ತಿಮಿಚ್ಛತಿ ಯಸ್ತಾವತ್ ಸ ಕರೋತಿ ಶಿವಾರ್ಚನಂ ॥೭೦॥

ಮುಕ್ತ್ಯಪೇಕ್ಷಾಪಿ ಬಹುಧಾ ನರಾಣಾಂ ನ ಪ್ರಜಾಯತೇ ।
ಪರಂ ತು ದಾರಹಾರಾದಾವಿಚ್ಛಾ ಸಂಜಾಯತೇ ಪುನಃ ॥೭೧॥

ನರನು ಸಂಸಾರವೆಂಬ ಸರ್ಪದಿಂದ ದಷ್ಟನಾಗಿ ಅದರಿಂದುಂಟಾಗುವ ದೋಷಗಳಿಂದ ಮತ್ತೆ ಮತ್ತೆ ಸಾಯುತ್ತಲಿರುವನು. ಅಷ್ಟಾದರೂ ಪುನಃ ಪುನಃ ಆ ಸಂಸಾರದ ದರ್ಶನವನ್ನೇ ಅಪೇಕ್ಷೆಪಡುತ್ತಾನೆ. ಇದು ಆಶ್ಚರ್ಯವಲ್ಲವೆ? ॥೬೭॥

ಯಾವ ಮಾರ್ಗವನ್ನು ಅನುಸರಿಸಿದರೆ ಮರಣವುಂಟಾಗುತ್ತದೆಂದು ನಿಶ್ಚಿತವಾಗಿದೆಯೋ, ಅಂತಹ ಮಾರ್ಗವನ್ನು ಮೃಗಗಳೂ ಸಹ ದೂರ ಬಿಡುತ್ತವೆ. ಆದರೆ ನರರು ಮಾತ್ರ ಬಿಡುವುದಿಲ್ಲ. ॥೬೮॥

ಸರ್ಪದಂತೆ ಭಯಜನಕಗಳಾದ ಹುಟ್ಟುವಿಕೆ, ಮರಣ, ಮುಪ್ಪು, ರೋಗ ಇವು ಮನುಜನನ್ನು ಆವರಿಸುತ್ತವೆ. ಇಷ್ಟು ಪೀಡಿತರಾದರೂ ಕೂಡ ಮುಖ್ಯವಾಗಿ ಈಶ್ವರಾರ್ಚನೆಗೆ ಮನಗೊಡುವುದಿಲ್ಲ. ॥೬೯॥

ಭೂಮಿಯಲ್ಲಿ ಯಾರುತಾನೆ ಈಶ್ವರನನ್ನು ಆರಾಧಿಸದೇ ಮುಕ್ತಿಯನ್ನು ಪಡೆದಾರು? ಮೋಕ್ಷಾಭಿಲಾಷಿಯಾದವನು ಶಿವಾರ್ಚನೆಯನ್ನು ಮಾಡಲೇಬೇಕು. ॥೭೦॥

ಮುಕ್ತಿಯಲ್ಲಿ ಇಚ್ಛೆಯು ಜನರಿಗೆ ಸಾಧಾರಣವಾಗಿ ಉಂಟಾಗುವುದಿಲ್ಲ. ಆದರೆ ಪತ್ನಿ, ಪುಷ್ಪಮಾಲಿಕೆ ಇತ್ಯಾದಿಗಳಲ್ಲಿ ಅಭಿಲಾಷೆಯು ಸುಲಭವಾಗಿ ಉಂಟಾಗುತ್ತದೆ ॥೭೧॥

ಸಿದ್ಧೇ ಧನೇಽಪಿ ಬಹುಧಾ ಧನೇಚ್ಛಾಪಿ ಪ್ರವರ್ಧತೇ ।
ತಥಾ ಶಿವಾರಾಧನೇಷು ನೇಚ್ಛಾ ಕಸ್ಯಾಪಿ ಜಾಯತೇ ॥೨೨॥

ತುಂಗಾಂಗನಾಂಗಸಂಗೇಷು ಯಥೇಚ್ಛಾ ಜಾಯತೇ ನೃಣಾಂ ।
ತಥಾ ನ ಶಾಂಗಲಿಂಗೇಚ್ಛಾ ಕದಾಪಿ ದುರದೃಷ್ಟತಃ ॥೨೩॥

ತುಂಗಲಿಂಗಾಂಗನಾಲೋಕ್ಯ ಕ್ಷಣಂ ವಾ ಯೋಽಭಿನಂದತಿ ।
ತಸ್ಯಾನಂದಪ್ರವೃದ್ಧಿಃ ಸ್ಯಾದಾನಂದಘನಸೇವಯಾ ॥೨೪॥

ಆನಂದಘನಮದ್ವೈತಂ ಚಿಂತಯಂತಿ ಮಹೇಶ್ವರಂ ।
ಕೇಚಿದ್ಧನ್ಯಾಃ ಶಿವರತಾಸ್ತೇಭ್ಯೋ ನಿತ್ಯಂ ನಮೋ ನಮಃ ॥೨೫॥

ಶಂಕರಾರಾಧನೋದ್ಯುಕ್ತೋ ಯಸ್ತತ್ಪದರಜಃ ಪರಂ ।
ಪುನಾತಿ ಶಿರಸಾ ಲಗ್ನಮಲಗ್ನಂ ಪಾಪಕೋಟಿಭಿಃ ॥೨೬॥

ಧನವು ಸಮಗ್ರವಾಗಿದ್ದರೂ ಕೂಡ ಪುನಃ ಪುನಃ ಧನಾರ್ಜನೆಯಲ್ಲಿಯೇ ಆಸಕ್ತಿಯುಂಟಾಗುತ್ತದೆ. ಆದರಂತೆ ಈಶ್ವರಾರಾಧನೆಯಲ್ಲಿ ಮಾತ್ರ ಪದೇಪದೇ ಆಸಕ್ತಿಯು ಸಂಭವಿಸುವುದಿಲ್ಲ. ||೨೨||

ಮನುಜರಿಗೆ ಉತ್ಕೃಷ್ಟರಾದ ಅಂಗನೆಯರ ಅವಯುವ ಸಂಗದಲ್ಲಿ ಇಚ್ಛೆಯುಂಟಾಗುವಂತೆ, ಈಶ್ವರನ ಲಿಂಗಾರ್ಚನೆಯಲ್ಲಿ ಅಭಿಲಾಷೆಯು ಹುಟ್ಟುವುದಿಲ್ಲ. ಇದಕ್ಕೆ ಅವರ ದುರದೃಷ್ಟವೇ ಕಾರಣ. ||೨೩||

ಉತ್ಕೃಷ್ಟವಾದ ಶಿವಲಿಂಗವನ್ನು ಕಂಡು ಯಾವನು ಒಂದು ಕ್ಷಣವಾದರೂ ಅಭಿನಂದಿಸುತ್ತಾನೆಯೋ ಅವನು ಆನಂದಸಾರನಾದ ಶಿವನ ಸೇವೆಮಾಡಿದಂತಾಗುತ್ತದೆ. ಆದರಿಂದ ಅವನಿಗೆ ಆನಂದವು ಹೆಚ್ಚುತ್ತದೆ. ||೨೪||

ಪುಣ್ಯಾತ್ಮರಾದ ಕೆಲವರು ಶಿವನಲ್ಲಿಯೇ ಆಸಕ್ತರಾಗಿ ಆನಂದಸಾರನಾದ ಈಶ್ವರನನ್ನು ಮಾತ್ರವೇ ಧ್ಯಾನಿಸುವರು. ಅಂತಹವರಿಗೆ ನಿತ್ಯವೂ ನಮಸ್ಕಾರ. ||೨೫||

ಈಶ್ವರಾರಾಧನೆಯಲ್ಲಿ ಆಸಕ್ತರಾದವರ ಪಾದ ಧೂಳಿಯನ್ನು ಶಿರಸ್ಸಿನಲ್ಲಿ ಧರಿಸುವ ಮಾತ್ರದಿಂದಲೇ ಕೋಟ್ಯಂತರ ಪಾಪಗಳು ನಾಶವಾಗುತ್ತವೆ. ||೨೬||

ಕ್ಷಣೇನ ಪಾಪಕೋಟೀನಾಂ ಭವೇದ್ವಿಧ್ವಂಸನಂ ಮುಹುಃ ।
ನಿಟಿಲಾಕ್ಷಾರ್ಚನಾದೇವ ತತ್ತ್ವಾವದಮೃತಂ ಖಲು ॥೭೭॥

ಅಹೋ ನಾಮೃತಪಾನಾರ್ಥಂ ಯತಂತೇ ದುರ್ಬಲಾಃ ಕಲೌ ।
ಮಲಿನಾನಾಂ ಕುತಸ್ತೇಷಾಂ ಮತಿಃ ಶಂಕರಪೂಜನೇ ॥೭೮॥

ಅತಿಶುದ್ಧಾತ್ಮನಾಮೇವ ಕದಾಚಿದ್ಗಿರಿಶಾರ್ಚನೇ ।
ಮತಿಃ ಸಾಸ್ಯಾತ್ಸಾ ಯತಃ ಸಾಕ್ಷಾದಮೃತತ್ವಂ ಪ್ರಯಚ್ಛತಿ ॥೭೯॥

ಅಮೃತತ್ವಮನಾಯಾಸಾದ್ಗಿರಿಶಾರಾಧನಾತ್ಪರಂ ।
ಭವತೀತ್ಯವಗಂತವ್ಯಮನ್ಯಥಾ ತದ್ಧಿ ದುರ್ಲಭಂ ॥೮೦॥

ದುರ್ಲಭಂ ಮಾನುಷಂ ಜನ್ಮ ಪ್ರಾಪ್ಯಾಪಿ ನರಸೂಕರಃ ।
ನ ಕರೋತಿ ಪ್ರಯತ್ನಂ ವಾ ಶಂಕರಾರಾಧನೇ ಧನೇ ॥೮೧॥

ಅಮೃತಮಯವಾಗಿರತಕ್ಕ ಶಿವಾರ್ಚನೆಯನ್ನು ಬಾರಿಬಾರಿಗೂ ಮಾಡುವುದರಿಂದ ಒಂದು ಕ್ಷಣದಲ್ಲಿಯೇ ಕೋಟ್ಯಂತರ ಪಾಪಗಳು ಧ್ವಂಸವಾಗುವುವು. ॥೭೭॥

ಕಲಿಯುಗದಲ್ಲಿ ಜನರು ದುರ್ಬಲರಾದುರಿಂದಲೇ ಅಮೃತ ಪಾನಮಾಡಲು ಪ್ರಯತ್ನಿಸುವುದಿಲ್ಲ. ಇಂತಹುದರಲ್ಲಿ ಮಲಿನಾತ್ಮರಾದವರಿಗೆ ಈಶ್ವರಾರ್ಚನೆಯಲ್ಲಿ ಬುದ್ಧಿಯು ಹೇಗೆ ಜನಿಸೀತು ? ॥೭೮॥

ಶುದ್ಧಾತ್ಮರಾದ ಕೆಲವರಿಗೆ ಮಾತ್ರ ಅಕಸ್ಮಾತ್ತಾಗಿ ಈಶ್ವರಾರ್ಚನೆಯಲ್ಲಿ ಬುದ್ಧಿಯುಂಟಾಗುತ್ತದೆ. ಆ ಬುದ್ಧಿಯು ಅವರಿಗೆ ಸಾಕ್ಷಾತ್ತಾಗಿ ದೇವತ್ವವನ್ನು ಕೊಡುತ್ತದೆ. ॥೭೯॥

ಈಶ್ವರಾರಾಧನೆಯಿಂದ ಮಾತ್ರವೇ ಅನಾಯಾಸವಾಗಿ ದೇವತ್ವವು ಉಂಟಾಗುತ್ತದೆಯೆಂದು ತಿಳಿಯಬೇಕು. ಆರೀತಿ ಮಾಡದಿದ್ದಲ್ಲಿ ದೇವತ್ವವು (ಮರಣರಾಹಿತ್ಯ) ದುರ್ಲಭವೇ. ॥೮೦॥

ಮನುಷ್ಯ ಜನ್ಮವು ಬಹು ದುರ್ಲಭವಾದುದು. ಇಂತಹ ದುರ್ಲಭವಾದ ಜನ್ಮವನ್ನು ಪಡೆದೂ ಕೂಡ ಹಂದಿಗೆ ಸಮಾನನಾದ ಮನುಜನು ಐಶ್ವರ್ಯರೂಪದಂತಿರುವ ಈಶ್ವರಾರಾಧನೆಯಲ್ಲಿ ಪ್ರಯತ್ನವನ್ನು ಸಹ ಮಾಡುವುದಿಲ್ಲ. ॥೮೧॥

ಶಿವಾರಾಧನಮಸ್ಮಾಕಂ ಧನಂ ನಿಧಿರಪಿ ಸ್ವತಃ ।
ಸೂತೇ ಪುನರ್ನಿಧಿಂ ಸೂತೇ ನವಮೇವ ನಿಧಿಂ ಪುನಃ ॥೮೨॥

ನಿಕ್ಷೇಪಾಸ್ತೇ ಕ್ಷಯಂ ಪ್ರಾಪ್ತಾಃ ಕೇವಲಂ ಧನಸಂಚಿತಾಃ ।
ಅಕ್ಷಯೋ ನಿಧಿರಸ್ಮಾಕಂ ಶಂಕರಾರಾಧನಂ ಪರಂ ॥೮೩॥

ನಿಧೀನಾಂ ನಿಧಿರಸ್ಮಾಕಂ ಶಿವಾರಾಧನಲಕ್ಷಣಃ ।
ಅಯಂ ನಿಧಿರ್ದುರ್ಲಭೋ ಹಿ ಬ್ರಹ್ಮಾದೀನಾಮಪಿ ಧ್ರುವಂ ॥೮೪॥

ನಿಧಿಲಾಭಾಯ ಕುರ್ವಂತಿ ಯತ್ನಂ ಬ್ರಹ್ಮಾದಯೋಽಪಿ ತೇ ।
ಅಕ್ಷಯೋ ನಿಧಿರಪ್ರಾಪ್ಯಃ ಸರ್ವಥೇತಿ ಚರಂತಿ ತೇ ॥೮೫॥

ಕ್ಷಯಾಂಸ್ತು ನಿಧಯೋ ಲಭ್ಯಾಃ ಸರ್ವೈರಪ್ಯಕ್ಷಯಸ್ತು ನ ।
ನಿಧಿರ್ಬ್ರಹ್ಮಾಂಡಮಧ್ಯೇಽಸ್ಮಿನ್ಶಿವಾರಾಧನಲಕ್ಷಣಃ ॥೮೬॥

ನಮಗೆ ಶಿವಾರಾಧನೆಯೇ ಧನವು. ಅದು ನಿಧಿರೂಪವಾಗಿದ್ದರೂ ಪುನಃ ಪುನಃ ಹೊಸಹೊಸದಾದ ನಿಧಿಯನ್ನು ಸೃಷ್ಟಿಸುವ ಸಾಮರ್ಥ್ಯವನ್ನು ಪಡೆದಿರುವುದು. ॥೮೨॥

ಕೇವಲ ಸಂಪಾದನೆ ಮಾಡಿ ಕೂಡಿಟ್ಟ ಧನವು ಕ್ಷಯವನ್ನು ಹೊಂದುತ್ತದೆ. ಅದರಿಂದ ನಮಗೆ ಈಶ್ವರಾರಾಧನೆ ಮಾತ್ರವೇ ನಾಶಹೊಂದದಿರತಕ್ಕ ನಿಧಿಯು.॥೮೩॥

ಈಶ್ವರಾರಾಧಕನು ಸಕಲ ನಿಧಿಗಳಿಗೂ ನಿಧಿಯಾದವನು. ಈ ನಿಧಿಯು ಬ್ರಹ್ಮಾದಿಗಳಿಗೂ ಕೂಡ ದುರ್ಲಭವಾದುದು. ॥೮೪॥

ಈ ನಿಧಿಯನ್ನು ಪಡೆಯುವುದಕ್ಕಾಗಿ ಬ್ರಹ್ಮಾದಿಗಳೂ ಕೂಡ ಯತ್ನಿಸುತ್ತಾರೆ. ಆದರೆ ಅದು ಅವರಿಗೆ ಸಿಗಲಾರದು. ಆದಕ್ಕಾಗಿ ಸರ್ವತ್ರ ಅವರು ತಿರುಗುತ್ತಾರೆ. ॥೮೫॥

ಬ್ರಹ್ಮಾಂಡವೆನಿಸಿದ ಈ ಜಗತ್ತಿನಲ್ಲಿ ಎಲ್ಲರಿಗೂ ಈ ಕ್ಷಯ (ನಾಶವಾಗುವಂತಹ) ವಾಗುವ ನಿಧಿಗಳು ದೊರಕಬಹುದು. ಆದರೆ ಶಿವಾರಾಧಕನೆಂಬ ಅಕ್ಷಯುವಾದ ನಿಧಿಯು ದುರ್ಲಭವು. ॥೮೬॥

ಮನ್ಯೇ ವಿರೂಪಾಕ್ಷಪದಾರ್ಚನಂ ಪರಂ
ಮೋಕ್ಷಪ್ರದಾನಕ್ಷಮಮೀಕ್ಷಣೇಽಪಿ ।
ನಿಕ್ಷೇಪ ಏವೇದಮಿದಂ ವಿಲಕ್ಷಣಂ
ಮೋಕ್ಷಸ್ವರೂಪೋ ನಿಧಿರಕ್ಷಯೋಽಯಂ ॥೮೭॥

ಅನೇನ ಮೋಕ್ಷೋ ಭವತೀತಿ ಬುದ್ಧಿಃ
ಶ್ರೀದಕ್ಷಿಣಾಮೂರ್ತೇಃ ಕರುಣಾಕಟಾಕ್ಷೈ
ಅಸ್ಮಾಕಮಾಜನ್ಮಖಲು ಪ್ರವೃದ್ಧಾ
ಭವಿಷ್ಯತ್ಯಪಿ ಸಾ ಪ್ರವೃದ್ಧಾ ॥೮೮॥

ಧನ್ಯಾಃ ಪರಂ ಶಂಕರಲಿಂಗಪೂಜಾ
ಪ್ರವಿಷ್ಟಚಿತ್ತಾಃ ಪರಮಪ್ರವೃತ್ತಾಃ ।
ಅತಃ ಪರಂ ಕಿಂ ಬಹುಭಾಷಣೈರ್ವಾ
ವಾಮಾರ್ಧಜಾನಿಂ ಭಜ ಚಂದ್ರಮೌಲಿಂ ॥೮೯॥

ಇತಿ ಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಮಗಧರಾಜಕಶ್ಯಪಸಂವಾದೇ ಶಿವಾರಾಧನಮಹಿಮಾವರ್ಣನಂ ನಾಮ
ನವಮೋಽಧ್ಯಾಯಃ

---

ವಿರೂಪವಾದ ಕಣ್ಣುಳ್ಳ ಈಶ್ವರನ ಚರಣ ಕಮಲಗಳ ಅರ್ಚನೆಯು ಮೋಕ್ಷದಾಯಕವೆಂಬುದರಲ್ಲಿ ಸಂಶಯವಿಲ್ಲ. ಅಲ್ಲದೆ ಶಿವದರ್ಶನವೆಂಬುದನ್ನು ಕೂಡಿಟ್ಟ ಹಣದ ಗಂಟಿನಂತೆ ಭಾವಿಸಬೇಕು. ಇದೇ ನಿಕ್ಷೇಪವೇ ಮೋಕ್ಷರೂಪವಾದ ಶಾಶ್ವತ ನಿಧಿಯೊಂದನ್ನು ಸಿದ್ಧಗೊಳಿಸಿಕೊಡುವುದು. ॥೮೭॥

ಈ ಈಶ್ವರಾರ್ಚನೆಯಿಂದ ಮೋಕ್ಷವು ಲಭಿಸುತ್ತದೆ ಎಂಬ ಬುದ್ಧಿಯೂ ಕೂಡ ಜ್ಞಾನಪ್ರದನಾದ ದಕ್ಷಿಣಾಮೂರ್ತಿಯ (ಈಶ್ವರನ) ಕೃಪಾಕಟಾಕ್ಷಗಳಿಂದಲೇ ಉಂಟಾಗುವುದು. ॥೮೮॥

ಕೆಲವರು, ಈಶ್ವರ ಲಿಂಗಪೂಜೆಯಲ್ಲಿಯೇ ತಮ್ಮ ಮನಸ್ಸನ್ನು ನೆಲೆಗೊಳಿಸುವರು. ಆದುದರಿಂದ ಅವರೇ ಧನ್ಯರು. ಇನ್ನು ಸುಮ್ಮನೇ ಬಹುವಾಗಿ ಹೇಳುವುದರಿಂದ

ಪ್ರಯೋಜನವೇನು ? ವಾಮಭಾಗದಲ್ಲಿ ಪತ್ನೀ ಸಮೇತನಾಗಿಯೂ, ತಲೆಯಲ್ಲಿ ಚಂದ್ರನನ್ನು ಧರಿಸಿರುವವನಾಗಿಯೂ ಇರತಕ್ಕ ಈಶ್ವರನನ್ನು ಸೇವಿಸಿರಿ. ಎಂದು ಕಶ್ಯಪರು ಹೇಳಿದರೆಂದು ಯಾಜ್ಞ್ಯವಲ್ಕ್ಯಮಹರ್ಷಿಯು ಹೇಳಿದನು. ||೬೯||

ಎಂಬಲ್ಲಿಗೆ ಹರ ಎಂಬ ಹೆಸರುಳ್ಳ ಶಿವರಹಸ್ಯ ಗ್ರಂಥದ ಮೂರನೆಯ ಅಂಶದ
ಉತ್ತರಾರ್ಧದಲ್ಲಿ ಮಗಧರಾಜ ಮತ್ತು ಕಶ್ಯಪ ಇವರ ಸಂವಾದರೂಪದಲ್ಲಿ
ಶಿವಾರ್ಚನೆಯ ಮಹಿಮೆಯ ವರ್ಣನೆಯೆಂಬ
ಒಂಬತ್ತನೆಯ ಅಧ್ಯಾಯವು ಮುಗಿದುದು

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ದಶಮೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತಿ ತದ್ವಚನಂ ಶ್ರುತ್ವಾ ರಾಜಾ ಸಂತುಷ್ಟಮಾನಸಃ ।
ಕೀರ್ತಿಕೇತುರುವಾಚೇದಂ ವಚನಂ ಧರ್ಮಸಾಧನಂ ||೧||

ಪ್ರಭಾವಂ ಶಿವಲಿಂಗಾನಾಂ ಶಿವಲಿಂಗಾರ್ಚನಸ್ಯ ಚ ।
ವಿಭೂತಿಧಾರಣಸ್ಯಾಽಪಿ ರುದ್ರಾಕ್ಷಾಣಾಂ ಚ ಮೇ ವದ ||೨||

|| ಕಶ್ಯಪ ಉವಾಚ ||

ಸಾಧು ಸಾಧು ಶಿವಾಚಾರನಿರತೋತ್ತಮ ಭೂಪತೇ ।
ಪ್ರಶ್ನೋಽಯಂ ಪುಣ್ಯರೂಪಸ್ತೇ ಮಹಾಪುಣ್ಯಪ್ರಬೋಧಕಃ ||೩||

## ಹತ್ತನೆಂಯ ಅಧ್ಯಾಯ

ಕಶ್ಯಪರು ಹೇಳಿದ ಈ ಮಾತನ್ನು ಕೇಳಿ ಕೀರ್ತಿಯೇ ಪ್ರಧಾನವಾಗಿ ಉಳ್ಳ ಕೀರ್ತಿಕೇತು(ಮಗಧ)ರಾಜನು ಸಂತೋಷಗೊಂಡವನಾಗಿ ಧರ್ಮಸಾಧನಗಳಾದ ಕೆಲವು ತತ್ತ್ವಗಳನ್ನು ಉಪದೇಶಿಸಬೇಕೆಂದು ಕೇಳಿಕೊಂಡನು. ||೧||

ಶಿವಲಿಂಗ, ಅದರ ಅರ್ಚನೆ, ವಿಭೂತಿಧಾರಣೆ, ರುದ್ರಾಕ್ಷಧಾರಣೆ ಇವುಗಳ ಪ್ರಭಾವವನ್ನು ತಿಳಿಸಬೇಕೆಂಬುದಾಗಿ ಮತ್ತೆ ಪ್ರಾರ್ಥಿಸಿದನು. ಆಗ ಕಶ್ಯಪರು ಹೀಗೆ ಉಪದೇಶಿಸತೊಡಗಿದರು. ||೨||

"ಈಶ್ವರಾರ್ಚನೆಯಲ್ಲಿ ನಿರತನೂ ಶಿವಧರ್ಮಜಿಜ್ಞಾಸುವೂ ಆಗಿರುವ ಭೂಪತಿಯೇ, ಪ್ರಪಂಚದಲ್ಲಿ ಪ್ರಶ್ನೆಗಳು ಅನೇಕವಾಗಿವೆ. ನೀನು ಕೇಳಿದ ಪ್ರಶ್ನೆ

ಪ್ರಶ್ನಾಃ ಸಂತ್ಯೇವ ಬಹವಃ ಕೇಚಿತ್ತತ್ರೋತ್ತಮೋತ್ತಮಾಃ ।
ಉತ್ತಮಾಃ ಕೇಚಿದತ್ರಾಪಿ ಮಧ್ಯಮಾಶ್ಚ ತಥಾಧಮಾಃ ॥೪॥

ಪ್ರಶ್ನಸ್ತ್ವಾಯಂ ಸರ್ವೇಷು ಭವತ್ಯೇವೋತ್ತಮೋತ್ತಮಃ ।
ಏತತ್ಪ್ರಶ್ನಸಮಃ ಪ್ರಶ್ನೋ ನ ಜಾತೋ ನ ಭವಿಷ್ಯತಿ ॥೫॥

ಯತ್ಪ್ರಶ್ನಶ್ರವಣೇನಾಪಿ ಪೂತಮೇವ ಮನಃ ಪುನಃ ।
ನ ಪಾವನಾಂತರಾಪೇಕ್ಷಾ ಪಾವನತ್ವಾಯ ಕೇವಲಂ ॥೬॥

ತೃಪ್ತಮೇವ ಮನೋ ನೂನಮಾನಂದೋಽಪಿ ಪ್ರವೃದ್ಧತೇ ।
ಏತತ್ಪ್ರಶ್ನಸುಧಾಧಾರಾ ಮುಕ್ತಿಧಾರೇವ ಭಾತಿ ಮೇ ॥೭॥

ಮಾತ್ರ ಪುಣ್ಯಶಾಲಿಗಳಿಗೆ ತಕ್ಕುದಾಗಿರುವುದು. ಆ ಪ್ರಶ್ನೆಗಳಲ್ಲಿ ಕೆಲವು ಉತ್ತಮೋತ್ತಮಗಳಾಗಿರುತ್ತವೆ. ಮತ್ತೆ ಕೆಲವು ಮಧ್ಯಮಗಳು. ಮತ್ತೆ ಕೆಲವು ಅಧಮಗಳು. ಈಗ ನೀನು ಮಾಡಿದ ಪ್ರಶ್ನೆಯು ಬಹು ಪುಣ್ಯರೂಪವಾಗಿಯೂ, ಪುಣ್ಯವನ್ನು ಇನ್ನು ಹೆಚ್ಚಾಗಿ ಅಭಿವೃದ್ಧಿಪಡಿಸುವುದಾಗಿಯೂ ಇರುತ್ತದೆ. ಅದರಿಂದ ಸಾಧು, ಸಾಧು. ॥೩-೪॥

ನಿನ್ನ ಈ ಪ್ರಶ್ನೆಯು ಉತ್ತಮೋತ್ತಮವಾದುದು. ಈ ಪ್ರಶ್ನೆಗೆ ಸಮನಾದ ಪ್ರಶ್ನೆಯನ್ನು ಹಿಂದೆ ಯಾರೂ ಕೇಳಿರಲಿಲ್ಲ. ಮುಂದೆ ಯಾರೂ ಕೇಳುವಂತಿಲ್ಲ. ॥೫॥

ಈ ಪ್ರಶ್ನೆಯನ್ನು ಕೇಳಿದುದರಿಂದಲೇ ಮನಸ್ಸು ಪರಿಶುದ್ಧವಾಗುತ್ತದೆ. ಈ ಪವಿತ್ರವಾದ ವಸ್ತುವನ್ನು ಪವಿತ್ರವನ್ನಾಗಿ ಮಾಡಲು ಇನ್ನೊಂದು ಪವಿತ್ರ ವಸ್ತುವಿನ ಅಪೇಕ್ಷೆಯುಂಟೆ! ॥೬॥

ಅಮೃತಧಾರೆಯಂತೆ ಇರತಕ್ಕ ಪ್ರಶ್ನೆಯು ಮುಕ್ತಿಧಾರೆಯಂತೆ ಪ್ರಕಾಶಿಸುತ್ತಿದೆ. ಅದರಿಂದ ನಿಜವಾಗಿಯೂ ಮನಸ್ಸು ತೃಪ್ತವಾಗುವುದು. ಆನಂದವು ಅಭಿವೃದ್ಧಿಹೊಂದುವುದು. ॥೭॥

ಸತ್ಸಂಗತಿಃ ಕಲ್ಪಲತೇವ ಮನ್ಯೇ
ಸರ್ವಾರ್ಥಸಿದ್ಧ್ಯೈ ಭವತೀತಿ ಪುಂಸಾಂ ।
ಧನ್ಯೋಽಸಿ ಮಾನ್ಯೋಽಸಿ ನ ಸಂಶಯೋಽತ್ರ
ಪ್ರಶ್ನಃ ಕೃತೋ ಮುಕ್ತಿದ ಏವ ನೂನಂ ॥೮॥

ಅತಃಪರಂ ಮೇ ವಿಷಯೇಷು ಬುದ್ಧಿಃ
ವಿನಿರ್ಗತಾ ಸಾಪಿ ನ ವಾಸನಾ ಮೇ ।
ಪಾಪೋಪಕಾರೋಽಪಿ ನಿವೃತ್ತ ಏವ
ಪ್ರವೃತ್ತಿರೇವಾದ್ಯ ಶಿವಪ್ರಸಂಗೇ ॥೯॥

ಶಿವಪ್ರಸಂಗಃ ಶಿವದಾಯಕೋ ಮೇ
ಯತಃ ಶಿವಾವಲ್ಲಭಸಂನಿಧಾನಂ ।
ತಸ್ಮಿನ್ಪ್ರಸಂಗೇ ಸತಿ ಸರ್ವಥಾಽಪಿ
ನಾನ್ಯತ್ರ ತಿಷ್ಠತ್ಯಗಜಾಪತಿಸ್ತು ॥೧೦॥

---

ಸತ್ಸಹವಾಸವು ಮನುಜರಿಗೆ ಕಲ್ಪಲತೆಯಂತೆ ಸಕಲ ಇಷ್ಟಾರ್ಥಗಳನ್ನೂ ಒದಗಿಸುವುದು. ಆದುದರಿಂದ ನಿನಗೆ ಈ ಸತ್ಪ್ರಶ್ನೆಯ ಸಹವಾಸ ದೊರೆತುದರಿಂದ ನೀನು ಧನ್ಯನೂ ಮಾನ್ಯನೂ ಆಗಿರುವೆ. ಮತ್ತು ಈ ನಿನ್ನ ಪ್ರಶ್ನೆಯು ನಿನಗೆ ಮುಕ್ತಿದಾಯಕವೆನಿಸುವುದು ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ॥೮॥

ನಿನ್ನ ಸಹವಾಸದಿಂದ ನನಗೆ ಸ್ರಕ್ಚಂದನಾದಿ ವಿಷಯುಗಳಲ್ಲಿ ಆಸಕ್ತಿಯು ಹೊರಟು ಹೋಯಿತು. ಆ ಹಿಂದಿನ ಕರ್ಮಗಳ ವಾಸನೆಯೂ ನಿಂತು ಹೋಯಿತು. ಪಾಪಿಗಳಿಗಾಗಿ ದುಡಿಯುವುದೂ ನಿವೃತ್ತಿಯಾಯಿತು. ಆದರೆ ನನ್ನ ನಡವಳಿಕೆಯೆಲ್ಲಾ ಈಗ ಈಶ್ವರನ ಪೂಜಾಪ್ರಸಂಗದಲ್ಲಿ ಮಾತ್ರವೇ ನಿರತವಾಗಿರುತ್ತದೆ. ॥೯॥

ನನಗೆ ಯಾವಾಗ ಈಶ್ವರನ ಪೂಜಾಪ್ರಸಂಗವು ಒದಗಿತೋ, ಆಗಲೇ ಪಾರ್ವತೀವಲ್ಲಭನಾದ ಈಶ್ವರನ ಸಾನ್ನಿಧ್ಯವು ದೊರೆತಂತಾಯಿತು. ಹೇಗೆಂದರೆ ಶಿವಾರಾಧನೆಯು ಶಿವಸಾಯುಜ್ಯವನ್ನು ಒದಗಿಸುವುದು. ಶಿವಕಥಾಪ್ರಸಂಗಿಯನ್ನು ಬಿಟ್ಟು ಪಾರ್ವತೀಪತಿಯು ಅನ್ಯತ್ರ ಇರಲಾರನು. ॥೧೦॥

ಶಿವಪ್ರಸಂಗಃ ಕ್ವ ಭವಿಷ್ಯತೀತಿ
ವಿಚಾರ್ಯ ತಿಷ್ಠತ್ಯಪಿ ಚಂದ್ರಮೌಳಿಃ ।
ಅತಃ ಪರಂ ಮಂಗಳಹೇತುರೀಶೋ
ಮಹೇಶ್ವರಃ ಸಂನಿಹಿತಃ ಸ್ವಭಾವಾತ್ ॥೧೧॥

ಮಹೇಶ್ವರಾಭ್ಯಾಗಮನೇ ಭವಾನೀ
ಕುಮಾರಮಾದಾಯ ಗಣೇಶಮಾದೌ ।
ಆಯಾಸ್ಯತೀತಿ ದ್ರುತಮೇವ ನಂದೀ
ಭೃಂಗೀ ಚ ಸರ್ವೈಃ ಸ್ವಗಣೈಃ ಸಮೇತಃ ॥೧೨॥

ಅಯಂ ಪ್ರಸಂಗಃ ಶ್ರುತ ಏವ ನೂನಂ
ಕೈಲಾಸಸಿಂಹಾಸನಸಂಸ್ಥಿತೇನ ।
ಶಿವೇನ ಗೌರ್ಯಾಽಪಿ ಗಣೇಶ್ವರೇಣ
ಸ್ಕಂದೇನ ನಂದೀಶಮುಖೈಃ ಸುರೈಶ್ಚ ॥೧೩॥

ಚಂದ್ರಶೇಖರನೆನಿಸಿದ ಪರಶಿವನು ಶಿವಪ್ರಸಂಗವು ಎಲ್ಲಿ ಸಂಭವಿಸುತ್ತದೆಂದು ವಿಚಾರಿಸುತ್ತಲೇ ಇರುವನು. ಇಂತಹ ಪ್ರಸಂಗದಲ್ಲಿ ತಾನು ಸನ್ನಿಹಿತನಾಗಿ ಅಲ್ಲಿ ನಲಿಯುವನು. ಹೀಗಿರುವುದರಿಂದ ಶಿವಧರ್ಮ ಪ್ರಸಂಗದಿಂದಲೇ ಮಂಗಳ ಪ್ರದನಾದ ಶಂಕರನು ತನ್ನ ಸಾನ್ನಿಧ್ಯವನ್ನು ಭಕ್ತರಿಗೆ ಒದಗಿಸುವನು. ||೧೧||

ಮಹೇಶ್ವರನು ಹೊರಡುವನೆಂದ ಕೂಡಲೇ ಪಾರ್ವತಿಯು ಮೊದಲು ಗಣೇಶನನ್ನೂ ಷಣ್ಮುಖನನ್ನೂ ಕರೆದುಕೊಂಡು ಬರುತ್ತಾಳೆ. ಒಡನೆಯೇ ಶೀಘ್ರವಾಗಿ ನಂದಿ, ಭೃಂಗಿ, ಇವರು ತಮ್ಮ ತಮ್ಮ ಸಕಲ ಗಣಗಳೊಡನೆ ಶಂಕರನನ್ನು ಹಿಂಬಾಲಿಸುವರು. ||೧೨||

ಪ್ರಕೃತ—ಕೈಲಾಸಪರ್ವತದಲ್ಲಿ ಸಿಂಹಾಸನಾಧಿರೂಢನಾಗಿರುವ ಈಶ್ವರನೂ, ಪಾರ್ವತಿಯೂ, ಗಣೇಶ, ಸ್ಕಂದ, ನಂದಿಕೇಶ್ವರನೇ ಮುಂತಾದ ದೇವತೆಗಳೂ, ಇವ ರೆಲ್ಲರಿಗೂ ಈ ಶಿವಪ್ರಸಂಗವು ನಿಜವಾಗಿ ಕೇಳಿಯೇ ಕೇಳಿರುವುದು. ||೧೩||

ತೀರ್ಥಾನಿ ಸರ್ವಾಣ್ಯಪಿ ಮೂರ್ತಿಮೇತ್ಯ ।
ಶಿವೇನ ಸಾಕಂ ಗಿರಿಪಪ್ರಸಂಗೇ ।
ಆಗತ್ಯ ಧನ್ಯತ್ವಮುಪೇತ್ಯ ತಾವತ್ ।
ಯಾಸ್ಯಂತಿ ನೂನಂ ನೃಪಸತ್ತ್ರಮಾದ್ಯ ॥೧೪॥

ಶಿವಪ್ರಸಂಗಃ ಸ್ವಯಮೇವ ಪೂಜಾ
ಮಹೇಶ್ವರಸ್ಯೇತಿ ಮತಿರ್ಮಮಾಪಿ ।
ಶಿವಪ್ರಸಂಗೇನ ಸಮಾನಪೂಜಾ
ಯತಃ ಶಿವಾಕರ್ಷಕ ಏವ ಸೋಽಯಂ ॥೧೫॥

ಯತಃ ಶಿವಾಕರ್ಷವಿಶೇಷವಾರ್ತಾ
ಶಿವಸ್ಯ ಪೂಜಾ ಪರಮುಕ್ತಿಹೇತುಃ ।
ತದ್ವಾರ್ತಯಾ ಸಾ ನ ಸುಧಾ ಸಮಾನಾ
ಸಾ ಮುಕ್ತಿದಾ ನೇತಿ ವಿನಿಶ್ಚಯೇನ ॥೧೬॥

ಎಲೈ---ರಾಜಶ್ರೇಷ್ಠನೇ—ಶಂಕರನ ಕಥಾಪ್ರಸಂಗವು ನಡೆಯುವಾಗ ಸಕಲ ತೀರ್ಥಗಳೂ ಕೂಡ ಮೂರ್ತಿಮತ್ತಾಗಿ ಅಲ್ಲಿಗೆ ಬಂದು ಪವಿತ್ರತೆಯನ್ನು ಹೊಂದಿ ಹಿಂದಿರುಗುತ್ತವೆ. ॥೧೪॥

ಈಶ್ವರನ ಕಥಾನುವಾದವೇ ಮಹೇಶ್ವರ ಪೂಜೆಯೆಂದು ನನ್ನ ಅಭಿಪ್ರಾಯ. ಇದು (ಈ ಶಿವಪ್ರಸಂಗವು) ಈಶ್ವರನನ್ನು ಸಾಕ್ಷಾತ್ಕಾರಮಾಡಿಕೊಡುತ್ತದೆ. ಆದುದರಿಂದ ಈಶ್ವರನ ಪ್ರಸಂಗದಂತಹ ಪೂಜೆಯು ಮತ್ತೊಂದಿಲ್ಲ. ॥೧೫॥

ಪರಶಿವನಿಗೆ ತೃಪ್ತಿಕರವಾದ, ಶಿವೇತಿಹಾಸಪ್ರಸಂಗ, ಶಿವಪೂಜಾಚರಣ, ಇವು ಸಾಕ್ಷಾನ್ಮುಕ್ತಿಕಾರಣಗಳು. ಅಮೃತದಿಂದಲೂ ದೊರೆಯಲಾರದಂತಹ ಸುಖವೂ, ಸ್ಥಿರಮುಕ್ತಿಯೂ ಇವುಗಳಿಂದ ನಮಗೆ ಲಭಿಸುವುದು. ॥೧೬॥

ಈಶ್ವರನ ವಿಚಾರಪ್ರಸಂಗವು ವಿರೂಪಾಕ್ಷ (ಈಶ್ವರ)ನಿಗೆ ಹಿತವಾದುದೂ, ಸಂಸಾರದ ಸಂಗವೆಂಬ ಅಂಕುರಕ್ಕೆ ಬೆಂಕಿಯಂತೆಯೂ ಇರುವುದು. ಆದರಿಂದಲೇ ಈ ಪ್ರಸಂಗವನ್ನು ಕೇಳುವುದು ಮಾತ್ರದಿಂದಲೇ ಶಾಶ್ವತವಾದ ಮುಕ್ತಿಯು ಲಭಿಸುತ್ತದೆ. ॥೧೭॥

ಶಿವಪ್ರಸಂಗಃ ಸ್ವಯಮೇವ ಮುಕ್ತಿಂ
ಕರೋತಿ ಸದ್ಯಃ ಶ್ರುತ ಏವ ಸಾಕ್ಷಾತ್ ।
ಯತೋ ವಿರೂಪಾಕ್ಷಹಿತಃ ಪ್ರಸಂಗಃ
ಸಂಸಾರಸಂಗಾಂಕುರಪಾವಕೋಽಯಂ ॥೧೭॥

ಶಿವಪ್ರಸಂಗೋ ಧನಮಸ್ಮದೀಯಂ
ನ ಚೋರಹಾರ್ಯಂ ನ ತದನ್ಯಹಾರ್ಯಂ ।
ಶ್ರುತೋಽಪಿ ಭೂಯೋ ಭವತಿ ಪ್ರವೃದ್ಧೋ
ಧೃತೋಽಪಿ ಸಂಸಾರಹರಃ ಸ್ವಭಾವಾತ್ ॥೧೮॥

ಶಿವಪ್ರಸಂಗೇನ ವಿಮುಕ್ತಿಲಾಭೇ
ಕಥಾ ಸುಧಾರಾಶಿಕೃತೋಪಕಾರಃ ।
ನ ಕೋಽಪಿ ತಾವತ್ಸಪರಂ ಮಹೇಶ
ಗೌರೀಸಮಾಕರ್ಣಯ (?) ಹೇತುಭೂತಃ ॥೧೯॥

ಶಿವಪ್ರಸಂಗವೆಂಬುದೇ ನಮಗೆ ಧನರೂಪ. ಇದನ್ನು ಯಾವ ಚೋರರೇ ಆಗಲಿ, ಅಥವಾ ಇತರ (ದಾಯಾದಿ ಇತ್ಯಾದಿ)ರೇ ಆಗಲಿ ಅಪಹರಿಸಲಾರರು. ಶಿವೇತಿ ಹಾಸದ ಶ್ರವಣದಿಂದಲೇ ಐಹಿಕ ಸುಖವು ವೃದ್ಧಿ ಹೊಂದುವುದು. ಆದರೂ ಕೊನೆಯಲ್ಲಿ ಅದು ಸಂಸಾರದ ದುಃಖವನ್ನು ಅಪಹರಿಸುತ್ತದೆ. ಇದೇ ಅದರ ವಿಶೇಷ ಸ್ವಭಾವ. ॥೧೮॥

ಕೇವಲ ಶ್ರವಣದಿಂದಲೇ ಮೋಕ್ಷವೀಯುವ ವಸ್ತುವೆಂದರೆ ಶಿವಧರ್ಮ ಪ್ರಸಂಗವೇ. ಇದರ ಪ್ರಯೋಜನವನ್ನು ಸುಧಾರಾಶಿಯೂ ಸಹ ಪಡೆದು ಧನ್ಯವೆನಿಸಿರುವುದು. ತತ್ಸದೃಶವಾದ ದೇವತಾಂತರ ಭಜನೆಯೂ, ಗೌರೀಮನೋರಂಜಕವಾದ ಇತರಕಾರ್ಯಗಳೂ ಲೋಕದಲ್ಲಿ ಸ್ಪಷ್ಟವಾಗಿ ತಿಳಿದು ಬರಲಾರವು. ॥೧೯॥

ಶಿವವಿಷಯಕವಾದ ಕಥಾ ಪ್ರಸಂಗದಿಂದಲೇ ಮುಕ್ತರಾದ ನಮಗೆ ಪಾರ್ವತೀಪತಿಯಾದ ಶಿವನು ಪ್ರಸನ್ನನಾಗಿ ನಮಗೆ ವಿಶೇಷವಾದ ಮತ್ತಾವ ಫಲವನ್ನು ಕೊಡಬೇಕು? ॥೨೦॥

ಶಿವಪ್ರಸಂಗಮುಕ್ತ್ವಾನಾಮಸ್ಮಾಕಂ ಗಿರಿಜಾಪತಿಃ ।
ಪ್ರಸನ್ನೋಽಪಿ ವಿಶೇಷೇಣ ಕಿಮಸ್ಮಭ್ಯಂ ಪ್ರದಾಸ್ಯತಿ ॥೨೦॥

ಮಹಾಮುಕ್ತಿರ್ಮಹಾದೇವಚರಣಾಂಬುಜರೇಣುಭಿಃ ।
ಸಹಾವಾಸಃ ಸ ತಾವತ್ಸ್ಯಾತ್ ತತ್ಕಥಾಶ್ರವಣಾನ್ನೃಪ ॥೨೧॥

ಮಹೇಶ್ವರಕಥಾ ಸುಧಾಂ ಪಿಬತಿ ಶಂಕರಃ ಶಾಂಕರೀ
ಕುಮಾರ ಗಣನಾಯಕ ಪ್ರಮಥದೇವವೃಂದೈಃ ಸಹ ।
ಇಯಂ ಖಲು ಸುಧಾಪರಾ ಪರಮಮುಕ್ತಿದಾನೋತ್ಸವಾ
ಕದಾಪಿ ನ ಸಮಾನಮಿತ್ಯಪಿ ಮತಿಃ ಪ್ರವೃದ್ಧಾ ಭುವಿ ॥೨೨॥

ಆನಂದೇನ ನ ಪೀಯತೇ ನಿಯಮತಃ ಸಾ ದುರ್ಲಭಾ ದುರ್ಲಭಂ ।
ತದ್ಭಿನ್ನಂ ನನು ಸರ್ವಥಾಽಪಿ ನ ಕೃತಿಸ್ತಸ್ಯಾಂ ಸುಧಾಯಾಂ ನೃಪಃ
ಸಾ ತಾವತ್ಸ್ವಯಮೇವ ಶಂಕರಕೃಪಾರೂಪಾಪಿ ನಿತ್ಯಾಽಪಿ ಸಾ ।
ತದ್ಧ್ಯಾನೇನ ಸಮಾಸಮಾನಮಿತರಜ್ಜನ್ಯಂ ನ ತೇನಾಸ್ತ್ಯಪಿ ॥೨೩॥

ಮಹಾದೇವ (ಈಶ್ವರ)ನ ಚರಣಕಮಲಗಳ ಧೂಳಿಗಳಿಂದ ಮಹಾಮುಕ್ತಿಯೂ, ಮತ್ತು ಅವನ ಕಥಾಶ್ರವಣದಿಂದ ಈಶ್ವರಸಾಯುಜ್ಯವೂ ದೊರೆಯುವುದೆಂದು ದೃಢವಾಗಿ ನಂಬು. ॥೨೧॥

ಈಶ್ವರ ಕಥೆಯೆಂಬುದೇ ದಿವ್ಯವಾದ ಅಮೃತ. ಅದೇ ಶ್ರೇಷ್ಠವಾದ ಮುಕ್ತಿಯನ್ನು ಕೊಡುವ ವಸ್ತುವು. ಇಂತಹ ಈಶ್ವರಕಥೆಯೆಂಬ ಅಮೃತವನ್ನು ಪಾರ್ವತಿ, ಷಣ್ಮುಖ, ಗಣಪತಿ, ಪ್ರಮಥಗಣ ಮತ್ತು ದೇವತೆಗಳ ವೃಂದ, ಇವುಗಳೊಡಗೂಡಿ ಸಾಕ್ಷಾತ್ ಶಂಕರನೇ ಪಾನಮಾಡಲು ತೊಡಗುವನು. ಅಲ್ಲದೆ ಶಿವಕಥೆಗೆ ಸದೃಶವಾದ ಪದಾರ್ಥವೇ ಲೋಕದಲ್ಲಿ ಬೇರೊಂದಿಲ್ಲವೆಂದು ಶಂಕರನು ಅಭಿಪ್ರಾಯಪಡುವನು. ॥೨೨॥

ಎಲೈ ರಾಜನೇ, ಒಂದು ವೇಳೆ ಶಿವಪ್ರಸಂಗವನ್ನು ಬಿಟ್ಟು ಅಮೃತಪಾನಮಾಡುವ ಸನ್ನಿವೇಶವು ಒದಗಿದರೂ, ಅದನ್ನು ನಾನು ಆನಂದದಿಂದ ಕುಡಿಯಲಾರೆ. ಏತಕ್ಕೆಂದರೆ ಶಿವೇತಿಹಾಸ ಸದೃಶವಾದ ಮತ್ತೊಂದು ವಸ್ತುವೇ ಲೋಕದಲ್ಲಿಲ್ಲ. ಆ ಶಿವಕಥಾಪ್ರಸಂಗವೊಂದು ದೊರೆತರೆ ಅಮೃತಪಾನದಿಂದ ಯಾವ ಪ್ರಯೋಜನವೂ ನಮಗೆ ದೊರೆಯಲಾರದು. ಅಮೃತವೆಂಬುದೂ, ಶಂಕರನ ಕೃಪಾ

ಸಾ ತಾವದ್ಗಿರಿಶಪ್ರಸಾದಜನಿತಾ ಜನ್ಮಾದಿದುಃಖಾಟವೀ ।
ಕಲ್ಪಾಂತಾನಲ ಏವ ಸಾ ನ ಸುಲಭಾ ವಿಶ್ವೇಶ್ವರಾನುಗ್ರಹೇ ।
ಸಾ ತಾವತ್ಸುಲಭಾ ಭವತ್ಯಪಿ ಸುಧಾ ತದ್ಗೋಪನಂ ಸರ್ವಥಾ
ಕರ್ತವ್ಯಂ ಶಿವಯೋಗಿನೇ ಪರಮಿಯಂ ದೇಯಾ ಸುಧಾ ಮುಕ್ತಯೇ॥ ೨೪॥

ಶಿವಕಥಾಮೃತಪಾನಧನಃಸದಾ ।
ಧನಪತೇರ್ಧನಮಿಚ್ಛತಿ ಕಃ ಪುಮಾನ್ ।
ತದಿದಮಸ್ಯ ಧನಂ ನ ಧರಾಪತೇ ।
ಧನದಕೋಶಗೃಹೇಽಪಿ ನ ತದ್ಧನಂ ॥ ೨೫॥

ಧನಾನಿ ತಾವದ್ಬಹುವಿಧಾನಿ ಲೋಕೇ
ವ್ಯಥಾಕರಾಣ್ಯೇವ ತದಾರ್ಜನೇಽಪಿ ।

ರೂಪವೇ. ಅದರಿಂದ ಲಭಿಸುವುದೇ ಈ ಅಮೃತ. ಆದ್ದರಿಂದಲೇ ಅಂತಹ ಅಮೃತವನ್ನಾದರೂ ದೂರಮಾಡಿ, ಅದಕ್ಕಿಂತಲೂ ಉತ್ತಮವೆನಿಸಿದ ಶಿವಕಥಾ ಪ್ರಸಂಗವನ್ನು ಕೈಗೊಳ್ಳುವೆನು. ॥೨೩॥

ಪರಶಿವನ ಪ್ರಸಾದದಿಂದ ಉದಯಿಸತಕ್ಕ ಆ ಅಮೃತವು ಜನನ, ಮರಣ, ಇತ್ಯಾದಿ ದುಃಖವೆಂಬ ಕಾಡಿಗೆ ಕಾಡುಕಿಚ್ಚಿನಂತಿರುವುದು. ಆದರೆ ಅದು ಸುಲಭವಾಗಿ ದೊರೆಯುವುದಲ್ಲ. ವಿಶ್ವೇಶ್ವರನ ಅನುಗ್ರಹವಿದ್ದರೆ ಒಂದು ವೇಳೆ ಸುಲಭವಾಗಿ ದೊರೆತೀತು ಈ ವಿಷಯವನ್ನು (ಅಮೃತವನ್ನು) ಗೋಪ್ಯವಾಗಿಟ್ಟಿರಬೇಕು. ಅನಂತರ ಇದನ್ನು ಮೋಕ್ಷಾಭಿಲಾಷಿಯೂ, ಶಿವಭಕ್ತಿಯುಳ್ಳವನೂ ಆದವನಿಗೆ ದಾನಮಾಡಬೇಕು. ॥೨೪॥

ಶಿವಕಥಾಮೃತಪಾನವನ್ನೇ ಧನವನ್ನಾಗಿ ಉಳ್ಳ ಯಾವ ಮನುಜನು ತಾನೆ ಕುಬೇರನ ಐಶ್ವರ್ಯವನ್ನು ಅಪೇಕ್ಷಿಸಿಯಾನು ? (ಇದು ಅದಕ್ಕಿಂತಲೂ ದೊಡ್ಡದು) ಎಲೈ ರಾಜನೇ—ಈ ಅಮೃತಪಾನವೆಂಬುದೇ ಒಂದು ಅಮೂಲ್ಯ ನಿಧಿಯಾಗಿದೆ. ಈ ಧನವು ಕುಬೇರನ ಕೋಶಾಗಾರದಲ್ಲಿಯೂ ದೊರೆಯಲಾರದು. ॥೨೫॥

ಲೋಕದಲ್ಲಿ ಧನವೆಂಬುದು ಅನೇಕವಿಧವಾಗಿದೆ. ಅವೆಲ್ಲವನ್ನೂ ಸುಲಭವಾಗಿ ಸಂಪಾದಿಸಲು ಸಾಧ್ಯವಿಲ್ಲ. ಒಂದುವೇಳೆ ದುಃಖದಿಂದ ಸಂಪಾದಿಸಿದರೂ

ವ್ಯಯೋಽಪಿ ವಿಶ್ವೇಶಕಥಾನಿಧಾನಂ
ನ ದುರ್ಲಭಂ ಶಾಂಭವಪುಂಗವಾನಾಂ ॥೨೬॥

ಅಪಾರಪುಣ್ಯಯೋಗೇನ ಶ್ರುತಾ ಶಿವಕಥಾಸುಧಾ ।
ಪಾಪಾಗ್ನಿ ತಪ್ತಜಿಹ್ವಾಗ್ರತೃಷಾಮಪಹರಿಷ್ಯತಿ ॥೨೭॥

ಸಂಸಾರಾನಲಸಾಗರಾನಿಲಮಹಾಜ್ವಾಲಾಕುಲವ್ಯಾಕುಲೇ
ನಿರ್ದಗ್ಧಸ್ತೃಷಿತಃ ಕ್ಷುಧಾನಲಕುಲವ್ಯಾಪ್ತೋದರಃ ಸಾದರಂ ।
ಯೋ ಭಕ್ತ್ಯಾ ಸಕೃದೇವ ವಾ ಶಿವಕಥಾಪೀಯೂಷರಾಶಿಂ ಮುದಾ
ಶ್ರುತ್ವಾ ತೃಪ್ತಿಮುಪೈತಿ ತಸ್ಯ ನ ತೃಷಾ ಕ್ಷುದ್ವಾ ನ ತದ್ವೇದನಾ ॥೨೮॥

ಆನಂದಾಮೃತಸಿಂಧುರೇವ ಗಿರಿಜಾಕಾಂತಪ್ರಭಾವಪ್ರಥಾ
ಪೀಯೂಷಾರ್ಣವವರ್ಣನಂ ಶಿವಕಥಾಸಾರಸ್ತ್ವಸಾರಃ ಪರಂ ।
ಸಂಸಾರಾರ್ಣವಮೋಚಕೋತ್ತಮ ಇತಿ ಜ್ಞಾತಸ್ತತಸ್ತತ್ಪರಂ
ಕಿಂ ವಾ ಸ್ಯಾದಿತಿ ಚಿಂತನೇಽಪಿ ನ ಸಮಸ್ತೇನಾಸ್ತಿ ಲೋಕತ್ರಯೇ॥೨೯॥

ವ್ಯಯಮಾಡುವುದರಲ್ಲಿ ಮತ್ತಷ್ಟು ವ್ಯಥೆಯುಂಟಾಗುತ್ತದೆ. ಈಶ್ವರಭಕ್ತರಾದವರಿಗೆ ಮಾತ್ರ ಜಗದ್ರಕ್ಷಕನಾದ ಶಿವನಾಮವೆಂಬ ಧನವು ದುರ್ಲಭವಲ್ಲ. ॥೨೬॥

ಅಪಾರವಾದ ಪುಣ್ಯಯೋಗದಿಂದ ಈಶ್ವರನ ಕಥೆಯೆಂಬ ಅಮೃತವು ಕೇಳಲ್ಪಟ್ಟಿತು. ಈ ಕಥಾಶ್ರವಣವು ಪಾಪಾಗ್ನಿಯಿಂದ ತಪ್ತವಾದ ಪಾಪಿಗಳ ನಾಲಿಗೆಯ ತುದಿಯಲ್ಲಿರತಕ್ಕ ಬಾಯಾರಿಕೆಯನ್ನು ಅಪಹರಿಸುತ್ತದೆ. ॥೨೭॥

ಯಾವನು ಸಂಸಾರವೆಂಬ ಅಗ್ನಿಯಿಂದಲೂ ದುಃಖಸಾರವೆಂಬ ಗಾಳಿಯಿಂದಲೂ ಕೂಡಿ ಮಹಾಜ್ವಾಲೆಗಳಲ್ಲಿ ದಗ್ಧನಾಗಿ ಬಾಯಾರಿಕೆ, ಹಸಿವು ಇವುಗಳಿಂದ ಕೂಡಿದವನಾಗಿರುವನೋ, ಅವನು ಭಕ್ತಿಯಿಂದ ಒಂದುಸಾರಿಯಾದರೂ ಈಶ್ವರನ ಕಥೆಯೆಂಬ ಅಮೃತವನ್ನು ಸಂತೋಷದಿಂದ ಶ್ರವಣಮಾಡಿದುದೇ ಆದರೆ ಅವನಿಗೆ ತೃಪ್ತಿಯಾಗುತ್ತದೆ. ಮತ್ತು ಬಾಯಾರಿಕೆ, ಹಸಿವು, ವೇದನೆ ಇತ್ಯಾದಿಗಳು ಯಾವುವೂ ಉಂಟಾಗುವುದಿಲ್ಲ. ॥೨೮॥

ಪಾರ್ವತೀಪತಿಯಾದ ಶಿವನ ಪ್ರಭೆಯನ್ನು ಬೀರುವ ಕಥಾಮೃತದ ವರ್ಣನೆಯೇ ಆನಂದಾಮೃತದ ಸಮುದ್ರದಂತಿರುತ್ತದೆ. ಇದರ ಮುಂದೆ ನಿಜವಾದ

ಅತಃ ಶಿವಕಥಾಲಾಪ್ಯೈರಪಲಾಪ್ಯೋಽಪಿ ಸಂಸೃತೇಃ ।
ಅತಃ ಸತ್ಸಂಗತೇರೇವ ತತ್ಕಥಾಸ್ವರ್ಧುನೀಹೃದಿ ॥೩೦॥

ಪ್ರಭಾವಃ ಶಿವಲಿಂಗಾನಾಂ ಅಪಾರಸ್ತಸ್ಯ ವರ್ಣನಂ ।
ನ ಮಯಾ ನಾಮರ್ತ್ಯೈರ್ನಾಪಿ ವೇದೈರಪಿ ನ ಶಕ್ಯತೇ ॥೩೧॥

ಶಿವಲಿಂಗಪ್ರಭಾವಜ್ಞಃ ಕೋಽಪಿ ಲೋಕತ್ರಯೇ ಮಹಾನ್ ।
ಭವಿಷ್ಯತಿ ನ ವಾ ನಾಸ್ಮನ್ಮನಸ್ತದ್ವರ್ಣನಕ್ಷಮಂ ॥೩೨॥

ನ ವಾಚಾಂ ವಿಷಯಸ್ತಾವಲ್ಲಿಂಗವರ್ಣನಮಿತ್ಯತಃ ।
ವೇದಾಂತಾಸ್ತತ್ರ ವಿಶ್ರಾಂತಾಃ ಕೃತಾಂತಾಂತಕಕೀರ್ತನಾತ್ ॥೩೩॥

ಸುಧಾಸಮುದ್ರದ ವರ್ಣನೆಯು ನಿಲ್ಲಲಾರದು. ಸಂಸಾರಸಾಗರದಿಂದ ಬಿಡುಗಡೆ ಮಾಡುವುದರಲ್ಲಿ ಸಮರ್ಥವಾದುದು ಈಶ್ವರಕಥಾಪ್ರಸಂಗವಲ್ಲದೆ ಮತ್ತಾವುದೂ ತೋರುವುದಿಲ್ಲ. ಶಿವಕಥೆಗಿಂತ ದೊಡ್ಡದು ಯಾವುದೆಂದು ಯೋಚಿಸುವುದೂ ಅಯುಕ್ತವಾದುದು. ತದಧಿಕವಾದ ವಸ್ತುವೊಂದು ಲೋಕತ್ರಯದಲ್ಲಿಯೂ ಇರುವುದಿಲ್ಲ. ||೨೯||

ಈಶ್ವರನ ಕಥಾಲಾಪಗಳಿಂದ ಸಂಸಾರದ ದುಃಖವು ಭಕ್ತರಿಗೆ ನಾಶವಾಗುತ್ತದೆ. ಅದನ್ನು ತಿರಸ್ಕರಿಸುವುದರಿಂದ ಎಂದೂ ಅವರು ದುಃಖಮುಕ್ತರಾಗುವುದಿಲ್ಲ. ಸತ್ಪುರುಷರಿಂದ ಬಂದ ಶಿವಕಥಾರೂಪವಾದ ದೇವಗಂಗೆಯಿಂದ ಮುಕ್ತರಾಗುವರು. ||೩೦||

ಈಶ್ವರ ಲಿಂಗಗಳ ಮಹಿಮೆಯು ಅಪಾರವಾದುದು. ಆದುದರಿಂದ ಇದರ ವರ್ಣನೆಯನ್ನು ಮಾಡಲು ಕೇವಲ ನನ್ನಿಂದಲೇ ಅಲ್ಲ. ಅದು ದೇವತೆಗಳಿಂದಲೂ, ವೇದಗಳಿಂದಲೂ ಸಹ ಸಾಧ್ಯವಾಗಲಾರದು. ||೩೧||

ಈಶ್ವರಲಿಂಗದ ಮಹಿಮೆಯನ್ನರಿತವನು ಮೂರು ಲೋಕಗಳಲ್ಲಿ ಯಾವನಿರುವನೋ, ತಿಳಿಯದು. ಅಂತೂ ಶಿವಲಿಂಗಮಹಿಮೆಯನ್ನು ವರ್ಣನೆಮಾಡಲು ನಮ್ಮ ಮನಸ್ಸೂ ಸಹ ಸಮರ್ಥವಾಗಿಲ್ಲ. ||೩೨||

ಶಿವಲಿಂಗವರ್ಣನೆಯು ಮಾತುಗಳಿಂದ ಮುಗಿಯಲಾರದು ಎಂದು ಯಮನಿಗೂ ಯಮನಂತಿರತಕ್ಕ ಈಶ್ವರನ ಕೀರ್ತನೆಯನ್ನು ವೇದವೇದಾಂತಗಳೂ ಹೊಗಳುತ್ತಿರುವುವು. ||೩೩||

ಯಸ್ಮಿನ್ ಕಾಲೇ ಮತಿರ್ಯಸ್ಯ ಶಿವಲಿಂಗಾವಲೋಕನಾತ್ ।
ಸ ತಾವದ್ಧನ್ಯ ಏವೇತಿ ಕಾಲೋಽಯಂ ಸುತರಾಮಪಿ ॥೩೪॥

ಲಿಂಗರೂಪಂ ಸಮಾಸಾದ್ಯ ರಮತೇ ಗಿರಿಜಾಪತಿಃ ।
ಲಿಂಗರೂಪಂ ಪ್ರಿಯಂ ತಸ್ಯ ಲಿಂಗೇ ಗೃಹ್ಣಾತಿ ಪೂಜನಂ ॥೩೫॥

ಲಿಂಗಂ ಮಂಗಳದತ್ವೇನ ಜ್ಞಾತಂ ಯೇನ ಮಹಾತ್ಮನಾ ।
ಸ ಮಂಗಳಾಪತಿಂ ಯಾತಿ ತಜ್ಜ್ಞಾನಮತಿದುರ್ಲಭಂ ॥೩೬॥

ಲಿಂಗಂ ಮಂಗಳದಂ ವಿದುರ್ಮುನಿವರಾಃ ಸರ್ವೇ ಸುರಾಃ ಕಿನ್ನರಾಃ ।
ಸಿದ್ಧಾಃ ಕಿಂಪುರುಷಾ ಗಣಾಶ್ಚ ವಿವಿಧಾ ಶೇಷಾದಯೋಽಪ್ಯನ್ವಹಂ ।

ತಲ್ಲಿಂಗಾರ್ಚನತತ್ಪರಾತ್ಪರಮಿದಂ ಲಿಂಗಂ ಯತಃ ಸರ್ವದಾ ।
ಸರ್ವಾರ್ಥಪ್ರದಮಿತ್ಯವೈಮ್ಯಹಮಪಿ ಪ್ರಾಗ್ಜನ್ಮಪುಣ್ಯೈರ್ನೃಪ ॥೩೭॥

---

ಯಾವ ಮನುಜನಿಗೆ ಯಾವ ಕಾಲದಲ್ಲಿ ಶಿವಲಿಂಗದ ದರ್ಶನ ಬುದ್ಧಿ ಯುಂಟಾಗುವುದೋ, ಆಗಲೇ ಅವನೂ ಆ ಕಾಲವೂ ಕೂಡ ಧನ್ಯವೆನಿಸುವುವು.॥೩೪॥

ಪಾರ್ವತೀಪತಿಯಾದ ಪರಮೇಶ್ವರನು ಲಿಂಗರೂಪವನ್ನು ಹೊಂದಿ ರಮಿಸುತ್ತಾನೆ. ಆದುದರಿಂದ ಶಿವನಿಗೆ ಲಿಂಗರೂಪವೇ ಪ್ರಿಯವಾದುದು. ಶಿವಲಿಂಗ ಪೂಜೆಯೇ ಶಿವಪ್ರೀತಿಕರ. ॥೩೫॥

ಯಾವ ಮಹಾನುಭಾವನು ಶಿವಲಿಂಗವನ್ನು ಮಂಗಳದಾಯಕವೆಂಬುದಾಗಿ ತಿಳಿಯುತ್ತಾನೆಯೋ, ಅಂತಹವನು ಮಂಗಳಾಪತಿ (ಗೌರೀಪತಿ) ಯಾದ ಶಿವನನ್ನು ಹೊಂದುತ್ತಾನಾದುದರಿಂದ ಆ ಜ್ಞಾನವು ಜನರಿಗೆ ಬಹು ದುರ್ಲಭ. ॥೩೬॥

ಎಲೈ ರಾಜನೇ—ಸಕಲ ಮುನಿವರ್ಯರೂ, ದೇವತೆಗಳೂ, ಕಿನ್ನರರೂ, ಸಿದ್ಧರೂ, ಕಿಂಪುರುಷರೂ, ಅನೇಕ ವಿಧವಾದ ದೇವಗಣಗಳೂ, ಆದಿಶೇಷನೇ ಮೊದಲಾದವರೂ ಕೂಡ ಶಿವಲಿಂಗವನ್ನು ಮಂಗಳದಾಯಕವಾದುದನ್ನಾಗಿ ತಿಳಿದಿರುವರು. ಅದರಂತೆ ನಾನೂ ಸಹ ಈ ಶಿವಲಿಂಗವು ಮತ್ತು ಅದರ ಪೂಜೆಯೂ ಸಹ, ಸರ್ವೋತ್ಕೃಷ್ಟವಾದುದೆಂದು ನಿಶ್ಚಯಿಸಿರುವೆನು. ಈ ಅಂಶವು ನನಗೆ ನನ್ನ ಪೂರ್ವ ಜನ್ಮದ ಸುಕೃತಗಳಿಂದ ತಿಳಿಯಿತು. ॥೩೭॥

ಲಿಂಗಂ ನಾರ್ಮದಮುಕ್ತಮೋತ್ತಮತಮಂ ಲಿಂಗೇಷು ತತ್ಪೂಜಯಾ
ಸಾಕ್ಷಾತ್ಪೂಜಿತ ಏವ ತೇನ ಸದೃಶಂ ಲಿಂಗಂ ನ ಭೂಮಂಡಲೇ ।
ತದ್ಬಿಲ್ವೀವನಪಲ್ಲವೈರನುದಿನಂ ಯೇನಾರ್ಚಿತಂ ಸಾದರಂ
ಭಕ್ತ್ಯಾ ತತ್ಸಕೃದೇವ ವಾ ಸ ಹಿ ಮಹಾನ್ ಮಾನ್ಯೋ ಮಹೇಶಪ್ರಿಯಃ
॥೩೮॥

ಯಃ ಪ್ರಾತಃ ಪ್ರಯತಃ ಪ್ರಪಶ್ಯತಿ ಮುಹುಃ ಲಿಂಗಂ ವಿಭೂತ್ಯಾ ಪರಂ
ಪೂತಸ್ಸನ್ ಪ್ರಣತಃ ಸ್ವತೋಽಪಿ ಪರತೋ ಮುಕ್ತೋ ಭವೇತ್ಪಾತಕೈಃ ।
ತಲ್ಲಿಂಗಂ ವಿಮಲೈರ್ಜಲೈರಭಿನವೈರ್ಬಿಲ್ವೀದಲೈರರ್ಚಯನ್ ।
ಅರ್ಚಾಮೇವ ಸ ಸಂಸೃತೇಃ ಖಲು ಕರೋತ್ಯಾಕಲ್ಪಮಂತೇಽಪಿ ವಾ ॥೩೯॥

ಲಿಂಗಾರಾಧನಪುಣ್ಯರಾಶಿರಸಕೃದ್ವೃದ್ಧಃ ಪ್ರವೃದ್ಧಃ ಪುನಃ
ಸಂಸಾರಾರ್ಣವಶೋಷಕಃ ಖಲು ಮಹಾಪಾಪೌಘವಿಧ್ವಂಸಕಃ ।

---

ಶಿವಲಿಂಗಗಳು ಎಷ್ಟೋ ಕಂಡುಬರುತ್ತವೆ. ಅವುಗಳಲ್ಲಿ ನರ್ಮದಾ ಲಿಂಗವು ಸರ್ವೋತ್ಕೃಷ್ಟವಾದುದು. ಇದಕ್ಕೆ ಸಮನಾದ ಶಿವಲಿಂಗವು ಭೂಮಂಡಲದಲ್ಲಿ ಇಲ್ಲವೇ ಇಲ್ಲ. ಇಂತಹ ಲಿಂಗವನ್ನು ಯಾವನು ಆದರದಿಂದ ಬಿಲ್ವಪತ್ರೆಗಳ ಚಿಗುರುಗಳಿಂದ ನಿತ್ಯವೂ ಭಕ್ತಿಯಿಂದ ಒಂದು ಸಾರಿಯಾದರೂ ಅರ್ಚಿಸುವನೋ, ಅವನು ಈಶ್ವರನಿಗೆ ಪ್ರಿಯನೆನಿಸುವನು. ಆದುದರಿಂದಲೇ ಅವನು ಲೋಕದಲ್ಲಿ ಮಹಾತ್ಮನೂ ಮಾನ್ಯನೂ ಎನಿಸುವನು. ||೩೮||

ಯಾವನು ಪ್ರಾತಃಕಾಲದಲ್ಲಿ ಎದ್ದು ವಿಭೂತಿಧಾರಣೆಯಿಂದ ಪೂತನಾಗಿ ಶಿವಲಿಂಗವನ್ನು ಆಗಾಗ ನಮಸ್ಕರಿಸುವನೋ ಅವನು ಪಾತಕಗಳಿಂದ ಮುಕ್ತನಾಗುವನು. ಮತ್ತೂ ಹೆಚ್ಚಾಗಿ ಆ ಲಿಂಗವನ್ನು ಪರಿಶುದ್ಧವಾದ ನೀರು, ಹೊಸದಾಗಿರತಕ್ಕ ಬಿಲ್ವಪತ್ರೆ ಇವುಗಳಿಂದ ಸೇವಿಸುವವನು ಕಲ್ಪಪರ್ಯಂತ ಮತ್ತು ಕಲ್ಪಾಂತ್ಯದಲ್ಲಿಯೂ ಕೂಡ ಸಂಸಾರದ ಬೇಗೆಯನ್ನೇ ಹೊಂದಲಾರನು. ಶಾಶ್ವತಮುಕ್ತಿಯನ್ನು ಅನಾಯಾಸವಾಗಿ ಸಂಪಾದಿಸುವನು. ||೩೯||

ಶಿವಲಿಂಗಾರ್ಚಕನಿಗೆ ಆ ಲಿಂಗದ ಸೇವನೆಯಿಂದ ಉಂಟಾದ ಪುಣ್ಯಸಮೂಹಗಳು ಬಾರಿಬಾರಿಗೂ ಅಭಿವೃದ್ಧಿಯನ್ನುಂಟುಮಾಡುತ್ತಲೂ, ಆತನ ಸಂಸಾರವೆಂಬ ಸಮುದ್ರವನ್ನು ಒಣಗಿಸುತ್ತಲೂ, ಮತ್ತು ಮಹಾಪಾತಕಗಳ ಸಮೂಹಗಳನ್ನು

ತೇನೈವಾಮೃತತಾಮುಪೈತಿ ಸ ಪುನಃ ಸಂಸಾರವಾರ್ತಾರಸಂ
ನ ಸ್ವಪ್ನೇಽಪಿ ಸ ಪಶ್ಯತೀತಿ ಸುಮಹಾಲಿಂಗಾರ್ಚಕೋ ಭೂಪತೇ ॥೪೦॥

ಲಿಂಗಾರ್ಚಕೇನ ಸದೃಶೋ ನ ಮಹಾಧ್ವರಾಣಾಂ
ಕರ್ತಾಪಿ ತಸ್ಯ ತು ಫಲಂ ಖಲು ತುಚ್ಛಮೇವ ।
ಸ್ವರ್ಗಾತ್ಮಕಂ ಶಿವಪದಾಂಬುಜಪೂಜಕಸ್ಯ
ತತ್ತಾವದಿತಿಷ್ಟಮಿತಿ ನೇತಿ ವದಂತಿ ಸಿದ್ಧಾಃ ॥೪೧॥

ಯೋ ರಂಭಾಪರಿರಂಭಣೇಽಪಿ ಶುನಕೀತುಂಗಾಂಗಸಂಗೇಽಪಿ ವಾ
ತುಲ್ಯತ್ವಂ ಮನುತೇ ಶಿವಾರ್ಚನಪರಃ ಸ ಸ್ವರ್ಗವಾಂಛಾ ಕಥಂ ।
ಕರ್ತುಂ ವಾ ಯತತೇ ವಿರಕ್ತಮನಸಾಂ ತತ್ರಾಪ್ಯಪೇಕ್ಷಾ ಕಥಂ
ಮೋಕ್ಷೇಚ್ಛಾಪರಮಸ್ತಿ ತಸ್ಯ ಸತತಂ ಲಿಂಗಾರ್ಚಕಸ್ಯ ಧ್ರುವಂ ॥೪೨॥

ನಾಶಪಡಿಸುತ್ತಲೂ ಇರುವುದು. ಮತ್ತು ಆತನು ಅದರಿಂದಲೇ ಮರಣರಹಿತನಾಗಿ ಸಂಸಾರದ ವಾರ್ತೆಯನ್ನು ಸ್ವಪ್ನದಲ್ಲಿಯೂ ಕೂಡ ಕಾಣದೆ ಮುಕ್ತನೆನಿಸುವನು. ॥೪೦॥

ಮಹಾಯಾಗಗಳನ್ನು ಮಾಡಿದಂತಹವರೂ ಕೂಡ ಲಿಂಗಾರ್ಚಕರಿಗೆ ಮಹಿಮೆಯಲ್ಲಿ ಸದೃಶರೆನಿಸಲಾರರು. ಯಾಗಗಳಿಂದ ದೊರಕುವ ಫಲವೂ ಕೂಡ ಅಲ್ಪವಾದುದೇ. ಸ್ವರ್ಗಕಾಮಿಯಾದವನು ಜ್ಯೋತಿಷ್ಟೋಮಯಾಗಮಾಡಬೇಕೆಂದು ಹೇಳುವಂತೆ ಈಶ್ವರನ ಚರಣಕಮಲಗಳ ಪೂಜಕನಿಗೆ ಸ್ವರ್ಗರೂಪವಾದ ಫಲವೇ ಇಷ್ಟವೆಂದು ಸಿದ್ಧರು ಹೇಳುವುದಿಲ್ಲ. ಸ್ವರ್ಗವು ಪುಣ್ಯಕ್ಷಯಾನಂತರ ಪುನಃ ಸಂಸಾರಕ್ಕೆ ದೂಡುತ್ತದೆ. ಆದುದರಿಂದ ಶಿವಪೂಜಕನಿಗೆ ಮಾತ್ರ ಇದಕ್ಕಿಂತಲೂ ಉತ್ಕೃಷ್ಟವಾದ ಮೋಕ್ಷವೇ ಉಂಟಾಗುತ್ತದೆ ಎಂದು ಭಾವಿಸಬೇಕು. ॥೪೧॥

ಯಾವನು ರಂಭಾಲಿಂಗನದಲ್ಲಿಯೂ, ಶುನಕಸ್ತ್ರೀ (ನಾಯಿ) ಅಂಗಸಂಸರ್ಗದಲ್ಲಿಯೂ, ಸಮಾನತೆಯನ್ನು ತಿಳಿಯುತ್ತಾನೆಯೋ, ಅಂತಹವನು ಶಿವಾರ್ಚನೆಯಿಂದ ಸ್ವರ್ಗವನ್ನು ಬಯಸುವನು. ಶಿವಾರ್ಚಕನು ವೈರಾಗ್ಯಶಾಲಿಯೆನಿಸುವನು. ಅಂತಹವನು ಬಯಸುವುದು ಮುಕ್ತಿಯೇ ಹೊರತು ಅದರ ಕೆಳಗಿನ ಸ್ವರ್ಗವಲ್ಲ. ॥೪೨॥

ಲಿಂಗಾರಾಧನಸಾಧುನೋಽವ ಮನಸಾಂ ತಾವದ್ಧನಂ ತದ್ಧನಂ
ಸರ್ವೇಷಾಂ ಸಮುಪೇಕ್ಷಿತಂ ಯದಿ ಭವೇನ್ಮುಕ್ತೋಽಪಿ ಸರ್ವಸ್ತುತಃ ।
ತಸ್ಮಾತ್ಕಸ್ಯಚಿದೇವ ಭೂರಿತಪಸಾಂ ಪುಂಜಸ್ಯ ತತ್ಸಾಧ್ಯಧನಂ
ತತ್ತಾವದ್ಧನಮಕ್ಷಯಂ ನಿಧಿಮುಪೇಕ್ಷ್ಯೇಽಪಾರ್ಜಿತಂ ಸಜ್ಜನೈಃ ॥೪೩॥

ಲಿಂಗಾರ್ಚನಂ ವ್ರತಮಿತಿ ಪ್ರವದಂತಿ ಧನ್ಯಾಃ
ತೇನೈವ ಮುಕ್ತಿರಿತಿ ನಿಶ್ಚಯ ಏವ ತೇನ ।
ಸರ್ವಾರ್ಥಸಿದ್ಧಿರತ ಏವ ಹಿ ತದ್ವಿಹೀನಾನ್
ಹೀನಾನ್ವದಂತಿ ಮನುಜಾನತಿ ದುರ್ಜನಾಂ ಸ್ತಾನ್ ॥೪೪॥

ಪುರಾ ವಿಂಧ್ಯಪ್ರದೇಶೇಷು ಕಶ್ಚಿದ್ರಾಜಾತಿಸುಂದರಃ ।
ಯುವಾ ಪರಮಪಾಪಿಷ್ಠಃ ಸರ್ವದಾ ಯುವತೀವೃತಃ ॥೪೫॥

ಕಾಮೋದ್ರೇಕಃ ಸದಾ ತಸ್ಯ ತಾದೃಶದ್ರವ್ಯಸೇವನಾತ್ ।
ತೇನೋನ್ಮಾದೇನ ನೀತಾನಿ ದಿನಾನಿ ಸುಬಹೂನ್ಯಪಿ ॥೪೬॥

ಮನಸ್ಸು ಲಿಂಗಾರಾಧನೆಯನ್ನು ಮಾಡುವುದಾದರೆ ಅದು ಸಾಧು. ಅದಕ್ಕೆ ಅದೇ ಧನವು. ಇದನ್ನು ಎಲ್ಲರೂ ಅಪೇಕ್ಷಿಸುವುದಾದರೆ ಅದರಿಂದ ಸಕಲರೂ ಮುಕ್ತರಾದಾರು. ಆದುದರಿಂದ ಅಂತಹ ಚಿತ್ತಸ್ಥೈರ್ಯವು ಅನೇಕ ತಪಸ್ಸುಗಳನ್ನಾಚರಿಸಿದ ಮನುಜನಿಗೆ ಮಾತ್ರ ಲಭಿಸೀತು. ಇದು ಅಕ್ಷಯವಾದುದೂ, ನಿಧಿರೂಪವೂ ಆಗಿರುತ್ತದೆ. ಸಜ್ಜನರೆಲ್ಲ ಇದನ್ನು ಅಪೇಕ್ಷೆಪಟ್ಟು ಸಂಪಾದಿಸುವರು. ॥೪೩॥

ಧನ್ಯರಾದವರು ಲಿಂಗಾರ್ಚನೆಯು ಒಂದು ವ್ರತವೆಂದು ಹೇಳುತ್ತಾರೆ. ಆದರಿಂದಲೇ ಮುಕ್ತಿಯು ಎಂದು ನಿಶ್ಚಯವಾಗಿ ಹೇಳುವರು. ಮತ್ತು ಸಕಲ ಅಭೀಷ್ಟಗಳೂ ಅದರಿಂದಲೇ ಸಿದ್ಧಿಸುವುವು. ಲಿಂಗಾರಾಧನಶೂನ್ಯರಾದ ಅತ್ಯಂತ ದುರ್ಜನರನ್ನು ಆ ಸತ್ಪುರುಷರು ತಿರಸ್ಕರಿಸುತ್ತಾರೆ. ॥೪೪॥

ಪೂರ್ವದಲ್ಲಿ ವಿಂಧ್ಯದೇಶದಲ್ಲಿ ಒಬ್ಬಾನೊಬ್ಬ ಯುವಕನಾದ ರಾಜನು ಅತಿ ಸುಂದರನಾಗಿಯೂ, ಬಹು ಪಾಪಿಯಾಗಿಯೂ, ಯಾವಾಗಲೂ ಯುವತೀಜನರಿಂದ ಆವೃತನಾಗಿಯೂ ಇದ್ದನು. ॥೪೫॥

ಕಾಮೋದ್ರೇಕವಾಗುವಂತಹ ದ್ರವ್ಯಗಳ ಸೇವನೆಯಿಂದ ಯಾವಾಗಲೂ ಮದಿಸಿದವನಾಗಿಯೇ ಆತನು ಬಹುದಿನಗಳನ್ನು ಕಳೆದನು. ॥೪೬॥

ತತಃ ಪರಂ ಜರಾಯಾಂ ಚ ನ ಜಹಾತಿ ಪರಾಂಗನಾಂ ।
ಪರಾಂಗನಾಂಗಸಂಗೇನ ವ್ಯಾಧಿವೃದ್ಧಿರಭೂತ್ಪಲು ॥೪೭॥

ತಥಾಪಿ ನ ಪರಿತ್ಯಕ್ತಾ ಪರದಾರರತಿ ಸ್ತತಃ ।
ಜಾರಿಣೀ ಚೋರಮಾರ್ಗೇಣ ಯಾತಿ ಯಾತಿ ಕುಲಾಂಗನಾ ॥೪೮॥

ನಾನಾವಿಧಾಂಗನಾಸಂಗಾದ್ವಿರತಿಸ್ತಸ್ಯ ನಾಭವತ್ ।
ತೇನೈವ ರೋಗಃ ಸಂಜಾತಃ ಪಾಪಿಷ್ಠಸ್ಯ ದುರಾತ್ಮನಃ ॥೪೯॥

ತತಸ್ತೇನೈವ ರೋಗೇಣ ಜಾತಾನ್ಯೇವ ವ್ರಣಾನ್ಯಪಿ ।
ತಥಾಪಿ ನ ಪರಿತ್ಯಕ್ತಾ ಪರನಾರೀ ವಿಶೇಷತಃ ॥೫೦॥

ತತಃ ಪರಮುಭೂತ್ತಸ್ಯ ಮರಣಾವಸರಸ್ತತಃ ।
ತದ್ರಾಷ್ಟ್ರೋಪಪ್ಲವೋ ಜಾತಃ ಸರ್ವಲೋಕಭಯಂಕರಃ ॥೫೧॥

ಪ್ರಬಲಾಶ್ಚ ಗತಾಃ ಸರ್ವೇಽಪ್ಯಟವೀಮಟನೇನ ತೇ ।
ಪೂರ್ಣಾಂ ಚಕ್ರುಃ ಸ ರಾಜಾಪಿ ನೀತ ಏವಾಟವೀಂ ಪ್ರತಿ ॥೫೨॥

ಆತನು ತನ್ನ ಮುಪ್ಪಿನಲ್ಲಿಯೂ ಕೂಡ ಪರಸ್ತ್ರೀಸಹವಾಸವನ್ನು ಬಿಡಲಿಲ್ಲ. ಆರೀತಿ ಪರಸ್ತ್ರೀಸಂಸರ್ಗದಿಂದ ವ್ಯಾಧಿಯು ಅವನಿಗೆ ಬಹುವಾಯಿತು. ॥೪೭॥

ಆ ರೀತಿ ರೋಗಿಯಾದರೂ ಸಹ ಪರಸ್ತ್ರೀಯರೊಡನೆ ರತಿಯನ್ನು ಮತ್ತೂ ಬಿಡಲಿಲ್ಲ.ಅವನಲ್ಲಿಗೆ ಕುಲಾಂಗನೆಯರು, ಜಾರಿಣಿಯರು, ಕೇವಲ ಚೋರಮಾರ್ಗ ದಿಂದ ಬರುತ್ತಿದ್ದರು. ॥೪೮॥

ಈ ರೀತಿ ಅನೇಕವಿಧ ಸ್ತ್ರೀಯರಸಂಗದಲ್ಲಿಯೂ ಈತನಿಗೆ ತೃಪಿಯಾಗಲಿಲ್ಲ. ಇದ ರಿಂದ ಪಾಪಿಯೂ, ದುರಾಚಾರಿಯೂ ಆದ ಆತನಿಗೆ ರೋಗವು ಅತಿಯಾಯಿತು.॥೪೯॥

ಹಾಗೆ ರೋಗವು ಜಾಸ್ತಿಯಾಗಿ ದೇಹದಲ್ಲೆಲ್ಲಾ ಗಾಯಗಳೂ ಕೂಡ ಆದುವು. ಆದರೂ ಪರಸ್ತ್ರೀಸಂಸರ್ಗವನ್ನು ಬಿಡಲಿಲ್ಲ. ॥೫೦॥

ಹೀಗಿರುವಲ್ಲಿ ಆತನಿಗೆ ಮರಣಕಾಲವು ಸಂಭವಿಸಿತು. ದೇಶದಲ್ಲಿ ಸಕಲ ಜನರಿಗೂ ಭಯದಾಯಕವಾದ ಕ್ಷಾಮಡಾಮರಾದಿ ನಾನಾತೊಂದರೆಗಳೂ ಒದಗಿ ದುವು. ॥೫೧॥

ಆಗ ಪ್ರಜೆಗಳೆಲ್ಲರೂ ಜೀವನನಿರ್ವಹಣಕ್ಕಾಗಿ ಕಾಡುಗಳನ್ನು ಸೇರಿದರು. ಇದರಿಂದ ರಾಜನೂ ಅರಣ್ಯವನ್ನು ಪ್ರವೇಶಿಸಬೇಕಾಯಿತು. ॥೫೨॥

ತೃಷಾರ್ತಃ ಕ್ಷುಧಿತೋ ರಾಜಾ ಸ್ವಕರ್ಮಾನುಕ್ಷಣಂ ಸ್ಮರನ್ ।
ಸ್ವದಾರಾವಲೋಕನೇನೈವ ಚಕಾರ ದಿನಯಾಪನಂ ॥೫೩॥

ರಾಜ್ಯಭ್ರಂಶೇನ ಯದ್ದುಃಖಂ ವ್ರಣೈಶ್ಚ ತರುಣಾರುಣೈಃ ।
ವ್ರಣಶೋಣಿತಧಾರಾಭಿರಶ್ರುಪೂರ್ಣೋಽಪ್ಯಭೂನ್ನೃಪ ॥೫೪॥

ಹಾ ಹಾ ರಾಜ್ಯಂ ಕಥಮಿದಂ ಧನಂ ಬಹುವಿಧಂ ಗತಂ ।
ತುಂಗಾಸ್ತುರಂಗಾಸ್ತುಂಗಾಶ್ಚ ಮಾತಂಗಾಶ್ಚೋಷ್ಟ್ರಗೋಗಣಾಃ॥೫೫॥

ಕ್ವ ಗತಾಃ ಕ್ವ ಚ ಮಿತ್ರಾಣಿ ಕ್ವ ಕಲತ್ರಾಣಿ ತಾನಿ ಮೇ ।
ಕ್ವಾಮಾತ್ಯಾ ಕ್ವ ಗೃಹಾಸ್ತೇಽಪಿ ಕ್ವ ಶಯ್ಯಾಶ್ಚ ಮನೋಹರಾಃ ॥೫೬॥

ಕ್ವ ತಾನಿ ರತ್ನಪಾತ್ರಾಣಿ ಸ್ವರ್ಣಪಾತ್ರಾಣಿ ಕೋಟಿಶಃ ।
ಕ್ವ ವಾ ತಾನಿ ದುಕೂಲಾನಿ ವಿಪುಲಾನ್ಯಮಲಾನಪಿ ॥೫೭॥

ಅಲ್ಲಿ ರಾಜನು ಹಸಿವು, ಬಾಯಾರಿಕೆಗಳಿಂದ ಬಳಲಿದವನಾಗಿ ತನ್ನ ಹೆಂಡತಿಯರೊಡನೆಯೇ ದಿನಗಳನ್ನು ಕಳೆಯುತ್ತಿದ್ದನು. ||೫೩||

ಆ ರಾಜನಿಗೆ, ತನ್ನ ರಾಜ್ಯಭ್ರಂಶದಿಂದ ಯಾವ ದುಃಖವು ಉಂಟಾಯಿತೋ, ಅದೇ ತರಹ ದುಃಖವು ಹೊಸಹೊಸದಾಗಿ ಕೆಂಪಾಗಿ ಹುಟ್ಟುವ ವ್ರಣಗಳಿಂದಲೂ ಒದಗಿತು. ಆ ದುಃಖವನ್ನು ಸಹಿಸಲಾರದೆ ಆತನು ಬಾಷ್ಪಪೂರ್ಣನಾದನು ||೫೪||

ಅಯ್ಯೋ! ಅನೇಕ ವಿಧವಾದ ಧನವೂ, ಮತ್ತು ಉತ್ತಮಗಳಾದ ಕುದುರೆ ಮತ್ತು ಆನೆ, ಒಂಟೆ, ಹಸುವಿನ ಗುಂಪು ಇವುಗಳೆಲ್ಲವೂ ಹಾಳಾದುವಲ್ಲಾ. ||೫೫||

ಅಯ್ಯೋ, ನನ್ನ ಸ್ನೇಹಿತರು, ಹೆಂಡತಿಯರು, ಮಂತ್ರಿಗಳು, ಮನೆಗಳು ಮನೋಹರವಾದ ಶಯ್ಯೆಗಳು ಇವುಗಳೆಲ್ಲಾ ಎಲ್ಲಿ ಹೋದುವು? ||೫೬||

ಆ ರತ್ನಖಚಿತಗಳಾದ ಮತ್ತು ಸುವರ್ಣಮಯಗಳಾದ ಕೋಟ್ಯಂತರ ಪಾತ್ರೆಗಳೂ, ವಿಸ್ತಾರವಾಗಿಯೂ, ನಿರ್ಮಲವಾಗಿಯೂ ಇರತಕ್ಕ ವಸ್ತ್ರಾಭರಣಗಳೂ ಎಲ್ಲಿ ಹೋದುವು? ||೫೭||

ಕ್ವ ತೇ ಭೃತ್ಯಾಃ ಕ್ವ ದಾಸ್ಯಶ್ಚ ಕ್ವ ತಾನ್ಯಾಭರಣಾನ್ಯಪಿ ।
ಮರಣಾವಸರೇ ಪ್ರಾಪ್ತೇ ಗತಂ ತತ್ಸರ್ವಮಾರ್ಜಿತಂ ॥೫೮॥

ಅಧುನಾ ತೃಷಿತಸ್ಯಾಪಿ ಕ್ಷುಧಿತಸ್ಯಾಪಿ ಸೇವಕಃ ।
ನಾನ್ನದೋ ಜಲದೋ ವಾಪಿ ವಸ್ತ್ರದೋ ವಾ ನ ದೃಶ್ಯತೇ ॥೫೯॥

ಧೃತಂ ವಸ್ತ್ರಂ ಗತೇ ದೂರೇ ನಾಸ್ತ್ಯೇವ ವಸನಾಂತರಂ ।
ಶಾಂತಾ ಸುರತತೃಷ್ಣಾಪಿ ನಾದ್ಯಾಪಿ ಮಮ ದುರ್ಮತೇಃ ॥೬೦॥

ಅತಃ ಪರಂ ಗತಿಃ ಕಾ ಸ್ಯಾನ್ಮರಣಾನಂತರಂ ಚ ಮೇ ।
ಯಮಮಾರ್ಗಸ್ಯ ವಾರ್ತಾಪಿ ಶ್ರುತಾ ಪ್ರಾತರ್ಮಯಾ ಖಲು ॥೬೧॥

ಗೋಕ್ಷುರಾಂಗಾರಸಂಕೀರ್ಣೋ ಯಮಮಾರ್ಗ ಇತಿ ಶ್ರುತಃ ।
ವಿವೃತಾಸ್ಯಾ ಮಹಾಸರ್ಪಾಃ ಸಂತಿ ತನ್ಮಾರ್ಗ ಇತ್ಯಪಿ ॥೬೨॥

ಆ ಭೃತ್ಯರು, ದಾಸಿಯರೂ, ಮತ್ತು ಆಭರಣಗಳು, ಎಲ್ಲಿ ಹೋದುವು? ಮರಣಕಾಲವು ಒದಗಿದಾಗ ಸಂಪಾದಿಸಿದ ಸಕಲವೂ ನಾಶವಾಯಿತಲ್ಲಾ! ॥೫೮॥

ಈಗ ಬಾಯಾರಿದ್ದರೂ, ಹಸಿದಿದ್ದರೂ ಇಲ್ಲಿ ಯಾವ ಸೇವಕನಾಗಲಿ, ಅನ್ನ ದಾತನಾಗಲಿ, ನೀರನ್ನು ಕುಡಿಸುವವನಾಗಲಿ, ಬಟ್ಟೆಯನ್ನು ಹೊದಿಸುವವನಾಗಲಿ ಕಂಡುಬರುವುದಿಲ್ಲ. ॥೫೯॥

ಧರಿಸಿರುವ ಒಂದು ವಸ್ತ್ರವನ್ನು ಬಿಟ್ಟರೆ ಇನ್ನೊಂದು ಬಟ್ಟೆಯಿಲ್ಲ. ಹೀಗಿರುವ ದುರ್ಮತಿಯಾದ ನನಗೆ ಈಗಲೂ ಕೂಡ ಸ್ತ್ರೀಸುಖಾಭಿಲಾಷೆಯು ಶಾಂತವಾಗಿಲ್ಲ. ॥೬೦॥

ನಾನು ಈ ಪ್ರಾತಃಕಾಲ ಯಮಲೋಕ ಮಾರ್ಗದ ಶಿಕ್ಷಾವಾರ್ತೆಯನ್ನು ಕೇಳಿದ್ದೇನೆ. ಆದುದರಿಂದ ಇನ್ನು ಮುಂದೆ ಮರಣಾನಂತರ ನನ್ನ ಗತಿ ಏನು? ॥೬೧॥

ಯಮ ಮಾರ್ಗವು ಕೆಂಡಗಳಂತಿರುವ ಗೋಕ್ಷುರಗಳಿಂದ (ಒಂದು ತರಹ ಮುಳ್ಳು) ಕೂಡಿದುದಾಗಿಯೂ, ದೊಡ್ಡದೊಡ್ಡದಾದ ಬಾಯಿಗಳುಳ್ಳ ಮಹಾಸರ್ಪಗಳುಳ್ಳದಾಗಿಯೂ ಇರುವುದಾಗಿ ಕೇಳಿದ್ದೇನೆ. ॥೬೨॥

ಲೋಹಶಂಕುಸಹಸ್ರಾಣಿ ಸಂತಿ ತಪ್ತಾನಿ ತಾನ್ಯಪಿ ।
ಪ್ರತಪ್ತಾ ಭಿಂಡಿಪಾಲಾಶ್ಚ ಸಂತಿ ಮಾರ್ಗೇಷು ಕೋಟಿಶಃ ॥೬೩॥

ಭರ್ಜಿತಾಸಿಕತಾಸ್ತತ್ರ ಮಾರ್ಗೇಷ್ವಾಚ್ಛಾದಿತಾ ಕಿಲ ।
ಅಂಗಾರವಾಹಿನೀ ತತ್ರ ಜ್ವಾಲಾಮಾಲಾಕುಲಾ ಕಿಲ ॥೬೪॥

ಕಥಂ ವಾ ತತ್ರ ಗಮನಂ ಅತಿಕಷ್ಟಮುಪಾಗತಂ ।
ಗಾಢಾಂಧಕಾರಸ್ತತ್ರಾಪಿ ಮಿತ್ರವಾರ್ತಾಪಿ ದೂರತಃ ॥೬೫॥

ಹತಾದೇವ ಭಟಾಸ್ತಾವತ್ತಾಡಯಂತ್ಯತಿದಾರುಣಂ ।
ತತ್ತಾಡನಮತಿಕ್ರೋಧಾನ್ಮರಣೋಪಮಮೇವ ಹಿ ॥೬೬॥

ಹಾ ಹಾ ಕಥಂ ದುರ್ದಶೇಯಮಸ್ಯೇತಿಪ್ರಜಪನ್ ಜಹೌ ।
ಪ್ರಾಣಾನ್ ಸ ಭೂಪತಿಸ್ತತ್ರ ವಿಪಿನೇ ಕಂಟಕಾವೃತೇ ॥೬೭॥

ಸ ಮೃತೋ ಯತ್ರ ತತ್ರೈವ ನಿಕಟೇ ಲಿಂಗಮುತ್ತಮಂ ।
ತತಃ ಸಮಾಗತೋ ವಾತಃ ತಮುಪಸ್ಪೃಶ್ಯ ವಿನಿರ್ಗತಃ ॥೬೮॥

ಕೆಂಪಾಗಿ ಕಾದ ಸಾವಿರಾರು ಲೋಹದ ಶಂಕು(ಗೂಟ)ಗಳೂ ಭಿಂಡಿವಾಲವೆಂಬ ಈಟಿಗಳೂ ಕೂಡ ಆ ಮಾರ್ಗದಲ್ಲಿ ಇರುತ್ತವೆ. ||೬೩||

ಆ ಮಾರ್ಗಗಳು ಕಾದ ಮರಳುಗಳಿಂದ ಆಚ್ಛಾದಿಸಲ್ಪಟ್ಟಿವೆ. ಪ್ರವಾಹದಂತೆ ಜ್ವಾಲೆಗಳುಳ್ಳ ಕೆಂಡದ ರಾಶಿಯು ಕೂಡ ಇರುತ್ತದೆ. ||೬೪||

ಸ್ತ್ರೀ, ಅಲ್ಲಿ ಸೂರ್ಯನೆಂಬ ಹೆಸರೇ ಇಲ್ಲ. ಆದರಿಂದಲೇ ಗಾಢಾಂಧಕಾರವಾಗಿರುವುದು. ಅಲ್ಲಿಗೇ ಹೇಗೆ ತಾನೆ ಹೋಗಲಾದೀತು? ಬಹುವಾದ ಕಷ್ಟವು ಸಂಭವಿಸಿತಲ್ಲಾ! ||೬೫||

ಅಲ್ಲಿ ಯಮ ಭಟರು ಬಹು ತೀಕ್ಷ್ಣವಾಗಿ ತಾಡನಮಾಡುತ್ತಾರೆ. ಆ ಕ್ರೋಧಯುಕ್ತವಾದ ತಾಡನವು ಮರಣಕ್ಕೆ ಸದೃಶವಾದುದೇ ಸರಿ. ||೬೬||

ಅಯ್ಯೋ, ಈ ನನಗೆ ಎಂತಹ ದುರ್ದಶೆಯು ಸಂಭವಿಸಿತು? ಎಂಬುದಾಗಿ ಯೋಚಿಸುತ್ತಲೇ ರಾಜನು ಕಂಟಕಗಳಿಂದ ವ್ಯಾಪ್ತವಾದ ಆ ಕಾಡಿನ ದಾರಿಯಲ್ಲೇ ಪ್ರಾಣಗಳನ್ನು ಬಿಟ್ಟನು. ||೬೭||

ಆ ರಾಜನು ಸತ್ತಕಡೆಯಲ್ಲಿಯೇ ಹತ್ತಿರದಲ್ಲಿ ಒಂದು ಉತ್ತಮವಾದ

ತತಃ ಪರಂ ತು ನಾರೀಣಾಂ ರೋದನೇನ ಕಿಯಾನ್ ಗತಃ ।
ಕಾಲಸ್ತತೋ ಗತಾಃ ಸರ್ವಾಃ ಪಲಾಯ್ಯಾರಿಭಟಾಕುಲಾಃ ॥೧೯॥

ವ್ರಣದುರ್ಗಂಧಸಂವೀತಸ್ತ್ಯಕ್ತಸ್ತಾವನ್ನ ದೂರತಃ ।
ತತೋ ನೀತೋ ಯಮಭಟೈರಗ್ನಿಮಾರ್ಗೇಣ ದುರ್ಮದೈಃ ॥೨೦॥

ದಯಾಲೇಶವಿಹೀನೈಸ್ತೈಃ ಕಶಾಘಾತನಪೂರ್ವಕಂ ।
ಅಗ್ನಿತಪ್ತಕಶಾಘಾತೈರಿತಿ ತೀವ್ರತರೈರ್ಮುಹುಃ ॥೨೧॥

ತಪ್ತಲೋಹಕ್ಷುರಪ್ರಾಣಾಂ ಕೋಟಿಭಿರ್ನಿಹತೋ ಮುಹುಃ ।
ಏವಂ ಪ್ರಲಪಮಾನೋಽಯಂ ಸಂತಪ್ತಾಗ್ನಿಶಿಲಾತಲೇ ॥೨೨॥

ಪಾತಿತಃ ಪಶ್ಯತಿ ಯಮೋ ದಯಾಲೇಶವಿವರ್ಜಿತೇ ।
ತತೋ ಯಮೋಽಪಿ ತಂ ದೃಷ್ಟ್ವಾ ಚಿತ್ರಗುಪ್ತಮುವಾಚ ಸಃ ॥೨೩॥

ಕಿಮಸ್ಯ ಪುಣ್ಯಂ ಪಾಪಂ ವಾ ವದೇತಿ ಮುಹುರಾದರಾತ್ ॥೨೪॥

ಶಿವಲಿಂಗವೊಂದಿದ್ದಿತು. ಅದರಮೇಲೆ ಬೀಸಿದ ವಾಯುವು ಬಂದು ಆ ರಾಜನನ್ನು ಸ್ಪರ್ಶಮಾಡಿತು. ॥೧೮॥

ಅನಂತರ ಆ ರಾಜನ ನಾರಿಯರ ರೋದನದಿಂದ ಸ್ವಲ್ಪ ಕಾಲವು ಕಳೆಯಿತು. ಆಗಲೇ ಬಂದ ಶತ್ರು ಸೇವಕರಿಗೆ ಹೆದರಿ ಆ ಪತ್ನಿಯರೆಲ್ಲಾ ಓಡಿಹೋದರು. ॥೧೯॥

ಎಲ್ಲರೂ ಗಾಯದ ದುರ್ಗಂಧದಿಂದ ಕೂಡಿದ ರಾಜನನ್ನು ದೂರಮಾಡಿದರು. ಅನಂತರ ಯಮಭಟರು ಮದಶಾಲಿಗಳಾಗಿ ಅಗ್ನಿಮಾರ್ಗದಿಂದ ಅವನನ್ನು ಕರೆದೊಯ್ದರು. ॥೨೦॥

ಸ್ವಲ್ಪವೂ ದಯೆಯಿಲ್ಲದ ಆ ಯಮಭಟರು ಬಹು ತೀವ್ರವಾಗಿ ಅಗ್ನಿತಪ್ತಗಳಾದ ಕೆಲವು ಚಾವಟಿಗಳಿಂದಲೂ, ಕೆಲವು ಸಾಮಾನ್ಯಚಾವಟಿಗಳಿಂದಲೂ, ಹೊಡೆದು, ಮತ್ತು ಚೆನ್ನಾಗಿ ಕಾಯಿಸಿದ ಲೋಹದ ದಂಡ (ಆಯುಧವಿಶೇಷ) ಗಳಿಂದ ಪ್ರಾಣಹೋಗುವಂತೆ ಬಡಿದೂ, ಬೆಂಕಿಯಿಂದ ತಪ್ತವಾದ ಕಲ್ಲಿನ ಮೇಲೆ ಬೀಳಿಸುತ್ತಾ ಯಮಲೋಕಕ್ಕೆ ತಂದರು. ದಯಾರಹಿತನಾದ ಯಮನೂ ಅವನನ್ನು ನೋಡಿ ಚಿತ್ರಗುಪ್ತನನ್ನು ಕುರಿತು, ಈತನ ಪುಣ್ಯಗಳೇನು? ಪಾಪಗಳೇನು? ಹೇಳು ಎಂಬುದಾಗಿ ಕೇಳಿದನು. ॥೨೧-೨೨-೨೩-೨೪॥

|| ಚಿತ್ರಗುಪ್ತ ಉವಾಚ ||

ಯಮಧರ್ಮಾರ್ಥನಿಪುಣ ಪಾಪಾನಿ ಶೃಣು ಸತ್ವರಂ ।
ತತ್ಕೃತಾನಿ ದುರಂತಾನಿ ಸಂಖ್ಯಾಹೀನಾನಿ ಸತ್ವರಂ ||೭೫||

ಯಮ ತತ್ಕೃತಪಾಪಾನಾಂ ಸಂಖ್ಯಯಾ ಪರಮಾಯುಷಃ ।
ಕ್ಷಯಃ ಸ್ಯಾದೇವ ಕಲ್ಪಾಂತೇಽಪ್ಯಸ್ಯ ಮುಕ್ತಿರ್ನ ಸರ್ವಥಾ ||೭೬||

ತತ್ಪಾಪಸಂಖ್ಯಯಾ ಕಾಲೋ ಯಾವಾನೇವ ಗಮಿಷ್ಯತಿ ।
ತಾವಜ್ಜೀವನಮಸ್ಮಾಕಂ ದುರ್ಲಭಂ ಖಲು ಸರ್ವಥಾ ||೭೭||

ಏಕೈಕಪಾಪಕೂಟಸ್ಯ ಗಣನಾಯಾಂ ಚ ಕೋಟಿಶಃ ।
ಕಲ್ಪಾಸ್ತಾವತ್ಪ್ರಯಾಸ್ಯಂತಿ ಸಂಖ್ಯಾಽಪಿ ತ್ವರಯಾ ಯದಿ ||೭೮||

ಪೃಥಕ್ತತ್ಪಾಪಸಂಖ್ಯಾ ತು ಕದಾಪಿ ನ ಭವಿಷ್ಯತಿ ।
ಅತಃ ಪರಂ ಕಥಂ ಸಂಖ್ಯಾ ತತ್ಪಾಪಾನಾಂ ವದಾಧುನಾ ||೭೯||

ಧರ್ಮನಿಪುಣನಾದ ಯಮನೇ, ಈತನು ಮಾಡಿದ ಪಾಪಕಾರ್ಯಗಳನ್ನು ಗಣನೆ ಮಾಡಲು ಅಸಾಧ್ಯ. ಆದರೂ ಕೆಲವು ಮುಖ್ಯ ಪಾಪಕಾರ್ಯಗಳನ್ನು ಅರಿಕೆ ಮಾಡುವೆನು. ||೭೫||

ಎಲೈ ಯಮನೇ, ಆತನು ಮಾಡಿದ ಪಾಪಗಳ ಗಣನೆಯಿಂದ ಮುಖ್ಯವಾಗಿ ನಮ್ಮ ಆಯುಸ್ಸಿನ ನಾಶವೇ ಆಗುತ್ತದೆ. ಪ್ರಳಯಕಾಲದಲ್ಲಿಯೂ ಕೂಡ ಈತನಿಗೆ ಮೋಕ್ಷವುಂಟಾಗುವುದಿಲ್ಲ. ||೭೬||

ಈತನ ಪಾಪಗಳನ್ನು ಗಣನೆಮಾಡಲು ಹಿಡಿಯುವ ಕಾಲವು ನಮ್ಮ ಆಯುಸ್ಸಿಗಿಂತ ಅಧಿಕವಾಗುವುದು. ಪೂರ್ತಿಯಾಗಿ ಹೇಳಲು ನನ್ನಿಂದ ಸಾಧ್ಯವಿಲ್ಲ. ||೭೭||

ಪಾಪಗಳ ಒಂದೊಂದು ಕೂಟವನ್ನೂ ಅದರಲ್ಲೂ ಜಾಗ್ರತೆಯಾಗಿ ಎಣಿಸುವುದಾದರೆ ಅಷ್ಟರಲ್ಲಿಯೇ ಕೋಟ್ಯಂತರ ಕಲ್ಪಗಳು ಕಳೆದುಹೋಗುತ್ತವೆ. ||೭೮||

ಆ ಪಾಪಗಳ ಬೇರೆಬೇರೆಯಾದ ಎಣಿಕೆಯು ಯಾವಾಗಲೂ ಸಾಧ್ಯವಿಲ್ಲ. ಹೀಗಿರುವಲ್ಲಿ ಈತನ ಪಾಪಗಳ ಸಂಖ್ಯೆಯು ಹೇಗೆ ದೊರಕೀತು ? ಹೇಳು. ||೭೯||

ಅಹೋ ಕಿಂ ದುರದೃಷ್ಟಂ ಮೇ ದುಷ್ಟಪಾಪಾವಲೋಕನೈಃ ।
ತತ್ಪಾಪಸಂಖ್ಯಯಾಸ್ಮಾಯುರ್ನಶ್ಯತ್ಯೇವ ಕ್ಷಣೇ ಕ್ಷಣೇ ॥೮೦॥

ತತ್ಸಂಖ್ಯಾಶ್ರವಣೇನೈವ ತವಾಪ್ಯಾಯುರ್ವಿನಶ್ಯತಿ ।
ನ ಜಪ್ತಃ ಶಿವಮಂತ್ರೇಣ ಕ್ಷಣಂ ವಾ ಭಕ್ತಿಪೂರ್ವಕಂ ॥೮೧॥

ತತ್ಪಾಪಸಂಖ್ಯಯಾ ತಾವನ್ನಾಸ್ಮಾಕಂ ಶಿವಪೂಜನಂ ।
ಕಾಃ ಸೃಷ್ಟಿರಾವಯೋಃ ಕಾಲ ಕಾಲಕಾಲ ಕೃಪಾಂ ವಿನಾ ॥೮೨॥

ಅಸ್ಮಾಕಮಪ್ಯಂತಕಾಲೇ ಶಿವಧರ್ಮಾವಿಲೋಕನಾತ್ ।
ಯಾತನಾ ಭಾವಿನೀ ಸಾ ತು ಕೇನ ವಾ ವಿನಿವಾರ್ಯತಾಂ ॥೮೩॥

ರಸನಾಪ್ಯನ್ಯಪಾಪಾನಾಂ ಸಂಖ್ಯಯಾ ಸಫಲಾ ಖಲು ।
ಅಹೋ ಜನ್ಮವೃಥಾ ಜಾತಂ ಶಿವಪೂಜಾ ವಿವರ್ಜಿತಂ ॥೮೪॥

ಅಯ್ಯೋ, ನನಗೆ ಎಂತಹ ದುರದೃಷ್ಟವು ಸಂಭವಿಸಿತು. ಏತಕ್ಕೆಂದರೆ ದುಷ್ಟರೂ ಮತ್ತು ಪಾಪಿಗಳೂ ಆದ ಇಂತಹವರನ್ನು ನೋಡಬೇಕಾಯಿತಲ್ಲ. ಇವರ ಪಾಪಕಾರ್ಯಗಳನ್ನು ಎಣಿಕೆ ಮಾಡುವುದರಿಂದ ನನ್ನ ಆಯುಸ್ಸು ಕಳೆದು ಹೋಗುವುದಲ್ಲಾ! ॥೮೦॥

ಆ ಪಾಪಗಳ ಸಂಖ್ಯೆಗಳನ್ನು ಶ್ರವಣ ಮಾಡುವುದರಿಂದಲೇ ನಿನ್ನ ಆಯುಸ್ಸೂ ನಾಶವಾಗುತ್ತದೆ. ಈತನು ಒಂದು ಕ್ಷಣವಾದರೂ ಭಕ್ತಿಯಿಂದ ಶಿವಮಂತ್ರವನ್ನು ಜಪಿಸಲಿಲ್ಲ. ॥೮೧॥

ಆ ಪಾಪಗಳ ಸಂಖ್ಯೆಯನ್ನು ಎಣಿಸುವುದರಿಂದ ಮತ್ತು ಕೇಳುವುದರಿಂದ ನಮಗೆ ಈಶ್ವರಾರಾಧನೆಮಾಡಲು ಅವಕಾಶವಿಲ್ಲದಂತಾಯಿತು. ಪರಶಿವನು ದಯೆ ಯಿಲ್ಲದೆ ನಮ್ಮಿಬ್ಬರನ್ನೂ ಸೃಷ್ಟಿಸಿ ಈ ಕೆಲಸಕ್ಕೆ ನೇಮಿಸಿದನಲ್ಲಾ! ॥೮೨॥

ಶಿವಧರ್ಮಾಚರಣೆಯಿಲ್ಲದೆ ಮರಣಕಾಲದಲ್ಲಿ ನಮಗೆ ಎಂತಹ ಯಾತನೆಯು ಉಂಟಾಗುವುದೋ ಅದನ್ನು ತಪ್ಪಿಸುವರಾರು? ॥೮೩॥

ನಮ್ಮ ನಾಲಗೆಯಾದರೋ ಮತ್ತೊಬ್ಬರ ಕಾರ್ಯಗಳನ್ನು ಎಣಿಸುವುದರಲ್ಲಿ ಸಫಲಗೊಳ್ಳಬಹುದು. ಆದರೆ ನಮ್ಮ ಜನ್ಮವಾದರೋ ನಿಜವಾಗಿಯೂ ಇದರಿಂದ ವ್ಯರ್ಥವಾಗುವುದು. ॥೮೪॥

ಶಿವಪೂಜಾವಿಹೀನಾನಾಂ ಯಾತನೇತ್ಯಪಗಮ್ಯತೇ ।
ತಥಾಪಿ ತಸ್ಯಾಂ ನ ಮತಿಃ ಕ್ರಿಯತೇಽಪಿ ನ ಸಾ ತಥಾ ॥೮೫॥

ಯತ್ಪೂಜಯಾ ಪರಾ ಮುಕ್ತಿಃ ಸಾ ನಾಸ್ಮಾಭಿಃ ಕದಾಪಿ ನ ।
ಕೃತಾ ಭಕ್ತ್ಯಾ ಯಥಾಶಾಸ್ತ್ರಂ ಕಿಂ ಕರ್ತವ್ಯಮತಃ ಪರಂ ॥೮೬॥

ಪಾತಕಾನಾಂ ಗಣನಯಾ ಪಾತಕಾರ್ಜನಮೇವ ಹಿ ।
ಅತಃ ಪರಮನೇನಾಪಿ ನಾಧಿಕಾರೇಣ ನಃ ಸುಖಂ ॥೮೭॥

ಕಿಮನೇನಾಧಿಕಾರೇಣ ಕಿಂ ನಃ ಪಾತಕಸಂಖ್ಯಯಾ ।
ಶಿವಪೂಜಾವರ್ಜಿತೇನ ಜೀವನೇನಾಪಿ ಕಿಂ ಫಲಂ ॥೮೮॥

ಧಿಗ್ಧಿಗ್ಜೀವನಮಸ್ಮಾಕಂ ಶಿವಾರ್ಚನವಿವರ್ಜಿತಂ ।
ಪರಪಾಪಾನುವಾದೇನ ಗತಮಾಯುಃ ಪುನಃ ಪುನಃ ॥೮೯॥

ಈಶ್ವರಪೂಜಾಶೂನ್ಯರಾದವರಿಗೆ ಯಾತನೆಯುಂಟಾಗುವುದೆಂದು ತಿಳಿದಿದ್ದೇವೆ. ಹಾಗಾದರೂ ಶಿವಪೂಜೆಯಲ್ಲಿ ನಮಗೆ ಬುದ್ಧಿಯು ಇನ್ನೂ ಉಂಟಾಗಿಲ್ಲ. ॥೮೫॥

ಯಾವ ಪೂಜೆಯಿಂದ ಸರ್ವಶ್ರೇಷ್ಠವಾದ ಮುಕ್ತಿಯು ಲಭಿಸುವುದೋ ಅಂತಹ ಪೂಜೆಯನ್ನು ನಾವು ಭಕ್ತಿಯಿಂದ ಶಾಸ್ತ್ರಾನುಸಾರವಾಗಿ ಮಾಡಲಿಲ್ಲ. ಆದುದರಿಂದ ಇನ್ನು ಮುಂದೆ ಮಾಡುವುದೇನು ? ॥೮೬॥

ಪಾಪಕಾರ್ಯಗಳನ್ನು ಗಣನೆಮಾಡುವುದರಿಂದ ಪಾಪಗಳೇ ಸಂಘಟಿಸುತ್ತವೆ. ಆದುದರಿಂದ ಈ ಪಾಪಗಳ ಗಣನೆಯಿಂದ ನಮಗೆ ಎಂದಿಗೂ ಸುಖವಿಲ್ಲ. ಇಂತಹ ಪಾಪಾಧಿಕಾರ ನಮಗೇಕೆ ? ॥೮೭॥

ನನ್ನ ಈ ಅಧಿಕಾರದಿಂದ, ಪಾಪಗಳ ಎಣಿಕೆಯಿಂದ, ಇನ್ನೂ ಹೆಚ್ಚಾಗಿ ಈಶ್ವರಪೂಜಾರಹಿತವಾದ ಜೀವನದಿಂದತಾನೆ ಏನು ಪ್ರಯೋಜನ ? ॥೮೮॥

ನಮ್ಮ ಜೀವನವು ಈಶ್ವರಾರ್ಚನೆರಹಿತವಾಗಿರುತ್ತದೆ. ಆದುದರಿಂದ ಅದನ್ನು ನಿಂದಿಸಬೇಕು. ಇತರರು ಮಾಡಿದ ಪಾಪಗಳನ್ನು ಅನುವಾದಮಾಡುವುದರಿಂದ ಆಯಸ್ಸು ನಾಶವಾದಂತೆಯೇ. ॥೮೯॥

ಪರಪಾತಕಸಂಖ್ಯಾರ್ಥಂ ಪೂರ್ವಮಾಯುಃ ಕಿಮಾರ್ಜಿತಂ ।
ಶಿವಪೂಜಾವಿಹೀನಸ್ಯ ಕೇವಲಂ ಮರಣಂ ವರಂ ॥೯೦॥

ಮರಣೋತ್ತರಮಪ್ಯಸ್ಯ ಯದ್ಯಪ್ಯಸ್ತ್ಯೇವ ಯಾತನಾ ।
ತಥಾಪಿ ಜೀವನಂ ವ್ಯರ್ಥಂ ಇತಿ ದುಃಖಂ ಪ್ರಜಾಯತೇ ॥೯೧॥

ಶಿವಪೂಜಾವಿಹೀನಸ್ಯ ಜೀವತಃ ಸುಖಮೇವ ನ ।
ದುಃಖಮೇವ ಪರಂ ತತ್ತು ಯಾತನಾ ಕಿಂ ನ ತದ್ವದ ॥೯೨॥

ಮಿತ್ರಮಧ್ಯೇ ಜೀವತೋಽಪಿ ನ ಸ್ಯಾದ್ಯದಿ ಶಿವಾರ್ಚನಂ ।
ತದಾ ತದ್ದುಃಖಮತ್ಯಂತಂ ದುಃಸಹಂ ಚಾಯಶಶ್ಚ ತತ್ ॥೯೩॥

ಅಯಶೋರಾಶಿರೇವಾಯಂ ಮಹೇಶಾನರ್ಚಕೋ ಜನಃ ।
ಧಿಗ್ಧಿಗ್ಜೀವನಂ ತಸ್ಯ ಜೀವನಂ ಮರಣೋಪಮಂ ॥೯೪॥

---

ಪೂರ್ವದಲ್ಲಿ ಇತರರ ಪಾಪಗಳನ್ನು ಗಣಿಸುವುದಕ್ಕಾಗಿಯೇ ಆಯುಸ್ಸು ಸಂಪಾದಿಸಲ್ಪಟ್ಟಿದೆಯೇ? ಶಿವಪೂಜಾರಹಿತನಾದವನಿಗೆ ಮರಣವೇ ಸರ್ವಶ್ರೇಷ್ಠ. ॥೯೦॥

ಯದ್ಯಪಿ ಮರಣಾನಂತರವೂ ಅವನಿಗೆ ಯಾತನೆಯು ಸಂಭವಿಸುತ್ತದೆ. ಈತನಿಗೆ ಜೀವನವು ವ್ಯರ್ಥವಾಯಿತೆಂಬ ದುಃಖವುಂಟಾಗುತ್ತದೆ. ॥೯೧॥

ಈಶ್ವರಪೂಜಾರಹಿತನಾದವನು ಬದುಕಿದ್ದೂ ಸುಖವಿಲ್ಲ. ಅವನ ಜೀವನವಲ್ಲಿ ದುಃಖವೇ ಅತಿಯಾಗುವುದು. ಹೀಗಿರುವಲ್ಲಿ ಯಾತನೆಯಿಲ್ಲವೆ? ಹೇಳು. ॥೯೨॥

ಸ್ನೇಹಿತರ ಮಧ್ಯದಲ್ಲಿ ಜೀವಿಸುತ್ತಿದ್ದರೂ ಈಶ್ವರನನ್ನು ಅರ್ಚಿಸದಿದ್ದರೆ ಆಗ ಅವನಿಗೆ ದುಃಖವೂ ಮತ್ತು ದುಸ್ಸಹವಾದ ಅಪಕೀರ್ತಿಯೂ ಉಂಟಾಗುತ್ತದೆ. ॥೯೩॥

ಮಹೇಶ್ವರನನ್ನು ಅರ್ಚನೆಮಾಡದ ಜನವು ಅಪಯಶಸ್ಸಿನ ರಾಶಿಯೆನಿಸುವುದು. ಅಂತಹವನ ಜೀವನವು ಮರಣಕ್ಕೆ ಸಮನಾದುದೇ .ಸರಿ. ಅವನ ಜೀವನವನ್ನು ನಿಂದಿಸಬೇಕು. ॥೯೪॥

ಶಂಕರಾನರ್ಚಕೋ ಲೋಕೇ ಯದಿ ಜೀವಿತುಮಿಚ್ಛತಿ ।
ತದಾ ತಸ್ಯಾಯಶೋವಹ್ನಿಜ್ವಾಲಯಾ ನಾಶ ಏವ ಹಿ ॥೯೫॥

ಅಪಕೀರ್ತ್ಯಗ್ನಿಸಂದಗ್ಧಃ ಕೋ ವಾ ಜೀವಿತುಮಿಚ್ಛತಿ ।
ಶಿವಾರ್ಚನಪರಿತ್ಯಾಗಾದಯಶಶ್ಚ ಕಿಮಸ್ತಿ ನಃ ॥೯೬॥

ಶಿವಾರ್ಚನಪರಿತ್ಯಾಗಸ್ವರೂಪಾ ಕೀರ್ತಿರಾತತಾ ।
ಸಂಪಾದಯತಿ ಜೀವಸ್ಯ ದೇಹಸ್ಯ ಸುತರಾಮಪಿ ॥೯೭॥

ಶಿವಾರ್ಚನಪರಿತ್ಯಾಗಸ್ವರೂಪಾ ಕೀರ್ತಿವಹ್ನಿನಾ ।
ವಂಶನಾಶೋಽಪಿ ಬಹುಧಾ ತನ್ನಾಶಃ ಸುತರಾಮಪಿ ॥೯೮॥

ಕಷ್ಟಾನಿ ವಿವಿಧಾನ್ಯೇವ ತೇಷು ಶ್ರೇಷ್ಠಮಿದಂ ಖಲು ।
ಶಿವಾರ್ಚನಪರಿತ್ಯಾಗಸ್ವರೂಪಂ ಕಷ್ಟಮುತ್ತಮಂ ॥೯೯॥

ಶಂಕರನನ್ನು ಅರ್ಚನೆಮಾಡದೇ ಜೀವಿಸಲು ಅಪೇಕ್ಷಿಸುವುದಾದರೆ ಅಂತಹವನಿಗೆ ಅಪಯಶಸ್ಸು ವಹ್ನಿಯಂತೆ ಒದಗಿ ಅದರ ಜ್ವಾಲೆಯಿಂದ ಆತನು ನಾಶವಾಗುವನು. ॥೯೫॥

ಯಾವನು ತಾನೆ ಅಪಯಶಸ್ಸೆಂಬ ಬೆಂಕಿಯಿಂದ ದಗ್ಧನಾಗಿ ಜೀವಿಸಲು ಅಪೇಕ್ಷೆಪಡುವನು ? ಶಿವಾರ್ಚನೆಯನ್ನು ಬಿಡೋಣದರಿಂದ ನಮಗೆ ಅಪಯಶಸ್ಸು ಒದಗದೆ ಇರುವುದೆ ? ॥೯೬॥

ಶಿವಾರ್ಚನೆಯನ್ನು ಪರಿತ್ಯಾಗಮಾಡಿದ ಪಾಪಕಾರ್ಯದ ಪರಿಣಾಮವಾಗಿಯೇ ಮನುಷ್ಯರಿಗೆ ಜನನಮರಣಾದಿಗಳು ಉಂಟಾಗುವುವಲ್ಲವೆ ? ॥೯೭॥

ಶಿವನನ್ನು ಅರ್ಚಿಸದಿರುವ ಅಪಯಶಸ್ಸೆಂಬ ಅಗ್ನಿಯಿಂದ ಆತನಿಗೆ ಮಾತ್ರವಲ್ಲದೆ ಆತನ ವಂಶವೂ ಸಹ ನಾಶವಾಗುತ್ತದೆ. ॥೯೮॥

ಲೋಕದಲ್ಲಿ ಅನೇಕ ವಿಧಗಳಾದ ಕಷ್ಟಗಳಿವೆ. ಅವುಗಳಲ್ಲಿ ಶಿವಾರ್ಚನತ್ಯಾಗವೆಂಬುದು ಮಹಾಕಷ್ಟಕ್ಕೆ ಸೇರಿದುದು. ಅದರಿಂದ ಬರುವ ಹಿಂಸೆಗೆ ಕೊನೆಮೊದಲಿಲ್ಲ. ॥೯೯॥



ಸಹ್ಯಾನ್ಯಾನಿ ದುಃಖಾನಿ ಸತ್ಯಮೇತನ್ನ ಸರ್ವಥಾ ।
ಶಿವಾರ್ಚನತ್ಯಾಗರೂಪಂ ಕಷ್ಟಂ ಕಷ್ಟತರಂ ಸ್ಮೃತಂ ॥೧೦೦॥

ಶಿವಾರ್ಚನಪರಿತ್ಯಾಗರೂಪಕಷ್ಟಾದೇವ ಪುರಾ ಯಮ ।
ಅಕಾಂಡಪ್ರಲಯೋ ವೃತ್ತಸ್ತತ್ರ ದಗ್ಧಾಃ ಸುರಾ ಅಪಿ ॥೧೦೧॥

ಶಿವಾರ್ಚನತ್ಯಾಗರೂಪಪ್ರಲಯಾನಲಸಂಹತಃ ।
ಕೋ ವಾ ಜೀವತಿ ಲೋಕೇಷು ಜೀವನಾಶಾಪಿ ಕುತ್ರ ಸಾ ॥೧೦೨॥

ಜೀವನಾಶಾವಿನಾಶಾಯ ಶಿವಾನರ್ಚನಕಲ್ಪನಂ ।
ಅತಸ್ತೇನ ತದಾಶಾಪಿ ವಿನಶ್ಯತಿ ನ ಸಂಶಯಃ ॥೧೦೩॥

ಶಿವಾರ್ಚನಪರಿತ್ಯಾಗಸ್ವರೂಪಾಶನಿಪಾತನೇ ।
ಕೋ ವಾ ಜೀವತಿ ಲೋಕೇಽಸ್ಮಿನ್ ಸ ಏವ ಪ್ರಲಯಾನಲಃ ॥೧೦೪॥

---

ಪ್ರಪಂಚದಲ್ಲಿ ಇನ್ನು ಇತರ ದುಃಖಗಳಿವೆ. ಅವುಗಳೆಲ್ಲ ಸಹ್ಯವಾದವುಗಳು. ಆದರೆ ಶಿವಾರ್ಚನತ್ಯಾಗವೆಂಬ ದುಃಖವು ಅತಿ ಕಷ್ಟಪ್ರದವಾದುದಾಗಿ ಸ್ಮರಿಸಲ್ಪಟ್ಟಿದೆ. ||೧೦೧||

ಎಲೈ ಯಮನೇ, ಪೂರ್ವದಲ್ಲಿ ಈಶ್ವರಾರ್ಚನೆಯು ನಿಂತುಹೋದುದರಿಂದಲೇ ಆ ಕಾಲದಲ್ಲಿ ಮಹಾಪ್ರಲಯವುಂಟಾಯಿತು. ಅದರಲ್ಲಿ ದೇವತೆಗಳೂ ಸಹ ನಾಶವಾದರು. ||೧೦೧||

ಆ ಈಶ್ವರಾರ್ಚನಪರಿತ್ಯಾಗವೆಂಬ ಪ್ರಳಯಾಗ್ನಿಯಿಂದ ದಗ್ಧನಾಗಿ ಯಾವನು ತಾನೆ ಲೋಕದಲ್ಲಿ ಬದುಕುತ್ತಾನೆ? ಅಥವಾ ಬದುಕಬೇಕೆಂಬ ಆಶೆಯು ತಾನೆ ಹೇಗೆ ಉಂಟಾದೀತು? ||೧೦೨||

ಜೀವನದಲ್ಲಿ ಆಸೆಯನ್ನು ಕಮ್ಮಿಮಾಡುವುದಕ್ಕಾಗಿಯೇ ಈಶ್ವರನ ಪೂಜೆಯು ನಿಯಮಿಸಲ್ಪಟ್ಟಿದೆ. ಶಿವಪೂಜಾಪರಿತ್ಯಾಗದಿಂದ ಜೀವನದ ಆಶೆಯೂ ಎಂದೂ ಕಮ್ಮಿಯಾಗುವುದಿಲ್ಲ. ||೧೦೩||

ಈಶ್ವರಾರ್ಚನೆಯನ್ನು ಮಾಡದಿರುವುದೇ ಒಂದು ಕಾಲಾಗ್ನಿ. ಅದೇ ಅಶನಿ (ವಜ್ರಾಯುಧ) ಯಂತಿರುವುದು. ಇದಕ್ಕೆ ಸಿಕ್ಕಿದವನು ಯಾವನು ತಾನೆ ಬದುಕುತ್ತಾನೆ? ||೧೦೪||

ಶಿವಾರ್ಚನತ್ಯಾಗಕಾಲೋ ಯಃ ಸ ಏವ ವಿಶೇಷತಃ ।
ಮಹಾಪ್ರಳಯಕಾಲೋಽತಸ್ತೇನ ಜೀವನಮೇವ ನ ॥೧೦೫॥

ಅಹೋ ಕಷ್ಟಮಿದಂ ಘೋರಂ ಕಷ್ಟಸಾಗರಮಧ್ಯಗಃ ।
ಶಿವಾರ್ಚನವಿಹೀನೋಽತಃ ತಸ್ಯ ತತ್ರೈವ ಮಜ್ಜನಂ ॥೧೦೬॥

ಲೋಕೇ ದುರ್ಜನಸಂಗತ್ಯಾ ಶಂಕರಾನರ್ಚನೇ ಮತಿಃ ।
ತಥಾ ಕಷ್ಟತರೇ ಘೋರೇ ನರಕೇ ವಸತಿಃ ಸದಾ ॥೧೦೭॥

ಅಶಾಂಕರಾಣಾಮಧುನಾ ಸೃಷ್ಟಿರಸ್ಮಾಕಮೀದೃಶೀ ।
ಯಾತನಾರ್ಥಮಿಯಂ ಜ್ಞೇಯಾ ಕಿಂ ವಾ ಪಾಪಂ ಪುರಾ ಕೃತಂ ॥೧೦೮॥

ಪಾಪಮೂರ್ತಿಸ್ವರೂಪೇಣ ನ ಕರೋತಿ ಶಿವಾರ್ಚನಂ ।
ಸ ಮಹಾಪ್ರಲಯಾಂತೇಽಪಿ ನರಕೇ ಸ್ಥಾಸ್ಯತಿ ಧ್ರುವಂ ॥೧೦೯॥

---

ವಿಶೇಷವಾಗಿ ಯಾವ ಕಾಲದಲ್ಲಿ ಈಶ್ವರನನ್ನು ಅರ್ಚಿಸುವುದಿಲ್ಲವೋ ಆ ಕಾಲವೇ ಪ್ರಲಯಕಾಲವೆನಿಸುವುದು. ಅದರಿಂದ ಆಗ ಯಾರೂ ಬದುಕುವಂತಿಲ್ಲ ॥೧೦೫॥

ಅಯ್ಯೋ, ಈಶ್ವರನನ್ನು ಅರ್ಚಿಸದೆ ಕಾಲಕಳೆದವರು ಕಷ್ಟಗಳೆಂಬ ಸಮುದ್ರದ ಮಧ್ಯಭಾಗವನ್ನು ಹೊಕ್ಕು ಅಲ್ಲಿಯೇ ಮುಳುಗಿ, ತೇಲಿ ಕಷ್ಟಪಡುವರು. ॥೧೦೬॥

ಪ್ರಪಂಚದಲ್ಲಿ ದುರ್ಜನರ ಸಹವಾಸದಿಂದ ಈಶ್ವರ ಪೂಜಾವಿಮುಖತೆ ಯುಂಟಾಗುವುದು. ಆದುದರಿಂದ ಅತ್ಯಂತ ಕಷ್ಟದಾಯಕವೂ ಘೋರವೂ ಆದ ನರಕದಲ್ಲಿ ವಾಸಮಾಡಬೇಕಾಗುವುದು. ॥೧೦೭॥

ಶಂಕರನಲ್ಲಿ ಭಕ್ತಿರಹಿತರಾದ ನಮ್ಮ ಸೃಷ್ಟಿಯು ಯಾತನಾನುಭವಕ್ಕಾಗಿಯೇ ಎಂದು ಎಲ್ಲರೂ ತಿಳಿಯಬೇಕು. ನಾವು ಹಿಂದೆ ಯಾವ ಪಾಪಮಾಡಿದ್ದೇವೆಯೋ ಗೊತ್ತಿಲ್ಲ. ॥೧೦೮॥

ಹಾಗೆ ಶರೀರವು ಪಾಪ ಜನ್ಯವಾಗಿರುವುದರಿಂದ ಈಶ್ವರಾರ್ಚನೆಯಲ್ಲಿ ಪ್ರವೃತ್ತಿಯುಂಟಾಗುವುದಿಲ್ಲ. ಅದರಿಂದ ಆತನು ಮಹಾಪ್ರಲಯದ ಅಂತ್ಯಭಾಗದಲ್ಲಿಯೂ ನರಕದಲ್ಲಿಯೇ ನೆಲಸುವನು. ॥೧೦೯॥

ನರಕಾಣಾಮಿಯಂ ಸೃಷ್ಟಿ ರಶಾಂಕರಜನಾಯ ಸಾ ।
ತತ್ಸೃಷ್ಟಿರಪಿ ನ ವ್ಯರ್ಥಾ ಶಿವಾನರ್ಚನತತ್ಪರೇ ॥೧೧೦॥

ಅತಃ ಪರಂ ನಾಧಿಕಾರೇ ಮಮಾಪೇಕ್ಷಾ ಯಮಾಧುನಾ ।
ಯತ್ರ ಕುತ್ರಾಪಿ ಗಂತವ್ಯಂ ಕರ್ತವ್ಯಂ ಶಿವಪೂಜನಂ ॥೧೧೧॥

ಮಾನುಷಂ ರೂಪಮಾಸಾದ್ಯ ಸ್ಥಿತ್ವಾ ಬಿಲ್ವವನೇ ಸದಾ ।
ಸಂಪಾದ್ಯ ನರ್ಮದಾಲಿಂಗಂ ಬಿಲ್ವೈರಭ್ಯರ್ಚಯಾಮ್ಯಹಂ ॥೧೧೨॥

ಯೋ ಗರ್ಭವಾಸಜನನಾತಿಜರಾದಿರೂಪ
ರೋಗಪ್ರಣಾಶಮಭಿವಾಂಛತಿ ದುಃಖದೀನಃ ।
ತಸ್ಯಾಶು ಬಿಲ್ವದಲಲಿಂಗಸಮರ್ಚನೇನ
ತದ್ರೋಗನಾಶ ಇತಿ ಸಂಪ್ರವದಂತಿ ವೇದಾಃ ॥೧೧೩॥

ಅಸ್ಮಾಭಿರಿಂದುಶಕಲಾಭರಣಃ ಕ್ಷಣಂ ವಾ
ನಾರಾಧಿತೋಽಪಿ ನವಕೋಮಲಬಿಲ್ವಪತ್ರೈಃ ।

---

ಈಶ್ವರಾರ್ಚಕರಲ್ಲದವರಿಗೆ ಈ ನರಕಗಳು ಸೃಷ್ಟಿಸಲ್ಪಟ್ಟಿವೆ. ಅಷ್ಟಿದ್ದರೂ ಅವರಿಗೆ ಶಿಕ್ಷೆವಿಧಿಸಲು ಈ ನರಕಗಳೂ ನಾಲುವುದಿಲ್ಲ. ||೧೧೦||

ಎಲೈ ಯಮನೇ, ಇನ್ನು ನನಗೆ ಈ ಅಧಿಕಾರದಲ್ಲಿ ಅಪೇಕ್ಷೆ ಇಲ್ಲ. ಎಲ್ಲಿಯಾದರೂ ಹೋಗಿ ಈಶ್ವರನ ಪೂಜೆಯನ್ನು ಮಾಡಬೇಕು. ||೧೧೧||

ನಾನು ಮನುಷ್ಯನ ರೂಪವನ್ನು ಹೊಂದಿ ಯಾವಾಗಲೂ ಬಿಲ್ವದ ಕಾಡಿನಲ್ಲಿ ಇದ್ದುಕೊಂಡು ನರ್ಮದಾ ಲಿಂಗವನ್ನು ಸಂಪಾದನೆ ಮಾಡಿ, ಆ ಬಿಲ್ವದಲಗಳಿಂದ ಅದನ್ನು ಪೂಜಿಸುತ್ತೇನೆ. ||೧೧೨||

ಯಾವ ಮನುಜನು ತಾನು ದುಃಖಿಯಾಗಿಯೂ ಇದ್ದು ಗರ್ಭವಾಸ, ಮುಪ್ಪು, ಮರಣ ಮುಂತಾದ ದುಃಖಗಳ ನಾಶವನ್ನು ಅಪೇಕ್ಷಿಸುವನೋ, ಅಂತಹವನು ಬಿಲ್ವದಲಗಳಿಂದ ಲಿಂಗವನ್ನು ಅರ್ಚನೆ ಮಾಡಿದರೆ ಅವನ ಸಕಲ ರೋಗಗಳೂ ನಾಶವಾಗುತ್ತವೆ ಎಂದು ವೇದಗಳು ಹೇಳುತ್ತವೆ. ||೧೧೩||

ನಾವು ಅರ್ಧಚಂದ್ರನೇ ಅಲಂಕಾರವಾಗಿ ಉಳ್ಳ ಈಶ್ವರನನ್ನು ಒಂದು ಕ್ಷಣವಾದರೂ ಹೊಸದೂ, ಕೋಮಲವೂ ಆದ ಬಿಲ್ವಪತ್ರೆಗಳಿಂದ ಆರಾಧಿಸಲಿಲ್ಲ. ಮತ್ತು

ದ್ವಿತ್ರೈರ್ಜಲೈರಪಿ ನ ನಾರ್ಮದತುಂಗಲಿಂಗೇ
ತೇನಾಪಿ ದುಃಖವಿಲಯೋ ಭವತಿ ಪ್ರಕಾಮಂ ॥೧೧೪॥

ಇತಿ ಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ವಿಂಧ್ಯಪ್ರದೇಶಸ್ಥ ದುಷ್ಟರಾಜೇತಿಹಾಸೇ ಚಿತ್ರಗುಪ್ತಯಮಸಂವಾದೇ
ದಶಮೋಽಧ್ಯಾಯಃ

ಯಾವುದರಿಂದ ನಮ್ಮ ದುಃಖವು ನಾಶವಾಗುವುದೋ ಅಂತಹ ನರ್ಮದಾಲಿಂಗಕ್ಕೆ ಕೇವಲ ನೀರಿನಿಂದಲೂ ಅಭಿಷೇಕವನ್ನು ಮಾಡಲಿಲ್ಲ ಎಂದು ಚಿತ್ರಗುಪ್ತನು ಯಮನನ್ನು ಕುರಿತು ಹೇಳಿದನೆಂದು ಯಾಜ್ಞವಲ್ಕ್ಯನು ಹೇಳಿದನು. ॥೧೧೪॥

ಎಂಬಲ್ಲಿಗೆ " ಹರ " ಎಂಬ ಹೆಸರುಳ್ಳ ಶಿವರಹಸ್ಯದ ಮೂರನೆಯ ಅಂಶದ
ಉತ್ತರಾರ್ಧದಲ್ಲಿ ವಿಂಧ್ಯಪ್ರದೇಶದಲ್ಲಿದ್ದ ದುರಾಚಾರಿಯಾದ ರಾಜನ
ಇತಿಹಾಸದಲ್ಲಿ ಚಿತ್ರಗುಪ್ತ ಮತ್ತು ಯಮ ಇವರ ಸಂವಾದದಲ್ಲಿ
ಹತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಏಕಾದಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಯಮೋಽಪಿ ಪರಿತಾಪತಃ ।
ಸಮುವಾಚಾತಿಧೈರ್ಯೇಣ ಮುಂಚನ್ನಶ್ರುಕಣಾನ್ಮುಹುಃ ॥೧॥

ಕಿಂ ಕರ್ತವ್ಯಮಿಹಾಸ್ಮಾಭಿರಸ್ಮಾಕಂ ದುರದೃಷ್ಟತಃ ।
ಅಧಿಕಾರೋಽಪಿ ಸಂಪ್ರಾಪ್ತಃ ಕಷ್ಟಾನುಭವಕಾರಣಂ ॥೨॥

### ಹನ್ನೊಂದನೆಯ ಅಧ್ಯಾಯ

ಈ ಪರಿಯಾದ ಚಿತ್ರಗುಪ್ತನ ಮಾತುಗಳನ್ನು ಕೇಳಿ ಯಮಧರ್ಮನಿಗೆ ಬಹಳ ಖೇದವೂ ಪಶ್ಚಾತ್ತಾಪವೂ ಉಂಟಾಯಿತು. ಹಾಗೆಯೇ ಕ್ರಮೇಣ ಮನಸ್ಸಿಗೆ ಧೈರ್ಯವನ್ನು ತಂದುಕೊಂಡು ಕಣ್ಣೀರಿಡುತ್ತಲೇ ಹೀಗೆ ನುಡಿದನು, ಎಂದು ಯಾಜ್ಞ್ಯವಲ್ಕ್ಯನು ಜನಕರಾಜನಿಗೆ ಮುಂದೆ ಯಮನು ಪರಿತಪಿಸಿದ ವಿಷಯವನ್ನು ಬೋಧಿಸತೊಡಗಿದನು. ॥೧॥

" ಅಯ್ಯೋ, ನಾವು ಏನುಮಾಡುವುದು ? ನಮಗೆ ಏನು ಮಾಡಲೂ, ಬಿಡಲೂ ಅಸಾಧ್ಯವಾಗಿದೆ. ಈ ಅಧಿಕಾರಕಷ್ಟದಿಂದ ನಮಗೆ ಎಂದು ಬಿಡುಗಡೆ ಲಭಿಸೀತು ಎಂದೆನಿಸುತ್ತದೆ. ಈಗ ನಮ್ಮ ತಲೆಗೆ ಕಟ್ಟಿರುವ ಈ ಅಧಿಕಾರವೂ ಸಹ ದೌರ್ಭಾಗ್ಯದಿಂದಲೇ ಸರಿ. ಈ ಅಧಿಕಾರವು ಕೇವಲ ಕ್ಲೇಶಕ್ಕೇ ಕಾರಣವಾಗಿರುವುದು. ॥೨॥

ಅಸ್ಮತ್ಕರ್ಮಾನುಸಾರೇಣ ಪ್ರಾಪ್ತ ಏವಾಯಮೀದೃಶಃ ।
ಅಧುನಾ ಪರಿಹಾರೋಽಪಿ ಕಥಮಸ್ಯ ಭವಿಷ್ಯತಿ ॥೩॥

ಅಸ್ಮದೀಯಾನಿ ದುಃಖಾನಿ ವಿಚಾರ್ಯ ಸ ಮಹೇಶ್ವರಃ ।
ಕರುಣಾಭಿಮುಖೋ ಭೂಯಾತ್ತದಾ ದುಃಖಂ ಪ್ರಯಾಸ್ಯತಿ ॥೪॥

ಸ್ವತಂತ್ರಸ್ಸ ಮಹಾದೇವೋ ಯದ್ಯದ್ವಾ ಕರ್ತುಮಿಚ್ಛತಿ ।
ತತ್ಸರ್ವಂ ಸಂಕರೋತ್ಯೇವ ಕೋ ವಾ ತಸ್ಯ ನಿವಾರಕಃ ॥೫॥

ಅಸ್ಮಾಕಮಲ್ಪಭಾಗ್ಯಾನಾಮಧುನಾ ನ ಶಿವಾರ್ಚನಂ ।
ಅತಃಪರಂ ಚಿಂತಯಾಪಿ ಕಿಂ ತಯಾತಿದುರತ್ಯಯಾ ॥೬॥

ತಪ್ತಂ ಯದರ್ಥಂ ಚ ತಪಸ್ತತ್ಫಲಂ ಜಾತಮೀದೃಶಂ ।
ಅತಃಪರಂ ಕಿಮಸ್ಮಾಕಂ ಚಿಂತಯಾ ಫಲನಾಸ್ತಿಕಾಃ ॥೭॥

ನಮ್ಮ ಪ್ರಾಚೀನಕರ್ಮದ ಫಲವಾಗಿ ಈಗ ಈ ಅಧಿಕಾರಭಾರವು ನಮ್ಮ ಮೇಲೆ ಬಿದ್ದಿದೆ. ಇದನ್ನು ನಡೆಸಿಕೊಂಡು ಬರುವುದು ಬಹಳ ದುಸ್ಸಾಧ್ಯವೇ. ಇಂಥ ಕಷ್ಟದಿಂದ ನಮಗೆ ಎಂದು ವಿಶ್ರಾಂತಿ ದೊರೆಕೀತು? ಅದಕ್ಕೆ ಏನು ಉಪಾಯವನ್ನು ಮಾಡುವುದು? ॥೩॥

ಈ ರೀತಿಯಾದ ನಮ್ಮ ದುಃಖವನ್ನು ನೋಡಿ ಆ ಪರಮೇಶ್ವರನೇ ನಮ್ಮ ಮೇಲೆ ದಯೆತೋರಿಸಿ ಉದ್ಧರಿಸಬೇಕು. ನಮ್ಮ ಕ್ಲೇಶವು ಬಿಡುಗಡೆ ಆಗಬೇಕಾದರೆ ಅದೊಂದೇ ಮಾರ್ಗ. ಒಂದೇ ಉಪಾಯ. ॥೪॥

ಏನನ್ನು ಬೇಕಾದರೂ ಮಾಡುವುದಕ್ಕೂ ಬಿಡುವುದಕ್ಕೂ ಆ ಪರಮೇಶ್ವರನು ಸ್ವತಂತ್ರನಿರುತ್ತಾನೆ. ಆತನನ್ನು ನಿರ್ಬಂಧಪಡಿಸುವ ಶಕ್ತಿಯು ಯಾರಿಗೂ ಇಲ್ಲ. ಆತನು ತನ್ನ ಇಷ್ಟದಂತೆ ಸಕಲವನ್ನೂ ಮಾಡುತ್ತಾನೆ. ಏನನ್ನು ಬೇಕಾದರೂ ಸಾಧಿಸುತ್ತಾನೆ. ಆತನ ಇಚ್ಛೆಗೆ ಅಡ್ಡಿ ಆತಂಕವನ್ನು ಯಾರು ತರಬಲ್ಲರು? ॥೫॥

ನಾವು ಕೇವಲ ಮಂದಭಾಗ್ಯರು. ಆದ್ದರಿಂದಲೇ ನಾವು ಈವರೆಗೂ ಶಿವಾರ್ಚನೆಯನ್ನು ಮಾಡದೆ ಅವಿವೇಕಿಗಳಾದೆವು. ಈಗ ಅನುಭವಿಸುತ್ತಿರುವ ಅಧಿಕಾರವೇ ಮಹಾಪುರುಷಾರ್ಥವೆಂದು ತಿಳಿದುಕೊಂಡು ಎಷ್ಟು ಸಂಭ್ರಮಪಟ್ಟೆವು? ಎಷ್ಟು ತಪಸ್ಸನ್ನಾಚರಿಸಿದೆವು? ಆದರೆ ಆ ತಪಸ್ಸುಗಳಿಗೆ ದೊರೆತ ಫಲವೆಂದರೆ

**ಯದ್ಯುಪ್ತಂ ಪಿಚುಮಂದಬೀಜಮಧುನಾ ದ್ರಾಕ್ಷಾಫಲಂ ಕಿಂ ಭವೇತ್**
**ತದ್ಬೀಜಾಂಕುರಜಂ ನ ತಿಕ್ತಮಪಿ ತತ್ಪೀಯೂಷರೂಪಂ ಪರಂ ।**
**ತಸ್ಮಾದಸ್ಮದದೃಷ್ಟಮೀದೃಶಮತೋ ನಾರಾಧಿತಶ್ಶಂಕರೋ**
**ನ ಧ್ಯಾತೋಽಪಿ ನ ಬಿಲ್ವಪಲ್ಲವಜಲೈರ್ಲಿಂಗೇಷು ನಾಭ್ಯರ್ಚಿತಃ ॥೮॥**

**ಕಿಂ ಕರ್ತವ್ಯಮತಃಪರಂ ಬಹುವಿಧೈಃ ಪಾಪೈರಪಾರೈರಿಯಂ**
**ಪ್ರಾರಬ್ಧಾ ತನುರಿತ್ಯುಮಾಪತಿಪದಾಂಭೋಜಾರ್ಚನೇ ಧೀರ್ಮಮ ।**
**ನ ಧ್ಯಾತಂ ಚ ತದಂಘ್ರಿಪಂಕಜರಜಃಪುಂಜಂ ಸಕೃದ್ವಾ ಸ್ಮೃತಂ**
**ಹಾ ಹಂತಾಮಿತಮಾಯುರೇವಮನಿಶಂ ಕ್ಷೀಣಂ ಕಿಲಾನುಕ್ಷಣಂ ॥೯॥**

ಇದೋ, ಇದೇ ಅತ್ಯಂತ ಮುಗ್ಗಟ್ಟಾದ ಸಂದರ್ಭವು. ಇನ್ನು ನಾವು ಚಿಂತಿಸಿ ಫಲವೇನು ? ಪ್ರಾಪ್ತವಾದದ್ದನ್ನು ಅನುಭವಿಸಿಯೇ ತೀರಬೇಕು. ॥೬-೭॥

ಬೇವಿನ ಬೀಜವನ್ನು ಬಿತ್ತಿ ಗಿಡಬೆಳೆಸಿದರೆ ಅದರಲ್ಲಿ ಎಲ್ಲಿಯಾದರೂ ದ್ರಾಕ್ಷೆಯು ಬಿಡುತ್ತದೆಯೇ ? ಆ ವೃಕ್ಷವು ಅಮೃತರಸಪೂರ್ಣವಾದ ಫಲವನ್ನು ಕೊಡುವುದಂತೂ ಇರಲಿ, ಹುಳಿಯಾದ ಹಣ್ಣು ಸಹ ಅದರಲ್ಲಿ ಬಿಡುವುದಿಲ್ಲ. ಕೇವಲ ಕಹಿಯಾದ ಫಲವನ್ನೇ ಅದು ಕೊಡುವುದು. ಆದುದರಿಂದಲೇ ನಾವು ಇದುವರೆಗೆ ಮಾಡಿದ ಉದ್ಯೋಗ ಸಮಾರಂಭಗಳೆಲ್ಲಾ ಕೇವಲ ನಮಗೆ ಪ್ರತಿಕೂಲವಾದ ಫಲವನ್ನೇ ಕೊಡುತ್ತಿವೆ. ನಮಗೆ ಶ್ರೇಯಸ್ಸನ್ನು ತಂದುಕೊಡುವ ಶಿವಾರ್ಚನೆಯನ್ನು ಸಹ ನಾವು ಮಾಡಲಿಲ್ಲ. ಬಿಲ್ವಪತ್ರೆ ಮುಂತಾದವುಗಳಿಂದ ಶಿವಲಿಂಗವನ್ನು ಅರ್ಚನೆಮಾಡಲಿಲ್ಲ. ಶಂಕರನನ್ನು ಭಕ್ತಿಯಿಂದ ಧ್ಯಾನಿಸಲಿಲ್ಲ. ॥೮॥

ಅನೇಕ ಪಾಪಕರ್ಮಗಳ ವಿಪಾಕದಿಂದ ಈ ದೇಹವು ಉಂಟಾಗಿದೆ ಎಂಬುದನ್ನು ನಾನು ಯೋಚಿಸಲಿಲ್ಲ. ಅಥವಾ ನಾನು ಮುಂದೆ ಮಾಡಬೇಕಾದದ್ದು ಏನು ? ಯಾವುದು ನನಗೆ ಅವಶ್ಯ ಕರ್ತವ್ಯವಾಗಿದೆ ? ಎಂಬುದೂ ನನಗೆ ಗೊತ್ತಾಗಲಿಲ್ಲ. ಅಂದಮೇಲೆ ಆ ಪರಮೇಶ್ವರನ ಪೂಜೆಯಾಗಲಿ, ಧ್ಯಾನವಾಗಲಿ ಹೇಗೆ ನಡೆಯುವುದು ? ಅಂಥ ಪುಣ್ಯಕರ್ಮಗಳೊಂದನ್ನೂ ಒಂದುಸಲವೂ ನಾವು ಮಾಡಲಿಲ್ಲ. ಅಯ್ಯೋ ! ಬಹಳ ಅನುಚಿತವಾಗಿ, ಕೇವಲ ವ್ಯರ್ಥವಾಗಿ ನಮ್ಮ ಎಲ್ಲಾ ಆಯುಸ್ಸೂ ಕಳೆದುಹೋಯಿತಲ್ಲಾ !! ॥೯॥

ಅಕ್ಷೀಣಂ ಕರಣಂ ಯದಾ ಸುಕೃತಿನಾಂ ಧನ್ಯೈರಪಾರೈಸ್ತದಾ
ಶ್ರೀವಿಶ್ವೇಶ್ವರಲಿಂಗಪೂಜನಮತಿರ್ಜಾತಾನುವೃತ್ತ್ಯಾ ಭವೇತ್ ।
ಅಭ್ಯಸ್ತಾ ಭವತೀತಿ ತಾದೃಶಮಹದ್ಭಾಗ್ಯೋದಯಃ ಕಸ್ಯ ವಾ
ಯಸ್ಯ ಸ್ಯಾದತಿಪುಣ್ಯಗೌರವವಶಾದ್ಭಾವಾಯ ತಸ್ಮೈ ನಮಃ ॥೧೦॥

ಭಾವ್ಯೋ ಭಾಗ್ಯವಶೇನ ಭಾವಸಹಿತೋ ಭಾವಾನುರಕ್ತೋ ಮುಹುಃ
ಭಾವಂ ಪಶ್ಯತಿ ಲಿಂಗಮುತ್ತಮತಮಂ ಶ್ರೀಬಿಲ್ವಮೂಲೇ ಮುದಾ ।
ತಸ್ಮಿನ್ ಬಿಲ್ವದಲೈಶ್ಶಿವಾರ್ಚನರತೋ ಭೂಯಾದಪಾಯೈರ್ವಿನಾ
ತದ್ಭಾಗ್ಯಂ ಕಥಮಸ್ಮದಾದಿಭಿರಪಿ ಪ್ರಾಪ್ಯಂ ತಪೋಭಿರ್ವಿನಾ ॥೧೧॥

ಆಯುಸ್ತಾವದಿದಂ ಗತಂ ಗತಮಿದಂ ಭೂಯೋ ನ ಯಾತ್ಯೇವ ನಃ
ಪಾಷಾಣೈರಪಿ ತಾಡನೇಽಪಿ ಶಿರಸೋಽಪ್ಯುಚ್ಚೈಃ ಕೃತೇ ರೋದನೇ ।

ದೇಹಶಕ್ತಿಯೂ ಇಂದ್ರಿಯಪಾಟವವೂ ಇರುವಾಗಲೇ ಯಾವ ಮನುಷ್ಯನಿಗೆ ಧರ್ಮ ಕರ್ಮ ಪರಿಪಾಕದ ದೆಸೆಯಿಂದ ಶಿವಲಿಂಗಾರ್ಚನೆಯಲ್ಲಿ ಆಸಕ್ತಿಯೂ ಪ್ರವೃತ್ತಿಯೂ ಉಂಟಾಗಿ, ಆ ಲಿಂಗಾರ್ಚನೆಯೇ ಸತತಾಭ್ಯಾಸವಿಷಯವಾಗುವುದೋ ನಿಜವಾಗಿಯೂ ಆತನೇ ಧನ್ಯನು. ಆತನಿಗೆ ಸಕಲ ಸೌಭಾಗ್ಯಗಳ ಉದಯವಾದಂತೆಯೇ ಸರಿ. ಅವನಂತಹ ಗೌರವಪಾತ್ರನೂ ಪುಣ್ಯಶಾಲಿಯೂ ಬೇರೊಬ್ಬ ದೊರೆಯುವುದಿಲ್ಲ. ಅಂಥ ಶಿವಭಕ್ತನೇ ಕೃತಕೃತ್ಯನು. ಅವನಿಗೇ ನಮ್ಮ ಪ್ರಥಮ ನಮಸ್ಕಾರ. ॥೧೦॥

ಪರಶಿವಭಕ್ತನಾಗಿದ್ದುಕೊಂಡು ಪರಮ ಶಿವಭಕ್ತರೊಡನೆ ಪರಮಭಕ್ತಿಯುಳ್ಳವನಾಗಿ ಬಿಲ್ವವೃಕ್ಷದ ಕೆಳಗೆ ಶಿವಲಿಂಗದ ದರ್ಶನವನ್ನೂ, ಬಿಲ್ವಾದಿಗಳಿಂದ ಅರ್ಚನೆಯನ್ನೂ, ಪರಮಶಿವಭಕ್ತನಸೇವೆಯನ್ನೂ ಅತ್ಯಾಸಕ್ತಿಯಿಂದ ಯಾವನು ಮಾಡುವನೋ ಆತನ ಭಾಗ್ಯಮಹಿಮೆಯನ್ನು ಎಷ್ಟು ಕೊಂಡಾಡೋಣ! ಅಂಥ ಸುಯೋಗವು ಕೇವಲ ಭಾಗ್ಯವಂತರಿಗೇ ಲಭಿಸುವುದು. ಆ ಯೋಗವು ನಮ್ಮಂಥವರಿಗೆ ಹೇಗೆ ಲಭಿಸೀತು? ಇದಕ್ಕಾಗಿ ನಾವು ಎಷ್ಟು ವರ್ಷ ತಪಸ್ಸು ಮಾಡಬೇಕೋ? ತಿಳಿಯದು. ॥೧೧॥

ನಮ್ಮ ಇಷ್ಟು ವರ್ಷ ಆಯುಸ್ಸೂ ಶಿವಾರ್ಚನೆಯನ್ನು ಮಾಡದೇ ವ್ಯರ್ಥವಾಗಿ ಕಳೆದುಹೋಯಿತಲ್ಲಾ! ಆ ಕಳೆದ ವಯಸ್ಸು ಮತ್ತೆ ತಿರುಗಿ ಬರುವುದಿಲ್ಲ.

ಚೋರಾಕಾರಮಹಾಘನೀತಮಿತಿ ತನ್ನಾಯಾತಿ ಸರ್ವಾತ್ಮನಾ
ಶಂಭೋ ಕಾ ಗತಿರಸ್ಯ ಹಂತವತಕೇ ತಾತಾದಯಾಮುಷ್ಯಹೋ (?) ॥೧೨॥

ಹಾ ಹಾ ಹಂತ ಬತಾತಿದೀನಮಧುನಾ ಪಶ್ಯ ಕ್ಷಣಂ ಮಾ ಪ್ರಭೋ
ಶಂಭೋ ಮಯ್ಯನಪಾಯಿನೀ ಯದಿ ದಯಾ ತರ್ಹಿ ಪ್ರಸೀದಾಧುನಾ ।
ತ್ವತ್ಪೂಜಾನಿರತಂ ಮನೋ ಭವತು ಮೇ ಕಾ ತಾವತಾ ತೇ ಕ್ಷತಿಃ
ಕ್ಷೀಣಾನಾಮಪಿ ರಕ್ಷಣೇ ನ ಕರುಣಾ ಕಿಂ ತೇ ಕ್ಷಣಾರ್ಧಂ ಕ್ಷಣಂ ॥೧೩॥

ಏತಸ್ಮಾದಧಿಕಾರತಃ ಶ್ರುತಿರಿಯಂ ಸಂಪಾದನೀಯಾ ತ್ವಯಾ
ಯಾಮೋ ಬಿಲ್ವವನಂ ನವಾರುಣಲಸದ್ಬಿಲ್ವೀದಲೈಃ ಕೋಮಲೈಃ ।
ತುಂಗೇ ನಿರ್ಮಲಬಿಲ್ವಮೂಲನಿಹಿತೇ ಲಿಂಗೇ ಸಮಭ್ಯರ್ಚನಂ
ಕೃತ್ವಾ ತೇ ನಿವಸಾಮಿ ತೇನ ಸಫಲಂ ತತ್ತಾವದಾಯುರ್ಮಮ ॥೧೪॥

ಕಲ್ಲಿನಿಂದ ತಲೆ ಚಚ್ಚಿಕೊಂಡರೂ ಇಲ್ಲ. ಗಟ್ಟಿಯಾಗಿ ಚೀರಿಕೊಂಡರೂ ಗತಕಾಲವು ಮತ್ತೆ ಹಿಂದಕ್ಕೆ ಬರುವುದಿಲ್ಲ. ನಮ್ಮ ಆಯುರ್ದಿನಗಳನ್ನು ಕಳ್ಳರಂತೆ ನಮ್ಮ ಪಾಪಕರ್ಮಗಳು ಅಪಹರಿಸಿಬಿಟ್ಟಿವೆ. ಶಂಭೋ, ಈಗ ನಮಗೆ ನಮ್ಮ ತಪ್ಪು ಸ್ಪಷ್ಟವಾಗಿ ಕಾಣುತ್ತಿದೆ. ಹಾಗೂ ಅತ್ಯಂತ ಪಶ್ಚಾತ್ತಾಪದಿಂದ ಕ್ಲೇಶಪಡುತ್ತಿದ್ದೇವೆ. ನಮ್ಮ ಮೇಲೆ ನಿನ್ನ ದಯೆಯುಂಟಾಗಬಾರದೇ ? ||೧೨||

ಹಾ ಹಾ, ನಾನು ಈಗ ಅತ್ಯಂತ ದೀನನಾಗಿರುವೆ. ನನ್ನಷ್ಟು ಕ್ಲೇಶವನ್ನು ಅನುಭವಿಸುವರು ಯಾರು? ಶಂಭೋ, ಹೀನದೀನರೆಲ್ಲರಿಗೂ ನೀನೇ ರಕ್ಷಕನಾಗಿರುವೆ. ಆದುದರಿಂದ ನನ್ನನ್ನೂ ಒಂದುಸಾರಿ ಕೃಪಾದೃಷ್ಟಿಯಿಂದ ಅವಲೋಕಿಸು. ನನ್ನಮೇಲೆ ನಿನಗೆ ನಿಷ್ಕಲವಾದ ವಾತ್ಸಲ್ಯವಿದ್ದರೆ ನನ್ನ ಮನಸ್ಸು ಸರ್ವದಾ ನಿನ್ನ ಆರಾಧನೆಯಲ್ಲಿಯೇ ಆಸಕ್ತವಾಗಿರುವಂತೆ ಪ್ರಚೋದಿಸು. ||೧೩||

ಪರಮೇಶ್ವರನೇ, ನನ್ನ ಈ ಅಧಿಕಾರದ ದಾಕ್ಷಿಣ್ಯದಿಂದಾದರೂ ನನ್ನ ಇಷ್ಟೊಂದು ಪ್ರಾರ್ಥನೆಯನ್ನು ನಡೆಸಿಕೊಡು. ನಾನು ಬಿಲ್ವವನಕ್ಕೆ ಹೋಗಬೇಕು. ಅಲ್ಲಿ ಬಿಲ್ವವೃಕ್ಷದ ಕೆಳಗೆ ಉನ್ನತವಾದ ಲಿಂಗಕ್ಕೆ ಕೋಮಲವೂ ಸುಂದರವೂ ಆದ ಬಿಲ್ವದಳಗಳಿಂದ ಪೂಜೆಯನ್ನು ಮಾಡಬೇಕು. ಹೀಗೆಯೇ ನಿನ್ನನ್ನೇ ಆರಾಧಿಸುತ್ತಾ ನಾನು ಕಾಲ ಕಳೆದರೆ ನನ್ನ ಆಯುಸ್ಸು ಆಗಲುಃವರೂ ಸಾರ್ಥಕವಾಗುವುದು. ಅದಕ್ಕಾಗಿ ನನಗೆ ಇದೇ ವರವನ್ನು ಅನುಗ್ರಹಿಸು. ||೧೪||

ಧಿಗ್ಧಿಗ್ಜನ್ಮ ನಿರರ್ಥಕಂ ನಿಯಮತೋ ಯೇನೈವ ನಾರಾಧಿತೋ
ಲಿಂಗೇ ಬಿಲ್ವದಳೈರ್ಜಲೈರಪಿ ಶಿವಶ್ಯೈಶ್ವತ್ಸಕೈದ್ವಾ ಕ್ಷಣಂ ।
ತಂ ಪಾಪಿಷ್ಠವರಿಷ್ಠ ನಿಷ್ಠುರವಚೋವೀಚೀಸಮಾಕರ್ಣನ
ವ್ಯಾಸಕ್ತಂ ಸತತಂ ಮಲಾವಿಲಜಲಕ್ಷಿಪ್ತಂ ಪ್ರಪಶ್ಯಾಮ್ಯಹೋ ॥೧೫॥

ಯೇ ತೇ ತಾವದುಮಾಸಹಾಯಚರಣಧ್ಯಾನೇನ ಹೀನಾಃ ಪರಂ
ಕುಂಭೀಪಾಕಮಹಾನಲಾವಿಲಮಹಾಜ್ವಾಲಾಕುಲವ್ಯಾಕುಲಾಃ ।
ಏತೈರ್ನಾರ್ಮದಲಿಂಗವೀಕ್ಷಣಮಪಿ ತ್ಯಕ್ತಂ ನ ತತ್ಸಂಸ್ಮೃತಂ
ತಲ್ಲಿಂಗೇ ನವಬಿಲ್ವಕೋಮಲದಲಂ ಕ್ಷಿಪ್ತಂ ನ ಸರ್ವಾತ್ಮನಾ ॥೧೬॥

ಏತೈಃ ಪಾಪರತೈರ್ನ ನಾರ್ಮದಮಹಾಲಿಂಗಾಂಗಸಂಗಃ ಕೃತಃ
ತಲ್ಲಿಂಗಾರ್ಚನತತ್ಪರೋಽಪಿ ನ ನತೋ ನ ಪ್ರಾರ್ಥಿತಸ್ತಾಧನೈಃ ।

---

ಯಾವನು ತನ್ನ ಜನ್ಮದಲ್ಲಿ ಒಂದುಸಲವೂ ಶುದ್ಧೋದಕ, ಬಿಲ್ವಪತ್ರೆ ಮುಂತಾದುವುಗಳಿಂದ ಲಿಂಗಾರ್ಚನೆಯನ್ನೂ ಮಾಡಿರುವುದಿಲ್ಲವೋ, ಅಥವಾ ಅಂತಹ ಪೂಜಿತವಾದ ಶಿವಲಿಂಗವನ್ನು ದರ್ಶನಮಾಡಿಲ್ಲವೋ, ಆತನು ಪರಮಪಾಪಿಷ್ಠನೇ ಸರಿ. ಆತನು ಕೇವಲ ಪಾಪಿಷ್ಠರ ನಿಷ್ಠುರವಾದ ಸ್ವೇಚ್ಛಾಡಂಬರಗಳಾದ ಮಾತುಗಳನ್ನೇ ಕೇಳುವುದರಲ್ಲಿ ಆಸಕ್ತನಾಗಿರುತ್ತಾನೆ. ಆದುದರಿಂದಲೇ ಆತನಿಗೆ ವಿವೇಕವು ಉದ್ಬುದ್ಧವಾಗುವುದಿಲ್ಲ. ಆತನು ಅಂಧಕೂಪದಲ್ಲಿ, ಅಮೇಧ್ಯದಿಂದ ಕೂಡಿದ ಕೆಸರಿನ ನೀರಿನಲ್ಲಿ ಮುಳುಗಿರುತ್ತಾನೆಂದು ನನಗನಿಸುತ್ತದೆ. ಅಂತಹವನೇ ಅತಿ ತುಚ್ಛನು. ಆತನ ಜನ್ಮವೇ ನಿರರ್ಥಕವಾದದ್ದು ಎಂದು ನಾನು ಭಾವಿಸುವೆನು. ||೧೫||

ಯಾರು ಭವಾನೀಪತಿಯ ಚರಣಕಮಲಗಳನ್ನು ಧ್ಯಾನಿಸುವುದಿಲ್ಲವೋ, ಅಥವಾ ನರ್ಮದಾ ಲಿಂಗಕ್ಕೆ ಬಿಲ್ವಾದಿಗಳಿಂದ ಅರ್ಚನೆಯನ್ನೂ ಮಾಡುವುದಿಲ್ಲವೋ, ಅಥವಾ ಅಂಥ ಲಿಂಗವನ್ನು ಸ್ಮರಿಸುವುದೂ ಇಲ್ಲವೋ ಅಂತಹವರು ಕುಂಭೀಪಾಕವೆಂಬ ನರಕದಲ್ಲಿ ಬೀಳುವರಲ್ಲದೇ ಅಲ್ಲಿಯೇ ಭಯಂಕರವಾದ ಬೆಂಕಿಯ ಜ್ವಾಲೆಯಿಂದ ಬೇಯುವರು. ||೧೬||

ಪಾಪಿಷ್ಠರು ಕೇವಲ ಪಾಪಕರ್ಮಗಳಲ್ಲಿಯೇ ಆಸಕ್ತರಾಗಿರುತ್ತಾರೆ. ಅವರು ನರ್ಮದಾ ಲಿಂಗದ ಧಾರಣೆಗೆ ಮನಗೊಡುವುದಿಲ್ಲ. ಆ ಲಿಂಗವನ್ನು ಅರ್ಚಿಸುವ

ವಾಕ್ಯೈರ್ನಾತಿಮನೋಹರೈಃಸ್ತುತಮಹೋ ತತ್ಪಾಪಭೋಗೋಧುನಾ
ಕುಂಭೀಪಾಕವಿಶೇಷತಪ್ತಖದಿರಾಂಗಾರಪ್ರವಾಹೇ ಸ್ಥಿತಿಃ ॥೧೭॥

ಏತೈರ್ಭೂಪತಿಭಿಃ ಪ್ರಮತ್ತಹೃದಯೈಸ್ಸರ್ವಾತ್ಮನಾ ಶಂಕರ
ಧ್ಯಾನಾರಾಧನಪೂಜನೋಪಕರಣದ್ರವ್ಯೈಃ ಕದಾಚಿತ್ಪ್ರಭುಃ ।
ಶಂಭುರ್ನಾರ್ಚಿತ ಏವ ತೇನ ಬಹುಲಜ್ವಾಲಾಕುಲವ್ಯಾಕುಲಾಃ
ಕುಲ್ಯಾಯಾಂ ಮಲಪೂಯಕೀಟಚರಣಾಘಾತಾಕುಲಾಯಾಂ ಸ್ಥಿತಾಃ॥೧೮॥

ಏತೈಃ ಪ್ರಾತರುಮಾಸಹಾಯಚರಣಾಂಭೋಜಾರ್ಚನೇಷ್ವಾದರಃ
ತಾವನ್ನೈವ ಕೃತಃ ಕದಾಪಿ ಖದಿರಾಂಗಾರಪ್ರವಾಹಾಶ್ರಿತೈಃ ।
ಏತೈರ್ಬಿಲ್ವದಳಾರ್ಚನಂ ಚ ನ ಕೃತಂ ಪಾಪೇನ ತೇನಾಧುನಾ
ಸಂತಪ್ತಾಯಸಖಂಡಮಂಡಿತಮಹಾಮುಂಡಾಶ್ಚರಂತಿ ದ್ರುತಂ ॥೧೯॥

---

ದಿಲ್ಲ. ಅಥವಾ ಶ್ರವಣಮನೋಹರವಾದ ಶಿವಸ್ತುತಿ ವಾಕ್ಯಗಳನ್ನು ಹೇಳಿ ಪ್ರಾರ್ಥಿಸುವುದೂ ಇಲ್ಲ. ಆದ್ದರಿಂದಲೇ ಅವರು ಮಹಾ ಪಾಪಕ್ಕೆ ಗುರಿಯಾಗಿ ಕ್ರೂರಯಾತನೆಯನ್ನು ಅನುಭವಿಸುತ್ತಾರೆ. ಕುಂಭೀಪಾಕದಲ್ಲಿ ಕೇವಲ ಕಗ್ಗಲೀ ಸೌದೆಯನ್ನು ಉರಿಸಿ ತಯಾರುಮಾಡಿದ ಬೆಂಕಿಯ ಕೆಂಡಗಳ ಮಧ್ಯದಲ್ಲಿ ಸದಾ ಬಿದ್ದಿರುತ್ತಾರೆ. ॥೧೭॥

ಅನೇಕ ರಾಜರು ತಮಗೆ ರಾಜ್ಯವು ಸಿಕ್ಕಿರುವುದೆಂದೂ, ತಮ್ಮನ್ನು ಕೇಳುವವರು ಯಾರೂ ಇರುವುದಿಲ್ಲವೆಂದೂ ಕೊಬ್ಬಿಹೋಗುತ್ತಾರೆ. ಅತ್ಯಂತ ಮದಾಂಧತೆಯಿಂದ ಯಾರ ಮಾತನ್ನೂ ಅವರು ಲಕ್ಷಿಸುವುದಿಲ್ಲ. ಉಪದೇಶವನ್ನಂತೂ ಕೇಳುವುದೇ ಇಲ್ಲ. ಸ್ವತಃ ತಾವೂ ಅವಿವೇಕಿಗಳಾಗಿರುತ್ತಾರೆ. ಅವರು ಅತ್ಯಂತ ವೈಭವದಿಂದ ಶಿವಾರ್ಚನೆಯನ್ನು ಅನುಷ್ಠಿಸಲು ಬೇಕಾದಷ್ಟು ಸೌಲಭ್ಯಗಳಿದ್ದರೂ ಒಂದು ಸಲವೂ ಶಿವಾರಾಧನೆಯನ್ನು ಮಾಡುವುದಿಲ್ಲ. ಅವರು ಕೊನೆಗೆ ಮಹಾಪಾಪಿಷ್ಠರಾಗುವರಲ್ಲದೇ ನರಕದಲ್ಲಿ ಭಯಂಕರವಾದ ಬೆಂಕಿಯ ಜ್ವಾಲೆಯಲ್ಲಿ ಬೇಗೆಯನ್ನು ಅನುಭವಿಸುವರು. ಮತ್ತು ಕ್ರಿಮಿಕೀಟಗಳಿಂದ ಕೊಳೆತು ನಾರುತ್ತಿರುವ ಕೂಪದಲ್ಲಿ ಬಿದ್ದು ಒದ್ದಾಡುವರು. ॥೧೮॥

ಈ ನರಕದಲ್ಲಿ ದಿಂಡಗಸೌದೆಯಿಂದ ತಯಾರು ಮಾಡಿದ ಬೆಂಕಿಕೆಂಡಗಳು ಸದಾ ಸಿದ್ಧವಾಗಿರುತ್ತವೆ. ಇವುಗಳಲ್ಲಿ ಪಾಪಿಗಳನ್ನು ಹಾಕಲಾಗುವುದು. ಅಲ್ಲಿ

ಏತ್ತೈರ್ನಾರ್ಚಿತಮೇವ ಲಿಂಗಮಸಕೃದ್ಭಕ್ತ್ಯಾ ಸ್ಥಿತಂ ದುರ್ಜನೈಃ
ತತ್ಪಾಪೇನ ಚರಂತಿ ವಹ್ನಿಕುಹರಜ್ವಾಲಾಕುಲವ್ಯಾಕುಲಾಃ ।
ಏತ್ತೈಶ್ಶಂಕರದೂಷಣಂ ಕೃತಮತಸ್ತಪ್ತಾಯಸಂ ಜಿಹ್ವಯಾ
ಕೃತ್ವಾ ಸಂಕಲಿತಂ ಚರಂತಿ ಬಹುಧಾ ಸಂತಪ್ತಕುಲ್ಯಾಜಲೇ ॥೨೦॥

ಏತ್ತೈರ್ನೈವ ಕೃತಂ ಕೃತಾಘನಿಚಯೈರ್ಹಾರೋಪಹಾರಾದರಃ
ತತ್ಪಾಪೇನ ಮಲೇ ಚರಂತಿ ಬಹುಧಾ ತಪ್ತೇ ಪುರೀಷೇ ಚಿರಂ ।
ತಿಷ್ಠಂತ್ಯೇವ ಲುಠಂತಿ ಸಂತತಮಪಿ ಕ್ಲಿಶ್ಯಂತಿ ಹಂತೇತಿ ತೇ
ಸಂತಪ್ತಾಯಸವಾಯಸಾತಿಕಠಿನಾಘಾತೈರುದಂತ್ಯನ್ವಹಂ ॥೨೧॥

ಬಿದ್ದವರಲ್ಲಿ ಒಬ್ಬನೂ ಶಿವಾರ್ಚನೆಯನ್ನು ಮಾಡಿರುವುದಿಲ್ಲ. ಪ್ರಾತಃಕಾಲದಲ್ಲಿ ಆ ಭವಾನೀಪತಿಯನ್ನು ಧ್ಯಾನಿಸಿರುವುದಿಲ್ಲ. ಬಿಲ್ವಾದಿಗಳಿಂದ ಲಿಂಗಾರ್ಚನೆಯನ್ನೂ ನಡೆಸಿಲ್ಲ. ಆ ಮಹಾಪಾಪದಿಂದಲೇ ಇಲ್ಲಿ ಯಾತನೆಯನ್ನು ಅನುಭವಿಸುತ್ತಿರುವರು. ಇವರಿಗೆ ಕೊಡುವ ಶಿಕ್ಷೆಯು ಅತ್ಯಂತ ಕ್ರೂರವಾದುದು. ಬೆಂಕಿಯಲ್ಲಿ ಕೆಂಪಗೆ ಕಾಯಿಸಿದ ಕಬ್ಬಿಣದ ಮೊಂಡುಕತ್ತಿಯಿಂದ ಇವರ ತಲೆಯನ್ನು ಬೋಳಿಸುವರು. ಇಂಥ ಶಿಕ್ಷೆಯನ್ನು ಅನುಭವಿಸಿದ ಈ ಪಾಪಿಗಳೂ ಯಾತನೆಯಿಂದಲೂ ಲಜ್ಜೆಯಿಂದಲೂ ಅತ್ತಿಂದಿತ್ತ ಓಡುತ್ತಾರೆ. ॥೧೯॥

ಸತತವೂ ಶಿವಲಿಂಗಕ್ಕೆ ಅರ್ಚನೆಮಾಡುವುದನ್ನು ಬಿಟ್ಟು ಯಾರು ಪಾಪಿಗಳಾಗಿರುತ್ತಾರೆಯೋ ಅವರು ನರಕದಲ್ಲಿ ಆ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಬೆಂಕಿಯ ಪೊಟರೆಯಲ್ಲಿ ಬಿದ್ದು ಬೆಂದು ಹೋಗುತ್ತಾರೆ. ಯಾರು ಇದಕ್ಕಿಂತಲೂ ಘೋರತರವಾಗಿ ಶಿವನಿಂದೆಯನ್ನು ಮಾಡುವರೋ ಅವರು ಮತ್ತು ಘೋರತರವಾದ ಶಿಕ್ಷೆಯನ್ನು ಅನುಭವಿಸುತ್ತಾರೆ. ಶಿವನಿಂದಕರ ನಾಲಿಗೆಯನ್ನು ಕಾದ ಕಬ್ಬಿಣದಿಂದ ಸುಟ್ಟು ಅವರನ್ನು ಕುದಿಯುವ ನೀರಿನಲ್ಲಿ ಹಾಕಿ ಬೇಯಿಸುವರು. ॥೨೦॥

ಯಾರು ಶಿವಭಕ್ತರನ್ನು ಪೀಡಿಸುವರೋ ಅಥವಾ ಅವರ ಪದಾರ್ಥಗಳನ್ನು ಅಪಹರಿಸುವರೋ, ಅವರು ಮಹಾಪಾಪಿಗಳೆನಿಸುವರು. ಆದಕ್ಕೆ ತಕ್ಕಂತೆಯೇ ಅವರಿಗೆ ಈ ನರಕದಲ್ಲಿ ಕಠಿಣ ಶಿಕ್ಷೆಯು ಸಂಭವಿಸುವುದು. ಆ ಪಾಪಿಗಳನ್ನು ಅಮೇಧ್ಯದ ಮೇಲೆ ಹಾಕುವರು. ಕುದಿಯುತ್ತಿರುವ ಅಮೇಧ್ಯದ ಮೇಲೆ ಎಸೆಯುವರು. ಕುದಿಯುತ್ತಿರುವ ಅಮೇಧ್ಯರಾಶಿಯಲ್ಲಿ ಬಹಳ ಹೊತ್ತಿನ ವರೆಗೆ

ಏತೈಃ ಫಾಲತಲೇ ಕದಾಪಿ ನ ಕೃತಂ ಭಸ್ಮತ್ರಿಪುಂಡ್ರಂ ಶ್ರುತಂ
ತೇನೈವಾಯಸವಾಯಸೋರುಚರಣಾಘಾತೈರ್ಹತಾಃ ಕೋಟಿಶಃ ।
ರುದ್ರಾಕ್ಷೈರ್ನ ವಿಭೂಷಿತಾ ತನುರತಸ್ತೇ ಭಿಂಡಿಪಾಲಾಹತಾಃ
ಕಿಂ ಕರ್ತವ್ಯಮಿತಿ ಪ್ರಧಾವನಪರಾಃ ಕ್ಲಿಶ್ಯಂತಿ ಹಾಹಾತುರಾಃ ॥೨೨॥

ಏತೈರ್ನೈವ ಶಿವಾಭಿಷೇಚನಜಲಂ ಪೀತಂ ತತೋ ದುಸ್ಸಹಂ
ಸಂತಪ್ತಂ ಕ್ರಿಮಿಸಂಕುಲಂ ಮಲಯುತಂ ರೇತಃ ಪಿಬಂತ್ಯೇವ ತೇ ।
ಸಂತಪ್ತಾಯಸಶಸ್ತ್ರಜಾಲನಿಹತಾಃ ಕ್ಲಿಶ್ಯಂತಿ ಹಾ ಹಂತ ಹಾ
ಹಾ ಹಂತೇತಿ ಬತೇತಿ ಹಂತ ಹತಮಿತ್ಯೇವಾನುಧಾವಂತ್ಯಪಿ ॥೨೩॥

ಏತೈರ್ಭಸ್ಮವಿಹೀನಪೀನಮದನವ್ಯಾಪಾರದೂನಾಂಗನಾ
ಸಂಗೇನೈವ ನಿಶಾ ನಿಶಾಪತಿಕರವ್ಯಾಪಾರಹಾರಾದರೈಃ ।

ಹೊರಳಿಸುವರು. ಕಾದಕಬ್ಬಿಣದ ಕಾಗೆಯಿಂದ ಕಟುವಾಗಿ ಕುಕ್ಕುವರು. ಹೀಗೆ ಘೋರ ಯಾತನೆಯನ್ನು ಅನುಭವಿಸುವ ವೇಳೆಯಲ್ಲಿ ಆ ಪಾಪಿಗಳು ಅಯ್ಯಯ್ಯೋ ಎಂದು ಚೀರಿಕೊಂಡು ರೋದಿಸುತ್ತಾರೆ. ॥೨೧॥

ಯಾರು ಹಣೆಯಲ್ಲಿ ತ್ರಿಪುಂಡ್ರಭಸ್ಮವನ್ನು ಯಾವಾಗಲೂ ಧಾರಣೆಮಾಡಿಕೊಂಡಿಲ್ಲವೋ, ಅವರು ತಮ್ಮ ಪಾಪದ ಪ್ರಾಯಶ್ಚಿತ್ತವಾಗಿ ಕಬ್ಬಿಣದ ಕಾಗೆಗಳ ಕಠೋರವಾದ ಚರಣಾಘಾತದ ಪೆಟ್ಟನ್ನು ಅನುಭವಿಸುತ್ತಾರೆ. ಯಾರು ರುದ್ರಾಕ್ಷಿಯನ್ನು ಧರಿಸಿಕೊಳ್ಳಲಿಲ್ಲವೋ, ಅವರು ಭಿಂಡಿವಾಲಾಯುಧದಿಂದ ತೀಕ್ಷ್ಣವಾಗಿ ಏಟುತಿಂದು, ಅಯ್ಯಯ್ಯೋ ಎಂದು ಕೂಗಿಕೊಳ್ಳುತ್ತಾ ತಪ್ಪಿಸಿಕೊಂಡು ಓಡಿಹೋಗಲು ಯತ್ನಿಸುತ್ತಾರೆ. ॥೨೨॥

ಇವರು ಶಿವಾಭಿಷಿಕ್ತವಾದ ತೀರ್ಥವನ್ನು ಒಂದು ನಾರಿಯೂ ಕುಡಿಯಲಿಲ್ಲ. ಆ ಪಾಪಕ್ಕೆ ಶಿಕ್ಷೆಯಾಗಿ ಅಮೇಧ್ಯಮಿಶ್ರಿತವಾದ ರೇತಸ್ಸನ್ನು ಕುದಿಸಿ ಇವರಿಗೆ ಕುಡಿಸುತ್ತಾರೆ. ಅಲ್ಲದೇ ಪದೇಪದೆ ಹರಿತವಾದ ಕಾದ ಶಸ್ತ್ರಗಳಿಂದ ಹೊಡೆಯುತ್ತಾರೆ. ಆ ಶಿಕ್ಷೆಗಳನ್ನು ಅನುಭವಿಸುವಾಗ ಇವರು ಅಯ್ಯಯ್ಯೋ ಎಂದು ಪ್ರಲಾಪಿಸುತ್ತಾ ಓಡುತ್ತಿರುತ್ತಾರೆ. ॥೨೩॥

ಇದೋ, ಇವರು ಶಿವಧರ್ಮಗಳನ್ನು ಆಚರಿಸದ ಶೈವಚಿಹ್ನೆಗಳಿಲ್ಲದ ಸ್ತ್ರೀಯರೊಂದಿಗೆ ಭೋಗವಿಲಾಸವನ್ನು ಅನುಭವಿಸಿದರು. -ಚಂದ್ರಕಿರಣದ ಮುಂದೆ ಆ

ನೀತಾ ತೇನ ಚರಂತಿ ಪಾವಕಗಿರಿಪ್ರಾಕಾರದಾರಾಂಗನಾ
ವ್ಯಾಸಂಗೇನ ಮುಹುರ್ಮುಹುರ್ಗತಮುಹೋ ಹಾ ಹಂತ ಹಂತೇತಿ ತೇ ॥೨೪॥
ಏತೈರ್ನಾರ್ಪಿತಮೀಶ್ವರಾಯ ಸುರತವ್ಯಾಪಾರಸೌಖ್ಯಂ ಮುಹುಃ
ಮೋಹಾವಿಷ್ಕರಣೇನ ಲೋಹರಮಣೀಂ ತಪ್ತಾಂ ಸಮಾಲಿಂಗ್ಯ ತೇ ।
ತಿಷ್ಠಂತ್ಯೇವ ಹಿ ಹಾ ಬತೇತ್ಯಪಿ ಕಶಾಘಾತಾಹತಾಃ ಪೀಡಿತಾಃ
ತದ್ರೇತಶ್ಚ ಪಿಬಂತಿ ತಪ್ತಮಸಕೃನ್ಮೂತ್ರಂ ಪುರೀಷಾನ್ವಿತಂ ॥೨೫॥

ಪ್ರಾಯಃಪ್ರವಾಹೇಷು ಚರಂತಿ ದುಷ್ಟಾಃ
ಕಷ್ಟೈಃ ಶಿವಾರಾಧನವರ್ಜಿತಾಸ್ತೇ ॥
ಮಲಪ್ರವಾಹೇಷು ಚರಂತಿ ಭೂಯೋ
ರೇತಃಪ್ರವಾಹೇಷ್ವಪಿ ಕೋಟಿಶಸ್ತೇ ॥೨೬॥

ತೇಷಾಂ ಶಿವಾಚಾರವಿವರ್ಜಿತಾನಾಂ
ನ ರಕ್ಷಕಃ ಕೋಽಪಿ ವಿಶೇಷಧರ್ಮಃ ॥

ಸ್ತ್ರೀಯರಿಗೆ ಕಾಮೋದ್ರೇಕವನ್ನುಂಟು ಮಾಡುತ್ತಾ, ಹಾರಾದಿಗಳನ್ನು ಅವರಿಗೆ ಅರ್ಪಿಸುತ್ತಾ ರಾತ್ರಿರಾತ್ರಿಯೆಲ್ಲಾ ಅವರೊಂದಿಗೆ ಕ್ರೀಡಿಸಿದರು. ಆ ತಪ್ಪಿಗೆ ಪ್ರಾಯಶ್ಚಿತ್ತವಾಗಿ ಇಲ್ಲಿ ಮಹಾ ಶಿಕ್ಷೆಯನ್ನು ಅನುಭವಿಸುತ್ತಾ ಅವರು ಸ್ತ್ರೀಯರ ಆಕಾರದಲ್ಲಿರುವ ಬೆಂಕಿಯ ಗುಡ್ಡವನ್ನು ಅಪ್ಪಿಕೊಳ್ಳಬೇಕಾಗಿದೆ. ॥೨೪॥

ಇದೋ ಇವರು, ತಾವು ಅನುಭವಿಸಿದ ಸಂಭೋಗವಿಲಾಸಗಳ ಸೌಖ್ಯವನ್ನು ಪರಮೇಶ್ವರನಿಗೆ ಅರ್ಪಿಸಲಿಲ್ಲ. ಆ ತಪ್ಪಿಗಾಗಿ ಇಲ್ಲಿ ಕಾದ ಲೋಹಮಯವಾದ ಸ್ತ್ರೀಪುತ್ಥಳಿಯನ್ನು ಆಲಿಂಗಿಸಿಕೊಳ್ಳುತ್ತಾರೆ. ಅಲ್ಲದೇ ಮೇಲಿಂದ ಚಾಟಿಯ ಪೆಟ್ಟನ್ನೂ ಅನುಭವಿಸುತ್ತಾ, ಬಾಯಿರಿಕೆ ಎಂದು ಅರಚುತ್ತಾ, ಆಗ ಮಲಮೂತ್ರಗಳಿಂದ ಮಿಶ್ರಿತವಾದ ರೇತಸ್ಸನ್ನೇ ಪಾನಮಾಡುತ್ತಾ ಗೋಳಿಡುತ್ತಿರುವರು. ॥೨೫॥

ಪಾಪಿಗಳಾದವರನ್ನು ಅಮೇಧ್ಯಮಧ್ಯದಲ್ಲಿ ಎಸೆಯುತ್ತೇವೆ. ಶಿವಾರ್ಚನೆಯನ್ನು ಮಾಡದ ಪಾಪಿಗಳು ಮಲಪ್ರವಾಹದಲ್ಲಿಯೂ ರೇತಸ್ಸಿನ ಕೂಪದಲ್ಲಿಯೂ ಪದೇಪದೇ ಮುಳುಗಿಸಲ್ಪಡುವರು. ॥೨೬॥

ಶಿವಧರ್ಮವು ಅತ್ಯಂತ ಶ್ರೇಷ್ಠವಾದುದು. ಅಂಥ ಧರ್ಮವನ್ನು ಯಾರು ಆಚರಿಸಿರುವುದಿಲ್ಲವೋ, ಅಥವಾ ಯಾರು ದೇವದೇವನಾದ ಪರಮೇಶ್ವರನನ್ನು

ಅತೋಽತಿಪೀಡಾಕರವಹ್ನಿಶಸ್ತ್ರ
ಸಂಘಾಹತಾಸ್ತೇ ಶಿವದೂಷಕಾಶ್ಚ ॥೨೭॥

ತೇಷಾಂ ಗೃಹೇ ನಾರ್ಮದಲಿಂಗವಾರ್ತಾ
ನಾಸ್ತ್ಯೇವ ಲಿಂಗಾರ್ಚನಸಾಧನಂ ಚ ।
ಅಹೋ ಮಹಾವಹ್ನಿಗುಹಾಪ್ರವಿಷ್ಟಾಃ
ತಿಷ್ಠಂತಿ ವಿಷ್ಟಾಶನಜಾತಕಷ್ಟಾಃ ॥೨೮॥

ನಿತ್ಯೈಃ ಪ್ರಣಾಮೋ ನ ಕೃತಶ್ಶಿವಾಯ
ನ ನರ್ತನಂ ವಾ ಕೃತಮೀಶ್ವರಾಯ ।
ತೇನಾಗ್ನಿಸಂತಪ್ತಶಿಲಾತಲೇಷು
ಪತಂತಿ ಭೂಯಃ ಪುನರುತ್ಪತಂತಿ ॥೨೯॥

---

ನಿಂದಿಸುವರೋ, ಅವರಿಗೆ ನರಕದಲ್ಲಿ ಅತಿ ಪೀಡಾಕರವಾದ ಇಂತಹ ಶಿಕ್ಷೆಗಳೂ ಅಗ್ನಿಮಯವಾದ ಶಸ್ತ್ರಗಳ ಹೊಡೆತವೂ ಬೀಳುತ್ತವೆ. ಅವರಿಗೆ ಯಾರೂ ದಯೆ ತೋರುವವರಾಗಲಿ ರಕ್ಷಕರಾಗಲಿ ಇರುವುದಿಲ್ಲ. ರಕ್ಷಣೆ ಕೊಡುವ ಧರ್ಮವೂ ಅವರಿಗೆ ಮತ್ತೊಂದಿಲ್ಲ. ॥೨೭॥

ಆ ಶಿವನಿಂದಕರ ಮನೆಯಲ್ಲಿ ಶಿವಧರ್ಮಗಳು ಯಾವುವೂ ನಡೆಯುವುದಿಲ್ಲ. ಪುಣ್ಯತಮವಾದ ನಾರ್ಮದ ಲಿಂಗದ ಪೂಜೆಯು ತೋರುವಂತಿಲ್ಲ. ಅಥವಾ ಶಿವ ಪೂಜಾ ಸಾಮಗ್ರಿಗಳನ್ನು ಅವರು ಸಂಗ್ರಹಿಸುವುದಿಲ್ಲ. ಆದುದರಿಂದ ಆ ಪಾಪಕ್ಕೆ ಶಿಕ್ಷೆಯು ಇಲ್ಲಿ ಘೋರತರವಾಗಿ ನಡೆಯುವುದು. ಅವರನ್ನು ಬೆಂಕಿಯ ಗುಹೆಗೆ ತಳ್ಳಿ ತಿನ್ನಲು ಕೇಳಿದರೆ ಅಮೇಧ್ಯವನ್ನು ಕೊಡುವರು. ಅವರು ಬೇರೆ ಗತಿ ಇಲ್ಲದೇ ಅದನ್ನೇ ತಿನ್ನುತ್ತಾರೆ. ಮತ್ತು ತಮ್ಮ ಕಷ್ಟಾನುಭವಕ್ಕಾಗಿ ಸದಾ ಶೋಕಿಸುತ್ತಾರೆ. ॥೨೮॥

ಇವರು ಪರಮೇಶ್ವರನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಲಿಲ್ಲ. ಮತ್ತು ಆ ದೇವದೇವನ ಸಂತುಷ್ಟಿಗಾಗಿ ಭಜಿಸುತ್ತಾ ನರ್ತನವನ್ನೂ ಮಾಡಿರುವುದಿಲ್ಲ. ಆದುದರಿಂದ ಇವರು ಕೆಂಪಗೆ ಕಾದ ಕಲ್ಲುಚಪ್ಪಡಿಯ ಮೇಲೆ ಬೀಳುತ್ತಾರೆ. ಅಲ್ಲಿ ಮೈಯೆಲ್ಲಾ ಸುಟ್ಟಕೂಡಲೇ ವೇದನೆಯಿಂದ ಅಲ್ಲಿಯೇ ಬಿದ್ದುಬಿದ್ದು ಒದ್ದಾಡುತ್ತಾರೆ. ॥೨೯॥

ನ ಶ್ರುತಾ ತೇನ ಸಹಸಾ ಮಹೇಶ್ವರಕಥಾಸುಧಾ ।
ಅಥೋ ವಿಕರ್ಣೋ ಬುಡತಿ ವಹ್ನಿಕುಲ್ಯಾಸು ಕೋಟಿಶಃ ॥೩೦॥

ನಾನಾವಿಧಾ ಯಾತನಾಶ್ಚ ಶಿವಾಚಾರವಿವರ್ಜಿತೈಃ ।
ಭೋಕ್ತವ್ಯಾಸ್ಸರ್ವದಾ ತೇಷಾಂ ನರಕೇಭ್ಯೋ ನ ನಿಷ್ಕೃತಿಃ ॥೩೧॥

ರೇ ರೇ ಮಹಾದೇವಕಥಾಸುಧಾಬ್ಧಿಃ
ವಿನಿಂದಿತಃ ಶಂಕರದೂಷಣೇನ ।
ತತ್ಪಾಪಭೋಗಸ್ತ್ವರಯಾ ತವಾಸ್ತು
ಮಹಾಗ್ನಿಕುಂಡೇಷು ನಿಪಾತನೇನ ॥೩೨॥

ಹಾರೋಪಹಾರಮುಪಹಾಯ ಕಿಮುದ್ಯ ಭುಕ್ತ
ಮನ್ನಂ ಭವದ್ಭಿರಿತಿ ಲೋಹಕಶಾಭಿಘಾತೈಃ ।
ತೇ ಪೀಡಿತಾಃ ಪ್ರಲಪನೇ ಪತತೀತಿ ವಹ್ನೌ
ಭೂಯಃ ಪತಂತಿ ಪತಿತಾಃ ಪುನರುತ್ಪತಂತಿ ॥೩೩॥

ಅಮೃತಸದೃಶವಾದ ಪರಮೇಶ್ವರಚರಿತೆಯನ್ನು ಈತನು ಕೇಳಿರುವುದಿಲ್ಲ. ಆದುದರಿಂದಲೇ ಇವನ ಕಿವಿಗಳನ್ನು ಕತ್ತರಿಸುವರು. ಅಲ್ಲದೇ ಈತನನ್ನು ಬೆಂಕಿಯ ರೂಪದಲ್ಲಿ ಪುನಃಪುನಃ ಮುಳುಗಿಸುವರು. ||೩೦||

ಶಿವಧರ್ಮಗಳನ್ನು ತ್ಯಾಗಮಾಡಿರುವರು ಈ ನರಕದಲ್ಲಿ ಪದೇಪದೇ ಘೋರತರವಾದ ಶಿಕ್ಷಣ ಯಾತನೆಗಳನ್ನು ಅನುಭವಿಸುತ್ತಲೇ ಇರುತ್ತಾರೆ. ಅವರನ್ನು ಈ ಕಷ್ಟದಿಂದ ಬಿಡುಗಡೆ ಮಾಡುವವರಾಗಲಿ ದಯೆತೋರುವರಾಗಲೀ ಇರುವುದಿಲ್ಲ. ಅವರಿಗೆ ಎಂದೂ ಯಾತನೆಯು ತಪ್ಪುವುದಿಲ್ಲ. ||೩೧||

ಎಲೋ! ಶಿವನನ್ನು ನಿಂದಿಸುವೆಯಾ? ಆ ಮಹಾದೇವನ ಪುಣ್ಯಚರಿತೆಯನ್ನು ಅಲ್ಲಗಳೆಯುವೆಯಾ? ಆ ನಿನ್ನ ಕರ್ಮಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸು. ಆ ಪಾಪಕ್ಕೆ ಪ್ರಾಯಶ್ಚಿತ್ತವಾಗಿ ಭಯಂಕರವಾದ ಬೆಂಕಿಯ ಮನೆಯಲ್ಲಿ ಬಿದ್ದು ಯಾತನೆಯನ್ನು ಅನುಭವಿಸು. ||೩೨||

ಎಲಾ ಪಾಪಿ! ಶಿವನಿವೇದಿತವಾದ ಅನ್ನವನ್ನು ತ್ಯಾಗಮಾಡಿ, ಶಾಂಭವರಿಗೂ ತೃಪ್ತಿಪಡಿಸದೆ ಅನ್ನವನ್ನು ತಿಂದಿರುವೆಯಾ? ಹೀಗೆ ಗದರಿಸುತ್ತಾ ನರಕದಲ್ಲಿ

ರೇ ರೇ ಕಿಮದ್ಯ ಮರಣೇಽಪಿ ನ ತೇ ತ್ರಿಪುಂಡ್ರಂ
ಫಾಲೇ ಶಿರಸ್ಯಪಿ ಗಲೇಽಪ್ಯುರಸೀತಿ ಹತ್ವಾ ।
ಛಿತ್ವಾ ತದಂಗಮುಸಕೃಚ್ಛಹುವಹ್ನಿಕುಂಡೇ
ತೇ ನಿಕ್ಷಿಪಂತ್ಯಪಿ ಪುನಃ ಪುನರಗ್ನಿಕುಂಡೇ ॥೩೪॥

ರೇ ರೇ ಮುಹುರ್ನ ಮರಣಾವಸರೇಽಪಿ ಲಿಂಗಂ
ದೃಷ್ಟಂ ಸುಬಿಲ್ವದಳಪೂಜಿತಮಪ್ಯಪಾರೇ ।
ಘೋರೇ ನಿಕಾರನರಕೇ ಪ್ರಲಪಂತಮೇತಂ
ಪಶ್ಯಂತಿ ಹಂತಿ ಹತಚೇತನಮಗ್ನಿಕುಂಡೇ ॥೩೫॥

ರೇ ರೇ ನ ಬಿಲ್ವದಳಸಂಯುತಲಿಂಗತೀರ್ಥಂ
ಪೀತಂ ತ್ವಯಾದ್ಯ ಮರಣಾವಸರೇಽಪಿ ದುಷ್ಟ ।

ದೂತರು ಆ ಪಾಪಿಗಳನ್ನು ಲೋಹದ ಚಾಟಿಯಿಂದ ಹೊಡೆಯುತ್ತಾರೆ. ಆ ಚಾಟಿಯ ಪೆಟ್ಟು ಮತ್ತೆ ಎಲ್ಲಿ ಬೀಳುವುದೋ ಎಂದು ಹೆದರಿಕೆಯಿಂದ ಆ ಪಾಪಿಗಳು ಹೋಗುವಾಗ ಮತ್ತೆ ಬೆಂಕಿಯಲ್ಲಿಯೇ ಬಿದ್ದುಬಿದ್ದು ಹಿಂಸೆಯನ್ನು ಅನುಭವಿಸುತ್ತಾರೆ. ॥೩೩॥

ಎಲಲಾ ಪಾಪಿ! ನೀನು ಮರಣ ಸಮಯದಲ್ಲಿಯೂ ಭಸ್ಮತ್ರಿಪುಂಡ್ರವನ್ನು ಧರಿಸಿಕೊಳ್ಳಲಿಲ್ಲವೊ? ಅಂಗಗಳಿಗೂ ಭಸ್ಮವನ್ನು ಹಚ್ಚಿಕೊಳ್ಳಲಿಲ್ಲವೇ? ಇರಲಿ. ಈಗ ಶಿಕ್ಷೆಯನ್ನು ಅನುಭವಿಸು ಎಂದು ದೂತರು ಗದರಿಸುತ್ತಾ ಆ ಪಾಪಿಯ ಕಂಠ, ಹಣೆ, ಎದೆ, ಮುಂತಾದ ಅವಯವಗಳನ್ನು ತುಂಡುತುಂಡಾಗಿ ಕತ್ತರಿಸಿ ಮತ್ತೆ ಆಯಾ ಶರೀರವನ್ನು ಬೆಂಕಿಯ ಮೂಸೆಯಲ್ಲಿ ಹಾಕಿ ಬೇಯಿಸುವರು. ॥೩೪॥

ಎಲಲಾ ಪಾಪಿ! ನೀನು ಮರಣ ಸಮಯದಲ್ಲಿಯೂ ಶಿವಲಿಂಗದರ್ಶನ ಮಾಡಬೇಕೆಂದಾಗಲಿ ಶಿವಾರ್ಚನೆಯನ್ನು ಮಾಡಬೇಕೆಂದಾಗಲಿ ಯೋಚಿಸಲಿಲ್ಲ. ಅದಕ್ಕೆ ಈ ಫಲವನ್ನು ಅನುಭವಿಸು ಹೀಗೆಂದು ಗದರಿಸುತ್ತಾ ಈ ಪಾಪಿಯನ್ನು ಬೆಂಕಿಯ ಬಾವಿಯಲ್ಲಿ ಹಾಕುವರು. ಆ ಪಾಪಿಯು ಕಷ್ಟವನ್ನು ಅನುಭವಿಸುತ್ತಿರುವಾಗ ಅಪಹಾಸ್ಯಗೈಯ್ಯುತ್ತಾ ದೂಷಣ ಮಾಡುತ್ತಾ ನಗುವರು. ॥೩೫॥

ಎಲಲಾ ದುಷ್ಟ! ನೀನು ಬಿಲ್ವದಳಾರ್ಚಿತವಾದ ಶಿವಲಿಂಗ ತೀರ್ಥವನ್ನು ಮರಣ ಸಮಯದಲ್ಲಿಯೂ ಕುಡಿಯಲಿಲ್ಲವಲ್ಲವೇ? ಇರಲಿ. ಈಗ ಬಾಯಾರಿಕೆ

ತೇನಾಗ್ನಿತಪ್ತಮಲಸಂಕುಲನೀರಪಾನ
ಪೀನೋದರೋ ಭವ ಪುನಃ ಪುನರೇವ ದುಷ್ಟ ॥೩೬॥

ಯೋ ನಾರೀಷು ಕೃಶೋದರೀಷು ವಿಪುಲೋತ್ತುಂಗಾಂಗಭೇದಪ್ರಭಾ
ಸಂಭಾರಾನುವಿಲೋಕನೇನ ನಯನವ್ಯಾಪಾರಸಾರಾಂಗತಃ
ತೇ ತೇ ವಹ್ನಿವಿಕಾರಲೋಹರಮಣೀಸಂಗೋಽಸ್ತು ಲಿಂಗೋತ್ಸವೋ
ದೃಷ್ಟೋ ನೇತಿ ನ ತತ್ರ ವಾ ಕಥಮಭೂಲ್ಲಿಂಗಭ್ರಮಸ್ತೇ ಕ್ಷಣಂ ॥೩೭॥

ಮಾರಾಪಾರವಿಹಾರಧೀರಮನಸಾ ನಾರೀ ಪರಂ ವೀಕ್ಷಿತಾ
ತಚ್ಚಕ್ಷುಶ್ಶಿವಲಿಂಗದರ್ಶನರತಂ ನಾಭೂತ್‌ಕ್ಷಣಂ ವಾ ಕಥಂ ।
ಲಿಂಗಾದರ್ಶನಪಾತಕೇನ ಬಹುಧಾ ಸಂತಪ್ತಲೋಹಾಂಗನಾ
ಸಂಗೇನಾತ್ರ ವಸೇತಿ ತಪ್ತನಳಿಕಾಯಂತ್ರಾಂತರಾಲೇ ಸ್ಥಿತಃ ॥೩೮॥

---

ಎನ್ನುವೆಯಾ. ಇದೋ ಕುಡಿ. ಕುದಿಯುತ್ತಿರುವ ನೀರನ್ನು ತೆಗೆದುಕೋ. ನಿನಗಾಗಿ ಇದಕ್ಕೆ ಬೇಕಾದಷ್ಟು ಅಮೇಧ್ಯವನ್ನು ಸೇರಿಸಿದೆ. ಇದನ್ನು ಹೊಟ್ಟೆಯು ಉಬ್ಬರಿಸಿ ಹೋಗುವಷ್ಟು ಕುಡಿ ಹೀಗೆಂದು ಗದರಿಸುತ್ತಾ ಬಲಾತ್ಕಾರವಾಗಿ ಆ ಪಾಪಿಗೆ ಕುಡಿಸುತ್ತಾರೆ. ॥೩೬॥

ಎಲಲಾ ಪಾಪಿ! ನೀನು ಕೇವಲ ಸ್ತ್ರೀಸಂಭೋಗದಲ್ಲಿ ಆಸಕ್ತನಾಗಿದ್ದೆಯಲ್ಲವೇ? ಆ ಸ್ತ್ರೀಯರ ಶರೀರ ಕಾಂತಿಯನ್ನೇ ಪರಮದರ್ಶನೀಯವೆಂದು ತಿಳಿದುಕೊಂಡು ಮತ್ತೆ ಮತ್ತೆ ತವಕದಿಂದ ನೋಡುತ್ತಿದ್ದೆಯಲ್ಲವೇ? ಆ ಸ್ತ್ರೀಯರ ಸೌಂದರ್ಯಗಳಲ್ಲಿಯೇ ನಿನ್ನ ಕಣ್ಣು ಸಾರ್ಥಕತೆಯನ್ನು ಪಡೆಯಿತಲ್ಲವೆ! ಆ ನಿನ್ನ ಪಾಪಕ್ಕೆ ಇಲ್ಲಿ ಶಿಕ್ಷೆಯನ್ನು ಅನುಭವಿಸು. ಈ ಬೆಂಕಿಯ ಪುತ್ಥಳಿಯನ್ನು ಆಲಿಂಗಿಸಿಕೋ. ನೀನು ಒಂದು ಸಲವೂ ಶಿವಲಿಂಗೋತ್ಸವವನ್ನು ನೋಡಿರುವುದಿಲ್ಲ. ಅಥವಾ ಆ ನಿನ್ನ ಸ್ತ್ರೀಯರ ಸ್ತನಗಳಲ್ಲಾದರೂ ನಿನಗೆ ಲಿಂಗಬುದ್ಧಿಯು ಹುಟ್ಟಲಿಲ್ಲವಲ್ಲಾ! ಏನು ಕಾರಣ? ನೀನು ಪರಮಪಾಪಿ. ಈಗ ಈ ಕಾದ ಲೋಹಪುತ್ಥಳಿಯನ್ನು ಅಪ್ಪಿಕೋ ಎಂದು ಹಿಂಸಿಸುವರು. ॥೩೭॥

ಎಲಾ ಪಾಪಿ! ನಿನ್ನ ಕಣ್ಣುಗಳು ಒಂದು ಕ್ಷಣವಾದರೂ ಶಿವಲಿಂಗದರ್ಶನವನ್ನು ಮಾಡಲಿಲ್ಲ. ನೀನು ಕೇವಲ ಮನ್ಮಥವಿಕಾರಿಯಾಗಿ ಸ್ತ್ರೀಯರನ್ನು ಪಾಪದೃಷ್ಟಿಯಿಂದ ನೋಡುತ್ತಿದ್ದೆ. ಆದ್ದರಿಂದ ಈಗ ಇಲ್ಲಿ ಕಾದಲೋಹಪುತ್ಥಳಿಯನ್ನು

ಏವಂ ಬಹುವಿಧಾ ಘೋರಾ ಯಾತನಾ ಕೇವಲಂ ಜನ್ಮೈಃ ।
ಶಿವಾರ್ಚನವಿಹೀನೈಸ್ತ್ರೈಃ ಪ್ರಾಪ್ಯತೇ ಪ್ರತಿವಾಸರಂ ॥೩೯॥

ಅಸಹ್ಯೋಽಪ್ಯಧಿಕಾರೋಽಯಂ ಸಹ್ಯಃ ಸ್ಯಾದೀಶ್ವರೇಚ್ಛಯಾ ।
ನ ಚೈತತ್ಪರಿಹಾರೋಽಪಿ ಸ್ವತಸ್ತ್ವನುಚಿತಃ ಖಲು ॥೪೦॥

ಅಸ್ವಾತಂತ್ರ್ಯಂ ಮಹೇಶೇನ ಸರ್ವೇಷಾಮಪಿ ಕಲ್ಪಿತಂ ।
ಅತೋಽಧಿಕಾರತ್ಯಾಗೋಽಪಿ ಸ್ವತಃ ಸಂಮತ ಏವ ನ ॥೪೧॥

ಯತ್ಕಿಂಚಿದಸ್ತು ಕಿಂ ತೇನೇತ್ಯಪಿ ನ ತ್ಯಜ್ಯತೇ ಯತಃ ।
ಅಸ್ವತಂತ್ರಸ್ಯ ತತ್ತ್ಯಾಗೇ ಸ್ವತಂತ್ರಃ ಖಲು ಕುಪ್ಯತಿ ॥೪೨॥

ಅಪ್ಪಿಕೋ. ಹೀಗೆಂದು ಗದರಿಸುತ್ತಾ ಬಲಾತ್ಕಾರವಾಗಿ ಶಿಕ್ಷಿಸುತ್ತಾರೆ. ಮತ್ತು ಕಾದ ನಳಿಕೆಯಂತ್ರದ ಮಧ್ಯೆಹಾಕಿ ಪಾಪಿಯನ್ನು ಅರೆಯುತ್ತಾರೆ. ॥೩೮॥

ಈ ಕಠಿನವಾದ ಶಿಕ್ಷೆಗಳನ್ನೂ ಇನ್ನೂ ಅನೇಕ ವಿಧವಾದ ಯಾತನೆಗಳನ್ನೂ ಪಾಪಿಗಳು ಅನುಭವಿಸುತ್ತಾರೆ. ಶಿವಾರ್ಚನೆಯನ್ನು ಮಾಡದವರಂತೂ ಸರ್ವದಾ ಇದೇ ಶಿಕ್ಷೆಗಳನ್ನೇ ಪ್ರತಿನಿತ್ಯವೂ ನರಕದಲ್ಲಿ ಅವಿಚ್ಛಿನ್ನವಾಗಿ ಅನುಭವಿಸುತ್ತಿರುವರು. ॥೩೯॥

ನನ್ನ ಪಾಲಿಗೆ ಬಂದಿರುವ ಈ ಅಧಿಕಾರವು ಬಹಳ ತೊಡಕಾಗಿದೆ. ಇದನ್ನು ಪಾಲಿಸಿಕೊಂಡು ಬರುವುದು ಬಹಳ ಕಠಿಣವಾದುದು. ಈ ಅಧಿಕಾರವನ್ನು ಸ್ವತಃ ತ್ಯಜಿಸಲು ಶಕ್ಯವಾಗಿರುವುದಿಲ್ಲ. ಇನ್ನೇನೆಂದರೆ ಆ ಪರಮೇಶ್ವರನ ಸಹಾಯದಿಂದಲೇ ಈ ಅಧಿಕಾರದ ನಿರ್ವಹಣವು ಸುಗಮವಾಗಬೇಕು. ॥೪೦॥

ಸರ್ವವಿಧವಾದ ಸ್ವಾತಂತ್ರ್ಯವೆಂದರೆ ಆ ಪರಮೇಶ್ವರನೊಬ್ಬನಿಗೇ ಇರುವುದು. ಉಳಿದ ಎಲ್ಲರೂ ಆತನ ಸಂಕೇತದಂತೆ ನಡೆಯುವವರು. ಮತ್ತು ಆತನಿಗೆ ಅಧೀನರು. ಆದುದರಿಂದ ಯಾವ ಅಧಿಕಾರವನ್ನೇ ಆಗಲಿ ಯಾವನೂ ತನ್ನ ಇಚ್ಛೆಯಿಂದ ತಪ್ಪಿಸಿಕೊಳ್ಳಲಾರನು. ಮತ್ತು ತಪ್ಪಿಸಿಕೊಳ್ಳಲೂ ಕೂಡದು. ॥೪೧॥

ಏನುಬೇಕಾದರೂ ಆಗಲಿ, ನಾನು ಇದನ್ನು ಮಾಡುವುದಿಲ್ಲ ಎಂದು ಹಠ ಧರ್ಮಿಯಾಗಿ ತನ್ನ ಕರ್ತವ್ಯವನ್ನೂ ಅಥವಾ ಅಧಿಕಾರವನ್ನೂ ಅನುಷ್ಠಾನ

ಅಸ್ಮಾಕನಿಶಸಾದಾಬ್ಜಪರ್ಯಂತಂ ಗಮನಂ ನ ಚ ।
ಕ್ವ ವಯಂ ಕ್ವ ಮಹಾದೇವಃ ಕ್ವ ಕೈಲಾಸೋಽತಿದುರ್ಲಭಃ

ಏವಂ ಚ ಜೀವನಂ ವ್ಯರ್ಥಂ ವಿನಾ ಶಂಕರಪೂಜಯಾ ।
ಸಾ ತಾವತ್ಕಾಲಸಾಧ್ಯೇತಿ ಕಾಲೋಽಪ್ಯತ್ಯಂತದುರ್ಲಭಃ ॥೪೪॥

ದುಷ್ಟದೋಷವಿಚಾರೇಣ ಕಾಲೋ ಯಾತಿ ಸ್ವತಸ್ತತಃ ।
ಸಮಯಶ್ಶಿವಪೂಜಾಯಾಃ ಸರ್ವಥಾ ದುರ್ಲಭಃ ಖಲು ॥೪೫॥

---

ಮಾಡದೆ ತ್ಯಜಿಸಿದರೆ, ಇಂಥವನಿಗೆ ಇದು ಕರ್ತವ್ಯವೆಂದು ನಿಯಮ ಮಾಡಿರುವ ಪರಮೇಶ್ವರನಿಗೆ ದ್ರೋಹವೆನಿಸುವುದು. ಆತನು ಸ್ವತಂತ್ರನು. ಯಾರಿಗೆ ಏನು ಬೇಕಾದರೂ ಮಾಡಲು ಆತನಿಗೆ ಸಾಮರ್ಥ್ಯವಿದೆ. ||೪೨||

ನಾವು ಬಹಳ ಕೆಳಮಟ್ಟದಲ್ಲಿದ್ದೇವೆ. ನಮ್ಮಲ್ಲಿ ಎಷ್ಟು ಓಡಾಟ ಆಡಂಬರ ವಿದ್ದರೂ ನಾವು ಆ ಪರಮೇಶ್ವರನ ಚರಣಕಮಲಗಳ ಸಮೀಪಕ್ಕೆ ಸಹ ಹೋಗ ಲಾರೆವು. ಅಂದಮೇಲೆ ನಮ್ಮ ಸಾಮರ್ಥ್ಯವು ಎಷ್ಟು ಅಲ್ಪವಾಗಿರುವುದು. ಆಹಾ! ಆ ಪರಮೇಶ್ವರನೆತ್ತ? ನಾವು ಎತ್ತಣರು! ಆ ಪವಿತ್ರವಾದ ದುರ್ಲಭವಾದ ಕೈಲಾಸ ವೆಲ್ಲಿ? ನಾವು ಎಲ್ಲಿ? ಒಂದೊಂದಕ್ಕೂ ಅರ್ಥಾತ್ ಸಂಬಂಧವೇ ಇಲ್ಲ. ||೪೩||

ಒಟ್ಟಿನಲ್ಲಿ ಇಷ್ಟು ಇತ್ಯರ್ಥವಾಗಿ ತಿಳಿಯುವುದು, ಶಿವಪೂಜೆಯನ್ನು ಅಗತ್ಯ ಮಾಡತಕ್ಕದ್ದು. ಶಿವಪೂಜೆಯನ್ನು ಮಾಡದಮೇಲೆ ಮನುಷ್ಯನ ಜೀವನವೇ ವ್ಯರ್ಥವೆನಿಸುವುದು. ಅದರಲ್ಲಿಯೂ ಕಾಲವು ಚಕ್ರದಂತೆ ಉರುಳುರುಳಿ ಹೋಗು ತ್ತದೆ. ಹೋದದ್ದು ಮತ್ತೆ ತಿರುಗಿ ಬರುವುದಿಲ್ಲ. ಆದ್ದರಿಂದ ಅದೇ ಕಾಲವನ್ನು ಸಾಧನೆ ಮಾಡಿಕೊಂಡು ಆಯುಷ್ಯವನ್ನು ವೃಥಾ ಹರಣಮಾಡದೆ ಶಿವನನ್ನು ಪೂಜಿಸಬೇಕು. ||೪೪||

ನಾವು ಯಾವ ದುಷ್ಟವಾದ ವಿಷಯಗಳನ್ನು ಚಿಂತಿಸುತ್ತಿದ್ದರೂ ಕಾಲ ಕಳೆಯುವುದು ಕಳೆದೇ ಹೋಗುವುದು. ಅದು ಹೋಗುವಾಗ ನಮ್ಮನ್ನು ಕೇಳು ವುದಿಲ್ಲ. ಅಥವಾ ಶಿವಪೂಜೆಗೆಂದು ಪ್ರತ್ಯೇಕವಾದ ಒಂದು ಕಾಲವು ಬರುವುದಿಲ್ಲ. ಆದುದರಿಂದ ಆ ದುರ್ಲಭವಾದ ಕಾಲಗಳ ಮಧ್ಯದಲ್ಲಿಯೇ ನಾವು ಶಿವಪೂಜೆ ಯನ್ನು ಸಾಧಿಸಬೇಕು. ಶಿವಪೂಜೆಯು ಮುಂದೆ ನಡೆಯುತ್ತದೆ ಎಂದು ಉದಾಸೀನ ಮಾಡಬಾರದು. ||೪೫||

ಯಥಾಕಥಂಚಿತ್ಕರ್ತವ್ಯಂ ಶಂಕರಧ್ಯಾನಮೇವ ನಃ ।
ನ ತು ಪೂಜೋಪಕರಣಂ ತಸ್ಯ ಕಾಲೋ ನ ದೃಶ್ಯತೇ ॥೪೬॥

ಅಸ್ಮದರ್ಥಂ ಮಹೇಶೇನ ಸೃಷ್ಟಂ ಮಾನಸಪೂಜನಂ ।
ತೇನ ಪ್ರೀತೋ ಭವತ್ಯೇವ ನೂನಂ ಗೌರೀಮನೋಹರಃ ॥೪೭॥

ಗೌರೀಮನೋಹರ ಮಹೇಶ್ವರ ಮಾನಸಂ ವಾ
ಲಿಂಗಾರ್ಚನಂ ಯದಿ ತದಾ ಸಫಲಾ ಜನಿಃಸ್ಯಾತ್ ।
ಇತ್ಯೇತದೇವ ಹೃದಯೇ ಭವತು ಪ್ರಭೋ ಮೇ
ಶಂಭೋ ಪ್ರಸೀದ ಭಗವನ್ನಿತಿ ಸಂವಸಾಮಿ ॥೪೮॥

ಏವಂ ವದತಿ ಕಾಲೇಽಸ್ಮಿನ್ ಆಗತಾಃ ಶಿವಕಿಂಕರಾಃ ।
ವಿಮಾನಾನಿ ಸಮಾರುಹ್ಯ ಶಿವನಾಮಾನುಗಾಯಕಾಃ ॥೪೯॥

ಶಿವಪೂಜಾ ಸಾಮಗ್ರಿಗಳ ಶೇಖರಣೆಗಾಗಲಿ ಶಿವಪೂಜೆಗಾಗಲಿ ಒಂದು ಕಾಲವು ಮೀಸಲಾಗಿ ಇರುವುದಿಲ್ಲ. ನಾವು ಅದನ್ನು ಸಾಧಿಸಬೇಕು. ಆದುದರಿಂದ ಹೇಗಾದರೂ ಅವಕಾಶವನ್ನು ಕಲ್ಪಿಸಿಕೊಂಡು ಶಿವನನ್ನು ಆರಾಧಿಸಲೇಬೇಕು. ॥೪೬॥

ಆ ಗೌರೀವಲ್ಲಭನು ನಮ್ಮನ್ನು ಅನುಗ್ರಹಿಸುವುದಕ್ಕಾಗಿಯೇ ನಮಗೆ ಸುಲಭ ಸಾಧ್ಯವಾದ ಮಾನಸಪೂಜೆಯನ್ನೂ ಸೃಷ್ಟಿಸಿರುವನು. ಅದಕ್ಕೆ ಯಾವ ಧನವ್ಯಯವೂ ಇಲ್ಲ. ಅಲ್ಲದೆ ಭಕ್ತಿಯಿಂದ ಮಾನಸಪೂಜೆಯನ್ನು ಮಾಡಿದರೆ ಆ ಶಂಕರನು ಸುಪ್ರೀತನಾಗುತ್ತಾನೆ. ॥೪೭॥

ಓ ಗೌರೀ ಮನೋಹರನೆ! ನಾನು ಮಾನಸಪೂಜೆಯನ್ನು ಮಾಡುವಂತೆ ಪ್ರೇರಿಸು. ಓ ಮಹೇಶ್ವರ! ನಾನು ಲಿಂಗಾರ್ಚನೆಯನ್ನು ಮಾಡುವಂತಾದರೂ ಬುದ್ಧಿಕೊಡು. ಇವೆರಡರಲ್ಲಿ ಯಾವುದೊಂದನ್ನು ಮಾಡುತ್ತಿದ್ದರೂ ಜನ್ಮವು ಸಾರ್ಥಕ ವಾದೀತು. ಓ ಶಂಭೋ! ಪ್ರಸನ್ನನಾಗು. ನನ್ನ ಈ ಮನೋರಥವನ್ನು ಪೂರೈಸಿ ಕೊಡು. ಇದೇ ಸಂಕಲ್ಪವು ಸದಾ ನನ್ನ ಚಿತ್ತಗತವಾಗಿರಲಿ. ಹೀಗೆಂದು ಪರಮೇಶ್ವರ ನನ್ನೇ ಧ್ಯಾನಿಸುವೆನು. ॥೪೮॥

ಎಂದು ಯಮಧರ್ಮನು ಆಲೋಚಿಸುತ್ತಿರಲು, ಅದೇ ಸಮಯದಲ್ಲಿ ಶಿವದೂತರು ವಿಮಾನದಲ್ಲಿ ಕುಳಿತುಕೊಂಡು ಶಿವನಾಮಗಳನ್ನು ಹಾಡುತ್ತಾ ಆತನ ಸಮೀಪಕ್ಕೆ ಬಂದರು. ॥೪೯॥

ತಾನ್ ದೃಷ್ಟ್ವಾ ವಿಸ್ಮಿತಃ ಕಾಲಃ ಕಿಮಾಶ್ಚರ್ಯಮಿತಿ ದ್ರುತಮ್ ।
ಉತ್ಪಶ್ಯನ್ನುತ್ಥಿತೋ ದೃಷ್ಟ್ವಾ ಪ್ರಣತಶ್ಚ ಪುನಃಪುನಃ ॥೫೦॥

ತೇ ಯಮಂ ಪ್ರಣತಂ ಪ್ರಾಹುರ್ವಿಮಾನಸ್ಥಾಶ್ಶಿವಾರ್ಚಕಾಃ ।
ರೇರೇ ಯಮ ದುರಾಚಾರ ತವ ಲಜ್ಜಾ ನ ಸರ್ವಥಾ ॥೫೧॥

ಕಿಯದ್ವಾರಂ ತಾಡಿತೋಽಸಿ ಕಶಯಾ ಶಸ್ತ್ರಧಾರಯಾ ।
ನ ತಾಡನಾನಾಂ ಗಣನಾ ವಿಸ್ಮೃತಾ ವಾ ಕಥಂ ತ್ವಯಾ ॥೫೨॥

ದೃಢಪಾದತಲಾಘಾತೈಃ ಕಶಯಾ ಸಹ ತದ್ಧೃತಿಃ ।
ಸಮಾಗತಾ ಲೋಹಿತೇನ ಸಹಸಾ ವಿಸ್ಮೃತಾ ಕಥಮ್ ॥೫೩॥

ಪಶ್ಚಾತ್ಕೃತ್ವಾ ಬಾಹುದಂಡೌ ಬದ್ಧ್ವಾ ಪೃಷ್ಠೇಽಪಿ ರಜ್ಜುಭಿಃ ।
ಅಂತರಾಳೇ ಸ್ಥಾಪಿತೋಽಸಿ ತಾಡಿತೋಽಸಿ ಮುಹುರ್ಮುಹುಃ ॥೫೪॥

ಇದೇನು ! ಅಕಸ್ಮಾತ್ ಶಿವದೂತರು ಬಂದರೆಂದು ಆಶ್ಚರ್ಯದಿಂದ ಯಮನು ಮೇಲೆ ನೋಡಿದನು. ಮತ್ತು ಕೂಡಲೇ ಪ್ರತ್ಯುತ್ಥಾನವನ್ನು ಮಾಡಿ ಭಕ್ತಿಯಿಂದ ಅವರಿಗೆ ನಮಸ್ಕರಿಸಿದನು. ||೫೦||

ಹೀಗೆ ನಮಸ್ಕರಿಸಿದ ಯಮನನ್ನು ನೋಡಿ ಆ ಶಿವದೂತರು ವಿಮಾನದಲ್ಲಿಂದಲೇ ಯಮನನ್ನು ಕುರಿತು, ಲೋ ಯಮ ! ನೀನು ಮಹಾದುರಾಚಾರಿ. ನಿನಗೆ ನಾಚಿಕೆಯೇ ಇಲ್ಲ. ||೫೧||

ಯಮರಾಜ ! ನೀನು ಎಷ್ಟು ಸಲ ನಮ್ಮ ಪೆಟ್ಟನ್ನು ತಿಂದಿದ್ದೀಯೆ. ಆದರೂ ನೀನು ಬುದ್ಧಿ ಕಲಿಯಲಿಲ್ಲ. ಚಾಟಿಯಿಂದಲೂ ಶಸ್ತ್ರಗಳಿಂದಲೂ ಹೊಡಿಸಿಕೊಂಡಿದ್ದನ್ನು ಮರೆತಿರುವೆಯಾ ? ಅಥವಾ ಅದನ್ನು ನೀನು ಪರಿಗಣಿಸಿಕೊಂಡಿರುವುದಿಲ್ಲವೋ ? ||೫೨||

ನಮ್ಮ ಕಾಲಿನಿಂದ ಕಠೋರವಾಗಿ ಒದಿಸಿಕೊಂಡದ್ದನ್ನೂ ಆ ಚಾಟಿಗಳ ಪೆಟ್ಟನ್ನೂ ಆಗಲೇ ಮರೆತುಬಿಟ್ಟೆಯಾ ? ಏಟುಗಳಿಂದ ರಕ್ತಕಂಡದ್ದನ್ನೂ ಮರೆತಿರುವೆ. ||೫೩||

ಎರಡೂ ತೋಳುಗಳನ್ನು ಬೆನ್ನಿಗೆ ಸೇರಿಸಿ ಕಟ್ಟಿಸಿಕೊಂಡು ಹೊಡೆಸಿಕೊಂಡಿದ್ದೀಯೆ. ಅಂತರಾಳದಲ್ಲಿ ನೇಣುಹಾಕಿಸಿಕೊಂಡಿದ್ದೀಯೆ. ಅದೂ ಮರೆತು ಹೋಯಿತೆ ? ||೫೪||

ಅಧೋಮುಖಸ್ಯ ಬಹುಧಾ ಕಶಯಾ ಘಾತನಂ ಕೃತಂ ।
ತವ ತದ್ವಿಸ್ಮೃತಂ ಕಿಂ ತು ತಾಡನಾಸ್ಮರಣಂ ಕಥಂ ॥೫೫॥

ತತ್ತಾಡನವ್ರಣಕಿಣ್ಯೈರಂಕಿತಾ ತೇ ತನುರ್ಯಮ ।
ವ್ರಣಾನಿ ನೂತನಾನ್ಯೇವ ತವ ಜಾತಾನಿ ಕಾನಿಚಿತ್ ॥೫೬॥

ಆಜ್ಞಪ್ತೋ ಬಹುಧಾ ಪೂರ್ವಂ ತದಾಜ್ಞಾ ಸ್ಮರ್ಯತೇ ನ ವಾ ।
ಅತಃಪರಂ ಕಿಯದ್ವಾರಂ ಸೋಢವ್ಯಸ್ತಾಡನಶ್ರಮಃ ॥೫೭॥

ಗತಿಶ್ಶಾಂಭವಮಾರ್ಗೇಷು ಮಾಸ್ತ್ವಿತ್ಯುಕ್ತಂ ಮುಹುರ್ಮುಹುಃ ।
ತಸ್ಮಿನ್ ಸ್ಮರಣಕಾಲೋಽಯಂ ಕೇವಲಂ ಮರಣಾಯ ತೇ ॥೫೮॥

ತ್ವಯಿ ಯದ್ಯನುಕಂಪಾ ಸ್ಯಾತ್ತದಾ ತ್ರಿಪುರವೈರಿಣಃ ।
ಕೋಪೋಽಸ್ಮಾಸು ಭವತ್ಯೇವ ಸ ಕಿಂ ಕಿಂ ನ ಕರಿಷ್ಯತಿ ॥೫೯॥

ತಲೆಕೆಳಗಾಗಿ ನಿನ್ನನ್ನು ನೇಣಿಗೆ ಹಾಕಿ ಚಾವಟಿಯಿಂದ ಅಷ್ಟೊಂದು ಹೊಡೆದಿದ್ದೇವೆ. ಅಂಥ ಪೆಟ್ಟುಗಳೂ ನಿನಗೆ ಮರೆತು ಹೋದವೇ ? ||೫೫||

ಅಷ್ಟು ಹೊಡೆತಗಳು ಬಿದ್ದಿರುವುದರಿಂದ ನಿನಗೆ ಎಷ್ಟೋ ಗಾಯಗಳಾಗಿವೆ. ನಿನ್ನ ಮೈಯ್ಯೆಲ್ಲಾ ಗಾಯದಿಂದ ತುಂಬಿ ಹೋಗಿತ್ತು. ಅನೇಕ ವ್ರಣಗಳು ಇನ್ನೂ ಮಾಯದೆ ಹಾಗೆಯೇ ಹೊಸದಾಗಿರುವಂತೆ ಇರಬಹುದು. ||೫೬||

ಅಷ್ಟೊಂದು ಶಿಕ್ಷೆಯನ್ನು ಕೊಟ್ಟು ನಿನಗೆ ಅಪ್ಪಣೆ ಮಾಡಿದ್ದೆವು. ನಮ್ಮ ಆಜ್ಞೆಯು ಸದಾ ಜ್ಞಾಪಕವಿರುವಂತೆ ಹೇಳಿದ್ದೆವು. ಆದರೂ ಮತ್ತು ಅಹಂಕಾರ ದಿಂದ ನಮ್ಮ ಆಜ್ಞೆಯು ನಿನಗೆ ಮರೆತುಹೋಗಿರುವಂತಿದೆ. ಇನ್ನೂ ಎಷ್ಟು ಶಿಕ್ಷೆಯನ್ನು ಅನುಭವಿಸಬೇಕೆಂದಿರುವೆ ? ಇನ್ನೂ ಎಷ್ಟು ಯಾತನೆಗಳನ್ನು ಅನುಭವಿಸುವೆ ? ||೫೭||

ಶಿವಭಕ್ತರಮೇಲೆ ಎಂದೂ ಕೈಮಾಡಬೇಡೆಂದು ನಿನಗೆ ಪದೇ ಪದೇ ಎಚ್ಚರಿಸಿದ್ದೇವೆ. ಆದರೂ ನಿನ್ನ ಚೇಷ್ಟೆಯು ಇನ್ನೂ ಮುಗಿದಂತೆ ತೋರುವುದಿಲ್ಲ. ಆ ನಮ್ಮ ಅಪ್ಪಣೆಯನ್ನು ನಿನಗೆ ಮತ್ತೆ ಜ್ಞಾಪಿಸುವುದೆಂದರೆ ನಿನಗೆ ಇನ್ನು ಬಿಡುಗಡೆ ಇಲ್ಲ. ನಿನಗೆ ಮರಣವೇ ಗತಿ. ||೫೮||

ಎಲೋ ಯಮ ! ನಿನಗೆ ಈ ವರೆಗೂ ಕೊಟ್ಟ ಶಿಕ್ಷೆಯನ್ನು ಯೋಚಿಸಿಕೊಂಡರೆ ನಮಗೇ ನಿನ್ನ ಮೇಲೆ ದಯೆಯು ಉಂಟಾಗುವುದು. ಆದರೂ ನಿನ್ನಲ್ಲಿ

ಯಥಾ ನ ಶಾಂಭವದ್ರೋಹಂ ತಥಾ ಚೇಜ್ಜೀವನಂ ತವ ।
ಅನ್ಯಥಾ ನರಕಾವಾಸಸ್ತವ ತಾವದ್ಭವಿಷ್ಯತಿ ॥೬೦॥

ಶಾಂಭವಾಃ ಪೂಜನೀಯಾಸ್ತೇ ಪ್ರಣಾಮಾರ್ಹಾಃ ಪರಂತು ತೇ ।
ಯಾತನಾಮಾರ್ಗಗಮನಂ ಕಥಂ ತೇಷಾಂ ಭವಿಷ್ಯತಿ ॥೬೧॥

ಇತ್ಯುಕ್ತಂ ತದ್ವಚಶ್ರುತ್ವಾ ಸ ಯಮಃ ಕಂಪಮಾಗತಃ ।
ಕೃತಾಂಜಲಿಪುಟಃ ಪ್ರಾಹ ಪ್ರಣತಶ್ಚ ಪುನಃಪುನಃ ॥೬೨॥

॥ ಯಮ ಉವಾಚ ॥

ಶ್ರೀಮದ್ಭಿರಧುನಾಶಿಕ್ಷಾ ಸಮ್ಯಗೇವ ಕೃತಾ ಖಲು ।
ತಥಾಪಿ ಮಮ ವಿಜ್ಞಪ್ತಿಃ ಶ್ರೋತವ್ಯಾ ಕಾಪಿ ಸಾದರಂ ॥೬೩॥

ದಯಾಪರರಾಗಿ ನಾವು ಸುಮ್ಮನೇ ಬಿಟ್ಟುಬಿಡುವಂತಿಲ್ಲ. ಕ್ಷಮಿಸಲೂ ಸಾಧ್ಯವಿಲ್ಲ. ಏಕೆಂದರೆ ನಿನ್ನಲ್ಲಿ ದಯೆ ತೋರಿದರೆ ನಮ್ಮ ಮೇಲೆ ಪರಮೇಶ್ವರನಿಗೆ ಕೋಪ ವುಂಟಾಗುವುದು. ಆತನಿಗೆ ಕೋಪಬಂದರೆ ನಮ್ಮ ಅವತಾರವು ಅಲ್ಲಿಗೇ ತೀರಿದಂತೆಯೇ ಸರಿ. ॥೫೯॥

ಈಗಲೂ ಸಹ ಹೇಳುತ್ತೇವೆ, ಕೇಳು. ನಿನಗೆ ಬದುಕಬೇಕೆಂಬ ಅಪೇಕ್ಷೆ ಇದ್ದರೆ ಶಿವಭಕ್ತರ ಮೇಲೆ ಎಂದೂ ಕೈಮಾಡಬೇಡ. ಅವರ ಹತ್ತಿರಕ್ಕೂ ಸುಳಿಯಬೇಡ. ಹಾಗಿಲ್ಲದೇ ನೀನು ಮನಬಂದಂತೆ ಮಾಡುತ್ತಿದ್ದರೆ ನಿನಗೆ ನರಕವೇ ಗತಿಯಾಗುವುದು. ॥೬೦॥

ಶಿವಭಕ್ತರು ಎಂದಾದರೂ ನರಕಯಾತನೆಯನ್ನು ಅನುಭವಿಸುವರೇ ? ಎಂದೂ ಇಲ್ಲ. ಇಷ್ಟೇ ನಿನಗೆ ತಿಳಿಯುವುದಿಲ್ಲವಲ್ಲ! ಆ ಭಕ್ತರು ನಿನಗೆ ಪೂಜ್ಯರಾಗಿರುವರು. ಅಲ್ಲದೇ ನೀನು ಅವರನ್ನು ಸದಾ ಪ್ರಣಾಮಾದಿಗಳಿಂದ ಸಂತೋಷಗೊಳಿಸಬೇಕು. ॥೬೧॥

ಈ ಪ್ರಕಾರವಾದ ಶಿವದೂತರ ಮಾತನ್ನು ಕೇಳಿ ಯಮನೂ ಹಿಂದಿನ ಭಯದಿಂದ ನಡುಗಿದನು. ಮತ್ತು ಮರೆಹೊಕ್ಕವನಂತೆ ಬಹಳ ವಿನಯದಿಂದ ಪದೇ ಪದೇ ನಮಸ್ಕರಿಸುತ್ತಾ, ಕೈಮುಗಿದುಕೊಂಡು ಹೀಗೆ ಹೇಳಿದನು. ॥೬೨॥

ಮಹಾತ್ಮರೇ, ಈಗತಾನೆ ನನಗೆ ಬೇಕಾದಷ್ಟು ಶಿಕ್ಷೆಯನ್ನು ಇತ್ತಿದ್ದೀರಿ.

ರತ್ನಸಿಂಹಾಸನೇಷ್ವತ್ರ ಕ್ಷಣಂ ವಾ ಸ್ಥೀಯತಾಮಾದರಾತ್ ।
ಭವದಾಜ್ಞೋಲ್ಲಂಘನೇ ವಾ ಕಸ್ಯ ಶಕ್ತಿ ರ್ಜಗತ್ತ್ರಯೇ ॥೬೪॥

ಇತಿ ತದ್ವಚನಂ ಶ್ರುತ್ವಾ ಶಾಂತಾಸ್ತೇ ಶಿವಕಿಂಕರಾಃ ।
ರತ್ನಾಸನೇಷು ರಮ್ಯೇಷು ಸ್ಥಿತಾಸ್ತೇನ ಸಮರ್ಚಿತಾಃ ॥೬೫॥

ತತಸ್ತಾನಾಹ ಸ ಯಮಃ ಶೈವದ್ರೋಹಃ ಕಥಂ ಮಯಾ ।
ಕರ್ತವ್ಯಸ್ತೇಽತಿದುಃಖಾಯ ಸ್ಯಾದಿತ್ಯೇವ ಮತಿರ್ಮಮ ॥೬೬॥

ಮರಣೇಽಪಿ ನ ಕರ್ತವ್ಯಃ ಶಾಂಕರದ್ರೋಹ ಇತ್ಯಪಿ ।
ಮತಿರ್ದೃಢತಮಾ ನೂನಂ ಶಪಥಃ ಶಿವಪಾದಯೋಃ ॥೬೭॥

---

ನಾನು ಯಾವುದನ್ನೂ ಮರೆತಿರುವುದಿಲ್ಲ. ಆದರೂ ಒಂದು ಮಾತನ್ನು ತಮ್ಮಲ್ಲಿ ಅರಿಕೆಮಾಡಿಕೊಳ್ಳುತ್ತೇನೆ. ದಯೆಯಿಟ್ಟು ಲಾಲಿಸಬೇಕು. ||೬೩||

ನನ್ನ ಮೇಲೆ ಕೃಪೆಮಾಡಿ ಒಂದು ಕ್ಷಣಕಾಲವಾದರೂ ಈ ರತ್ನಸಿಂಹಾಸನಗಳ ಮೇಲೆ ತಾವು ಕುಳಿತುಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ. ತಮ್ಮ ಆಜ್ಞೆಯನ್ನು ಮೀರಲು ಈ ಮೂರು ಲೋಕಗಳಲ್ಲಿ ಯಾರಿಗೆತಾನೆ ಶಕ್ತಿ ಇರುತ್ತದೆ? ಎಲ್ಲರೂ ತಮ್ಮ ಅಪ್ಪಣೆಯಂತೆಯೇ ನಡೆಯುವರು. ಆಜ್ಞೆಯನ್ನು ನಾನೂ ಮೀರುವುದಿಲ್ಲ. ||೬೪||

ಈ ರೀತಿಯಾದ ಯಮಧರ್ಮನ ವಿನಯದಿಂದ ಶಿವದೂತರು ಪ್ರಸನ್ನರಾಗಿ, ಆತನ ಪ್ರಾರ್ಥನೆಯನ್ನು ಮನ್ನಿಸಿ, ರತ್ನಸಿಂಹಾಸನಗಳಲ್ಲಿ ಕುಳಿತುಕೊಂಡು, ಯಮನು ಮಾಡಿದ ಪೂಜಾಸತ್ಕಾರಗಳನ್ನು ಸ್ವೀಕರಿಸಿದರು. ||೬೫||

ಹೀಗೆ ಪ್ರಸನ್ನಚಿತ್ತರಾಗಿ ಕುಳಿತ ಶಿವದೂತರನ್ನು ಕುರಿತು ಮತ್ತೆ ಯಮಧರ್ಮನು ಹೀಗೆಂದನು. ನಾನು ಈಶ್ವರಭಕ್ತರನ್ನು ಏಕೆ ತೊಂದರೆಗೀಡುಮಾಡಲಿ. ಶಿವಭಕ್ತರ ಮೇಲೆ ನಾನು ಎಂದೂ ಕೈಮಾಡುವುದಿಲ್ಲವಲ್ಲಾ! ಅವರನ್ನು ಪೀಡಿಸಿದರೆ ನನಗೇ ಅನೇಕ ಕಷ್ಟಗಳು ಒದಗುತ್ತವೆಂದು ನಾನು ಅರಿತುಕೊಂಡಿದ್ದೇನೆ. ||೬೬||

ನನಗೆ ಒಂದುವೇಳೆ ಮರಣಸಮಯವು ಒದಗಿ ಬಂದರೂ, ನಾನು ಈಶ್ವರಭಕ್ತರನ್ನು ಹಿಂಸಿಸಕೂಡದು ಎಂಬುದನ್ನು ನಾನು ತಿಳಿದುಕೊಂಡಿದ್ದೇನೆ. ಇನ್ನು ಶಿವಭಕ್ತರ ಕಡೆಗೂ ನಾನು ಹೋಗುವುದಿಲ್ಲ ಎಂಬುದನ್ನು ಪರಮೇಶ್ವರನ ಚರಣಗಳ ಆಣೆಯಾಗಿಯೂ ಶಪಥಮಾಡುತ್ತೇನೆ. ||೬೭||

ಮಾಹೇಶ್ವರೇಷು ಯದಿ ಕಶ್ಚನ ದುಷ್ಟಬುದ್ಧ್ಯಾ
ದ್ರೋಹಂ ಕರಿಷ್ಯತಿ ಕದಾಚನ ತತ್ಕುಲಾನಾಂ ।
ನಾಶೋ ಭವಿಷ್ಯತಿ ನ ಸಂಶಯಲೇಶವಾರ್ತಾ
ಪ್ರತ್ಯೇತಿ ಶಂಕರಪಾದಾಂಬುಜಯೋಃ ಶಪಾಮಿ ॥೬೮॥

ಯಶ್ಶಾಂಭವಸ್ಸ ತು ಪಿತಾ ಜನನೀ ಸಖಾ ಚ
ಭ್ರಾತಾ ಚ ಬಂಧುರಪಿ ಮಿತ್ರಮಪೀತಿ ಮನ್ಯೇ ।
ಧನ್ಯಸ್ಸ ಏವ ಮಮ ಮಾನ್ಯ ಇತಿ ಸ್ಮರಾಮಿ ।
ಗೌರೀಸಹಾಯಚರಣಾಂಬುಜಯೋಶ್ಶಪಾಮಿ ॥೬೯॥

ಯಶ್ಶಾಂಭವ ಸ್ಸತು ಶಿವಾಪರವಿಗ್ರಹೋಽತಃ ।
ಪೂಜ್ಯಸ್ಸ ಮಾನ್ಯ ಇತಿ ಮೇ ಮತಿರಾವಿರಾಸೀತ್ ।
ಅತ್ರಾಧಿಕಾರಸಮಯಾವಧಿಶೈಲಕನ್ಯಾ
ನಾಥಾಂಘ್ರಿಪಂಕಜಯುಗೇ ಶಪಥಸ್ತ್ರಿಸತ್ಯಂ ॥೭೦॥

ಈಶ್ವರಭಕ್ತರ ವಿಷಯದಲ್ಲಿ ಯಾವನಾದರೂ ಅವಿನಯವನ್ನು ಆಚರಿಸಿದರೆ ಅಥವಾ ದ್ರೋಹವನ್ನು ಎಣಿಸಿದರೆ ಆ ದ್ರೋಹಚಿಂತಕನು ನಾಶವಾಗುವನಲ್ಲದೇ ಆತನ ವಂಶವೇ ನಾಶವಾಗಿ ಹೋಗುವುದು. ಇದರಲ್ಲಿ ಸಂಶಯವಿಲ್ಲ ಎಂಬುದನ್ನು ಶಂಕರಚರಣಗಳಾಣೆಯಾಗಿಯೂ ಹೇಳುತ್ತೇನೆ. ॥೬೮॥

ಶಿವಭಕ್ತನೇ ನಿಜವಾಗಿಯೂ ಧನ್ಯನು. ನನಗೆ ಆತನೇ ಮಾನ್ಯನಾಗಿರುವನಲ್ಲದೇ, ನನ್ನ ತಂದೆ, ತಾಯಿ, ಸಹೋದರ, ಮಿತ್ರ, ಬಂಧು, ಎಲ್ಲವೂ ಆತನೇ ಆಗಿರುವನು. ಈ ಮಾತು ಸತ್ಯ ಎಂಬುದನ್ನು ಪರಮೇಶ್ವರನ ಚರಣಗಳ ಮೇಲೆ ಆಣೆಯಿಟ್ಟು ಹೇಳುವೆನು. ॥೬೯॥

ಶಿವೋಪಾಸಕನು ಪರಮೇಶ್ವರನ ಅಪರಾವತಾರವು. ಶೈವನು ಪರಮೇಶ್ವರ ಸ್ವರೂಪನೇ ಆಗಿರುವುದರಿಂದ ಆತನೇ ನಮಗೆ ಪೂಜ್ಯನು, ಮತ್ತು ಮಾನ್ಯನು ಎಂಬುದನ್ನು ನಾನು ತಿಳಿದುಕೊಂಡಿದ್ದೇನೆ. ಇದೇ ಮಾತನ್ನು ನಾನು ನನ್ನ ಈ ಅಧಿಕಾರವಿರುವವರೆಗೂ ಚೆನ್ನಾಗಿ ಜ್ಞಾಪಕವಿಟ್ಟುಕೊಂಡಿರುತ್ತೇನೆ. ಇದು ತ್ರಿಸತ್ಯ (ತನು, ಮನ, ವಚನ ಈ ಮೂರರ ಪ್ರತಿಜ್ಞೆ) ಎಂಬುದನ್ನು ಆ ಭವಾನೀಪತಿಯ ಮೇಲೆ ಆಣೆ ಇಟ್ಟು ಹೇಳುವೆನು. ॥೭೦॥

ದೂತೈರ್ನ ಶಾಂಭವಗೃಹಾಧ್ವನಿ ಗಮ್ಯತೇಽಪಿ
ತೈಸ್ತದ್ಗೃಹೇಷು ಗಮನಂ ನ ಕೃತಂ ಕದಾಪಿ ।
ದೃಷ್ಟ್ವಾತಿದೂರಶಿವಭಕ್ತಗೃಹಾಂಗಣಾನಿ
ನಿತ್ಯಂ ನಮಂತಿ ಮುಹುರಾದರತೋ ಭಟಾ ಮೇ ॥೨೧॥

ನ ಜ್ಞಾಯತೇ ಖಲು ಶಿವಾರ್ಚಕಗೇಹವಾರ್ತಾ
ತನ್ಮಂದಿರಾಣಿ ನ ಮನಾಗಘಸಂಕುಲಾನಿ ।
ದೃಷ್ಟಾನಿ ಶಾಂಕರಗೃಹಾಣಿ ಪುನಂತಿ ಲೋಕಾನ್
ಗಂಗಾಜಲಾಮಲತರಂಗಸಮಾನಿ ತಾನಿ ॥೨೨॥

ನಿತ್ಯಂ ಶಿವಾರ್ಚನಪರಾಯಣಪಾದರೇಣು
ಪುಣ್ಯಪ್ರಭಾವಗಣನಾತಿವಿಚಾರಣೇನ ।
ನೀತಂ ವಯಃ ಖಲು ಮಯಾ ನ ತದಂಘ್ರಿಸೇವಾ
ತ್ಯಾಗಃ ಕೃತಃ ಶಿವಪದಾಂಬುಜಯೋಶ್ಯಪಾಮಿ ॥೨೩॥

ನನ್ನ ದೂತರು ಈಶ್ವರಭಕ್ತರ ಮನೆ ಇರುವ ದಾರಿಯ ಕಡೆಗೇ ಹೋಗುಲ್ಲ. ಅವರು ಎಂದು ಶೈವರ ಮನೆಯೊಳಕ್ಕೆ ಪ್ರವೇಶಿಸಿರುವುದಿಲ್ಲ. ಶಿವಭಕ್ತರ ಮನೆಯ ಅಂಗಳವನ್ನು ಸಹ ದೂರದಿಂದಲೇ ನೋಡಿ ಭಕ್ತಿಯಿಂದ ನಮಸ್ಕರಿಸುವರು. ಅವರ ಹತ್ತಿರಕ್ಕೂ ಸಹ ನನ್ನ ಭೃತ್ಯರು ಸುಳಿಯುವುದಿಲ್ಲವಲ್ಲಾ ! ||೨೧||

ಶಿವಭಕ್ತರ ಮನೆಯ ವಿಷಯವೇ ನನಗೆ ತಿಳಿಯದು. ಅವರ ಮನೆಗಳೂ ಸಹ ಪಾಪಶೂನ್ಯಗಳಾಗಿರುತ್ತವೆ. ಆದುದರಿಂದ ನಾವು ಅವರ ಮನೆಗಳಿಗೆ ಎಂದೂ ಹೋಗುವುದಿಲ್ಲ. ಪರಶಿವಭಕ್ತರ ಮನೆಗಳು ಪಾವನವಾದ ಗಂಗೆಯ ನಿರ್ಮಲ ಜಲದಂತೆ ಪವಿತ್ರವಾಗಿರುತ್ತವೆ. ಅವುಗಳ ದರ್ಶನದಿಂದಲೇ ಸಕಲ ಜನರೂ ಸಹ ಪರಿಪೂತರಾಗುತ್ತಾರೆ. ||೨೨||

ನಾನು ನಿತ್ಯವೂ ಶಿವಭಕ್ತರ ಸೇವೆ ಮತ್ತು ಶಿವಾರ್ಚನೆಯಲ್ಲಿಯೇ ಆಸಕ್ತರಾಗಿರುವವರ ಮಹಿಮೆಯನ್ನೇ ಕುರಿತು ಧ್ಯಾನಿಸುತ್ತೇನೆ. ಅವರ ಪಾದಧೂಳಿಯ ಮಹಿಮೆ ಎಷ್ಟು ಮಹತ್ತರವಾದದ್ದೆಂದು ಯೋಚಿಸುತ್ತಲೇ ನನ್ನ ಆಯುಸ್ಸನ್ನು ಕಳೆಯುತ್ತಿದ್ದೇನೆ. ಪ್ರತಿದಿನವೂ ಆ ಶಿವಭಕ್ತರ ಪಾದಸೇವೆಯನ್ನೇ ಮಾಡುತ್ತಿದ್ದೇನೆ.

ಶಾಂಭವೇಷು ಮಮ ಸಂಪ್ರತಿ ಶಂಭುಜ್ಞಾನಮೇವ ಭವತೀತಿ ನ ಚಿತ್ರಂ ।
ತತ್ರ ಸಾಕ್ಷಿರಪಿ ತಾವದುಪೇಕ್ಷಾಂ ಕಿಂ ಕರಿಷ್ಯತಿ ಶಿವೋ ಮಯಿ ದಿನೇ॥೭೪॥

ದೀನಬಂಧುರಧುನಾ ಯದಿ ಸಾಕ್ಷೀ ನ ಕ್ಷರಕ್ಷಿತಿರಪಿ ಕ್ಷಣದೇಶಃ ।
ಭಾಸುರಸ್ಯಪದಿಗಪ್ಯನಿಲೋಽಪಿ ಅಕ್ಷಪಕ್ಷನಿಹಿತೋಽತ್ರ ಶಪಾಮಿ ॥೭೫॥

ಕಿಂ ಮಯಾ ಕೃತಮಹೋ ದುರದೃಷ್ಟಂ
ನಿಂದಯಾ ತನುರಿಯಂ ತನುರಾಸೀತ್ ।
ಚಿಂತಯಾಪಿ ಶಿವಪೂಜಕಸೇವಾ
ಕಿಂ ಮಯಾಪಿ ನ ಕೃತೈವ ಸುಖಾಯ ॥೭೬॥

ಬೇಕಾದರೆ ಈ ವಿಷಯದಲ್ಲಿ ಆ ಶಂಕರ ಚರಣಗಳನ್ನೇ ಆಣೆ ಇಟ್ಟು ಹೇಳುತ್ತೇನೆ. ಎಂದೂ ನಾನು ಶೈವರ ಸೇವೆಯನ್ನು ಬಿಟ್ಟಿರುವುದಿಲ್ಲ. ॥೭೩॥

ಇದು ಈಗ ಆಶ್ಚರ್ಯ. ನನಗೆ ಇತ್ತೀಚೆಗೆ ಶಿವಭಕ್ತರೆಲ್ಲರೂ ಶಿವನಂತೆಯೇ ತೋರುತ್ತಿದ್ದಾರೆ. ನಾನು ಶಿವಭಕ್ತರನ್ನು ಶಿವನೆಂದೇ ತಿಳಿದುಕೊಂಡಿದ್ದೇನೆ. ಇದಕ್ಕೆ ಸರ್ವಾಂತರ್ಯಾಮಿಯಾದ ಆ ಪರಮೇಶ್ವರನೇ ಸಾಕ್ಷಿ ಅಂದಮೇಲೆ ಅತಿ ದೀನನಾದ ನನ್ನ ಮೇಲೆ ಆ ಶಂಕರನು ಅಸಮಾಧಾನಗೊಳ್ಳುವನೇ ? ಎಂದಿಗೂ ಇಲ್ಲ. ॥೭೪॥

ದೀನಬಂಧುವೆನಿಸಿದ ಪರಶಿವನು ನನ್ನ ಕರ್ಮಗಳಿಗೆ ಸಾಕ್ಷಿಯಾಗಿ ನಿಂತಿರುವಾಗ ನಕ್ಷತ್ರಗಳು ಭೂಮಿಗಿಳಿದರೂ, ಚಂದ್ರನು ಸೂರ್ಯನೇ ಆದರೂ, ದಿಕ್ಕುಗಳು ಅಲ್ಲೋಲಕಲ್ಲೋಲವಾದರೂ, ನನಗೆ ಭಯವಿರುವುದಿಲ್ಲ. ಹೀಗೆಂದು ಮೇರುಪರ್ವತದಲ್ಲಿ ನಿಂತು ಬೇಕಾದರೂ ಪ್ರತಿಜ್ಞೆಮಾಡುತ್ತೇನೆ. ॥೭೫॥

ನಾನು ಎಷ್ಟು ದುರದೃಷ್ಟವಂತನೋ ಗೊತ್ತಿಲ್ಲ. ನನ್ನನ್ನು ಪ್ರತಿಯೊಬ್ಬರೂ ನಿಂದಿಸುವರು. ಅಲ್ಲದೇ ನಾನು ಯಾವಾಗಲೂ ಚಿಂತೆಗೆ ಒಳಗಾಗುತ್ತೇನೆ. ಈ ಚಿಂತೆಯಿಂದಲೇ ನನ್ನ ಶರೀರವು ಕ್ಷೀಣವಾಗಿ ಹೋಗಿದೆ. ನಾನು ಸದಾ ಶಿವಭಕ್ತರ ಸೇವೆಯನ್ನು ಮಾಡುತ್ತಿದ್ದರೂ ನನಗೆ ಸುಖ ಮತ್ತು ಶಾಂತಿ ದೊರೆತಿರುವುದಿಲ್ಲ. ಇದೂ ನನ್ನ ದೌರ್ಭಾಗ್ಯವೇ. ॥೭೬॥

ಶಾಂಭವೇಷು ಮಮ ಭಕ್ತಿರಪಾರಾ ಸಾ ಸ್ವಭಾವಜನಿತಾ ಜನನೀಯಾ ।
ಕೇನ ವಾ ಮಧುರಿಮಾ ಜನನೀಯೋ ದ್ರಾಕ್ಷದುಗ್ಧದಧಿಸಾರವಿಶೇಷೇ ॥೭೭॥

ದುರ್ಭಗಸ್ಯ ಪರಮೇಶ್ವರಭಕ್ತೇ ಭಕ್ತಿರೇವ ನ ಭವತ್ಯತ ಏವ ।
ಯಾತನಾಶತಮುಪೇತ್ಯ ಶರೀರಂ ಸೂಕರಸ್ಯ ಜಠರೇ ಸಮುಪೈತಿ ॥೭೮॥

ಇತ್ಯುದೀರಿತಮಾಕರ್ಣ್ಯ ಯಮಸ್ಯಾತಿಮನೋಹರಂ ।
ತತ್ತ್ವವಿಜ್ಞಾನದಂ ಪ್ರಾಹುಃ ಸೋತ್ಸುಕಾಶ್ಶಿವಕಿಂಕರಾಃ ॥೭೯॥

ಶಿವಶಂಕರಾ ಊಚುಃ

ದೃಢಾ ಭಕ್ತಿರ್ಮಹಾದೇವೇ ತವಾಸ್ತಿ ಯಮ ವಸ್ತುತಃ ।
ಅಸ್ಮಿನ್ನರ್ಥೇ ನ ಸಂದೇಹಃ ಕಸ್ಯಾಪಿ ಭುವನತ್ರಯೇ ॥೮೦॥

ದ್ರಾಕ್ಷಿ, ಕ್ಷೀರ ಮತ್ತು ದಧಿ ಇವುಗಳ ಸಾರದಿಂದ ಒಂದು ಪಾಕವನ್ನು ಸಿದ್ಧಮಾಡಿದರೆ ಅದರಲ್ಲಿ ಮಧುರವು ಹೇಗೆ ಸ್ವಾಭಾವಿಕವಾಗಿ ಉಂಟಾಗುವುದೋ, ಹಾಗೆಯೇ ನನಗೆ ಸ್ವಾಭಾವಿಕವಾಗಿಯೇ ಸದಾಶಿವಭಕ್ತರಲ್ಲಿ ನಿಶ್ಚಲಭಕ್ತಿಯಿರುವುದು. ॥೭೭॥

ಕೇವಲ ದೌರ್ಭಾಗ್ಯವಂತನಿಗೆ ಈಶ್ವರ ಭಕ್ತನಲ್ಲಿ ಭಕ್ತಿಯುಂಟಾಗುವುದಿಲ್ಲ. ಅದಕ್ಕೆ ಆತನ ದುರದೃಷ್ಟವೇ ಕಾರಣ. ಆದ್ದರಿಂದಲೇ ಆತನು ಅನೇಕ ಯಾತನೆಗಳನ್ನು ಅನುಭವಿಸುವನಲ್ಲದೇ ಕೊನೆಗೆ ಹಂದಿಯ ಗರ್ಭದಲ್ಲಿಯೂ ಜನ್ಮತಾಳುವನು. ॥೭೮॥

ಯಮನು ಈರೀತಿಯಾಗಿ ತಾತ್ತ್ವಿಕವೂ ಮನೋಹರವೂ ಆಗಿರುವ ಮಾತನ್ನು ಹೇಳಲು, ಅದನ್ನು ಕೇಳಿ .ಶಿವದೂತರು ಸಂತೋಷದಿಂದ ಹೀಗೆ ಹೇಳಿದರು. ॥೭೯॥

"ಎಲೈ ಯಮನೇ, ನಿಜವಾಗಿಯೂ ನಿನಗೆ ಪರಮೇಶ್ವರನಲ್ಲಿ ಭಕ್ತಿ ಇದೆ. ನೀನು ಆ ಮಹಾದೇವನಲ್ಲಿ ಪರಮ ವಿನೀತನಾಗಿದ್ದೀಯೆ. ಇದರಲ್ಲೇನೂ ಸಂಶಯವಿಲ್ಲ. ॥೮೦॥

ಶಿವಧ್ಯಾನರತೋ ನಿತ್ಯಂ ನಿತ್ಯಂ ಧರ್ಮವಿಚಾರಕಃ ।
ತ್ವಯಾ ನ ಸದೃಶಃ ಕೋಽಪಿ ಕರ್ಮದೇವೇಷು ವಸ್ತುತಃ ॥೮೧॥

ಆನೀತೋಽಯಂ ಯಮಭಟೈರಗ್ನಿಮಾರ್ಗೇಣ ಸತ್ವರಂ ।
ಅಯಂ ದೃಷ್ಟೋ ಮಹಾದೇವ್ಯಾ ಶ್ರೀಮಹಾದೇವಸನ್ನಿಧೌ ॥೮೨॥

ತತೋಽತಿಕೃಪಯಾ ಗೌರೀ ಪ್ರಾಹ ಶಂಕರಮಾನತಾ ।
ವಿನಯಾವನತಾ ಮಂದಂ ಮಂದಸ್ಮೇರಪುರಸ್ಸರಂ ॥೮೩॥

ಪಶ್ಯ ಪಶ್ಯ ಮಹಾದೇವ ಮಹಾಕಾರುಣಿಕೋತ್ತಮ ।
ನೀಯತೇ ಸೋಽಗ್ನಿಮಾರ್ಗೇಣ ಯಮಭೃತ್ಯೈರ್ಮದೋದ್ಧತೈಃ॥೮೪॥

ತಂ ಮೋಚಯ ಮಹಾದೇವ ಸ ತಾವದತಿದುಃಖಿತಃ ।
ಇತೋಽಪಿ ಯಾತನಾ ಘೋರಾ ಕಾ ವಾ ವದ ಸದಾಶಿವ ॥೮೫॥

ನೀನು ನಿತ್ಯವೂ ಶಿವನನ್ನು ಆರಾಧಿಸುವೆ. ಸದಾ ಶಿವಧರ್ಮವಿಚಾರಗಳನ್ನೂ ಚಿಂತಿಸುವೆ. ಆದುದರಿಂದ ನಿಮ್ಮ ಕರ್ಮದೇವತೆಗಳಲ್ಲೆಲ್ಲಾ ನಿಜವಾಗಿಯೂ ನೀನೇ ಶ್ರೇಷ್ಠನಿದ್ದೀಯೆ. ನಿನ್ನ ಸಮಾನರು ಯಾರೂ ಇಲ್ಲ. ॥೮೧॥

ಆದರೆ ಈಗ ಏನಾಗಿರುವುದೆಂದರೆ ನಿನ್ನ ಭಟರು ಈ ಮನುಷ್ಯನನ್ನು ಅಗ್ನಿನರಕಮಾರ್ಗವಾಗಿ ಕರೆದು ತರುತ್ತಿದ್ದರು. ಇದನ್ನು ಶಂಕರನ ಸನ್ನಿಧಿಯಲ್ಲಿದ್ದ ಮಹಾದೇವಿಯಾದ ಪಾರ್ವತಿಯು ಕಂಡಳು. ॥೮೨॥

ಈ ರೀತಿ ಸೆಳೆಯುತ್ತಿರುವುದನ್ನು ನೋಡಿ ಪಾರ್ವತಿಗೆ ಆತನ ಮೇಲೆ ಅತ್ಯಂತ ದಯೆಯುಂಟಾಯಿತು. ಆ ಕೂಡಲೇ ಆ ಮಹಾದೇವಿಯು ಶಂಕರನಲ್ಲಿ ವಿನಯಪುರಸ್ಸರವಾಗಿ ಹೀಗೆ ಬಿನ್ನವಿಸಿದಳು. ॥೮೩॥

"ಮಹಾದೇವನೇ! ಅತ್ತ ನೋಡು ನೋಡು. ನೀನು ಪರಮಕಾರುಣಿಕನಾಗಿದ್ದೀಯಷ್ಟೆ. ಈಗ ಅಲ್ಲಿ ನೋಡು. ಮದೋದ್ಧತರಾದ ಯಮದೂತರು ಯಾವನೋ ಒಬ್ಬನನ್ನು ಅಗ್ನಿ ನರಕಮಾರ್ಗದಿಂದ ಸೆಳೆದುಕೊಂಡು ಹೋಗುತ್ತಿದ್ದಾರೆ. ॥೮೪॥

ಆ ಮನುಷ್ಯನಿಗೆ ಅತ್ಯಂತ ಕ್ಲೇಶಕೊಡುತ್ತಿದ್ದಾರೆ. ಆತನೋ ಅತ್ಯಂತ ದುಃಖಿತನಾಗಿದ್ದಾನೆ. ಇದನ್ನು ನನ್ನಿಂದ ನೋಡಲು ಸಾಧ್ಯವಿಲ್ಲ. ಇದರಿಂದಲೂ ಹೆಚ್ಚಾದ

ತದ್ದರ್ಶನೇಽಪಿ ಹೃದಯಂ ವಿದೀರ್ಣಂ ಮಮ ಶಂಕರ ।
ಸ ತಿಷ್ಠತಿ ಕಥಂ ಸೋಢ್ವಾ ವಹ್ನಿಮಾರ್ಗಾವಲುಂಠನಂ ॥೮೬॥

ಅಹೋ ನರಶರೀರೇಣ ಕಷ್ಟಮೇವ ಪ್ರತಿಕ್ಷಣಂ ।
ಗರ್ಭೇಽಪಿ ದುಃಖಮುತ್ಪನ್ನೇ ಪುನರ್ದುಃಖಂ ಪುನಃ ಪುನಃ ॥೮೭॥

ಧಿಗ್ಧಿಙ್ನರಶರೀರಾಣಿ ಯಾತನಾಕಲ್ಪಿತಾನ್ಯತಃ ।
ಇತೋಽಪಿ ಯಾತನಾ ಕಾ ವಾ ಭವಿಷ್ಯತಿ ಮಹೇಶ್ವರ ॥೮೮॥

ಮೃದುಲಾ ತತ್ತನುಶ್ಶಂಭೋ ತರುಣವ್ರಣಪೀಡಿತಾ ।
ವ್ರಣರಕ್ತಸಮಾಕೀರ್ಣಾ ವಹ್ನಿಮಾರ್ಗೇಣ ನೀಯತೇ ॥೮೯॥

---

ಪರಾಭವವು ಮತ್ತು ಯಾತನೆಯು ಬೇರೆ ಯಾವುದಿದೆ? ಓ ಸದಾಶಿವ! ಈತನನ್ನು ಜಾಗ್ರತೆ ಆಯಮದೂತರ ಕೈಯಿಂದ ಬಿಡಿಸು. ॥೮೫॥

ಆ ಮನುಷ್ಯನನ್ನು ಅಗ್ನಿಮಾರ್ಗದಲ್ಲಿ ಹೊರಳಾಡಿಸಿಕೊಂಡು ಒಯ್ಯುತ್ತಿದ್ದಾರೆ. ಈ ಯಾತನೆಯನ್ನು ಆತನು ಹೇಗೆ ಸಹಿಸಿಕೊಂಡಿದ್ದಾನೆಯೋ ಗೊತ್ತಾಗುವುದಿಲ್ಲ. ಆತನ ಈ ದುರವಸ್ಥೆಯನ್ನು ನೋಡಿದ್ದರಿಂದಲೇ ನನ್ನ ಹೃದಯವು ಒಡೆದುಹೋಗುತ್ತಿದೆ. ॥೮೬॥

ಸಾಮಾನ್ಯವಾಗಿಯೇ ಮನುಷ್ಯ ಜನ್ಮವು ಅನೇಕ ದುಃಖಗಳಿಗೆ ಮನೆಯಾಗಿರುತ್ತದೆ. ಆ ಮಾನವ ಜನ್ಮವು ಹುಟ್ಟುವುದಕ್ಕೆ ಪ್ರಾರಂಭದಲ್ಲಿಯೇ ಗರ್ಭವಾಸ ಮುಂತಾದ ದುಃಖಗಳು ಬಂದು ಬೀಳುತ್ತವೆ. ಈಗ ಈತನು ಇನ್ನೂ ಯಾವ ದುಃಖವನ್ನು ಅನುಭವಿಸಬೇಕು. ॥೮೭॥

ಆ ಮನುಷ್ಯ ಶರೀರವೇ ಅತಿ ತುಚ್ಛವಾದದ್ದು. ಅದಕ್ಕೆ ಧಿಕ್ಕಾರ. ಆ ಶರೀರವು ಕೇವಲ ಯಾತನೆಗಳ ಅನುಭವಕ್ಕಾಗಿಯೇ ಹುಟ್ಟುವುದೆಂದು ತೋರುತ್ತದೆ. ಆ ಮಾನವ ಜನ್ಮವೇ ಒಂದು ದೊಡ್ಡ ಯಾತನೆಯ ಸ್ವರೂಪವಾಗಿರುವುದು. ಇದಕ್ಕಿಂತಲೂ ಹೆಚ್ಚು ಯಾತನೆಯು ಮತ್ತೆ ಬೇರೆ ಯಾವುದಿರುವುದು? ॥೮೮॥

ಶಂಭೋ! ಇಲ್ಲಿ ನೋಡು. ಆ ಮನುಷ್ಯನ ಶರೀರವು ಅತಿಕೋಮಲವಾದುದು. ಅದು ಈಗ ಈ ದೂತರ ಸಂಪೀಡನದಿಂದ ಬಹಳ ಕಷ್ಟಕ್ಕೆ ಸಿಕ್ಕಿದೆ. ಮೈಯ್ಯೆಲ್ಲಾ ಗಾಯವಾಗಿ ರಕ್ತಸುರಿದು ಕೆಂಪಗಾಗಿ ಹೋಗಿದೆ. ಅಲ್ಲದೇ ಮತ್ತೆ ಆತನನ್ನು ಅಗ್ನಿಮಾರ್ಗದಲ್ಲಿ ಸೆಳೆಯುತ್ತಿದ್ದಾರೆ. ॥೮೯॥

ಅಂಗಾರಸಾಗರಾಕಾರಸಮಾರ್ಗಸ್ತಸ್ಯ ವೀಕ್ಷಣಂ ।
ಅಶಕ್ಯಂ ತತ್ಪ್ರವೇಶಸ್ತು ದೂರತಸ್ಸುತರಾಮಪಿ ॥೯೦॥

ಅಹೋ ಪಾತಕಮೋಽನೇನ ಕಿಮಸ್ತಿ ಕೃತಮಕ್ಷಯಂ ।
ವಹ್ನಿಸಾಗರಮಗ್ನೋಽಪಿ ನ ಮುಕ್ತಃ ಪಾಪಬಂಧನೈಃ ॥೯೧॥

ಕಿಮರ್ಥಂ ಯಾತನಾ ಸೃಷ್ಟಾ ತ್ವಯಾ ವಾ ಕರುಣಾಕರ ।
ಘೋರಾ ಘೋರತರಾಚಾನ್ಯಾ ಬಹುದುಃಖಪ್ರದಾಯಿನೀ ॥೯೨॥

ಕರುಣಾಲೇಶಹೀನತ್ವಮಪಕೀರ್ತಿಕರಂ ನ ಕಿಂ ।
ಅಹೋ ತದ್ಪುರದೃಷ್ಟಸ್ಯ ವಿನಾಶಃ ಕೇನ ವಾ ವದ ॥೯೩॥

ಕರುಣಾರಸರೂಪಸ್ಯ ಹೃದಯಸ್ಯ ತವೇಶ್ವರ ।
ಕರುಣಾರಸಸಂಗಃ ಕಿಂ ಪುನಸ್ತೇ ಸಮುಪೇಕ್ಷಿತಃ ॥೯೪॥

ಆ ಅಗ್ನಿಮಾರ್ಗವು ಕೇವಲ ಬೆಂಕಿಯ ಕೆಂಡಗಳಿಂದ ತುಂಬಿಹೋಗಿರುತ್ತದೆ ಅಂಥ ಭಯಂಕರವಾದ ಮಾರ್ಗವನ್ನು ಪ್ರವೇಶಿಸುವುದಂತೂ ಇರಲಿ. ಅದನ್ನು ಕಣ್ಣಿಂದ ನೋಡುವುದೂ ಸಾಧ್ಯವಿಲ್ಲ. ॥೯೦॥

ಅಯ್ಯೋ ಪಾಪಕರ್ಮವೇ! ಈ ಮನುಷ್ಯನು ಅಂಥ ಅಕ್ಷಯ್ಯವಾದ ಯಾವ ಪಾಪಮಾಡಿದ್ದಾನೆ? ಇಷ್ಟು ಯಾತನೆಯನ್ನು ಅನುಭವಿಸಿದರೂ ಇನ್ನೂ ಆತನ ಪಾಪವು ಸವೆದಿರುವುದಿಲ್ಲವೇ? ಮತ್ತೂ ಅಗ್ನಿ ಮಾರ್ಗದಲ್ಲಿ ಆತನನ್ನು ನೆಳೆಯು ತ್ತಿದ್ದಾರಲ್ಲಾ? ॥೯೧॥

ಶಂಕರನೇ! ನೀನು ದಯಾಮಯನಲ್ಲವೆ? ಏತಕ್ಕೆ ಇಷ್ಟೊಂದು ಯಾತನೆಗಳನ್ನು, ಘೋರವಾದ ಮತ್ತು ಘೋರತರವಾದ ಯಾತನೆಗಳನ್ನು ಸೃಷ್ಟಿಸಿ ದ್ದೀಯೆ? ॥೯೨॥

ಈ ಘೋರವಾದ ಯಾತನೆಗಳನ್ನು ನೀನು ಸೃಷ್ಟಿಸಿರುವುದರಿಂದ ನಿನ್ನನ್ನು ಕರುಣಾಹೀನನೆಂದು ನಿಂದಿಸುವರಲ್ಲವೇ? ಇದು ನಿನಗೆ ಅಪಕೀರ್ತಿಕರವಲ್ಲವೇ? ಅಯ್ಯೋ ಪಾಪ, ಆ ಮನುಷ್ಯನ ದೌರ್ಭಾಗ್ಯವು ಯಾವ ಯಾತನೆಯಿಂದ ಸವೆಯು ತ್ತದೆ? ॥೯೩॥

ಓ ಈಶ್ವರ! ನಿನ್ನ ಹೃದಯವು ಕೇವಲ ದಯೆಯ ಸ್ವರೂಪವಾಗಿದ್ದರೂ

ಕಿಂ ಜನ್ಮಕೋಟಿಘಟಿತಸ್ಯ ನ ತಸ್ಯ ಬುದ್ಧಿಃ
ಜಾತಾ ಶಿವಾರ್ಚಕವಿಶೇಷಸಮನ್ವಯೇನ ।
ಶಂಭೋ ಕದಾಪಿ ಕಿಮಿದಂ ನ ವಿಚಿತ್ರಮೇವ
ನಾಮಾಪಿ ತೇ ಶಿವ ವದನ್ ಶ್ರುತಮೇವ ಶಂಭೋ ॥೯೫॥

ಕಿಂ ಕೇನಾಪಿ ನ ಜನ್ಮನಾ ಶಿವಕಥಾ ನಾಕರ್ಣಿತಾ ನಾಮ ವಾ
ನ ಶ್ರೋತ್ರೇ ಪತಿತಂ ಮನಾಗಪಿ ನ ವಾ ಲಿಂಗಂ ನ ದೃಷ್ಟಂ ತವ ।
ಹಾರಂ ಸುಂದರಮಂದಿರಂ ಚ ಶಿವದಂ ದೃಷ್ಟಂ ನ ದೃಷ್ಟೋ ರಥೋ ।
ಯೇನಾಯಂ ಜ್ವಲನಾರ್ಣವೇ ನಿಪತಿತಃ ಕಷ್ಟಂ ಪ್ರಕೃಷ್ಟಂ ಗತಃ ॥೯೬॥

ಇತಿ ಶ್ರೀಶಿವರಹಸ್ಯೇ ತೃತೀಯಾಂಶೇ ಉತ್ತರಾರ್ಧೇ
ಶಿವಗಣ ಯಮಸಂವಾದೇ ಶಿವಂಪ್ರತಿ ಶ್ರೀಗೌರೀಪ್ರಾರ್ಥನ
ವರ್ಣನಂ ನಾಮೈಕಾದಶೋಽಧ್ಯಾಯಃ

ಅದಕ್ಕೆ ಮತ್ತೆ ಬೇರೆ ಕರುಣಾರಸವು ಬಂದು ಸೇರಿಕೊಳ್ಳಬೇಕೇ? ನೀನು ಏತಕ್ಕೆ ಇನ್ನೂ ಆತನಮೇಲೆ ದಯೆ ತೋರುವುದಿಲ್ಲ? ॥೯೪॥

ಆ ಮನುಷ್ಯನು ಈವರೆಗೆ ಕೋಟ್ಯಂತರ ಜನ್ಮಗಳಲ್ಲಿ ಹುಟ್ಟಿರಬಹುದು. ಆ ಜನ್ಮಗಳ ಮಧ್ಯೆ ಒಂದು ಜನ್ಮದಲ್ಲಿಯೂ ಆತನು ಶಿವಭಕ್ತರ ವಂಶದಲ್ಲಿ ಹುಟ್ಟಿರುವುದಿಲ್ಲವೇ? ಆತನಿಗೆ ನಿನ್ನನ್ನು ಆರಾಧಿಸಬೇಕೆಂಬ ಬುದ್ಧಿಯು ಎಂದೂ ಉಂಟಾಗಿರುವುದಿಲ್ಲವೇ? ನಿನ್ನ ನಾಮವನ್ನು ಆತನು ಒಂದು ಸಲವೂ ಭಜಿಸಿಲ್ಲವೇ? ಅಥವಾ ನಿನ್ನ ನಾಮಶ್ರವಣವನ್ನೂ ಮಾಡಿರುವುದಿಲ್ಲವೇ? ಮತ್ತೆ ಏಕೆ ಇನ್ನೂ ನೀನು ಆತನ ಮೇಲೆ ಇಷ್ಟು ಉದಾಸೀನನಾಗಿದ್ದೀಯೆ? ॥೯೫॥

ಆ ಮನುಷ್ಯನು ಯಾವ ಜನ್ಮದಲ್ಲಿಯೂ ಶಿವಕಥೆಯನ್ನು ಶ್ರವಣಮಾಡಿರುವುದಿಲ್ಲವೇ? ಆತನ ಕಿವಿಯಲ್ಲಿ ಎಂದೂ ಶಿವನಾಮವು ಬಿದ್ದಿರುವುದಿಲ್ಲವೇ? ಆತನ ಕಣ್ಣು ಎಂದೂ ಶಿವಲಿಂಗದ ಮೇಲೆ ಬೀಳಲಿಲ್ಲವೇ? ಅಥವಾ ಪರಶಿವಭಕ್ತರ ಮನೆಯನ್ನೋ, ಶಿವಮಂದಿರವನ್ನೋ, ಅಥವಾ ಶಿವರಥೋತ್ಸವವನ್ನೋ ಇವುಗಳಲ್ಲಿ ಒಂದನ್ನೂ ಅವನು ನೋಡಿರುವುದಿಲ್ಲವೇ? ಬಹುಶಃ ಇಲ್ಲವೆಂತಲೇ ತೋರುತ್ತದೆ. ಹಾಗಿದ್ದರೆ ಇಂಥ ಭಯಂಕರವಾದ ಶಿಕ್ಷೆಯನ್ನು .ಏಕೆ ಅನುಭವಿಸುತ್ತಿದ್ದನು? ಈಗ

ಆತನು ಸಾಕ್ಷಾತ್ ಬೆಂಕಿಯಲ್ಲಿಯೇ ಬಿದ್ದು ಘೋರವಾದ ಯಾತನೆಯನ್ನು ಅನುಭವಿಸುತ್ತಿದ್ದಾನಲ್ಲಾ! ಅಯ್ಯೋ ಪಾಪ. ಆತನ ಗತಿಯು ಬಹಳ ಶೋಚನೀಯವೂ ದಯನೀಯವೂ ಆಗಿದೆ." ಎಂದು ದೇವಿಯು ಶಂಕರನಲ್ಲಿ ಹೇಳಿಕೊಂಡು ಪಶ್ಚಾತ್ತಾಪ ಪಟ್ಟಳು. ||೯೬||

ಇಲ್ಲಿಗೆ ಶಿವರಹಸ್ಯದಲ್ಲಿ ಹರನಾಮಕವಾದ ಮೂರನೆಯ ಅಂಶದ ಉತ್ತರಾರ್ಧದಲ್ಲಿ ಪಾರ್ವತಿಯು ಪರಶಿವನನ್ನು ಪ್ರಾರ್ಥಿಸಿದ ಹನ್ನೊಂದನೆಯ ಅಧ್ಯಾಯವು ಮುಗಿದುದು.

# ಅಥ ಶ್ರೀ ಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ದ್ವಾದಶೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತ್ಯಂಬಿಕಾವಚನರೂಪಸುಧಾಂ ಮಹೇಶಃ
ಪೀತ್ವಾ ಪ್ರಹೃಷ್ಟಹೃದಯಸ್ಸ್ಮಿತಪೂರಪೂರ್ಣಃ ।
ತಾಮಾಹ ಶೈಲತನಯಾಮವಲಂಬ್ಯ ತಸ್ಯಾಃ
ತೂರ್ಣಂ ಕರಾಂಬುಜಯುಗಂ ಯುಗಪನ್ಮನೋಜ್ಞಂ ॥೧॥

|| ಶಂಕರ ಉವಾಚ ||

ತೇನಾಮಿತಾನಿ ದುರಿತಾನಿ ಕೃತಾನಿ ಗೌರಿ
ತನ್ನಾಶಕಾನಿ ನರಕಾಣಿ ನ ಸರ್ವಥಾಪಿ ।

## ಹನ್ನೆರಡನೆಯ ಅಧ್ಯಾಯ

ಈ ರೀತಿಯಾಗಿ ವಿನಯ ಮಧುರವಾದ ಮಾತನ್ನು ಪಾರ್ವತಿಯು ಹೇಳಲು, ಪರಮೇಶ್ವರನು ಅದನ್ನು ಕೇಳಿ ಸ್ವಲ್ಪ ನಕ್ಕು, ಪ್ರೇಮದಿಂದ ಗಿರಿಜೆಯ ಎರಡೂ ಕೈಗಳನ್ನು ನಾವರಿಸಿ ಹಿಡಿದುಕೊಂಡು, ಮಂದಹಾಸ ಪೂರ್ವಕವಾಗಿ ಹೀಗೆ ಹೇಳಿದನು. ||೧||

ಯಮದೂತರು ಯಾವನನ್ನು ಹಿಡಿದುಕೊಂಡು ಹೋಗುತ್ತಿರುವರೋ, ಆ ಈತನು ಪರಮ ಪಾಪಿಯಾಗಿದ್ದಾನೆ. ಆತನು ಮಾಡಿರುವ ಪಾಪ ಅಷ್ಟಿಷ್ಟಲ್ಲ. ಆ ಪಾಪಗಳು ಎಷ್ಟು ನರಕಯಾತನೆಗಳನ್ನು ಅನುಭವಿಸಿದರೂ ತೀರುವುದಲ್ಲ. ಒಂದು

ಭೂಪಾಂಸವೋಽಪಿ ಗಣನಾವಿಷಯಾಃ ಕದಾಚಿತ್
ತತ್ಪಾಪರಾಶಿಗಣನಾ ನ ಕದಾಪಿ ನೂನಂ ॥೨॥

ಶಿವೇ ಭಸಿತಧಾರಣಂ ನ ಕೃತಮೇವ ತೇನಾಸಕೃತ್
ಸಕೃತ್ ಕ್ಷಣಮಪಿ ಕ್ಷಣಾತ್ಪ್ರಥಿತಭಾಲಭಾಗೇಽಪಿ ನಾ ।
ನ ಲಿಂಗಮಪಿ ವೀಕ್ಷಿತಂ ನವಮನೋಜ್ಞಬಿಲ್ವೀದಳಂ ।
ನ ದತ್ತಮಮಲಂ ಜಲಂ ವಿಮಲತುಂಗಲಿಂಗೇ ಮಮ ॥೩॥

ನ ದೀಪರಚನಾ ಕೃತಾ ಕಪಿಲಗೋಘೃತೇನಾದರಾತ್
ಕದಾಪಿ ಘನಸಾರತಃ ಪ್ರಬಲದೀಪಮಾಲಾ ಕೃತಾ ।
ಫಲಂ ಚ ನ ನಿವೇದಿತಂ ದಧಿಮಧುಪ್ರದತ್ತಂ ಶಿವೇ
ಪಯೋಽಪಿ ಘೃತಮೇವ ವಾ ವಿಮಲತುಂಗಲಿಂಗಾಲಯೇ ॥೪॥

ವೇಳೆ ಭೂಮಿಯಲ್ಲಿ ಎಷ್ಟು ಪರಮಾಣುಗಳು ಇವೆ ಎಂಬುದನ್ನಾದರೂ ಲೆಕ್ಕಮಾಡಬಹುದು. ಆದರೆ ಈ ಪಾಪಿಯು ಮಾಡಿರುವ ಪಾಪಗಳನ್ನು ಪರಿಗಣಿಸಲು ಸಾಧ್ಯವಿಲ್ಲ. ಅಷ್ಟು ಅಪಾರವಾದ ಪಾಪಗಳನ್ನು ಮಾಡಿರುವುದರಿಂದಲೇ ಯಮದೂತರು ಆತನಿಗೆ ಇಷ್ಟು ಶಿಕ್ಷೆ ಮಾಡುತ್ತಿರುವರು. ॥೨॥

ಎಲೌ ಪ್ರಿಯೇ, ಈತನು ಒಂದು ದಿನವೂ ಭಸ್ಮಧಾರಣೆಯನ್ನು ಮಾಡಿಕೊಂಡಿರಲಿಲ್ಲ. ಒಂದು ಕ್ಷಣವೂ ಹಣೆಗೆ ವಿಭೂತಿಯನ್ನು ಹಚ್ಚಿಕೊಂಡಿರುವುದಿಲ್ಲ. ನನ್ನ ಸ್ವರೂಪವೆನಿಸಿದ ಶಿವಲಿಂಗವನ್ನು ಬಿಲ್ವಪತ್ರೆ, ಜಲ ಮುಂತಾದುವುಗಳಿಂದ ಒಂದು ದಿನವೂ ಅರ್ಚಿಸಲಿಲ್ಲ. ಅದು ಹೋಗಲಿ. ಶಿವಲಿಂಗದ ದರ್ಶನವನ್ನೂ ಸಹ ಒಂದು ದಿನವೂ ಈ ಪಾಪಿಯು ಮಾಡಲಿಲ್ಲ. ॥೩॥

ಈ ಪಾಪಿಯು ಶಿವಲಿಂಗಮಂದಿರದಲ್ಲಿ ಎಂದೂ ತುಪ್ಪದ ದೀಪಗಳನ್ನು ಹಚ್ಚಿಸಿರುವುದಿಲ್ಲ. ಯಾವ ಸಾಲುದೀಪಗಳನ್ನು ರಚಿಸಿರುವುದಿಲ್ಲ. ಅಥವಾ ಕರ್ಪೂರ ದೀಪಗಳನ್ನೂ ಉರಿಸಿರುವುದಿಲ್ಲ. ಮಧು, ದಧಿ, ಫಲ, ಆಜ್ಯ ಈ ಯಾವುದನ್ನೂ ಈತನು ನನಗೆ ಅಭಿಷೇಕವಸ್ತುವನ್ನಾಗಿ ನಿವೇದಿಸಿರುವುದಿಲ್ಲ. ॥೪॥

ನ ಶಾಂಭವಮುಖೇ ಹುತಂ ಘೃತಸಮೇತಮನ್ನಂ ಮುದಾ
ಪಯಃ ಪ್ರಭವಸಾರತೋ ದಧಿವಿಶೇಷಸಾರಾದಪಿ ।
ಸಮೇತಸಿತಶರ್ಕರಾ ರುಚಿರಹಾರವಕ್ತ್ರೇ ಹುತಾ
ನ ಹಾರಮುಪಹಾರಮಪ್ಯಶನಮಸ್ಯ ಮನ್ಯೇ ಶಿವೇ ॥೫॥

ನ ಚಂದನಮಪಿ ಪ್ರಿಯೇಽಪ್ಯಮಿತಮೇವ ವಾ ಸಾದರಂ
ನ ಪುಷ್ಪಮಪಿ ಕೇತಕೀಪ್ರಭವಮದ್ರಿಮಲ್ಲೀದಲಂ ।
ಜಪಾಕುಸುಮಮೇವ ವಾ ವಿಮಲತುಂಗಲಿಂಗೇ ಶಿವೇ
ಕದಾಪಿ ನ ಸಮರ್ಪಿತಂ ಭವತಿ ಸದ್ಗತಿಸ್ತಸ್ಯ ಕಾ ॥೬॥

ಶಿವೇ ಸುರತಭೋಜನವ್ಯಸನಮೇವ ತಸ್ಯಾಭವತ್
ಸದಾಪಿ ನ ಕದಾಪಿ ವಾ ಗಿರಿಶಮಂದಿರಾವೇಕ್ಷಣಂ ।

ಈ ಪಾಪಿಯು ಲಿಂಗಾರ್ಚನೆಯನ್ನಂತೂ ಮಾಡಿರುವುದಿಲ್ಲ. ಹಾಗೆಯೇ ಪರಶಿವಭಕ್ತರನ್ನೂ ಆದರಸತ್ಕಾರಗಳಿಂದ ಸಂತುಷ್ಟಿಗೊಳಿಸಿಲ್ಲ. ಈತನು ಶೈವರಿಗೆ ಆಜ್ಯಸಮೇತವಾದ ಪಕ್ವಾನ್ನಗಳನ್ನು ಭೋಜನಮಾಡಿಸಲಿಲ್ಲ. ಹಾಲಿನ ಸಾರಾಂಶದಿಂದ ನಿರ್ಮಿತವಾದ ಹಾಲುಗೆಡ್ಡೆಯನ್ನಾಗಲಿ, ಮೊಸರಿಂದ ತಯಾರುಮಾಡಿದ ಭಕ್ಷ್ಯವನ್ನಾಗಲಿ ಶೈವರಿಗೆ ಎಂದೂ ದಾನಮಾಡಿರುವುದಿಲ್ಲ. ಸಕ್ಕರೆಯಿಂದ ತಯಾರುಮಾಡಿದ ಭಕ್ಷ್ಯವನ್ನಾಗಲಿ ಅಥವಾ ಮತ್ತೆ ಯಾವ ಉಪಹಾರವನ್ನೇ ಆಗಲಿ ಶೈವರಿಗೆ ಅರ್ಪಿಸಿಲ್ಲ. ॥೫॥

ಲಿಂಗಾರ್ಚನೆಗೆ ಸುಲಭವಾಗಲೆಂದು ಪ್ರಪಂಚದಲ್ಲಿ ಅನೇಕ ವಿಧವಾದ ಸಾಮಗ್ರಿಗಳನ್ನೂ, ಚಂದನ, ಕೇತಕೀಪುಷ್ಪ, ಕಾಡುಮಲ್ಲಿಗೆ ಮೊದಲಾದವುಗಳನ್ನೂ ಜಪಾಕುಸುಮಗಳನ್ನೂ ಸೃಷ್ಟಿ ಮಾಡಿರುತ್ತೇನೆ. ಈ ಸಾಮಗ್ರಿಗಳಿಂದ ಅನಾಯಾಸವಾಗಿ ಲಿಂಗಾರ್ಚನೆಯನ್ನು ಮಾಡಲು ಶಕ್ಯವಿದ್ದರೂ, ಈ ಮನುಷ್ಯನು ಒಂದು ಸಲವೂ ಅರ್ಚಿಸಿರುವುದಿಲ್ಲ. ಅಂದಮೇಲೆ ಈತನಿಗೆ ಸದ್ಗತಿಯು ಆಗಬೇಕೆಂದರೆ ಹೇಗಾಗುವುದು ? ॥೬॥

ಪ್ರಿಯೆ ಗೌರಿ ! ಈತನು ಸದಾ ಸ್ತ್ರೀಭೋಗವಿಲಾಸಗಳಲ್ಲಿಯೂ ದುಷ್ಟವ್ಯಸನಗಳಲ್ಲಿಯೂ ಮಗ್ನನಾಗಿದ್ದನು. ಒಂದು ಸಲವೂ ಶಿವಮಂದಿರ ದರ್ಶನವನ್ನು ಈತನು ಮಾಡಿರುವುದಿಲ್ಲ. ಅಥವಾ ಶಿವಭಕ್ತರ ಒಡನಾಟವನ್ನೂ, ಶಿವಕಥಾರ

ನ ಶಾಂಭವಜನಪ್ರಿಯಃ ಶಿವಕಥಾರಸಾಭಿಜ್ಞತಾ
ನ ಶಾಂಭವಿರತಃ ಕಥಂ ಭವತಿ ತಸ್ಯ ಕಾ ಸದ್ಗತಿಃ ॥೭॥

ಅನುಕ್ಷಣಮಯಂ ಮುದಾ ನಿಜಶರೀರನಾರೀಮುಖಂ
ವಿಲೋಕ್ಯ ಪುನರಾದರಾದಧಮಧೀಸ್ತದಾಲಿಂಗನಃ ।
ವಿನೀತಮಸಕೃದ್ದಿನಂ ರತಿವಿಶೇಷವಾರ್ತಾರಸೈಃ
ತತಃ ಕಥಮುಮೇ ಗತಿರ್ಭವತಿ ತಸ್ಯ ಪುಣ್ಯಾತ್ಮನಾಂ ॥೮॥

ನ ಬಿಲ್ವವನದರ್ಶನಂ ಕೃತಮನೇನ ದುಷ್ಟಾತ್ಮನಾ
ನ ಶಂಕರಪುರೀಕಥಾ ಕಥಮನೇನ ಸಾಕರ್ಣಿತಾ ।
ಅನೇನ ಮಣಿಕರ್ಣಿಕಾಪವನಸೇವನಂ ವಾ ಕಥಂ
ಕೃತಂ ನ ಗಿರಿಕನ್ಯಕೇ ಭವತಿ ತಸ್ಯ ಕಾ ಸದ್ಗತಿಃ ॥೯॥

ನಾಸ್ವಾದವನ್ನು ನೆರವೇರಿಸಿಲ್ಲ. ಅಥವಾ ಶಿವಭಕ್ತಳಾದ ಸ್ತ್ರೀಯ ಸಹವಾಸವನ್ನೂ ಮಾಡಿರುವುದಿಲ್ಲ. ಅಂದಮೇಲೆ ನರಕಯಾತನೆಯು ತಪ್ಪುವುದು ಹೇಗೆ? ಅಥವಾ ಸದ್ಗತಿಯು ತಾನೇ ಹೇಗಾದೀತು? ॥೭॥

ಈ ದುರ್ಬುದ್ಧಿಯುಳ್ಳ ಮನುಷ್ಯನು ಸದಾ ತನ್ನ ಶರೀರದ ಸೌಂದರ್ಯವನ್ನು ನೋಡಿಕೊಳ್ಳುವುದು, ಅಥವಾ ಸ್ತ್ರೀಯರ ಮುಖವನ್ನು ನೋಡುತ್ತಿರುವುದು, ಅಥವಾ ಅಂಧಕಾಮಾಸಕ್ತಿಯಿಂದ ಸ್ತ್ರೀಯರನ್ನು ಆಲಿಂಗಿಸಿಕೊಳ್ಳುವುದು ಇತ್ಯಾದಿ ವ್ಯಾಪಾರಗಳಿಂದಲೇ ತನ್ನ ಎಲ್ಲಾ ಆಯುಷ್ಯವನ್ನೂ ಕಳೆದಿದ್ದಾನೆ. ಕೇವಲ ಕಾಮಕಲೆಯಲ್ಲಿಯೂ ಸಂಭೋಗವಾರ್ತೆಯಲ್ಲಿಯೂ ಕಾಲವನ್ನು ಕಳೆದ ಈತನಿಗೆ ಕೇವಲ ಪುಣ್ಯಾತ್ಮರಿಗೆ ದೊರಕುವ ಸದ್ಗತಿಯು ಹೇಗೆ ಲಭಿಸೀತು? ॥೮॥

ಈ ಪಾಪಿಯು ತನ್ನ ಜನ್ಮದಲ್ಲಿ ಒಂದು ಸಲವೂ ಬಿಲ್ವವನವನ್ನು ನೋಡಲಿಲ್ಲ. ಶಂಕರಪುರಿಯ ಚರಿತೆಯನ್ನೂ ಕೇಳಲಿಲ್ಲ. ಅಥವಾ ಶಿವಕ್ಷೇತ್ರವಾದ ಮಣಿಕರ್ಣಿಕಾತೀರದ ವಾಯುವನ್ನೂ ಈತನು ಸೇವಿಸಿಲ್ಲ. ಈತನಿಗೆ ಸದ್ಗತಿಯು ಹೇಗೆ ಆದೀತು? ॥೯॥

ರುದ್ರಾಕ್ಷಮಾಲಾ ನ ಧೃತ್ಯೈವ ತೇನ
ದುರಾತ್ಮನಾ ತಸ್ಯ ನ ತತ್ರ ಭಕ್ತಿಃ ।
ಭಸ್ಮತ್ರಿಪುಂಡ್ರಂ ಚ ನ ತಸ್ಯ ಫಾಲೇ
ಬಾಲೇ ಗತಿಸ್ತಸ್ಯ ಕಥಂ ಮನೋಜ್ಞಾ ॥೧೦॥

ಪಂಚಾಕ್ಷರಾಭ್ಯಾಸರತೋ ನ ಜಾತೋ
ಜಾತೋಽಪಿ ಜಾತಪ್ರಸಭೇನ ಪಾಯಂ ।
ನ ಶಾಂಭವೇನಾನ್ವಿತ ಏವ ಮಾರ್ಗೇ
ತತಃ ಕಥಂ ವಾ ಗತಿರಸ್ಯ ಗೌರಿ ॥೧೧॥

ಉದಾರದಾರೋದರಹಾರಭಾರ
ಪರೀಕ್ಷಯಾ ಕಿಂ ಕ್ಷಯಮಾಪ ನಾಯುಃ ।
ಅಸ್ಯಾಂಬಿಕೇ ತೇನ ಗತಿಃ ಕಥಂ ವಾ
ಸತಾಂ ಭವಿತ್ರೀ ಬಹುಪುಣ್ಯಲಭ್ಯಾ ॥೧೨॥

---

ಈ ದುರಾತ್ಮನು ಒಂದು ಸಲವೂ ರುದ್ರಾಕ್ಷಮಾಲೆಯನ್ನು ಧರಿಸಿರಲಿಲ್ಲ. ಅಥವಾ ಈ ಶಿವಧರ್ಮಗಳಲ್ಲಿ ಆತನಿಗೆ ಭಕ್ತಿಶ್ರದ್ಧೆಯೂ ಇರಲಿಲ್ಲ. ಹಣೆಯಲ್ಲಿ ಕೇವಲಭಸ್ಮತ್ರಿಪುಂಡ್ರವನ್ನೂ ಹಚ್ಚದಿರುವ ಈತನಿಗೆ ಸದ್ಗತಿಯು ಲಭಿಸುವುದಾದರೂ ಹೇಗೆ? ||೧೦||

ಈ ಪಾಪಿಯು ಒಂದು ಸಲವೂ ಶಿವಪಂಚಾಕ್ಷರೀ ಮಹಾಮಂತ್ರವನ್ನು ಜಪಿಸಿರುವುದಿಲ್ಲ. ಕೇವಲ ಕಾಮವಿಲಾಸಗಳ ಸಡಗರದಲ್ಲಿಯೇ ತಲ್ಲೀನನಾಗಿದ್ದನು. ಈತನು ಎಂದೂ ಶಿವಭಕ್ತರ ಸಂಪರ್ಕ ಅಥವಾ ಸೇವೆ ಇದನ್ನು ಮಾಡಿರುವುದಿಲ್ಲ. ಆಕಸ್ಮಿಕವಾಗಿ ದಾರಿಯಲ್ಲಿ ಸಹ ಶೈವರ ಸಂದರ್ಶನವು ಈತನಿಗೆ ಆಗಿಲ್ಲ. ಹೀಗಿರಲು ಈತನಿಗೆ ನರಕಯಾತನೆಯು ಹೇಗೆ ತಪ್ಪೀತು? ||೧೧||

ಈತನು ತನ್ನ ಆಯುಷ್ಯವನ್ನೆಲ್ಲಾ ಕೇವಲ ತನ್ನ ಸ್ತ್ರೀಯರ ಎದೆಯ ಮೇಲೆ ಓಲಾಡುತ್ತಿದ್ದ ರತ್ನಹಾರಗಳ ಶೋಭೆಯನ್ನು ನೋಡುವುದರಲ್ಲಿಯೂ ಪರೀಕ್ಷಿಸುವುದರಲ್ಲಿಯೂ ಕಳೆದಿದ್ದಾನೆ. ಇಂತಹವನಿಗೆ ಅನೇಕ ಪುಣ್ಯಗಳಿಂದ ಲಭಿಸಬೇಕಾದ ಪುಣ್ಯಾತ್ಮರ ಸದ್ಗತಿಯು ಹೇಗೆ ತಾನೆ ಲಭಿಸೀತು? ||೧೨||

ಕದಾಪಿ ನೈವೋಚ್ಚರಿತಾ ಶಿವಾಖ್ಯಾ ಪ್ರಸಂಗತೋ ವಾ ಗಿರಿರಾಜಕನ್ಯೇ ।
ಅತಃ ಕಥಂ ವಾ ಗತಿರಸ್ಯ ಗೌರಿ ಮಹಾತ್ಮನಾಂ ಶಾಂಭವಪುಂಗವಾನಾಂ॥೧೩॥

ತತ್ಕೃತಾಘನಿಲಯೋ ನ ತಾವತಾ ವಹ್ನಿವರ್ಗನಿನಿಪಾತನೇನ ವಾ ।
ತಸ್ಯ ದುರ್ಗತಿರವಶ್ಯಮದ್ರಿಜೇ ಭಾವಿನೀ ಸ ತು ನ ಭಾವತಾಂ ಗತಃ ॥೧೪॥
ಭವಮಾರ್ಗಗಮನೇನ ಭಾವಿನೀ ಶೋಭನಾ ನ ಭವತಾಪವಿಚ್ಯುತಃ ।
ಭಾವಮಾರ್ಗವಿರಹೇ ಭವೇ ಭವೇ ದುರ್ಗತಿರ್ಭವತಿ ಸರ್ವಥಾ ನೃಣಾಂ॥೧೫॥

ಭಾವಾ ಏವ ಭವಂತಿ ಭಾಗ್ಯನಿಲಯಾಸ್ತೈರೇವ ಭಾಗ್ಯೋದಯಃ
ತೇಷಾಂ ತಾವದಶೇಷದೋಷವಿಷಯಾಭಾವೇ ಭವೋ ದುರ್ಲಭಃ ।
ತಸ್ಯ ಸ್ಯಾತ್ಸುಲಭಂ ಭವಾಬ್ಧಿತರಣಂ ಯದ್ಭೂಷಣಂ ಭಸ್ಮನಾ
ರುದ್ರಾಕ್ಷೈರಪಿ ಶಾಂಭವೋತ್ತಮಪದಾಂಭೋಜಸ್ಫುರದ್ರೇಣುಭಿಃ ॥೧೬॥

ಈ ಪಾಪಿಯು ಎಲ್ಲಿಯೂ ಪ್ರಾಸಂಗಿಕವಾಗಿಯಾದರೂ ಒಂದು ಸಲ ಶಿವ ನಾಮವನ್ನು ತನ್ನ ಬಾಯಿಂದ ಆಡಿರುವುದಿಲ್ಲ. ಆದ್ದರಿಂದ ಈತನಿಗೆ ಶೈವ ಶ್ರೇಷ್ಠರಿಗೆ ಮಾತ್ರ ಲಭಿಸುವ ಸದ್ಗತಿಯು ಹೇಗೆ ಪ್ರಾಪ್ತವಾಗುವುದು ? ||೧೩||

ಈ ಪಾಪಿಗೆ ಇನ್ನಿಷ್ಟು ಶಿಕ್ಷೆಮಾಡಿದರೂ, ಅಗ್ನಿಕುಂಡದಲ್ಲಿ ಎಸೆದರೂ, ಈತನ ಪಾಪವೂ ಸವೆಯುವುದಿಲ್ಲ ತೀರುವುದಿಲ್ಲ. ಈತನು ಇಂದೂ ಸಹ ಶಿವಭಕ್ತಿಯುತನಾಗಿಲ್ಲ. ಆದುದರಿಂದ ಈತನಿಗೆ ಇನ್ನೂ ದುರ್ಗತಿಯು ಆಗುವುದಿದೆ. ಆಗಿಯೇ ಆಗುತ್ತದೆ. ||೧೪||

ಕೇವಲ ಸಂಸಾರ ವ್ಯವಹಾರದಲ್ಲಿಯೇ ಆಸಕ್ತಿಯನ್ನು ವಹಿಸಿಕೊಂಡಿದ್ದರೆ ಎಂದೂ ಆ ಸಂಸಾರತಾಪದಿಂದ ಬಿಡುಗಡೆ ದೊರೆಯಲಾರದು. ಶಿವಧರ್ಮಗಳನ್ನು ತ್ಯಜಿಸಿ ಶಿವಭಕ್ತ ಮಾರ್ಗದಲ್ಲಿ ನಡೆಯದಿದ್ದರೆ ಪದೇಪದೇ ದುಃಖವು ಪ್ರಾಪ್ತನಾಗುವುದು. ಪುನಃಪುನಃ ಜನನ ಮರಣರೂಪ ಸಂಸಾರವು ಅಂಟಿಕೊಂಡೇ ಇರುವುದು. ಕ್ರಮೇಣ ಅತ್ಯಂತ ಅಧೋಗತಿಯೂ ಉಂಟಾಗುವುದು. ||೧೫||

ಸದಾಶಿವಭಕ್ತರೇ ಭಾಗ್ಯಗಳಿಗೆ ಮುಖ್ಯಾಶ್ರಯರಾಗಿರುವರು. ಅವರಲ್ಲಿಯೇ ಸೌಭಾಗ್ಯಗಳು ಉದಯಿಸಿ ಅಭಿವೃದ್ಧವಾಗುತ್ತವೆ. ಆ ಶೈವರಿಗೆ ಯಾವ ಪಾಪದೋಷಗಳೂ ಅಂಟುವುದಿಲ್ಲ. ಈರೀತಿ ಅವರು ಪವಿತ್ರಾತ್ಮರಾಗಿರುವುದರಿಂದ ಅತ್ಯಂತ ದುರ್ಲಭವಾಗಿದ್ದರೂ ಪರಮೇಶ್ವರನ ಪ್ರಸನ್ನತೆಯು ಅವರಿಗೆ ದೊರೆಯುತ್ತದೆ. ಆ

ಸಂಸಾರೇ ಖಲು ಕಷ್ಟಮೇವ ಬಹುಧಾ ತುಷ್ಟ್ಯಾತ್ಮನಾಂ ಸಂತತಿಃ
ನಷ್ಟಾ ದುಃಖಕುಲಾಕುಲಾನಲಕುಲಜ್ವಾಲಾಕುಲಾಲಿಂಗಿತಾ ।
ಲಿಂಗಾರಾಧನವರ್ಜನಾರ್ಜಿತಮಹಾಪಾಪೈರಪಾರೈಃ ಪರಂ
ಘೋರಾ ಸಾ ಖಲು ಯಾತನಾ ಪುನರವಿಶ್ರಾಂತಃ ಶ್ರಮಸ್ಸಂತತಂ ॥೧೭॥

ಹಾ ಹಾ ಹಾ ನರಕೇ ಪತಂತಿ ಬಹವೋ ಮೋಹಾದಹೋ ಜಾತು ವಾ
ಜನ್ಮಾನಂತರಮಂತರಾಯರಹಿತಂ ಶಾಂಗೇಷು ಲಿಂಗೇಷು ಮೇ ।
ಬಿಲ್ವಂ ವಾ ಜಲಮೇವ ವಾ ಸಕೃದುಮೇ ನ ಪ್ರಕ್ಷಿಪಂತ್ಯಾದರಾತ್
ಘೋರಾಪತ್ಕುಲಯಾತನಾಲಯಭಯಗ್ರಸ್ತಾಃ ಪರಂ ದುರ್ಜನಾಃ ॥೧೮॥

---

ಪರಮೇಶ್ವರನ ದಯೆಯಿಂದ ಆ ಶೈವರು ಸುಲಭವಾಗಿಯೇ ಸಂಸಾರಕ್ಲೇಶದಿಂದ ಮುಕ್ತರಾಗುವರು. ಆ ಶಿವಧರ್ಮಚಿಹ್ನೆಗಳಾದ ಭಸ್ಮರುದ್ರಾಕ್ಷಗಳನ್ನು, ಅಥವಾ ಶಾಂಭವರ ಚರಣರೇಣುವನ್ನು ಧರಿಸಿದರೂ ಈ ಸಂಸಾರದಿಂದ ಪಾರಾಗಬಹುದು. ॥೧೬॥

ಸಾಮಾನ್ಯವಾಗಿ ಈ ಸಂಸಾರದಲ್ಲಿ ಅದರಲ್ಲಿಯೂ ಶ್ರೀಮಂತನ ಪರಿವಾರದಲ್ಲಿ ಕಷ್ಟಪರಂಪರೆಗಳು ಸಂಭವಿಸುತ್ತಲೇ ಇರುತ್ತವೆ. ಅದರಲ್ಲಿಯೂ ಶಿವಲಿಂಗವನ್ನು ಯಾರು ಅರ್ಚಿಸುವುದಿಲ್ಲವೋ ಅವರ ವಂಶವಿಚಾರವಂತೂ ಹೇಳುವುದಕ್ಕೇ ಬೇಡ ವಾಗುತ್ತದೆ. ಶಿವಪೂಜೆಯನ್ನು ತ್ಯಾಗಮಾಡಿರುವವರನ್ನು ಸರ್ವದಾ ಮಹಾ ದುಃಖಗಳು ಬೆಂಕಿಯ ಜ್ವಾಲೆಯಂತೆ ಸುತ್ತುವರಿದುಕೊಂಡಿರುತ್ತವೆ. ಅವರು ಮಾಡಿಕೊಂಡ ಆ ಅಪಾರ ಪಾಪಗಳಿಗೆ ಸರಿಯಾಗಿ ಘನಘೋರವಾದ ನರಕ ಯಾತನೆ ಗಳನ್ನು ಅನುಭವಿಸುತ್ತಲೇ ಇರುತ್ತಾರೆ. ಆ ಯಾತನೆಯಿಂದ ಅವರಿಗೆ ಬಿಡುಗಡೆಯೇ ದೊರೆಯುವುದಿಲ್ಲ. ॥೧೭॥

ಅಯ್ಯಯ್ಯೋ ಏನು ಅನ್ಯಾಯ! ಏನು ಅವಿವೇಕ! ಮನುಷ್ಯರು ಎಷ್ಟು ಅಜ್ಞಾನದಿಂದ ದುಃಖದಲ್ಲಿ ಬೀಳುತ್ತಿರುವರಲ್ಲಾ! ತಮ್ಮ ಜೀವಮಾನದಲ್ಲಿ ಒಂದು ಸಲವೂ ಕೂಡ ನನ್ನ ಶಿವಲಿಂಗವನ್ನು ಬಿಲ್ವ, ಜಲಾದಿಗಳಿಂದ ಅರ್ಚಿಸಿ ಪುಣ್ಯವನ್ನಾ ರ್ಜಿಸದೆ, ಪಾಪಿಷ್ಠರಾಗಿ ನರಕದಲ್ಲಿ ಬೀಳುತ್ತಿದ್ದಾರೆ. ಆ ನರಕಕ್ಕೆ ಹೋದಮೇಲೆ ಅಲ್ಲಿನ ಯಾತನೆಗಳನ್ನೂ, ಇಹದಲ್ಲಿ ಆಪತ್ಪರಂಪರೆಗಳನ್ನೂ ಅನುಭವಿಸುವಾಗ ಮಾತ್ರ ಕಂಗಾಲಾಗಿ ದುಃಖಗಳನ್ನು ಅನುಭವಿಸುತ್ತಾರೆ. ಇಂತಹ ಕೃತಘ್ನರ ಮೇಲೆ ಹೇಗೆತಾನೆ ಏತಕ್ಕೆ ತಾನೇ ಕನಿಕರ ತೋರಿಸಬೇಕು? ॥೧೮॥

ಹಾ ಹಾ ಹಾ ಯಮಯಾತನಾರ್ಥಮಸಕೃತ್ಕುರ್ವಂತಿ ಪಾಪಂ ಜನಾಃ
ಸರ್ವೇ ಮದ್ವಿಮುಖಾಃ ಸುಖಭ್ರಮವಶಾದಶ್ರಾಂತಚಿತ್ತಾಸ್ತ್ವಿಮೇ ।
ನಾರೀಸಂಗತಿಮೇವ ದುರ್ಗತಿಕರಾಂ ನಾರಾಧಯಂತ್ಯಾದರಾತ್
ಲಿಂಗಂ ನಾರ್ಮದಮೇವ ಶರ್ಮದಮಹೋ ದುಷ್ಟಸ್ಯ ಕಾ ಸ್ಯಾದ್ಗತಿಃ ॥೧೯॥

ಏತೇಷಾಂ ನ ಮನಾಗಪೀಂದುಶಕಲಾಲಂಕಾರಲಿಂಗಸ್ಪೃಹಾ
ತಲ್ಲಿಂಗಸ್ಮರಣಂ ಚ ತದ್ಗುಣಕಥಾಬೋಧಃ ಕದಾಚಿನ್ನ ಹಾ ।
ತಸ್ಮಿನ್ ಬಿಲ್ವದಳಾರ್ಪಣಂ ಜಲಲವೈಸ್ತತ್ಪ್ರೋಕ್ಷಣಂ ವೀಕ್ಷಣಂ
ತಸ್ಮಾನ್ನುಕ್ಷಣಮುಪ್ಯತೋಽತಿಭಯದೇ ವಹ್ನೌ ನಿಬದ್ಧಾಸ್ತ್ವಿಮೇ ॥೨೦॥

ಏತೇ ಭಸ್ಮಕೃತತ್ರಿಪುಂಡ್ರರಹಿತಾಸ್ತೇನೈವ ಪೂರ್ಣಾರ್ಣವೈಃ
ಸಂಬದ್ಧಾಃ ಪತಿತಾಃ ಪುನಃಪುನರವಿಶಾ ಸಂತಪ್ತತಪ್ತಾರ್ಣವೇ ।

ಜನರು ಕೇವಲ ನರಕಯಾತನೆಯನ್ನು ಅನುಭವಿಸುವುದಕ್ಕಾಗಿಯೇ ಪಾಪಗಳನ್ನು ಮಾಡುವರು. ನನ್ನನ್ನು ಮರೆತು ಮುಗ್ಧಚಿತ್ತರಾಗಿ ಯಾರು ಪಾಪಗಳನ್ನು ಮಾಡುವರೋ ಅವರು ಖಂಡಿತವಾಗಿಯೂ ಯಾತನೆಗಳನ್ನು ಅನುಭವಿಸುವರು. ಈ ಜನರು ತಮಗೆ ಸಕಲ ಕಲ್ಯಾಣಗಳನ್ನು ಪ್ರದಾನಮಾಡಲು ಸಿದ್ಧವಾಗಿದ್ದರೂ, ನಾರ್ಮದಲಿಂಗವನ್ನು ಆರಾಧಿಸದೇ ಅತ್ಯಂತ ದುರ್ಗತಿಯನ್ನು ತಂದುಕೊಳ್ಳಲು ಸ್ತ್ರೀಯರೊಂದಿಗೆ ಭೋಗವಿಲಾಸಗಳಲ್ಲಿ ಮಗ್ನರಾಗುತ್ತಾರೆ. ಇಂಥ ದುಷ್ಟ ಪಾಪಿಷ್ಠರಿಗೆ ನರಕಯಾತನೆ ಆಗದೇ ಇದ್ದೀತೆ? ॥೧೯॥

ಈ ಪಾಪಿಗಳಿಗೆ ಆ ನನ್ನ ಚಂದ್ರಕಲಾಲಂಕೃತವಾದ ಲಿಂಗದಲ್ಲಿ ಭಕ್ತಿ ಇರುವುದಿಲ್ಲ. ಅಂತಹ ಪುಣ್ಯತಮವಾದ ಶಿವಲಿಂಗದ ಸ್ಮರಣೆಯನ್ನಾಗಲಿ ಅವರ ಚರಿತೆಯ ಶ್ರವಣವನ್ನಾಗಲಿ ಮಾಡುವುದಿಲ್ಲ. ಅಥವಾ ಬಿಲ್ವಾರ್ಚನೆ, ಜಲಾಭಿಷೇಕ, ಸಾದರವಾಗಿ ಶಿವಲಿಂಗದರ್ಶನ ಇವುಗಳನ್ನೂ ಇವರು ತ್ಯಜಿಸಿರುತ್ತಾರೆ. ಆದ್ದರಿಂದಲೇ ಇವರನ್ನು ಹಿಗ್ಗಟ್ಟಿ ಮುಗ್ಗಟ್ಟಿ ಬಂಧಿಸಿ ಅಗ್ನಿಯಲ್ಲಿ ಶಿಕ್ಷಿಸುವುದು. ॥೨೦॥

ಈ ಪಾಪಿಗಳು ನನ್ನನ್ನು ನಿಂದಿಸುವರು. ಶಿವಧರ್ಮಗಳೊಂದನ್ನೂ ಇವರು ಆಚರಿಸುವುದಿಲ್ಲ. ಭಸ್ಮತ್ರಿಪುಂಡ್ರವೇ ಮೊದಲಾದವುಗಳನ್ನು ಧರಿಸುವುದಿಲ್ಲ. ಆದ್ದರಿಂದ ಅವರನ್ನು ಯಮದೂತರು ಬೆಂಕಿಯ ಸಮುದ್ರದಲ್ಲಿ ಮುಳುಗಿಸುವರು.

ಸ್ಥಿತ್ವಾ ತತ್ರ ಪಿಬಂತಿ ಪಶ್ಯ ಗಿರಿಜೇ ತೇಷಾಂ ವಿಮೋಕಃ ಕದಾ
ಸಾ ಚಿಂತಾಪಿ ನ ಜಾಯತೇ ಮಮ ಯತಸ್ತೇ ಶಂಕರದ್ವೇಷಿಣಃ ॥೨೦॥

ಸಕೃದ್ವಾ ಮನ್ನಾಮಸ್ಮರಣಕರಣಂ ತಸ್ಯ ಕರಣಂ
ಕ್ಷಣಂ ವಾ ಮಲ್ಲಿಂಗಸ್ಮರಣವಿಮುಖೋ ಯೋ ಭುವಿ ಭವೇತ್ ।
ಸ ವಿವಾಘೋರೇಽಸ್ಮಿನ್ ಪತತಿ ನರಕೇ ನಿರ್ಗತಿಕಥಾ
ನ ತೇಷಾಂ ದುಷ್ಟಾನಾಮಿತಿ ಮತಿರಭೂದೇವ ಗಿರಿಜೇ ॥೨೨॥

ವೃಥಾಲಾಪೈರ್ನೀತಂ ಗಿರಿವರಸುತೇ ತೇನ ತು ವಯೋ
ನ ಮನ್ನಾಮಪ್ರೀತ್ಯಾ ಸ್ಮೃತಮಪಿ ಕದಾಚಿನ್ಮುಹುರಪಿ ।
ಸಕೃದ್ವಾ ತೇನಾಯಂ ಜ್ವಲನನಿಲಯಃ ಪಶ್ಯ ಸದಯೋ
ನ ತೇನಾರ್ಚಾ ಜ್ಞಾತಾ ಕಥಮಪಿ ಚ ಲಿಂಗೇಷು ಕುಸುಮೈಃ ॥೨೩॥

---

ಬೇಕಾದರೆ ಆ ಬೆಂಕಿಯನ್ನೇ ಆ ಪಾಪಿಗಳು ಕುಡಿಯಬೇಕು. ಇಂತಹ ಶಿವದ್ವೇಷಿಗಳಿಗೆ ಎಂದಾದರೂ ಈ ಯಾತನೆಯಿಂದ ಮುಕ್ತಿಯುಂಟೇ? ಸರ್ವಥಾ ಇಲ್ಲ. ಇವರು ಹೀಗೆಯೇ ನಾಶವಾಗುತ್ತಿರಬೇಕು. ॥೨೧॥

ನನ್ನನ್ನು ಒಂದು ಸಲವೂ ಈ ಪಾಪಿಗಳು ಸ್ಮರಿಸುವುದಿಲ್ಲ. ನನ್ನ ಲಿಂಗವನ್ನು ಒಂದು ಕ್ಷಣಕಾಲವಾದರೂ ಧ್ಯಾನಿಸುವುದಿಲ್ಲ. ಇಂಥ ಪಾಪಿಗಳೇ ಈ ಘೋರವಾದ ನರಕದಲ್ಲಿ ಬಿದ್ದು ಭಯಂಕರವಾದ ಯಾತನೆಗಳನ್ನು ಅನುಭವಿಸುವರು. ಇವರಿಗೆ ಅಲ್ಲಿಂದ ಬಿಡುಗಡೆ ಆಗುವುದೆಂಬ ಯೋಚನೆಯೇ ಇಲ್ಲ. ॥೨೨॥

ಪ್ರಿಯೆ, ಗಿರಿಜೆ, ಈ ಶಿಕ್ಷೆಯನ್ನನುಭವಿಸುತ್ತಿರುವ ಪಾಪಿಯು ತನ್ನ ಆಯುಸ್ಸನ್ನೆಲ್ಲಾ ಕೇವಲ ನಿರರ್ಥಕವಾದ ಮಾತುಗಳಿಂದಲೇ ಕಳೆದಿದ್ದಾನೆ. ನನ್ನ ಪುಣ್ಯನಾಮಗಳನ್ನು ಎಂದೂ ಸ್ಮರಿಸಿರುವುದಿಲ್ಲ. ಅನೇಕಾವರ್ತಿ ಸ್ಮರಿಸುವುದಂತೂ ಇರಲಿ, ಒಂದು ಸಲವೂ ಸ್ಮರಿಸಿಕೊಂಡಿಲ್ಲ. ಈತನಿಗೆ ಶಿವಲಿಂಗಕ್ಕೆ ಹೂಗಳಿಂದ ಪೂಜೆ ಮಾಡಬೇಕೆಂಬ ವಿಷಯವೇ ಮನಸ್ಸಿಗೆ ಬರಲಿಲ್ಲ. ಅಂದಮೇಲೆ ಈತನು ಅಗ್ನಿಮಾರ್ಗನರಕದಲ್ಲಿ ಬೀಳದೇ ಮತ್ತೇನಾದಾನು? ॥೨೩॥

ಏತದ್ಗೃಹೇಷು ಧನಧಾನ್ಯಸಮೃದ್ಧಿರಾಸೀತ್
ಧಾನ್ಯೇನ ಲಿಂಗಮುಸಕೃತ್ಸಕೃದೇವ ವಾಯಂ ।
ನಾರಾಧನೋದ್ಯತಮತಿರ್ಮಮ ತುಂಗಲಿಂಗೇ
ತೇನಾಯಮತ್ರ ಪತಿತೋ ಯಮಯಾತನಾಯಾಂ ॥೨೪॥

ದೀಪೋ ನ ತೇನ ರಚಿತಶ್ಶಿವಮಂಟಪಾಂತಃ
ದೀಪ್ತಿರ್ಯಥಾ ತಮಸಿ ನ ಪ್ರಣತಂ ಚ ಲಿಂಗಂ ।
ತೇನಾಯಮಾಯಸಮಹಾನಲತಪ್ತಕುಂಡೇ
ಕ್ಷಿಪ್ತಃ ಪ್ರಧಾವತಿ ಪುನಃ ಪತನಾಯ ಗೌರಿ ॥೨೫॥

ಶ್ರೀವಿಶ್ವನಾಥ ಗಿರಿಜಾರಮಣ ತ್ರಿನೇತ್ರ
ಶ್ರೀಚಂದ್ರಶೇಖರ ಶಿವೇತ್ಯಪಿ ನಾಮವಲ್ಲೀ ।
ನಾಕರ್ಣಿತೇತಿ ಕಶಯಾ ನಿಹತಸ್ಸ ತಾವತ್
ಅಗ್ನೌ ಪ್ರಯಾತಿ ತಪತಿ ಪ್ರಲಯೋಽಸ್ಯ ಜಾತಃ ॥೨೬॥

ಈ ಪಾಪಿಯ ಮನೆಯಲ್ಲಿ ಧನಧಾನ್ಯಗಳಿಗೇನೂ ಕೊರತೆ ಇರಲಿಲ್ಲ. ಎಲ್ಲ ಸಂಪತ್ತುಗಳೂ ಸಮೃದ್ಧವಾಗಿದ್ದುವು. ಹಾಗೆ ಅನಾಯಾಸವಾಗಿ ದೊರೆತಿರುವ ಧಾನ್ಯಾದಿಗಳಿಂದಲೂ ಲಿಂಗಾರ್ಚನೆಯನ್ನು ಮಾಡದೇ ದ್ರೋಹಿಯಾಗಿದ್ದಾನೆ. ಆ ಪಾಪ ಮಾಡಿದ್ದರಿಂದಲೇ ಇಂದು ಈ ಘೋರನರಕದಲ್ಲಿ ಯಾತನೆ ಅನುಭವಿಸುತ್ತಿದ್ದಾನೆ. ||೨೪||

ಕತ್ತಲೆವೇಳೆಯಲ್ಲಿ ಈತನು ಶಿವಮಂಟಪದಲ್ಲಿ ದೀಪಮಾಲೆಯನ್ನು ಹತ್ತಿಸಲಿಲ್ಲ. ಅಥವಾ ಬೆಳಕಿನಲ್ಲಿ ವಿರಾಜಿಸುತ್ತಿದ್ದ ಶಿವಲಿಂಗವನ್ನು ಒಂದು ಸಲವೂ ವಂದಿಸಿಲ್ಲ. ಆದ್ದರಿಂದ ಈತನು ಬೆಂಕಿಯಿಂದ ತುಂಬಿದ ಕಬ್ಬಿಣಮೂಸೆಯಲ್ಲಿ ತಳ್ಳಲ್ಪಟ್ಟಿದ್ದಾನೆ. ಅಲ್ಲಿಂದ ಓಡಿಹೋಗಬೇಕೆಂದು ಪ್ರಯತ್ನಪಡುತ್ತಿದ್ದಾನೆ. ಆದರೆ ಆತನಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಮತ್ತೆ ಅಲ್ಲಿಯೇ ಬಿದ್ದು ಒದ್ದಾಡುತ್ತಾನೆ. ||೨೫||

ಶ್ರೀವಿಶ್ವನಾಥ, ಗಿರಿಜಾರಮಣ ಎಂದು ಮುಂತಾಗಿರುವ ನನ್ನ ದಿವ್ಯನಾಮಾವಳಿಯನ್ನು ಈತನು ಎಂದೂ ಕೇಳಿಲ್ಲವೆಂದು ಯಮದೂತರು ಚಾಟಿಯಿಂದ ಹೊಡೆಯುತ್ತಾರೆ. ಆ ಪೆಟ್ಟನ್ನು ತಿನ್ನಲಾರದೇ ಹೆದರಿ ಓಡಿಹೋಗುತ್ತಾ ಮತ್ತೆ

ಲಿಂಗೇ ನ ಯೇನ ನವಬಿಲ್ವದಲಂ ಪ್ರದತ್ತಂ
ತಸ್ಯಾಪಿ ಕಿಂ ಭವತಿ ದುರ್ಗತಿರೇವ ನಾತಃ ।
ಏತಸ್ಯ ಘೋರನರಕಾಲಯತೋ ನಿವೃತ್ತಿಃ
ನಾಸ್ತೀತಿ ನಿಶ್ಚಿತಮತಃ ಕುಗತಿರ್ಭವಿತ್ರೀ ॥೨೭॥

ಯೈರ್ನಾರ್ಚಿತಂ ಕನಕಚಂಪಕಬಿಲ್ವಪತ್ರೈಃ
ಲಿಂಗಂ ಮದೀಯಮಸಕೃತ್ಸಕೃದೇವ ವಾ ತೈಃ ।
ಪ್ರಾಪ್ತವ್ಯ ಏವ ಶುನಕೀಜಠರೇ ನಿವಾಸಃ
ಪಶ್ಚಾನ್ಮಹಾನರಕವಾಸಜಶೋಕರಾಶಿಃ ॥೨೮॥

ಪ್ರಾತರ್ನ ಯಸ್ಯ ಶಿವಲಿಂಗಸಮರ್ಚನೇನ
ಪ್ರಕ್ಷೀಣಮಾಯುರಸಕೃತ್ಸಕೃದೇವ ವಾಯಂ ।
ನಿತ್ಯಂ ಮಹಾನರಕಭೋಗಮವಾಪ್ಯ ಭೂಯೋ
ಭೂಮಂಡಲೇ ಜನಿಮುಪೈತಿ ಶುನೀಷು ಗೌರಿ ॥೨೯॥

ಬೆಂಕಿಯಲ್ಲೇ ಬೀಳುತ್ತಾನೆ. ಹೀಗೆಯೇ ಈತನಿಗೆ ಈಗ ನಾಶಕಾಲವು ಒದಗಿದೆ. ||೨೬||

ಶಿವಲಿಂಗಕ್ಕೆ ಬಿಲ್ವಾದಿಗಳಿಂದ ಯಾವಾತನು ಒಂದು ಸಾರಿಯಾದರೂ ಅರ್ಚನೆ ಮಾಡಿರುವುದಿಲ್ಲವೋ ಆತನಿಗೆ ದುರ್ಗತಿಯಾಗದೇ ಇರುತ್ತದೆಯೇ ? ಅಂತಹವನಿಗೆ ದುರ್ಗತಿಯೇ ನಿಶ್ಚಿತವಾಗಿರುವುದರಿಂದ ಈತನಿಗೂ ನರಕದಿಂದ ಮೋಕ್ಷವಿರುವುದಿಲ್ಲ. ||೨೭||

ಯಾರು ಶಿವಲಿಂಗಕ್ಕೆ ಹೊಂಬಣ್ಣವಾದ ಸಂಪಿಗೆ ಹೂವು, ಬಿಲ್ವಪತ್ರೆ ಮುಂತಾದವುಗಳನ್ನು ಸಮರ್ಪಿಸಿ ಪದೇ ಪದೇ ಆರಾಧಿಸುವುದಿಲ್ಲವೋ, ಅವರೂ ಇದೇರೀತಿಯಾಗಿ ದುರ್ಗತಿಯನ್ನು ಪಡೆಯುವರು. ಅಲ್ಲದೆ ಅವರು ನಾಯಿಜನ್ಮದಲ್ಲಿ ಹುಟ್ಟುವರು. ಮತ್ತೆ ಮತ್ತೆ ನರಕವಾಸವನ್ನೂ ಘೋರ ಯಾತನೆಗಳನ್ನೂ ಅನುಭವಿಸುವರು. ||೨೮||

ಯಾವ ಮನುಷ್ಯನು ತನ್ನ ಆಯುಸ್ಸನ್ನೆಲ್ಲಾ ಪ್ರಾತಃಕಾಲದಲ್ಲಿ ಪ್ರತಿದಿನವೂ ಶಿವಲಿಂಗವನ್ನು ಪೂಜಿಸದೇ, ದರ್ಶನಮಾಡದೇ ವೃಥಾ ಕಳೆಯುತ್ತಾನೆಯೋ, ಆತನು

ಭಕ್ತ್ಯಾ ಯೈರ್ನ ಕೃತಾ ಪ್ರಣಾಮರಚನಾ ಪ್ರಾತಃ ಪ್ರದೋಷೇಷು ವಾ
ಮಲ್ಲಿಂಗೇಷು ನ ತೇ ಪ್ರಯಾಂತಿ ಬಹುಧಾ ಸದ್ಗರ್ಭವಾಸಂ ಪರಂ ।
ಕಿಂ ತ್ವತ್ಯಾತುರಸೂಕರೀಕ್ರಿಮಿಕುಲವ್ಯಾಪ್ತೇಷು ಗರ್ಭೇಷು ತೇ
ಜನ್ಮ ಪ್ರಾಪ್ಯ ಪುನಃಪುನಃ ಪ್ರತಿಭವೇ ದುಃಖಾಲಯಾಸ್ಸಂತತಂ ॥೩೦॥

ಕಾಲಃ ಪಶ್ಯತಿ ಕಾಲಕಾಲವಿಮುಖಾನ್ ಕೇ ವಾ ಕಲೌ ತಾನಹಂ
ಜ್ವಾಲಾವ್ಯಾಕುಲವಹ್ನಿಶೈಲನಿಲಯಾನ್ ಪಶ್ಯಾಮಿ ದಂಸ್ಯಾನ್ನಿವ ।
ಇತ್ಯಾಲೋಚ್ಯ ಚರಾಚರಂ ಚರತಿ ಕಿಂ ನೇತಿ ಪ್ರಪಶ್ಯಾದರಾತ್
ಕಾಲಂ ಕಾಲವಿಶೇಷದೋಷನಿವಹಾನ್ ಪಶ್ಯಾದರಾದಂಬಿಕೇ ॥೩೧॥

ಅನೇಕಾನೇಕ ನರಕಯಾತನೆಗಳನ್ನು ಅನುಭವಿಸಿ ಪುನಃ ಪುನಃ ದುಃಖಾನುಭವಕ್ಕಾಗಿ ಭೂಲೋಕದಲ್ಲಿ ನಾಯಿಯಾಗಿ ಹುಟ್ಟುವನು. ॥೨೯॥

ಯಾರು ನನ್ನ ಶಿವಲಿಂಗಕ್ಕೆ ಪ್ರದೋಷಸಮಯದಲ್ಲಿಯಾಗಲಿ, ಪ್ರಾತಃಕಾಲದಲ್ಲಿಯಾಗಲಿ ಪೂಜೆಯನ್ನು ಮಾಡುವುದಿಲ್ಲವೋ ಅಥವಾ ಯಾರು ಭಕ್ತಿಯಿಂದ ಸಾಷ್ಟಾಂಗ ಪ್ರಣಾಮವನ್ನೂ ಮಾಡುವುದಿಲ್ಲವೋ, ಅವರು ಎಂದೂ ಉತ್ತಮಜನ್ಮವನ್ನು ಪಡೆಯುವುದಿಲ್ಲ. ಅಂತಹ ಪಾಪಿಗಳು ಹೀನಜನ್ಮದಲ್ಲಿಯೇ ಜನಿಸುವರು. ಕೇವಲ ಕ್ರಿಮಿಗಳಿಂದ ಕೂಡಿರುವ ರೋಗಿಷ್ಟವಾದ ಹಂದಿಯ ಗರ್ಭದಲ್ಲಿ ವಾಸ ಮಾಡಿ ಮತ್ತೆ ಮತ್ತೆ ಅನೇಕ ಜನ್ಮಗಳಲ್ಲಿಯೂ ದುಃಖವನ್ನೇ ಅನುಭವಿಸುವರು. ॥೩೦॥

ಯಾರು ಯಾರು ಶಿವಾರಾಧನೆಯನ್ನು ತ್ಯಾಗಮಾಡಿ ಪಾಪಿಗಳಾಗಿದ್ದಾರೆಂಬುದನ್ನು ಸದಾ ಯಮನು ನೋಡುತ್ತಲೇ ಇರುತ್ತಾನೆ. ಕಲಿಯುಗದ ಇಂಥ ಪಾಪಿಗಳನ್ನು ನಾನೂ ನೋಡುತ್ತಿದ್ದೇನೆ. ಇವರಿಗೆ ಆ ಅಗ್ನಿಮಾರ್ಗ ನರಕದಲ್ಲಿಯೇ ಶಿಕ್ಷೆ ಕೊಡಬೇಕೆಂಬ ನನ್ನ ಸಂಕೇತವನ್ನು ಅರಿತುಕೊಂಡೇ ಯಮನು ಅವರಿಗೆ ಅದೇ ರೀತಿ ಯಾತನೆಗಳನ್ನು ವಿಧಿಸುತ್ತಾನೆ. ಈ ನನ್ನ ಅಪ್ಪಣೆಯನ್ನು ಸರಿಯಾಗಿ ಪಾಲಿಸುವುದಕ್ಕಾಗಿ ಯಮನು ಸದಾ ಈ ಚರಾಚರಾತ್ಮಕವಾದ ಜಗತ್ತಿನಲ್ಲೆಲ್ಲಾ ಸುತ್ತುತ್ತಿದ್ದಾನೆ, ನೋಡು. ಹಾಗೆಯೇ ಆ ಪಾಪಿಗಳೂ ತಮ್ಮ ಪಾಪಕ್ಕೆ ಸರಿಯಾದ ಶಿಕ್ಷೆಯನ್ನು ಅನುಭವಿಸುತ್ತಾ ಇದ್ದಾರೆಯೋ ಇಲ್ಲವೋ ನೋಡು. ॥೩೧॥

ಯಮೋ ಧರ್ಮವಿಚಾರಜ್ಞೋ ಧರ್ಮರಾಜ ಇತಿ ಸ್ಮೃತಃ ।
ಅತಿಕ್ರೂರೋಽಪಿ ನ ಕ್ರೂರಂ ಶಾಂಕರಾನ್ ಪ್ರತಿ ಸಾದರಃ ॥೩೨॥

ಶಾಂಕರಾಣಾಮಯಂ ಮಿತ್ರಂ ಕಥಂಚಿದಪಿ ತೇಷ್ವಯಂ ।
ನ ಕ್ರೂರದೃಷ್ಟಿಂ ತನುತೇ ತೇಷು ಶಾಂತಸ್ಸದಾ ಶಿವೇ ॥೩೩॥

ಅನಂತಜನ್ಮನಾಮಂತೇ ಯದಿ ಯಃ ಕಶ್ಚಿದಾದರಾತ್ ।
ಶಾಂಕರಸ್ತಂ ವಿಲೋಕ್ಯಾಪಿ ಪ್ರಣಮತ್ಯಯಮಾದರಾತ್ ॥೩೪॥

ಪಾಪರಾಶಿಃ ಕ್ಷಣೇನೈವ ತೇನ ತಾವತ್ಪರೀಕ್ಷ್ಯತೇ ।
ತತ್ರಸ್ಯಾದ್ಯದಿ ಪುಣ್ಯಾಂಶಸ್ತದಾ ಗೃಹ್ಣಾತಿ ತಂ ಯಮಃ ॥೩೫॥

ಯಮನು ಎಲ್ಲಾ ಧರ್ಮವಿಚಾರಗಳನ್ನೂ ತಿಳಿದಿದ್ದಾನೆ. ಆದ್ದರಿಂದಲೇ ಆತನನ್ನು ಯಮಧರ್ಮರಾಜನೆಂದು ಹೇಳುವರು. ಅವನು ಪಾಪಿಗಳ ವಿಷಯದಲ್ಲಿ ಅತ್ಯಂತ ಕ್ರೂರನಾಗಿರುತ್ತಾನೆ. ಆದರೆ ಶಿವಭಕ್ತರ ವಿಷಯದಲ್ಲಿ ಅತ್ಯಂತ ಕೋಮಲನು. ॥೩೨॥

ಪರಶಿವಭಕ್ತರಲ್ಲಿ ಯಮನು ಪರಮ ಮೈತ್ರಿಯಿಂದ ವರ್ತಿಸುತ್ತಾನೆ. ಆ ಶೈವರಲ್ಲಿ ಎಂದೂ ಕಾಠಿನ್ಯವಹಿಸುವುದಿಲ್ಲ. ಅವರಲ್ಲಿ ಸದಾ ಪ್ರಸನ್ನನಾಗಿರುತ್ತಾನೆ. ॥೩೩॥

ಶಾಂಭವಶ್ರೇಷ್ಠರು ಎಲ್ಲಿಯಾದರೂ ಅಲ್ಪ ಸ್ವಲ್ಪ ಪಾಪಸಂಬಂಧದಿಂದ ಯಾವಾಗಲಾದರೂ ಯಮನನ್ನು ಸಂದರ್ಶಿಸಿದರೆ, ಆಗಲೂ ಸಹ ಯಮನು ಅವರನ್ನು ಶಿಕ್ಷಿಸುವುದಿಲ್ಲ. ಪ್ರತ್ಯುತ ಆದರದಿಂದ ಅವರಿಗೆ ನಮಸ್ಕಾರವನ್ನು ಮಾಡುತ್ತಾನೆ. ॥೩೪॥

ಯಮನಿಗೆ ಮನುಷ್ಯನನ್ನು ನೋಡಿದ ಕೂಡಲೇ ಆತನ ಪಾಪಪುಣ್ಯಗಳೆಷ್ಟು ಎಂಬುದು ಗೊತ್ತಾಗಿಹೋಗುತ್ತದೆ. ಅದನ್ನು ಪರೀಕ್ಷಿಸಿಯೇ ಶಿಕ್ಷೆಯನ್ನು ವಿಧಿಸುತ್ತಾನೆ. ಯಾರ ಪುಣ್ಯವು ಕೇವಲ ಅಲ್ಪವಾಗಿದ್ದು ಪಾಪವು ಅಪಾರವಾಗಿರುತ್ತದೆಯೋ ಅವರನ್ನೇ ಶಿಕ್ಷಿಸಲು ಯಮನು ನರಕಕ್ಕೆ ಸೆಳೆದುಕೊಂಡು ಹೋಗುತ್ತಾನೆ. ॥೩೫॥

ವಿಭೂತ್ಯನುದ್ಧೂಲನತತ್ಪರಾಣಾಂ
ಸ ಗೌರಿ ತಾವತ್ಪ್ರಲಯಾನಲಾಭಃ ।
ತದ್ದೃಷ್ಟಿಪಾತಾತ್ಪ್ರಲಯಂ ಪ್ರಯಾಂತಿ
ತೇ ತಾವದರ್ಧಕ್ಷಣಲೇಶಲೇಶೇ

ತ್ರಿಪುಂಡ್ರಲೇಖಾಲಲಿತಂ ಚ ಫಾಲಂ
ತೇಷಾಂ ಯಮೋ ಮೃತ್ಯುರಮೃತ್ಯುರೇವ ।
ತ್ರಿಪುಂಡ್ರರೇಖಾತಿವಿಶುದ್ಧಫಾಲಾನ್
ಶೈವಾನ್ ಪ್ರತಿ ಪ್ರತ್ಯಹಮೇಕ ಏವ ॥೩೭॥

ನ ತಸ್ಯ ತಾವತ್ಪ್ರಲಯೇಽಪಿ ಗೌರಿ
ನ್ಯೂನಾ ಶಿವಾಚಾರರತೇಷು ತೇಷು ।
ಪ್ರೋಜ್ಯತ್ವಬುದ್ಧಿಃ ಪ್ರತಿವಾಸರಂ
ಸ್ಯಾದನುಕ್ಷಣಂ ರಕ್ಷಕತಾಮತಿಶ್ಚ ॥೩೮॥

ಯಾರು ಭಸ್ಮವನ್ನು ಧಾರಣೆಮಾಡುವುದಿಲ್ಲವೋ ಅವರಿಗೆ ಆ ಯಮನು ಪ್ರಲಯಕಾಲದ ಅಗ್ನಿಸ್ವರೂಪನಾಗುತ್ತಾನೆ. ಇಂಥ ಭಯಂಕರಸ್ವರೂಪನಾದ ಯಮನು ನೋಡಿದ ಕ್ಷಣದಲ್ಲಿಯೇ ಪಾಪಿಗಳು ಪ್ರಲಯವನ್ನೇ ಹೊಂದುತ್ತಾರೆ. ||೩೬||

ಯಮನು ಸಾಕ್ಷಾತ್ ಮೃತ್ಯುಸ್ವರೂಪನಾಗಿದ್ದರೂ ಶೈವರಿಗೆ, ಭಸ್ಮತ್ರಿಪುಂಡ್ರವನ್ನು ಧರಿಸಿದವರಿಗೆ ಆತನು ಮೃತ್ಯುವೆನಿಸುವುದಿಲ್ಲ. ತ್ರಿಪುಂಡ್ರಭಸ್ಮಧಾರಣೆಯಿಂದ ಪವಿತ್ರರಾದ ಶೈವರಲ್ಲಿ ಯಮನು ಸದಾ ಏಕರೂಪವಾಗಿ ಪ್ರಸನ್ನನಾಗಿರುತ್ತಾನೆ. ||೩೭||

ಯಮನು ಶಿವಧರ್ಮಗಳನ್ನು ಅನುಷ್ಠಾನ ಮಾಡತಕ್ಕವರು ತನಗೆ ಪೂಜ್ಯರೆಂದೂ, ಅವರನ್ನು ತಾನು ಸದಾ ಕಾಪಾಡಿ ಲಾಲಿಸಬೇಕೆಂದೂ ತಿಳಿದುಕೊಂಡಿದ್ದಾನೆ. ಈ ವಿಚಾರವನ್ನು ಎಂದೂ, ಪ್ರಲಯಕಾಲದಲ್ಲಿಯೂ ಮರೆಯುವುದಿಲ್ಲ. ||೩೮||

ಸ ಶಾಂಭವದ್ರೋಹರತಾಶನಿಸ್ಸ್ಯಾ
ದಶಾಂಕರಾಪಾರವನಾನಲೋಽಪಿ ।
ಅಶಾಂಭವಾಬ್ಧೇರ್ಬಡಬಾನಲೋಽಪಿ
ಸ ಗೌರಿ ಮಿತ್ರಂ ಮಮ ನಾತ್ರಚಿತ್ರಂ ॥೩೯॥

ಲಿಂಗಾರ್ಚಕಾರಾಧಕಸೇವಕಾನ್ವಾ
ದೃಷ್ಟ್ವಾಪ್ರಯತ್ನೇನ ನತೋ ನಯೇನ ।
ಕೃತಾಂಜಲಿಸ್ಸ್ಯಾದತ ಏವ ಮಿತ್ರಂ
ಯಮೋ ಮದೀಯಂ ಗಿರಿರಾಜಕನ್ಯೇ ॥೪೦॥

ಯನ್ಮಂದಿರೇ ನಾರ್ಮದಲಿಂಗಪೂಜಾ
ತನ್ಮಂದಿರಸ್ಥಾನ್ ಸ ಯಮೋ ಗವಾದೀನ್
ವಿಲೋಕ್ಯ ದೂರಾತ್ಪ್ರಣತೋಽತಿನಮ್ರಃ
ಕರೋತಿ ತಸ್ಯ ಸ್ತುತಿಮಾದರೇಣ ॥೪೧॥

---

ಆ ಯಮನು ಯಾರು ನನ್ನ ಭಕ್ತರಿಗೆ ದ್ರೋಹಮಾಡುವರೋ ಅವರಿಗೆ ಸಾಕ್ಷಾತ್ ಸಿಡಿಲುಸ್ವರೂಪನಾಗಿದ್ದಾನೆ. ನನ್ನನ್ನು ಅರ್ಚಿಸದೇ ಅಶಾಂಕರರಾಗಿರುವವರಿಗೆ ಕಾಡುಗಿಚ್ಚುಸ್ವರೂಪನಾಗಿದ್ದಾನೆ. ಅಶಾಂಕರವೆಂಬ ಸಮುದ್ರಕ್ಕೆ ಯಮನು ಬಡಬಾಗ್ನಿಸ್ವರೂಪನಾಗಿದ್ದಾನೆ. ಇದರಲ್ಲೇನು ಆಶ್ಚರ್ಯ? ಯಮನು ನನ್ನ ಮಿತ್ರನೇ ಆಗಿದ್ದಾನಷ್ಟೆ. ॥೩೯॥

ಶಿವಲಿಂಗಪೂಜೆಯನ್ನೂ ಅಥವಾ ಆ ಭಕ್ತರ ಸೇವಕರನ್ನೂ ಸಹ ಯಮನು ಕಂಡಕೂಡಲೇ ವಿನಯದಿಂದ ತಲೆಬಾಗಿ ಸಾಷ್ಟಾಂಗ ಪ್ರಣಾಮಮಾಡುವನು. ಹೀಗೆ ನನ್ನ ಭಕ್ತರಲ್ಲಿ ವಿನೀತನಾಗಿರುವುದರಿಂದಲೇ ಯಮನು ನನ್ನ ಮಿತ್ರನು. ॥೪೦॥

ಯಾವ ಮನೆಯಲ್ಲಿ ನಾರ್ಮದ ಶಿವಲಿಂಗಕ್ಕೆ ಅಭಿಷೇಕ ಆರಾಧನೆಗಳು ನಡೆಯುತ್ತಿರುವುವೋ, ಆ ಮನೆಯವರನ್ನು ಅಥವಾ ಆ ಮನೆಯ ಹಸುವೇ ಮೊದಲಾದವರನ್ನು ಕಂಡರೂ ಸಹ ಯಮನು ದೂರದಿಂದಲೇ ತಲೆಬಾಗಿ ನಮಸ್ಕರಿಸಿ ಸ್ತುತಿಸುವನು. ॥೪೧॥

ಧನ್ಯಂ ಗೃಹಂ ತಸ್ಯ ತದೇವತಾವ
ತ್ಪವಿತ್ರಮತ್ರ ತ್ರಿಪುರಾಂತಕಸ್ಯ ।
ಲಿಂಗಂ ಮನೋಜ್ಞಂ ವಸತೀತಿ ಮತ್ವಾ
ನಮತ್ಯಯಂ ಮಂದಿರಮಪ್ಯಪಾರಂ ॥೪೨॥

ತನ್ಮಂದಿರಂ ಶಂಕರಮಂದಿರತ್ವಾದ್ಬೃಂದಾರವಂದ್ಯಂ ಮುನಿವೃಂದವಂದ್ಯಂ ।
ತತ್ಸರ್ವವಂದ್ಯಂ ಭವತೀತಿ ಮತ್ವಾ ಪುನಃಪುನಸ್ತತ್ಪ್ರಣಮತ್ಯವಶ್ಯಂ ॥೪೩॥

ಯದಂಗೇ ರುದ್ರಾಕ್ಷಸ್ಸತು ಭವತಿ ಫಾಲಾಕ್ಷ ಇತಿ ಧೀಃ
ವಿಭೂತೇರ್ವಾ ಲೇಶೋ ಯದಿ ಭವತಿ ತತ್ಫಾಲಫಲಕೇ ।
ಸಕೃದ್ವಾ ಮನ್ನಾಮ ಪ್ರಜಪನಪರಾ ಯಸ್ಯ ರಸನಾ
ತಮಾಲೋಕ್ಯಾಲೋಕ್ಯ ಪ್ರಣಮತಿ ಪುನರ್ನೃತ್ಯತಿ ಯಮಃ ॥೪೪॥

ಪಿಬಂತಿ ಯೇ ವಾ ಶಿವನಾಮರೂಪಾಂ
ಸುಧಾಂ ಮುಹುಸ್ತಾನ್ ಪ್ರಣಮತ್ಯವಶ್ಯಂ ।

---

ಲಿಂಗಾರ್ಚನೆಯು ನಡೆಯುತ್ತಿರುವ ಮನೆಯನ್ನು ನೋಡಿದ ಕೂಡಲೇ ಯಮನು, ಇದೇ ಮನೆಯೇ ಧನ್ಯವಾದದ್ದು, ಇಲ್ಲಿ ವಾಸಮಾಡುವವನೇ ನಿಜವಾಗಿ ಪುಣ್ಯಾತ್ಮನು, ಈ ಮನೆಯಲ್ಲಿ ತ್ರಿಪುರಾಂತಕನ ಪುಣ್ಯತಮವಾದ ಲಿಂಗವಿದೆ. ಹೀಗೆಂದು ಮನಸ್ಸಿನಲ್ಲಿ ಶ್ಲಾಘಿಸುತ್ತಾ ಆ ಮನೆಗೇ ನಮಸ್ಕರಿಸುತ್ತಾನೆ. ॥೪೨॥

ಈ ಮನೆಯು ಶಂಕರನಿಗೆ ಆವಾಸಸ್ಥಾನವಾಗಿರುವುದರಿಂದ ಇದು ಸಕಲ ಜನರಿಗೂ ಪೂಜ್ಯವಾಗಿರುತ್ತದೆ. ಹೀಗೆಂದು ಅರಿತುಕೊಂಡು ಯಮನು ಪದೇ ಪದೇ ಖಂಡಿತವಾಗಿಯೂ ನಮಸ್ಕರಿಸುತ್ತಾನೆ. ॥೪೩॥

ಯಾವಾತನು ರುದ್ರಾಕ್ಷಮಾಲೆಯನ್ನು ಧರಿಸಿರುವನೋ, ಯಾವಾತನ ಹಣೆಯಲ್ಲಿ ವಿಭೂತಿಯು ವಿರಾಜಿಸುತ್ತಿರುವುದೋ, ಯಾವಾತನ ನಾಲಿಗೆಯು ನನ್ನ ದಿವ್ಯನಾಮವನ್ನು ಭಕ್ತಿಯಿಂದ ಹೇಳುತ್ತಿರುವುದೋ, ಅವರೆಲ್ಲರನ್ನೂ ಆ ಯಮನು ಸಾಕ್ಷಾತ್ ನನ್ನ ಸ್ವರೂಪವೆಂದೇ ತಿಳಿಯುತ್ತಾನೆ. ಮತ್ತು ಅವರನ್ನು ನೋಡಿದ ಕೂಡಲೇ ಆನಂದದಿಂದ ನಮಸ್ಕರಿಸುವನು, ಕುಣಿಯುವನು. ॥೪೪॥

ಯಾರು ಶಿವನಾಮಾವಳಿ ಎಂಬ ಅಮೃತವನ್ನು ಪಾನಮಾಡಿರುತ್ತಾರೆಯೋ ಅವರನ್ನು ನೋಡಿ ಯಮನು ನಮಸ್ಕರಿಸುವನು. ಏಕೆಂದರೆ, ಅಂಥ ಭಕ್ತರು ನನ್ನ

ಯೇ ತೇ ಮಹೇಶಪ್ರಿಯನಿಗ್ರಹತ್ವಾತ್
ಪೂಜ್ಯಾ ಇತಿ ಸ್ತೌತಿ ಯಮ ಸ್ಸ ಗೌರಿ ॥೪೫॥

ಯಸ್ಯೈವ ಮಯ್ಯವ್ಯಭಿಚಾರಿಣೀಸ್ಯಾ
ದ್ಭಕ್ತಿಸ್ತಮಾಶು ಪ್ರಣತೋಽತಿಭಕ್ತ್ಯಾ ।
ಸ್ತೌತಿ ಪ್ರನೃತ್ಯತ್ಯಪಿ ಗೌರಿ ನಿತ್ಯಂ
ಸನಿವ ಮಿತ್ರಂ ಮಮ ನಾತ್ರ ಚಿತ್ರಂ ॥೪೬॥

ಲಿಂಗಾಲಯಂ ಪಶ್ಯತಿ ಯಃ ಪ್ರಯತ್ನಾ
ತ್ತಮೇವ ದೃಷ್ಟ್ವಾ ಸ ಯಮೋಽತಿಭಕ್ತ್ಯಾ ।
ಧನ್ಯೋಽತಿಧನ್ಯಃ ಸುತರಾಂ ಸ ಧನ್ಯೋ
ಮಾನ್ಯೋ ಮಮೇತಿ ಪ್ರವದತ್ಯವಶ್ಯಂ ॥೪೭॥

ಲಿಂಗಾನಿ ವಾ ಯೇ ರಜನೀಮುಖೇಷು
ದೃಷ್ಟ್ವಾ ಪ್ರಯತ್ನೇನ ನಮಂತಿ ಧೀರಾಃ ।
ತಾನಾಶು ದೃಷ್ಟ್ವಾ ಪ್ರಣಮತ್ಯವಶ್ಯಂ
ಕಾಲೋ ಮದಾರಾಧನಸಕ್ತಚಿತ್ತಾನ್ ॥೪೮॥

---

ಪ್ರೀತಿಗೆ ಪಾತ್ರರಾಗಿರುವರು ಎಂಬುದನ್ನು ಆವನು ತಿಳಿದುಕೊಂಡಿದ್ದಾನೆ. ಹೀಗೆ ಆ ಶೈವರು ಪೂಜ್ಯರಾಗಿರುವುದರಿಂದ ಅವರನ್ನು ಯಮನು ಸ್ತುತಿಸುವನು. ॥೪೫॥

ಯಾವಾತನಿಗೆ ನನ್ನಲ್ಲಿ ನಿಶ್ಚಲವಾದ ಭಕ್ತಿ ಇರುತ್ತದೆಯೋ ಆತನೇ ನನ್ನ ಪ್ರೀತಿಗೆ ಪಾತ್ರನಾಗುವನು. ಆದ್ದರಿಂದಲೇ ಅಂಥ ಭಕ್ತರನ್ನು ಕಂಡಕೂಡಲೇ ಯಮನು ಅವರನ್ನು ಸ್ತುತಿಸುವುದೂ ನರ್ತಿಸುವುದೂ ಸಹಜವಾಗಿದೆ ಎಂಬುದರಲ್ಲಿ ಆಶ್ಚರ್ಯವೇನೂ ಇಲ್ಲ. ॥೪೬॥

ಯಾವಾತನು ಶಿವಮಂದಿರವನ್ನು ಭಕ್ತಿಯಿಂದ ದರ್ಶನಮಾಡುವನೋ ಆತನು ನನ್ನ ಭಕ್ತನೆಂದು ತಿಳಿದು ಯಮನು ಅತಿಭಕ್ತಿಯಿಂದ ಆತನನ್ನು ಆದರಿಸುವನು. ಮತ್ತು ಆತನೇ ಧನ್ಯನೆಂದು ಶ್ಲಾಘಿಸುತ್ತಾನೆ. ಪೂಜ್ಯನೆಂದೂ ತಿಳಿಯುತ್ತಾನೆ. ॥೪೭॥

ಯಾರು ಪ್ರದೋಷಸಮಯದಲ್ಲಿ ಶಿವಲಿಂಗದ ದರ್ಶನವನ್ನು ಮಾಡುವರೋ ಸಾಷ್ಟಾಂಗವಾಗಿ ನಮಸ್ಕರಿಸುವರೋ, ಅಥವಾ ಪೂಜಾದಿಗಳಿಂದ ಆರಾಧಿಸುವರೋ

ಯೇ ಪ್ರಾತರುತ್ಥಾಯ ಶಿವಂ ಸ್ಮರಂತಿ
ಮಾಮವ್ಯಯಂ ಪಾತಕನಾಶಹೇತುಂ ।
ತಾನಾಶು ದೃಷ್ಟ್ವಾ ಪ್ರಣಮತ್ಯವಶ್ಯಂ
ಕಾಲೋ ಮದಾರಾಧನಸಕ್ತಚಿತ್ತಾನ್ ॥೪೯॥

ತ್ರಿಪುಂಡ್ರರುದ್ರಾಕ್ಷಧರಾನ್ ವಿಲೋಕ್ಯ
ದೂರಾದಪಿ ಪ್ರಾಂಜಲಿರೇವ ಭಕ್ತ್ಯಾ ।
ತಾನಾಶು ದೃಷ್ಟ್ವಾ ಪ್ರಣಮತ್ಯವಶ್ಯಂ
ಕಾಲೋ ಮದಾರಾಧನಸಕ್ತಚಿತ್ತಾನ್ ॥೫೦॥

ಕಾಶೀಪುರೀದರ್ಶನಪೂತಚಿತ್ತಾನ್
ಶಿವಾರ್ಚನೋತ್ಪನ್ನಸುಖಪ್ರವಾಹಾನ್ ।
ತಾನಾಶು ದೃಷ್ಟ್ವಾ ಪ್ರಣಮತ್ಯವಶ್ಯಂ
ಕಾಲೋ ಮದಾರಾಧನಸಕ್ತಚಿತ್ತಾನ್ ॥೫೧॥

ಅಂತಹವರನ್ನು ನೋಡಿದ ಕೂಡಲೇ ಯಮನು ಅವಶ್ಯವಾಗಿ ನಮಸ್ಕರಿಸುವನು. ॥೪೮॥

ಯಾರು ಪ್ರಾತಃಕಾಲದಲ್ಲಿ ಎದ್ದಕೂಡಲೇ ನನ್ನನ್ನು ಮಂಗಳಕರನೆಂದೂ, ನಾಶರಹಿತನೆಂದೂ, ಪಾಪವಿನಾಶಕನೆಂದೂ ಮುಂತಾಗಿ ಸ್ಮರಿಸಿಕೊಂಡು ಧ್ಯಾನಿಸುವರೋ ಅವರನ್ನು ನೋಡಿದೊಡನೆಯೇ ಯಮನು ನಮಸ್ಕರಿಸುವನು. ॥೪೯॥

ಯಾರು ಶಿವಧರ್ಮಗಳನ್ನು ಆಚರಿಸುವರೋ, ಅಥವಾ ಭಸ್ಮತ್ರಿಪುಂಡ್ರವನ್ನೂ ರುದ್ರಾಕ್ಷಮಾಲೆಗಳನ್ನೂ ಧರಿಸುವರೋ, ಅಂತಹ ಶೈವರನ್ನು ದೂರದಿಂದ ನೋಡಿದ ಕೂಡಲೇ ಯಮನು ಅತ್ಯಂತ ಭಕ್ತಿಯಿಂದಲೂ ವಿನಯದಿಂದಲೂ ಕೈಮುಗಿದುಕೊಂಡು ನಮಸ್ಕರಿಸುವನು. ॥೫೦॥

ವಾರಾಣಸೀಕ್ಷೇತ್ರದ ದರ್ಶನಮಾಡಿ ನಿಷ್ಕಲ್ಮಷಚಿತ್ತರಾದವರನ್ನೂ, ಶಿವಾರ್ಚನೆಯನ್ನು ಪದೇಪದೇ ಮಾಡುತ್ತಾ ಸುಖಸಂತೋಷಗಳನ್ನು ಪಡೆದಿರುವವರನ್ನೂ ನೋಡಿದೊಡನೆ ಯಮನು ನಮಸ್ಕರಿಸುವನು. ॥೫೧॥

ಮಲ್ಲಿಂಗಪೂಜಾಜನಿತೋತ್ಸವಾ ಯೇ
ಮಲ್ಲಿಂಗಸಂದರ್ಶನಪಾವನಾಶ್ಚ ।
ತಾನಾಶು ದೃಷ್ಟ್ವಾ ಪ್ರಣಮತ್ಯವಶ್ಯಂ
ಕಾಲೋ ಮದಾರಾಧನಸಕ್ತಚಿತ್ತಾನ್ ॥೫೨॥

ಕುಂಭೀಪಾಕಮುಖಾತಿಘೋರನರಕಾವಾಸಾನ್ ಕರೋತ್ಯಾದರಾತ್
ಸರ್ವಾನ್ಮದ್ವಿಮುಖಾನ್ ಗಿರೀಂದ್ರತನಯೇ ಕಾಲಸ್ಸ ಕಾಲಾಂತರೇ ।
ತಾನ್ ಸರ್ವಾನಪಿ ರಾಸಭಾದಿಜಠರಾವಾಸಾನ್ ಕರೋತ್ಯಾದರಾತ್
ಕುಂಭೀಪಾಕಗತಾನ್ ಕರೋತಿ ಶುನಕೀಗರ್ಭಸ್ಥಿತಾನ್ ಭೂರಿಶಃ ॥೫೩॥

ಪ್ರೀತಿಸ್ತಸ್ಯ ತು ಶಾಂಭವೇ ಖಲು ಮಹಾಧರ್ಮೇ ತತಶ್ಶಾಂಭವಾನ್
ದೃಷ್ಟ್ವಾ ದೂರತ ಏವ ಗೌರಿ ಶಿರಸಾ ನತ್ವಾ ಪ್ರಬದ್ಧಾಂಜಲಿಃ ।
ಧನ್ಯಾಗ್ರೇಸರದರ್ಶನೇನ ವಿಕೃತಿಃ ಸಂಸಾರಜಾ ನಿರ್ಗತಾ
ಧನ್ಯೋಽಹಂ ಕೃತಕೃತ್ಯ ಇತ್ಯಪಿ ಮುಹುಸ್ಸಂತೋಷವರ್ಷಾಪ್ಲುತಃ ॥೫೪॥

ನನ್ನ ಪುಣ್ಯಲಿಂಗವನ್ನು ಅರ್ಚಿಸುವುದರಿಂದ ಸಕಲ ಉತ್ಸವಗಳನ್ನೂ ಯಾರು ಪಡೆದಿರುವರೋ, ಶಿವಲಿಂಗದ ದರ್ಶನದಿಂದ ಯಾರು ಪವಿತ್ರಾತ್ಮರಾಗಿರುವರೋ, ಅವರನ್ನು ಯಮನು ನಮಸ್ಕರಿಸುವನು. ॥೫೨॥

ಯಾರು ನನ್ನನ್ನೂ ನನ್ನ ಪುಣ್ಯಲಿಂಗವನ್ನೂ ಅರ್ಚಿಸದೇ ವ್ರಾತ್ಯರಾಗಿರುವರೋ, ಅಂತಹವರನ್ನೇ ಯಮನು ಶಿಕ್ಷಿಸುವನು. ಆ ಪಾಪಿಗಳನ್ನು ಕುಂಭೀಪಾಕವೇ ಮೊದಲಾದ ಘೋರವಾದ ನರಕದಲ್ಲಿ ಹಾಕಿ ಯಾತನೆಗಳನ್ನು ಕೊಡುವನು. ಮತ್ತೆ ಆ ಪಾಪಿಗಳನ್ನು ಕಾಲಾಂತರದಲ್ಲಿ ಕತ್ತೆ ಮುಂತಾದ ನೀಚ ಪ್ರಾಣಿಗಳ ಗರ್ಭದಲ್ಲಿ ವಾಸಮಾಡುವಂತೆ ಮಾಡಿ, ಪುನಃ ಕುಂಭೀಪಾಕದಲ್ಲಿ ಯಾತನೆಗಳನ್ನು ವಿಧಿಸಿ, ಮತ್ತೆ ನಾಯಿ ಮುಂತಾದ ಕ್ಷುದ್ರಪ್ರಾಣಿಗಳ ಗರ್ಭದಲ್ಲಿ ವಾಸಮಾಡಿಸಿ, ಶಿಕ್ಷಿಸುವನು. ಈರೀತಿ ಶಿವಪೂಜಾವಿಮುಖರನ್ನು ಪುನಃಪುನಃ ಶಿಕ್ಷೆಗೆ ಗುರಿಪಡಿಸುತ್ತಲೇ ಇರುತ್ತಾನೆ. ॥೫೩॥

ಯಮಧರ್ಮನಿಗೆ ಧರ್ಮಗಳಲ್ಲಿ ಬಹಳ ಪ್ರೀತಿಯಿರುತ್ತದೆ. ಆದ್ದರಿಂದಲೇ ಧರ್ಮಿಷ್ಠರಾದ ನನ್ನ ಭಕ್ತರಲ್ಲಿ ಆತನಿಗೆ ಪಕ್ಷಪಾತವುಂಟು. ಶೈವರನ್ನು ಯಮನು ದೂರದಿಂದ ನೋಡುತ್ತಿದ್ದ ಹಾಗೆಯೇ ತಲೆಬಾಗಿ ನಮಸ್ಕರಿಸುವನು. ಅಹೋ!

ಮನ್ನಾಮಸ್ಮರಣೋದ್ಯತೋ ಯದಿ ಭವೇಚ್ಛೂದ್ರೋಽಥವಾ ಪುಲ್ಕಸಃ
ತಂ ತಾವತ್ಪ್ರಣಮತ್ಯಮೋ ದ್ವಿಜವರಂ ಹಾರಾಭಿಮಾನಚ್ಯುತಂ ।
ಕುಂಭೀಪಾಕಗತಂ ಕರೋತಿ ಸುರಮಪ್ಯನ್ಯಸ್ಯ ವಾರ್ತಾಪಿ ಕಾ
ಕಾಲೋ ಹಾರಮನೋಹರಾತಿಚತುರೋ ಲಿಂಗಾರ್ಚನೇ ಸಾದರಂ ॥೫೫॥

ರುದ್ರಾಕ್ಷೈಸ್ಸಿತಭೂತಿಭಾಸ್ವರರಜಃಪುಂಜೈಶ್ಚ ಪೂತಂ ವಪುಃ
ಯೇಷಾಂ ತಚ್ಚರಣಾಂಬುಜಪ್ರಣತಿಷು ಪ್ರೀತಿರ್ಯಮಸ್ಯಾಂಬಿಕೇ ।
ತದ್ಭಿನ್ನಾ ನರಕೇಷು ಕೇವಲಮಯಂ ಸಂಪಾತಯತ್ಯನ್ವಹಂ
ವ್ಯಾಪ್ತಂ ಮದ್ವಿಮುಖೈರ್ಯಮಾಲಯಮಯಂ ಪಶ್ಯನ್ ಪ್ರನೃತ್ಯತ್ಯಪಿ ॥೫೬॥

---

ಭಾಗ್ಯ, ಇಂದು ಧನ್ಯಾಗ್ರೇಸರನ ದರ್ಶನವಾಯಿತು. ಈಗ ಸಂಸಾರಿಕ ವಿಕಾರಗಳು ದೂರವಾದವು. ಆದ್ದರಿಂದ ನಾನೇ ಧನ್ಯನು, ಕೃತಕೃತ್ಯನು ಹೀಗೆಂದು ಶ್ಲಾಘಿಸುತ್ತಾ ಆನಂದಪಡುವನು. ॥೫೪॥

ನನ್ನ ದಿವ್ಯನಾಮಸ್ಮರಣೆಯಲ್ಲಿ ಆದರ ಶ್ರದ್ಧೆಗಳನ್ನು ವಹಿಸಿಕೊಂಡಿರುವವನು ಶೂದ್ರನೇ ಆಗಿರಲಿ, ಅಥವಾ ಚಂಡಾಲನೇ ಆಗಿರಲಿ, ಆತನನ್ನೂ ಸಹ ಯಮನು ಭಕ್ತಿಯಿಂದ ನಮಸ್ಕರಿಸುವನು. ಶಿವಧರ್ಮಗಳನ್ನು ಬಿಡದಿರುವ ಬ್ರಾಹ್ಮಣನನ್ನು ಕಂಡರಂತೂ ಆತನಿಗೆ ಬಹಳ ಪ್ರೀತಿ. ಆದರೆ ಶಿವಧರ್ಮಗಳನ್ನು ತ್ಯಾಗಮಾಡಿರುವವನು ದೇವತೆಯಾಗಿದ್ದರೂ ಅವರನ್ನು ಕುಂಭೀಪಾಕ ನರಕದಲ್ಲಿ ಹಾಕಿ ಅನೇಕ ಯಾತನೆಗಳನ್ನು ವಿಧಿಸುವನು. ಇನ್ನು ಬೇರೆಯವರನ್ನು ಕೇಳಬೇಕೇ? ಹೀಗಿರುವುದರಿಂದ ಯಮನು ಲಿಂಗಾರ್ಚನೆಯಲ್ಲಿ ಆದರವುಳ್ಳವನೂ ಆಗಿದ್ದಾನೆ. ಆತನೂ ಪರಮಶೈವನು. ॥೫೫॥

ಯಾರ ಶರೀರವು ಶುದ್ಧವಾದ ಭಸ್ಮಗಳಿಂದಲೂ, ರುದ್ರಾಕ್ಷಮಾಲೆಗಳಿಂದಲೂ ಪವಿತ್ರವಾಗಿರುತ್ತದೆಯೋ, ಅಂತಹವರ ಚರಣಕಮಲಗಳಿಗೆ ವಂದಿಸಬೇಕೆಂದರೆ ಯಮನಿಗೆ ಬಹಳ ಪ್ರೀತಿ. ಹಾಗಿಲ್ಲದೇ ನನ್ನನ್ನು ನಿಂದಿಸಿ ಯಾರು ಅಶೈವರಾಗಿರುತ್ತಾರೆಯೋ, ಅವರನ್ನು ಪ್ರತಿದಿನವೂ ನರಕದಲ್ಲಿ ಹಾಕಿ ಘೋರವಾಗಿ ಶಿಕ್ಷಿಸುವನು. ಮತ್ತು ಆ ಯಾತನೆಯ ಸಮಯದಲ್ಲಿ ಪಾಪಿಗಳನ್ನು ನೋಡಿ ಹಾಸ್ಯಮಾಡುತ್ತಾ ಕುಣಿಯುವನು. ಅಂಥ ಪಾಪಿಗಳಿಂದಲೇ ನರಕವು ತುಂಬಿಹೋಗಿದೆ. ॥೫೬॥

ಏಕೇನಾಪಿ ನ ಜನ್ಮನಾ ಯದಿ ಸಕೃಲ್ಲಿಂಗಾನಿ ತುಂಗಾನಿ ನೋ
ಬಿಲ್ವೀಕೋಮಲಪಲ್ಲವೈರಭಿನವೈರ್ನಾರಾಧಿತಾನಿ ಪ್ರಗೇ ।
ದೃಷ್ಟಾನಿ ಪ್ರಣತಾನಿ ವಾ ಸಕೃದಪಿ ಧ್ಯಾತಾನಿ ವಾ ಶೈಲಜೇ
ತರ್ಹಿ ಪ್ರಾಪಯತಿ ಪ್ರರೋದನಪರಾನ್ ಕಾಲೋಽನಲಾಂಭೋನಿಧಿಂ ॥೫೭॥

ಹೇ ವಿಶ್ವೇಶ್ವರ ಚಂದ್ರಶೇಖರ ಮಹಾದೇವ ಸ್ಮರಾರೇ ಹರ
ಶ್ರೀಕಂಠ ತ್ರಿಪುರಾಂತಕ ತ್ರಿನಯನ ಶ್ರೀಕಾಲಕಾಲಾವ ಮಾಂ ।
ದೀನಂ ಮಾಮಿತಿ ಯೇ ವದಂತಿ ವಿಲಸದ್ರುದ್ರಾಕ್ಷಭೂತಿಪ್ರಭಾ
ಸಂವೀತಾಸ್ಸುಕೃತೈಸ್ತ ಏವ ಗಿರಿಜೇ ಕಾಲಾರ್ಚಿತಾಃ ಕೇವಲಂ ॥೫೮॥

ಗೌರೀವಲ್ಲಭ ಮನ್ಮಥಾಂಧಕರಿಪೋ ಫಾಲಾಕ್ಷ ವಿಶ್ವಾಧಿಕ
ಶ್ರೀಕಂಠ ಪ್ರಮಥಾಧಿಪಾವ ಭಗವನ್ನಿತ್ಯಾದರಾಸ್ಸಂತತಂ ।
ದೀನಂ ಮಾಮಿತಿ ಯೇ ವದಂತಿ ವಿಲಸದ್ರುದ್ರಾಕ್ಷಭೂತಿಪ್ರಭಾ
ಸಂವೀತಾಸ್ಸುಕೃತೈಸ್ತ ಏವ ಗಿರಿಜೇ ಕಾಲಾರ್ಚಿತಾಃ ಕೇವಲಂ ॥೫೯॥

---

ಯಾವ ಮನುಷ್ಯನು ತನ್ನ ಒಂದು ಜನ್ಮದಲ್ಲಿಯೂ ಉನ್ನತವಾದ ಶಿವಲಿಂಗಕ್ಕೆ ಬಿಲ್ವಪತ್ರೆಗಳಿಂದ ಪ್ರಾತಃಕಾಲ ಪೂಜಿಸಿಲ್ಲವೋ, ಅಥವಾ ಶಿವಲಿಂಗವನ್ನು ದರ್ಶನಮಾಡಿ ನಮಸ್ಕರಿಸಿಲ್ಲವೋ, ಅಂತಹವನನ್ನು ಯಮನು ಸಮುದ್ರದಂತಿರುವ ಅಗ್ನಿನರಕದಲ್ಲಿ ಹಾಕಿ ಯಾತನೆಗಳನ್ನು ವಿಧಿಸುವನು. ಮತ್ತು ಆ ಪಾಪಿಗಳು ಸದಾ ದುಃಖದಿಂದ ರೋದಿಸುವಂತೆ ಮಾಡುವನು. ॥೫೭॥

ಓ ವಿಶ್ವೇಶ್ವರ, ಚಂದ್ರಮೌಳೇ, ಮಹಾದೇವ! ನಾನು ಅತ್ಯಂತ ದೀನನಾಗಿದ್ದೇನೆ. ನನ್ನನ್ನು ದಯೆಯಿಟ್ಟು ಕಾಪಾಡು. ಹೀಗೆಂದು ಯಾರು ಪ್ರಾರ್ಥಿಸುವರೋ, ಮತ್ತು ಭಸ್ಮರುದ್ರಾಕ್ಷಿಗಳನ್ನು ಧರಿಸಿಕೊಂಡು ಪದೇ ಪದೇ ಯಾರು ನನ್ನನ್ನು ಧ್ಯಾನಿಸುವರೋ, ಅವರನ್ನು ಯಮನು ಆದರದಿಂದ ಪೂಜಿಸುವನು. ॥೫೮॥

ಗೌರೀಪತೇ! ನೀನು ಗರ್ವಿಷ್ಠನಾದ ಮನ್ಮಥನನ್ನು ಮತ್ತು ಅಂಧಕಾಸುರನನ್ನೂ ಧ್ವಂಸಮಾಡಿದ್ದೀಯೆ. ನೀನು ಹಣೆಯಲ್ಲಿ ಲೋಕಾತೀತವಾದ ಲೋಚನವನ್ನು ಧರಿಸಿದ್ದೀಯೆ. ಆದ್ದರಿಂದಲೇ ನೀನು ಸಮಸ್ತ ವಿಶ್ವಗಳಿಗೂ ಅತೀತನು ಮತ್ತು ಶ್ರೇಷ್ಠನು. ಶ್ರೀಕಂಠನೇ! ನೀನೇ ಎಲ್ಲಾ ಪ್ರಮಥಗಣಗಳಿಗೂ ಸ್ವಾಮಿಯೂ

ಯೋ ಭರ್ಗಸ್ತ್ರಿದಶಾರ್ಚಿತಾಂಘ್ರಿಕಮಲಶ್ರೀಪುಂಜನಿಶ್ರಾಮಭೋಃ
ಭೂಧ್ರಾಧೀಶ್ವರಕನ್ಯಕಾಕುಚಗಿರಿಶ್ರೀಪೂರಸಾರಾದರ ।
ದೀನಂ ಮಾಮವ ಶಂಕರೇತ್ಯನುದಿನಂ ಯೇ ವಾ ಜಪಂತ್ಯಾದರಾತ್
ತೇ ಸರ್ವೇ ಗಿರಿರಾಜರಾಜತನಯೇ ಕಾಲಾರ್ಚಿತಾಃ ಕೇವಲಂ ॥೬೦॥

ಶಂಭೋ ನಾರ್ಮದತುಂಗಲಿಂಗನಿಲಯಾಮೇಯಪ್ರಭಾವ ಪ್ರಭೋ
ಸಂಸಾರಾರ್ತಿಭಿಷಕ್ತಮೋತ್ತಮ ಮಹಾದೇವಾಮರಾಧೀಶ್ವರ ।
ದೀನಂ ಮಾಮವ ಶಂಕರೇತ್ಯನುದಿನಂ ಯೇ ವಾ ಜಪಂತ್ಯಾದರಾತ್
ತೇ ಸರ್ವೇ ಗಿರಿರಾಜರಾಜತನಯೇ ಕಾಲಾರ್ಚಿತಾಃ ಕೇವಲಂ ॥೬೧॥

ರುದ್ರಾಕ್ಷಪ್ರಿಯಭೂತಿಭೂಷಣ ಲಸದ್ಬಿಲ್ವೀದಳಾಭ್ಯರ್ಚಿತ
ಶ್ರೀಶೂಲಿನ್ ಮೃಗಶಾವಚಿಹ್ನಿತಕರಾಂಭೋಜಾಂಬುಜಾರಾಧಿತ ।

ಭಗವಂತನೂ ಆಗಿದ್ದೀಯೆ. ನಾನು ಅತ್ಯಂತ ದೀನನು. ನನ್ನನ್ನು ದಯೆಯಿಟ್ಟು ಉದ್ಧರಿಸು. ಹೀಗೆಂದು ಪ್ರಾರ್ಥಿಸುವವರನ್ನು ಯಮನು ಪೂಜಿಸುವನು. ॥೫೯॥

ಓ ಶಂಕರ! ನಿನಗೆ ಭರ್ಗನೆಂದು ದಿವ್ಯನಾಮವಿರುವುದು. ನಿನ್ನ ಚರಣ ಕಮಲಗಳನ್ನು ಎಲ್ಲಾ ದೇವತೆಗಳೂ ಪೂಜಿಸುವರು. ನೀನೇ ಸಕಲೈಶ್ವರ್ಯಗಳಿಗೂ ಅಂತ್ಯ ಎಲ್ಲೆ ಆಗಿರುವೆ. ನೀನು ಪರ್ವತರಾಜಕುಮಾರಿಯ ಸ್ತನಪರ್ವತಗಳ ಶ್ರೀಗಂಧದಲ್ಲಿ ಲೋಲನಾಗಿರುವೆ. ಪರಮ ದೀನನಾಗಿರುವ ನನ್ನನ್ನು ಕಾಪಾಡು. ಹೀಗೆಂದು ಯಾರು ಪ್ರತಿದಿನವೂ ಜಪಿಸುವರೋ ಅವರನ್ನೇ ಯಮನು ಪೂಜಿಸುವನು. ॥೬೦॥

ಓ ಪ್ರಭೋ! ನೀನು ಪವಿತ್ರವಾದ ನರ್ಮದಾನದಿಯಲ್ಲಿ ಉದ್ಭವವಾದ ಲಿಂಗದಲ್ಲಿ ವಾಸವಾಗಿರುವೆ. ನಿನ್ನ ಮಹಿಮೆಯು ಯಾವ ಪ್ರಮಾಣಗಳಿಗೂ ವಿಷಯವಾಗಲಾರದು. ಈ ಸಂಸಾರವೆಂಬ ಮಹಾರೋಗಕ್ಕೆ ನೀನೇ ಉತ್ತಮೋತ್ತಮ ವೈದ್ಯನಾಗಿರುವೆ. ನೀನು ಸಕಲ ದೇವತೆಗಳಿಗೂ ಅಧಿಪತಿಯಾಗಿರುವುದರಿಂದಲೇ ನಿನ್ನನ್ನು ಮಹಾದೇವನೆಂದು ಕರೆಯುವರು. ॥೬೧॥

ಶಂಕರನೇ! ನಿನಗೆ ರುದ್ರಾಕ್ಷಮಾಲೆಯಲ್ಲಿ ಬಹಳ ಪ್ರೀತಿಯಿರುವುದು. ನೀನು ಸರ್ವದಾ ಭಸ್ಮದಿಂದ ಅಲಂಕೃತನಾಗಿರುವೆ. ನಿನ್ನನ್ನೇ ಬಿಲ್ವದಳಗಳಿಂದ

ದೀನಂ ಮಾಮವ ಶಂಕರೇತ್ಯನುದಿನಂ ಯೇ ವಾ ಜಪಂತ್ಯಾದರಾತ್
ತೇ ಸರ್ವೇ ಗಿರಿರಾಜರಾಜತನಯೇ ಕಾಲಾರ್ಚಿತಾಃ ಕೇವಲಂ ||೭೨||

ಶ್ರೀಮೃತ್ಯುಂಜಯ ಕಾಲಕಂಠ ಕರುಣಾಸಿಂಧೋ ಕಪರ್ದಿನ್ವಿಭೋ
ಭಕ್ತಾಭೀಪ್ಸಿತದಾನಲೋಲ ಲಲಿತಾದೇವೀಸಮಾರಾಧಿತ ।
ದೀನಂ ಮಾಮವ ಶಂಕರೇತ್ಯನುದಿನಂ ಯೇ ವಾ ಜಪಂತ್ಯಾದರಾತ್
ತೇ ಸರ್ವೇ ಗಿರಿರಾಜರಾಜತನಯೇ ಕಾಲಾರ್ಚಿತಾಃ ಕೇವಲಂ ||೭೩||

ಶ್ರೀಮನ್ಮೇರುಶರಾಸನಾತಿರುಚಿರವ್ಯಾಪಾರಸಾರಾದರ
ಸ್ವಾಮಿನ್ ಚಾರುಸುಧಾಕರಾರ್ಧಘಟಿತ ಭಾಕೋಟಿವೀತಾಂಬರ ।
ದೀನಂ ಮಾಮವ ಶಂಕರೇತ್ಯನುದಿನಂ ಯೇ ವಾ ಜಪಂತ್ಯಾದರಾತ್
ತೇ ಸರ್ವೇ ಗಿರಿರಾಜರಾಜತನಯೇ ಕಾಲಾರ್ಚಿತಾಃ ಕೇವಲಂ ||೭೪||

ಎಲ್ಲರೂ ಪೂಜಿಸುತ್ತಾರೆ. ನೀನು ಶೂಲವೆಂಬ ದಿವ್ಯಾಯುಧವನ್ನು ಧರಿಸಿರುತ್ತೀಯೆ. ನೀನು ಕೈಯ್ಯಲ್ಲಿ ಜಿಂಕೆಮರಿಯನ್ನು ಲೀಲಾರ್ಥವಾಗಿ ಹಿಡಿದುಕೊಂಡಿರುವೆ. ನಿನ್ನನ್ನು ಭಕ್ತರು ಕಮಲಗಳಿಂದ ಪೂಜಿಸುವರು. ||೭೨||

ಓ ಪರಮೇಶ್ವರ! ನೀನು ಮೃತ್ಯುವನ್ನೂ ಜಯಿಸಿದವನಿದ್ದೀಯೆ. ನಿನ್ನ ಕಂಠವು ವಿಷಪಾನದಿಂದ ಕಪ್ಪಾಗಿರುತ್ತದೆ. ನೀನು ದಯಾಸಾಗರನು. ಜಟೆಯನ್ನು ಧರಿಸಿರುವುದರಿಂದ ನಿನ್ನನ್ನು ಕಪರ್ದೀ ಎಂದು ಕರೆಯುವರು. ನೀನು ವಿಭುವು ಸರ್ವತ್ರ ವ್ಯಾಪಕನು. ನೀನು ಸದಾ ಭಕ್ತರ ಮನೋರಥಗಳನ್ನು ಪೂರೈಸಿಕೊಡುವುದರಲ್ಲಿಯೇ ಆಸಕ್ತನಾಗಿರುತ್ತೀಯೆ. ನಿನ್ನನ್ನೇ ಆ ಲಲಿತಾ ಮಹಾದೇವೀಸ್ವರೂಪಳಾದ ಭವಾನಿಯು ಆರಾಧಿಸುವಳು. ||೭೩||

ತ್ರಿಪುರರೆಂಬ ದಾನವರನ್ನು ವಧೆಮಾಡುವಾಗ ನಿನಗೆ ಮೇರುಪರ್ವತವೇ ಧನುಸ್ಸಾಗಿದ್ದಿತು. ಅಂಥಾ ಮಹಾಧನುಸ್ಸಿನಿಂದ ಯುದ್ಧಮಾಡಲು ನೀನೊಬ್ಬನೇ ಸಮರ್ಥನು. ಅಂಥ ಅದ್ಭುತ ವ್ಯಾಪಾರದಲ್ಲಿಯೇ ನಿನಗೆ ಆದರವಿರುವುದು. ನೀನು ಚಂದ್ರಕಲೆಯಿಂದ ಆಲಂಕೃತನಾಗಿದ್ದೀಯೆ. ನಿನ್ನ ಅಂಬರವು ದಿವ್ಯವಾದ ಪ್ರಭೆಗಳಿಂದ ಕೂಡಿಕೊಂಡು ಉಜ್ವಲವಾಗಿರುತ್ತದೆ. ||೭೪||

ವಿಶ್ವಾಧೀಶ್ವರ ಹೇ ಮಹೇಶ್ವರ ಮಹಾರುದ್ರಾಂತಕಾರೇ ಹರ ।
ಜ್ಞಾನಾನಂದಘನಾನಪಾಯ ವಿಲಸತ್ಸೌಭಾಗ್ಯಭಾಗ್ಯೋದಯ ॥೬೫॥

ಭೋ ಶಂಭೋ ಭವಭೀಮ ಶಂಕರ ಹರ ವ್ಯೋಮಾಂತಕೇಶಾನಘ ।
ಬ್ರಹ್ಮಾಂಡೋದಯಪಾಲನವ್ಯಯಕರವ್ಯಾಪಾರವೀರೇಶ್ವರ ॥
ದೀನಂ ಮಾಮವ ಶಂಕರೇತ್ಯನುದಿನಂ ಯೇ ನಾ ಜಪಂತ್ಯಾದರಾತ್ ।
ತೇ ಸರ್ವೇ ಗಿರಿರಾಜರಾಜತನಯೇ ಕಾಲಾರ್ಚಿತಾಃ ಕೇವಲಂ ॥೬೬॥

ಮನ್ನಾಮೋತ್ಸುಕಮಾನಸಾನ್ಮುಹುರಯಂ ಕಾಲಃ ಪ್ರಪಶ್ಯತ್ಯಯಂ ।
ಮತ್ಪೂಜಾನಿರತಾಂಶ್ಚ ಪಶ್ಯತಿ ಮುಹುರ್ಭಸ್ಮತ್ರಿಪುಂಡ್ರಾಂಕಿತಾನ್ ॥
ರುದ್ರಾಕ್ಷಾಭರಣಾಂಶ್ಚ ತಚ್ಚರಣಜಂ ರೇಣುಂ ಶಿರಸ್ಯಾದರಾತ್ ।
ಧೃತ್ವಾ ನೃತ್ಯತಿ ಶರ್ವಶಂಕರಮಹಾದೇವೇತಿ ಶೈಲಾತ್ಮಜೇ ॥೬೭॥

ಮಹೇಶ್ವರನೇ, ನೀನೇ ಸಕಲ ಲೋಕಗಳಿಗೂ ಅಧೀಶ್ವರನು. ನೀನು ಮೃತ್ಯುಂಜಯನಾದ್ದರಿಂದ ನಿನ್ನನ್ನು ಮಹಾರುದ್ರನೆಂದು ಕರೆಯುವರು. ನಿನಗೆ ಯಾವಾಗಲೂ ಯಾವ ಅಪಾಯಗಳೂ ವಿಘ್ನಗಳೂ ಇರುವುದಿಲ್ಲ. ನೀನು ಸಾಕ್ಷಾತ್ ಸಚ್ಚಿದಾನಂದನು. ನೀನು ಸಕಲ ಸೌಭಾಗ್ಯಗಳಿಂದಲೂ ಯುಕ್ತನಾಗಿದ್ದೀಯೆ. ನೀನೇ ಸಕಲ ಐಶ್ವರ್ಯ ಮತ್ತು ಭಾಗ್ಯಗಳಿಗೆ ಮೂಲಕಾರಣನಾಗಿದ್ದೀಯೆ. ||೬೫||

ಓ ಶಂಭೋ, ನೀನು ಈ ಕುತ್ಸಿತವಾದ ಸಂಸಾರಕ್ಕೆ ಭಯಂಕರನಾಗಿದ್ದೀಯೆ. ನೀನೇ ಮಂಗಳದಾತನು. ಪಾಪ ಪರಿಹಾರನು. ನಿನ್ನ ಜಟೆಯು ಆಕಾಶವ್ಯಾಪಿಯಾಗಿರುತ್ತದೆ. ನೀನು ಪಾಪರಹಿತನು. ಈ ಬ್ರಹ್ಮಾಂಡವನ್ನು ಸೃಷ್ಟಿಸುವುದರಲ್ಲಿ, ಅನಂತರ ಕಾಪಾಡುವುದರಲ್ಲಿ, ಅಂತ್ಯದಲ್ಲಿ ನಾಶಮಾಡುವುದರಲ್ಲಿ ನೀನು ನಿಪುಣನಾಗಿರುವೆ. ನಿನ್ನನ್ನು ವೀರೇಶ್ವರನೆಂದೂ ಕರೆಯುತ್ತಾರೆ. ನೀನೇ ದೀನನಾದ ನನ್ನನ್ನು ಕಾಪಾಡಬೇಕು. ಎಂದು ಸರ್ವದಾ ನನ್ನನ್ನು ಪ್ರಾರ್ಥಿಸುವವರನ್ನು ಯಮನು ಭಕ್ತಿಯಿಂದ ಪೂಜಿಸುವನು. ||೬೬||

ನನ್ನ ದಿವ್ಯನಾಮಗಳನ್ನು ಯಾರು ಅತ್ಯಂತ ಭಕ್ತಿಯಿಂದ ಜಪಿಸುವರೋ, ಅಥವಾ ನನ್ನನ್ನು ಯಾರು ಸದಾ ಪೂಜಿಸುತ್ತಿರುವರೋ ಅಥವಾ ಭಸ್ಮತ್ರಿಪುಂಡ್ರ

ಮನ್ನಾಮಾಮೃತಮೇವ ಜೀವನಮಿತಿ ಜ್ಞಾತ್ವಾ ಸ್ಮರಂತ್ಯಾದರಾತ್
ಮಾಮಿಶೇ ಶಿವಮಪ್ರಮೇಯವಿಭವಂ ಯೇ ತೇ ಪರಂ ಶೈಲಜೇ ॥
ಕೈಲಾಸಂ ಸಮುಪೇತ್ಯ ಮತ್ಪದರಜಃಪುಂಜೈಸ್ಸಹ ಕ್ರೀಡನಂ
ಕುರ್ವಂತ್ಯುತ್ತಮಭೂತಿಭೂಷಿತಮಹಾರುದ್ರಾಕ್ಷವಕ್ಷಸ್ಥಲಾಃ ॥೬೮॥

ನ ಶಿವಾಲಯವಾತಪೋತವೀತೋ
ಪ್ಯಗಜೇ ಯೋ ಮರಣಕ್ಷಣೇ ಕ್ಷಣಂ ವಾ ॥
ಸ ನ ಸಂಸೃತಿಸಾಗರಾಂತಮೇತಿ
ತ್ವನುವಾರಂ ಕಲಯೋಕ್ತಿಮಾದರೇಣ ॥೬೯॥

ಗಳನ್ನೂ ರುದ್ರಾಕ್ಷಮಾಲೆಗಳನ್ನೂ ಯಾರು ಸದಾ ಧರಿಸಿಕೊಂಡಿರುವರೋ ಅಂತಹವನ ಚರಣಧೂಳಿಯನ್ನು ಯಮನು ಶಿರಸ್ಸಿನಮೇಲಿಟ್ಟುಕೊಂಡು ಅತ್ಯಂತ ಆನಂದದಿಂದ ಶಿವ, ಶಂಕರ ಎಂದು ಮೊದಲಾಗಿ ಹಾಡುತ್ತಾ ನರ್ತನಮಾಡುತ್ತಾನೆ. ॥೬೭॥

ಯಾರು ನನ್ನ ಸ್ವರೂಪವು ಅಥವಾ ನನ್ನ ಮಹಿಮೆಯು ವಾಚಾಮಗೋಚರವಾಗಿದೆ. ಎಂಬುದನ್ನು ತಿಳಿದುಕೊಂಡು ನನ್ನ ನಾಮಜಪವೇ ಜೀವನದ ಪರಮೋದ್ದೇಶವೆಂದು ಭಾವಿಸಿ ಸದಾ ನನ್ನನ್ನು ಧ್ಯಾನಿಸುವರೋ, ಅವರು ನಮ್ಮ ನೆಲೆಮನೆಯಾದ ಕೈಲಾಸವನ್ನೇ ಪಡೆಯುವರು. ಮತ್ತು ನನ್ನ ಚರಣಧೂಳಿಯೊಡನೆ ಆನಂದವಾಗಿ ಕ್ರೀಡಿಸುತ್ತಾರೆ. ಉತ್ತಮವಾದ ರೂಪವನ್ನು ಪಡೆಯುವರಲ್ಲದೇ ಲೋಕೋತ್ತರವಾದ ಭಸ್ಮರುದ್ರಾಕ್ಷಿಗಳಿಂದ ಅಲಂಕೃತರಾಗಿ ಉಜ್ವಲರಾಗಿರುತ್ತಾರೆ. ॥೬೮॥

ಎಲೌ ಗಿರಿಜೆ, ಮನುಷ್ಯನ ಮೇಲೆ ಆತನ ಮರಣಸಮಯದಲ್ಲಾದರೂ ಒಂದು ಕ್ಷಣಕಾಲ ಶಿವಾಲಯದ ಗಾಳಿಯು ಬೀಸಿದ್ದರೆ (ಶಿವಾಲಯಕ್ಕೆ ಹೋಗಿದ್ದರೆ) ಆತನು ಈ ಅಪಾರವಾದ ಸಂಸಾರಸಾಗರವನ್ನು ದಾಟುತ್ತಾನೆ. ಮತ್ತೆ ಇದರಲ್ಲಿ ಬೀಳುವುದಿಲ್ಲ. ಈ ಮಾತನ್ನು ನಿಜವಾದದ್ದೆಂದು ಆದರದಿಂದ ಲಾಲಿಸು. ॥೬೯॥

ಕರುಣಾ ನ ಮಮಾಂಬಿಕೇ ಕದಾಪಿ
ಪ್ರಲಯೇ ವಾ ವಿಗತತ್ರಿಪುಂಡ್ರಫಾಲೇ ।
ಅನಲೇ ಸ ಪತತ್ಯವಶ್ಯಮೇವೇ
ತ್ಯಸಕೃನ್ಮದ್ವಚನೇಷು ನಾದರಃ ಕಿಂ ॥೭೦॥

ಭಾನೋಃ ಸ್ಯಾದುದಯೋಽಪಿ ಪಶ್ಚಿಮಗಿರಿದ್ವಾರೋದರಾಭ್ಯಂತರಾತ್
ಇಂದೋರ್ವಾಭ್ಯುದಯಃ ಕದಾಚನ ತಥಾಪ್ಯಾಯುಃಕ್ಷಯೇ ಭೂಷಣಂ ।
ಭೂತಿರ್ಯಸ್ಯ ನ ತಸ್ಯ ಗೌರಿ ಸಹಸಾ ಸಂತೋಷವಾರ್ತಾಪಿ ವಾ
ಕಿಂ ವಾ ಕಲ್ಪಮಘೋರದುಸ್ಸಹತರಾಪಾರವ್ಯಥಾ ಭೂರಿಶಃ ॥೭೧॥

ಯದಿ ಜಾರಕಿಶೋರಸೋದರಃ
ಸುರನಾರೀಸುಮನೋಹರಸ್ತದಾ ।
ಗಿರಿಜೇ ಸುಖವಾಸನಾ ಭವೇತ್
ಅಶಿವಾರಾಧನಸಕ್ತಚೇತಸಾಂ ॥೭೨॥

ಯಾರ ಹಣೆಯಲ್ಲಿ ಒಂದುದಿನವೂ ಭಸ್ಮತ್ರಿಪುಂಡ್ರವು ವಿರಾಜಿಸಿರುವುದಿಲ್ಲವೋ, ಆತನ ಮೇಲೆ ನಾನು ದಯೆತೋರುವುದಿಲ್ಲ. ಪ್ರಳಯಾಂತ್ಯದಲ್ಲಿಯೂ ಅಂತಹ ಅಶೈವನಲ್ಲಿ ನನಗೆ ಕರುಣೆಯುಂಟಾಗುವುದಿಲ್ಲ. ಅಂತಹ ಪಾಪಿಯು ಅಗ್ನಿನರಕದಲ್ಲಿಯೇ ಪದೇ ಪದೇ ಬಿದ್ದು ಖಂಡಿತವಾಗಿಯೂ ಯಾತನೆಗಳನ್ನು ಅನುಭವಿಸುವನು. ಈ ನನ್ನ ಮಾತುಗಳೆಲ್ಲವೂ ಸತ್ಯವೆಂದು ನಿನಗೆ ನಂಬಿಕೆ ಇರುವುದಷ್ಟೆ! ॥೭೦॥

ಯಾವಾತನು ಒಂದು ಸಲವೂ ಭಸ್ಮಾದಿಗಳನ್ನು ಧಾರಣೆಮಾಡದೇ ತನ್ನ ಆಯುಷ್ಯವನ್ನೆಲ್ಲಾ ಕಳೆದಿರುತ್ತಾನೆಯೋ, ಆತನಿಗೆ ಎಂದೂ ಕಲ್ಯಾಣವು ದೊರೆಯುವುದಿಲ್ಲ. ಒಂದುವೇಳೆ ಸೂರ್ಯಚಂದ್ರರ ಉದಯವು ಪಶ್ಚಿಮದಿಕ್ಕಿನ ಪರ್ವತ ಶಿಖರದಲ್ಲಿ ಆದರೂ, ಅಂಥ ಅಶೈವರಿಗೆ ಸಂತೋಷವೆಂಬುದೇ ಉಂಟಾಗಲಾರದು. ಅವರಿಗೆ ಕಲ್ಪಕಲ್ಪದಲ್ಲಿಯೂ ಘೋರವಾದ ಮತ್ತು ದುಸ್ಸಹವಾದ ಯಾತನೆಗಳೇ ಮೇಲಿಂದ ಮೇಲೆ ಪ್ರಾಪ್ತವಾಗುತ್ತಲೇ ಇರುವುವು. ॥೭೧॥

ಒಂದುವೇಳೆ ದೇವಾಂಗನೆಯರಿಗೆ ಒಬ್ಬ ಜಾರಪುತ್ರನ ಚಿಕ್ಕ ಸಹೋದರನಲ್ಲಿ ಆನುರಾಗವು ಉಂಟಾದರೆ ಆಗ ಶಿವಾರಾಧನೆಯನ್ನು ತ್ಯಾಗಮಾಡಿದವರಿಗೆ ಸುಖ

ಶುನಕೀಮ್ಮೃತಪ್ರೋತಗರ್ಭಜೋ ಯದಿ ವಾಜೀ ಸುರವಾಜಿಸೂಸ್ತದಾ ।
ಗಿರಿಜೇ ಸುಖವಾಸನಾ ಭವೇದಶಿವಾರಾಧನಸಕ್ತಚೇತಸಾಂ ॥೭೩॥

ಯದಿ ಮರ್ಕಟಕುಕ್ಕುಟೋದರಾತ್ಸುರಧೇನೋರುದಯೋ ಭವೇತ್ತದಾ ।
ಗಿರಿಜೇ ಸುಖವಾಸನಾ ಭವೇತ್ ಅಶಿವಾರಾಧನಸಕ್ತಚೇತಸಾಂ ॥೭೪॥

ಯದಿ ಪುಲ್ಕಸಕುತ್ಸಿತಾಂಗನಾಜನಿತೋ ಬ್ರಾಹ್ಮಣಪುಂಗವಸ್ತದಾ ।
ಗಿರಿಜೇ ಸುಖವಾಸನಾ ಭವೇತ್ ಅಶಿವಾರಾಧನಸಕ್ತಚೇತಸಾಂ ॥೭೫॥

ಯದಿ ದುಷ್ಟಮಲಾನ್ಮನೋಹರೋ ದಧಿಸಾರಸ್ಸಮುದೇತಿ ಸರ್ವಥಾ
ಗಿರಿಜೇ ಸುಖವಾಸನಾ ಭವೇತ್ ಅಶಿವಾರಾಧನಸಕ್ತಚೇತಸಾಂ ॥೭೬॥

---

ವೆಂಬುದು ಪ್ರಾಪ್ತವಾಗಬಹುದು. (ಅಪ್ಸರೆಯರಿಗೆ ಜಾರಜ ಶಿಶುವಿನಲ್ಲಿ ಹೇಗೆ ಅನುರಾಗವು ಉಂಟಾಗುವುದಿಲ್ಲವೋ ಹಾಗೆಯೇ ಅಶೈವರಿಗೆ ಎಂದೂ ಸುಖವು ಲಭಿಸುವುದಿಲ್ಲೆಂದು ತಾತ್ಪರ್ಯ). ॥೭೨॥

ನಾಯಿಯ ಗರ್ಭದಿಂದ ಒಂದು ಸತ್ತ ಕುದುರೆಮರಿಯು ಹುಟ್ಟಿ, ಆ ಕುದುರೆ ಮರಿಯು ದೇವಾಶ್ವವನ್ನು (ಉಚ್ಚೈಃಶ್ರವಸ್ಸು) ಪಡೆದರೆ, ಆಗ ಅಶೈವರಿಗೆ ಸುಖವು ಪ್ರಾಪ್ತವಾಗಬಹುದು. (ಈ ಎರಡೂ ಅಸಂಭವವೆಂದು ತಾತ್ಪರ್ಯ). ॥೭೩॥

ಒಂದುವೇಳೆ ಕಪಿಯ ಹೊಟ್ಟೆಯಿಂದಲೋ, ಕೋಳಿಯ ಹೊಟ್ಟೆಯಿಂದಲೋ, ಕಾಮಧೇನುವು ಹುಟ್ಟಿದರೆ ಆಗ ಅಶೈವರಿಗೆ ಸುಖ ಒದಗಬಹುದು. ॥೭೪॥

ಎಲ್ಲಿಯಾದರೂ ಚಂಡಾಲನ ನೀಚಪತ್ನಿಯಲ್ಲಿ ಶ್ರೇಷ್ಠನಾದ ಬ್ರಾಹ್ಮಣನು ಹುಟ್ಟುವನೇ ? ಎಂದಿಗೂ ಇಲ್ಲ. ಹಾಗೆಯೇ ಅಶೈವರಿಗೆ ಎಂದೂ ಸುಖವಿಲ್ಲ. ॥೭೫॥

ಅತ್ಯಂತ ಹೇಯವಾದ ಅಮೇಧ್ಯದಿಂದ ಎಲ್ಲಿಯಾದರೂ ದಧಿಸಾರಭಕ್ಷ್ಯವು (ರುಚಿಕರವಾದ ಮೊಸರಿಂದ ಮಾಡಿದ್ದು.) ಹುಟ್ಟಿದರೆ ಆಗ ಅಶೈವರಿಗೆ ಸುಖವುಂಟಾಗಬಹುದು. ॥೭೬॥

ನ ದಯಾಪಿ ತವೋಚಿತಾ ಶಿವೇ ಶಿವನಿಂದಾನಿರತೇಷು ಸಂತತಂ ।
ಶ್ರುತಿಸಂಸ್ತುತಭೂತಿವರ್ಜಿತಶ್ಶಿವನಿಂದಾಪರ ಏವ ಸಂತತಂ ॥೭೭॥

ನ ಕೃಪಾಪಿ ತವಾಂಬಿಕೇ ಮತಾ ಸತತಂ ಮದ್ವಿಮುಖೇಷು ಸರ್ವಥಾ ।
ಶ್ರುತಿನಿಂದನತತ್ಪರಾಃ ಪರಂ ನರಕೇ ತೇ ನಿಪತಂತಿ ಸಂತತಂ ॥೭೮॥

ಶ್ರುತಿಬೋಧಿತಲಿಂಗಪೂಜನಂ ನ ಕೃತಂ ಯೇನ ದುರಾತ್ಮನಾ ಶಿವೇ ।
ಸ ಮಹಾಘಕುಲಾಶ್ರಯೋಽನಿಶಂ ನರಕಾವಾಸರತೋ ನ ಸಂಶಯಃ ॥೭೯॥

ಶ್ರುತಿಬೋಧಿತಭೂತಿಧಾರಣಂ ನ ಕೃತಂ ಯೇನ ದುರಾತ್ಮನಾ ಶಿವೇ ।
ಸ ಮಹಾಘಕುಜಾಶ್ರಯೋಽನಿಶಂ ನರಕಾವಾಸರತೋ ನ ಸಂಶಯಃ ॥೮೦॥

ಆ ಭಸ್ಮದ ಮತ್ತು ಭಸ್ಮಧಾರಣೆಯ ಮಹಿಮೆಯನ್ನು ವೇದಗಳೆಲ್ಲವೂ ಮುಕ್ತಕಂಠದಿಂದ ಪ್ರಶಂಸಿಸುತ್ತವೆ. ಅಂಥ ಭಸ್ಮವನ್ನು ಯಾರು ಧಾರಣಾದಿಗಳಿಂದ ಪುರಸ್ಕರಿಸುವುದಿಲ್ಲವೋ ಅವರು ಸರ್ವಥಾ ಶಿವನಿಂದಕರೇ ಸರಿ. ಎಲೌ ಗಿರಿಜೆ! ಅಂಥ ಪಾಪಿಗಳಲ್ಲಿ ನೀನೂ ದಯೆ ತೋರಕೂಡದು. ||೭೭||

ನನ್ನ ಪೂಜಾರಾಧನೆಗಳನ್ನು ತ್ಯಾಗಮಾಡಿದವರು ಸರ್ವಥಾ ವೇದ ನಿಂದಕರೇ ಆಗಿರುವರು. ಏಕೆಂದರೆ ವೇದಬೋಧಿತವಾದ ನನ್ನ ಪೂಜಾವಿಧಿಯನ್ನು ಅವರು ಅನುಷ್ಠಾನಪೂರ್ವಕ ಪುರಸ್ಕರಿಸಿರುವುದಿಲ್ಲ. ಅಂತಹ ಪಾಪಿಗಳು ಖಂಡಿತವಾಗಿಯೂ ನರಕದಲ್ಲಿಯೇ ಬೀಳುವರು. ಅವರ ಮೇಲೆ ನೀನು ದಯೆತೋರುವುದು ಉಚಿತವಾಗಿರುವುದಿಲ್ಲ. ||೭೮||

ವೇದಗಳು ಶಿವಲಿಂಗಪೂಜೆಯನ್ನು ವಿಧಿಸುತ್ತವೆ. ಅಂತಹ ಪ್ರಬಲಪ್ರಮಾಣ ಬೋಧಿತವಾದ ವಿಧಿಯನ್ನು ಅನುಷ್ಠಾನಮಾಡದೇ ಉಲ್ಲಂಘಿಸುತ್ತಾರೆಯೋ ಅವರು ದುರಾತ್ಮರು ಮತ್ತು ಮಹಾಪಾಪಿಗಳು. ಅವರಿಗೆ ನರಕದಲ್ಲಿಯೇ ನಿವಾಸವು ಖಂಡಿತ. ||೭೯||

ಹಾಗೆಯೇ ಭಸ್ಮಧಾರಣೆಯೂ ವೇದದಿಂದಲೇ ವಿಹಿತವಾಗಿರುವುದು. ಅಂಥ ಭಸ್ಮವನ್ನು ಧರಿಸದೇ ಯಾರು ವೇದವನ್ನು ಉಲ್ಲಂಘಿಸುವರೋ, ಅವರು ಮಹಾಪಾಪಿಗಳು. ಅವರು ಸತತವೂ ನರಕದಲ್ಲಿಯೇ ವಾಸಿಸುವರು. ||೮೦||

ರುದ್ರಾಕ್ಷಭೂಷಣಮುಮೇ ಶ್ರುತಿಷು ಪ್ರಸಿದ್ಧಂ
ತತ್ಕಾರ್ಯಮೇವ ಸತತಂ ದ್ವಿಜಪುಂಗವೈಸ್ತು ॥
ತ್ಯಕ್ತ್ವಾ ತದಂತಸಮಯೇ ನರಕಂ ಪ್ರಯಾಂತಿ
ಸತ್ಯಂ ತ್ರಿಸತ್ಯಮಿದಮೂರ್ಧ್ವಭುಜೋ ವದಾಮಿ ॥೮೧॥

ಶಿವಲಿಂಗಮತುಂಗಮಸ್ತು ತುಂಗಂ
ಕಿಮನೇನಾಪಿ ವಿಶೇಷಚಿಂತನೇನ ॥
ಯದಿ ನಾರ್ಮದಮೀಕ್ಷಿತಂ ಸ್ಮೃತಂ ವಾ
ಸಕೃದಭ್ಯೇತಿ ಮಮಾಂತಿಕಂ ಭವಾನಿ ॥೮೨॥

ನಯನಾಂಬುಜಮೀಕ್ಷಣಾಯ ಸೃಷ್ಟಂ
ಶಿವಲಿಂಗಸ್ಯ ಸಮರ್ಚಿತಸ್ಯ ಗೌರಿ ॥
ತದವೇಕ್ಷಣಹೀನಜನ್ಮ ಹೀನಂ
ನರಕಾವಾಸನಿವಾಸಹೇತುಭೂತಂ ॥೮೩॥

ಹಾಗೆಯೇ ರುದ್ರಾಕ್ಷಮಾಲಾಧಾರಣೆಯೂ ವೇದದಲ್ಲಿಯೇ ಉಕ್ತವಾಗಿರುತ್ತದೆ. ಆದ್ದರಿಂದ ಬ್ರಾಹ್ಮಣರು ಅವಶ್ಯವಾಗಿ ರುದ್ರಾಕ್ಷವನ್ನು ಧರಿಸಬೇಕು. ಹಾಗಿಲ್ಲದೇ ರುದ್ರಾಕ್ಷಧಾರಣೆಯನ್ನು ತ್ಯಜಿಸಿದರೆ ಅವರು ಮರಣವಾದ ಕೂಡಲೇ ನರಕಕ್ಕೇ ಹೋಗುವರು. ಇದು ಸತ್ಯ ಎಂಬುದನ್ನು ಕೈಗಳನ್ನು ಮೇಲಕ್ಕೆತ್ತಿ ಶಪಥ ಮಾಡುತ್ತೇನೆ. ಇದು ತ್ರಿಕಾಲಾಬಾಧಿತವಾದ ಸತ್ಯ. ॥೮೧॥

ನನ್ನ ಭಕ್ತನು ಪೂಜೆಮಾಡತಕ್ಕ ಲಿಂಗವು ಚಿಕ್ಕದೇ ಆಗಿರಲಿ, ಅಥವಾ ದೊಡ್ಡದೇ ಆಗಿರಲಿ, ಮಹಿಮೆಯಲ್ಲಿ ಮಾತ್ರ ವ್ಯತ್ಯಾಸವಿರುವುದಿಲ್ಲ. ಅದರ ತಾರತಮ್ಯವನ್ನೂ ಪರಿಗಣಿಸಬೇಕಾಗಿಲ್ಲ. ಯಾವುದನ್ನಾದರೂ ಪೂಜಿಸಲೇಬೇಕು. ಆದರೆ ನಾರ್ಮದ ಲಿಂಗವನ್ನು ಒಂದು ಸಲ ಸಂದರ್ಶಿಸಿದರೂ, ಅಥವಾ ಧ್ಯಾನಿಸಿದರೂ ಖಂಡಿತವಾಗಿಯೂ ನನ್ನ ಸಾಮೀಪ್ಯವೇ ಪ್ರಾಪ್ತವಾಗುವುದು. ॥೮೨॥

ಶಿವಲಿಂಗವನ್ನು ಸದಾ ಸಂದರ್ಶಿಸಲೆಂದೇ ಮನುಷ್ಯರಿಗೆ ಲೋಚನಗಳು ಸೃಷ್ಟವಾಗಿರುವುವು. ಆದ್ದರಿಂದ ಪರಿಷ್ಕಾರವಾಗಿ ಪೂಜೆಯಿಂದ ಅಲಂಕೃತವಾದ ಶಿವಲಿಂಗವನ್ನು ಸದಾ ಸಂದರ್ಶಿಸಬೇಕು. ಹಾಗೆ ಭಕ್ತಿಯಿಂದ ಯಾರು ದರ್ಶನ ಮಾಡುವುದಿಲ್ಲವೋ ಅವರ ಜನ್ಮವು ಅವರ ಕಣ್ಣುಗಳೂ ಹೀನವಾದವುಗಳು. ಆದ್ದರಿಂದಲೇ

ಪರಮಂ ಖಲು ಕರ್ಣಭೂಷಣಂ
ಶಿವನಾಮಶ್ರವಣಂ ಮನೋಹರಂ ।
ತದಪಾರಸುಖಾವಹಂ ಸದಾ
ನ ಕೃತಂ ಯೇನ ಸ ಯಾತಿ ಯಾತನಾಂ ॥೮೪॥

ಕುಸುಮಾರ್ಚಿತಲಿಂಗಚಿಂತನಂ
ಮನಸಃ ಕೃತ್ಯಮಿತಿ ಶ್ರುತಂ ತತಃ ।
ತದಪಾಸ್ಯ ವಸಂತಿ ದುರ್ಜನಾಃ
ಪ್ರಲಯಾಯ ಪ್ರಭವಂತಿ ಕೇವಲಂ ॥೮೫॥

ಕೃತ್ಯಂ ಲಿಂಗಸಮರ್ಚನಂ ಕರತಲಸ್ಯೇತಿ ಶ್ರುತಂ ತೇನ ಚೇತ್
ತನ್ನೈವಾಸಕೃದಾದರೇಣ ನ ಕೃತಂ ಯದ್ವಾ ಸಕೃತ್ತೇನ ಕಿಂ ।
ತಸ್ಯ ಸ್ಯಾತ್ಫಲಮಿತ್ಯತಃ ಸ ಪತತಿ ಜ್ವಾಲಾಕುಲವ್ಯಾಕುಲೇ
ಕುಂಭೀಪಾಕಜಪಾವಕೇ ಸ ಶುನಕೀಯೋನಿಂ ಪ್ರಯಾಸ್ಯತ್ಯಪಿ ॥೮೬॥

---

ಆ ಕಣ್ಣುಗಳು ಅವರ ನರಕವಾಸಕ್ಕೆ ಕಾರಣಗಳಾಗುತ್ತವೆ. ಅವರಿಗೆ ನರಕ ವಾಸವು ತಪ್ಪಿದ್ದಲ್ಲ. ||೮೩||

ಕಿವಿಗಳಿಗೆ ನಿಜವಾದ ಭೂಷಣವೆಂದರೆ ಶಿವನಾಮಶ್ರವಣವೇ ಸರಿ. ಮನೋಹರವೂ ಇಂಪೂ ಆಗಿರುವ ಶಿವನಾಮವನ್ನು ಕೇಳುವುದೇ ಕಿವಿಗೆ ಅಲಂಕಾರ. ಅದರಿಂದಲೇ ಕಿವಿಗೆ ನಿಜವಾದ ಸುಖವುಂಟಾಗುವುದು. ಅಂಥ ಶಿವನಾಮವನ್ನು ಕೇಳದವನು ಖಂಡಿತವಾಗಿಯೂ ನರಕಯಾತನೆಯನ್ನು ಅನುಭವಿಸುವನು. ||೮೪||

ಪೂಜಾದಿಗಳಿಂದ ಪರಿಷ್ಕಾರವಾಗಿ ಅಲಂಕೃತವಾಗಿರುವ ಭವ್ಯ ಶಿವಲಿಂಗವನ್ನು ಮನಸಾ ಸದಾ ಧ್ಯಾನಿಸಬೇಕೆಂದು ವೇದಗಳಿಂದ ನಿಯಮಿತವಾಗಿರುತ್ತದೆ. ಅಂಥ ಮಂಗಳಕರವಾದ ವಿಧಿಯನ್ನು ಯಾರು ಉಲ್ಲಂಘಿಸುವರೋ, ಆ ಪಾಪಿಗಳು ಕೇವಲ ನಾಶಹೊಂದುವುದಕ್ಕೆ ಸಿದ್ಧರಾಗುತ್ತಾರೆ. ||೮೫||

ಮನುಷ್ಯನಿಗೆ ಕೈಗಳು ಸೃಷ್ಟವಾಗಿರುವುವು. ಆ ಕೈಗಳಿಂದ ಸದಾ ಶಿವಲಿಂಗಾರ್ಚನೆಯನ್ನು ಮಾಡಲೆಂದು ವೇದಗಳೂ ವಿಧಾನಮಾಡಿರುವುವು. ಇಂಥ ಕೈಗಳಿಂದ ಯಾರು ಪದೇಪದೇ ಅಥವಾ ಒಂದು ಸಲವೂ ಶಿವಲಿಂಗಾರ್ಚನೆಯನ್ನು ಮಾಡಿರುವುದಿಲ್ಲವೋ, ಅಂಥ ಕೈಗಳಿಂದ ಯಾವ ಶುಭ ಫಲತಾನೆ ಉಂಟಾದೀತು? ಅದಕ್ಕೆ

ಉದ್ಧೃತ್ಯಾದ್ಯ ಭುಜದ್ವಯಂ ನಿಗದಿತಂ ಲಿಂಗಾರ್ಚನಂ ಕೇವಲಂ
ಮೋಕ್ಷೋಪಾಯತಯಾ ಶ್ರುತಂ ಶ್ರುತಿಶತೈಸ್ತೇನೈವ ಮುಕ್ತಿಃ ಪರಾ ।
ತತ್ರ ಸ್ಯಾದಧಿಕಾರಿತಾಪಿ ಭಸಿತೇನೋದ್ಧೂಲನಂ ಸರ್ವದಾ
ಶೇನೈವಾನುಲವಂ ತ್ರಿಪುಂಡ್ರರಚನಾಭಾಲಾದಿಕೇ ಚಾಲಿಕೇ ॥೮೭॥

ಮನ್ನಾಮಸ್ಮರಣೇನ ಕೇವಲಮುಮೇ ಪ್ರಾಣಪ್ರಯಾಣೇಪ್ಸಿತಂ
ಭಸ್ಮಾಂಗೇ ಕರಕಂಠಕರ್ಣಯುಗಲೇ ರುದ್ರಾಕ್ಷಮಾಲಾ ಯದಿ ।
ಮುಕ್ತಿಃ ಸ್ಯಾದನಪಾಯಿನೀ ಮಮ ಸಖಾ ತಸ್ಮಾನ್ಮದೀಯಂ ಧನಂ
ಸರ್ವಂ ತಸ್ಯ ಸ ಏಷ ಕೇವಲಮಹಂ ಸತ್ಯಂ ತ್ರಿಸತ್ಯಂ ಶಿವೇ ॥೮೮॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ ಶಿವಕಿಂಕರ ಯಮ ಸಂವಾದೇ ಗೌರೀ ಶಂಕರ ಸಂವಾದ ವರ್ಣನೇ ಶಿವಧರ್ಮಾನು ವರ್ಣನಂ ನಾಮ ದ್ವಾದಶೋಽಧ್ಯಾಯಃ

ವಿರುದ್ಧವಾಗಿ ಅನಿಷ್ಟಫಲಗಳೇ ಪ್ರಾಪ್ತವಾಗುವುವು. ಅಂಥ ಶಿವಪೂಜಾತ್ಯಾಗಿಯು ಅಗ್ನಿ ನರಕದಲ್ಲಿಯೇ ಬಿದ್ದು ಘೋರಯಾತನೆಗಳನ್ನು ಅನುಭವಿಸುವನಲ್ಲದೇ ನಾಯಿಯ ಗರ್ಭದಲ್ಲಿ ವಾಸಿಸಿ ನಾಯಿ ಜನ್ಮದಲ್ಲಿ ಹುಟ್ಟುವನು. ಮತ್ತೆ ಕುಂಭೀ ಪಾಕದಲ್ಲಿ ಬೀಳುವನು. ॥೮೬॥

ಇಂದು ಸತ್ಯವಾದ ವಿಚಾರವನ್ನು ಎರಡು ಕೈಗಳನ್ನು ಮೇಲಕ್ಕೆತ್ತಿ ಶಪಥ ಪೂರ್ವಕವಾಗಿ ಹೇಳುತ್ತಿದ್ದೇನೆ. ಇದು ಸರ್ವಥಾ ಸತ್ಯಕರ್ತವ್ಯವು. ಶಿವಲಿಂಗಾ ರ್ಚನೆಯೇ ಮೋಕ್ಷಕ್ಕೆ ನಿಜವಾದ ಉಪಾಯವೆಂದು ವೇದಗಳೆಲ್ಲವೂ ಸಾರುತ್ತಿವೆ. ಇಂಥ ಉಪಾಯದಲ್ಲಿ ಕೇವಲ ಶೈವರಿಗೆ ಅಧಿಕಾರವಿರುವುದು. ಯಾರು ಮೈಗೆಲ್ಲಾ ಭಸ್ಮವನ್ನು ಹಚ್ಚಿಕೊಂಡಿರುವರೋ, ಹಣೆಯಲ್ಲಿ ಸದಾ ತ್ರಿಪುಂಡ್ರರೇಖೆಯನ್ನು ಧರಿಸಿಕೊಂಡಿರುವರೋ ಅವರೇ ಶೈವರು. ಅವರೇ ಈ ಸುಲಭವಾದ ಉಪಾಯ ವನ್ನು ಅನುಷ್ಠಾನ ಮಾಡಿ ಮುಕ್ತಿಯನ್ನು, ಪರಮಪದವನ್ನು ಪಡೆಯುವರು. ॥೮೭॥

ಯಾವನು ಪ್ರಾಣಪ್ರಯಾಣಸಮಯದಲ್ಲಿ ಆದರ ಭಕ್ತಿಗಳಿಂದ ನನ್ನನ್ನು ಧ್ಯಾನ ಮಾಡುವನೋ, ಮತ್ತು ಮೈಗೆಲ್ಲಾ ಭಸ್ಮವನ್ನೂ, ಕೈ, ಕುತ್ತಿಗೆ, ಕಿವಿ ಮುಂತಾದ ಅಂಗಗಳಲ್ಲಿ ರುದ್ರಾಕ್ಷಮಾಲೆಯನ್ನೂ ಧರಿಸಿಕೊಂಡು ಪ್ರಾಣತ್ಯಾಗ

ಮಾಡುವನೋ ಅವನಿಗೆ ನಿಜವಾಗಿಯೂ ಎಂದೂ ನಾಶವಾಗದಿರುವ ಮುಕ್ತಿಯು ಲಭಿಸುವುದು. ಆತನೇ ನನ್ನ ಮಿತ್ರನು. ಧನವೂ ಎಲ್ಲವೂ ಆತನೇ. ಆತನೇ ನಾನು, ನಾನೇ ಆತನು. ಹೀಗಿರುವೆನು. ಓ ಗಿರಿಜೆ ! ಈಗ ನಾನು ಹೇಳಿರುವುದೆಲ್ಲವೂ ಪರಮ ರಹಸ್ಯವಾದದ್ದು ಮತ್ತು ಸತ್ಯವಾದದ್ದು. ಎಂದು ಶಂಕರನು ಪಾರ್ವತಿಗೆ ಹೇಳಿದ ನೆಂದು ಶಿವಕಿಂಕರರು ಯಮನಿಗೆ ತಿಳಿಸಿದರು. ||೮೮||

ಇಲ್ಲಿಗೆ ಶಿವರಹಸ್ಯದಲ್ಲಿ ಹರನಾಮಕವಾದ ಮೂರನೆಯ ಅಂಶದ ಉತ್ತರಾರ್ಧದಲ್ಲಿ ಪಾರ್ವತಿಯು ಪರಶಿವನನ್ನು ಪ್ರಾರ್ಥಿಸಿದ ಹನ್ನೆರಡನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ತ್ರಯೋದಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತ್ಥಂ ಸಾ ಗಿರಿರಾಜರಾಜತನಯಾ ಶ್ರುತ್ವಾ ಮುಹುಶ್ಶಂಕರ
ವ್ಯಾಹಾರಾಮೃತಸಾಗರಾನ್ ಕರುಣಯಾ ಪ್ರಾಹ ಪ್ರಮೋದಾವಹಂ ।
ನತ್ವಾ ತತ್ಪದಪಂಕಜಂ ಕರತಲೇ ಧೃತ್ವಾಪಿ ಮತ್ವಾಪಿ ಸಾ
ತತ್ಕೃತ್ಯಂ ಪುನರೇವ ಸಸ್ಮಿತಮುಖಂ ಸ್ಮೇರಾನನಾ ಶಂಕರಂ ॥೧॥

## ಹದಿಮೂರನೆಯ ಅಧ್ಯಾಯ

ಈ ರೀತಿಯಾಗಿ ಪರಮೇಶ್ವರನು ಅಮೃತವೃಷ್ಟಿಯನ್ನೇ ಸುರಿಸುವನೋ ಎಂಬಂತೆ ಅಖಂಡವಾಗಿ ಮಾತನಾಡಿದನು. ಆ ಮಾತುಗಳು ಸತ್ಯವೂ ಮಧುರವೂ ಆಗಿದ್ದುದರಿಂದ ಅದನ್ನು ಕೇಳುತ್ತಿದ್ದರೆ ಕಿವಿಗಳಿಗೆ ಆಪ್ಯಾಯಮಾನವಾಗುತ್ತಿದ್ದವು. ಇಂಥ ಮಾತುಗಳನ್ನು ಪಾರ್ವತಿಯು ಕೇಳಿ ಅತ್ಯಂತ ಆನಂದವನ್ನು ಹೊಂದಿದಳು. ಅನಂತರ ಮತ್ತೆ ಏನನ್ನೋ ಕೇಳಬೇಕೆಂಬ ಅಪೇಕ್ಷೆಯಿಂದ ಹಸನ್ಮುಖಿಯಾಗಿ ಪರಮೇಶ್ವರನ ಚರಣಕಮಲಗಳಿಗೆ ಎರಗಿ ಸುಖಾಸೀನನಾದ ಶಂಕರನನ್ನು ಕುರಿತು ಹೀಗೆ ಹೇಳಿದಳು. ಹೀಗೆಂದು ಯಾಜ್ಞವಲ್ಕ್ಯಮುನಿಯು ಹೇಳಿದನು. ॥೧॥

ಸ್ವಾಮಿನ್ ಶಂಕರ ಚಂದ್ರಶೇಖರ ಮಹಾದೇವಾಮರಾಧೀಶ್ವರ
ವ್ಯಾಹಾರಾಮೃತಸಾರಪೂರರಚನಾ ಕರ್ಣಾವತಂಸಾಯತೇ ।
ಅದ್ಯಾಪೂರ್ವಮಪೂರ್ವಯುಕ್ತಿಮಣಿಭಿರ್ವ್ಯಾಪ್ತಂ ಪರಂ ಭೂಷಣಂ
ಸಂಪೂರ್ಣಂ ಮಮ ಕರ್ಣಯೋರ್ವಿರಚಿತಂ ತನ್ಮೇ ಪರಂ ಭೂಷಣಂ ॥೨॥

ಶಂಭೋ ತಸ್ಯ ಮಹಾಪ್ರಯಾಣಸಮಯೇ ತಸ್ಮಿನ್ನರಣ್ಯೇ ಶುಭೇ
ದೂರೇ ಶಂಕರಮಂದಿರಂ ರುಚಿಕರಂ ತಸ್ಮಾತ್ಶಿಲಾದ್ಯಾನಿಲಃ ।
ಜಾತಸ್ತತ್ಕುಣಪಂ ಸ್ಪೃಶನ್ನುಪಗತೋ ನೂನಂ ಸ ಧನ್ಯಸ್ತತಃ
ತಸ್ಯೈವಂ ಯಮಯಾತನಾತ್ವನುಚಿತಾ ಮುಕ್ತಿಶ್ಚ ಸಂಭಾವಿತಾ ॥೩॥

---

ಓ ಸ್ವಾಮಿನ್! ನೀನು ಎಷ್ಟಾದರೂ ಪರಮ ಚತುರನಲ್ಲವೇ. ನೀನು ರಸಿಕ ಶ್ರೇಷ್ಠನಾಗಿರುವೆಯಲ್ಲದೇ, ನಿನ್ನನ್ನೇ ಸಕಲ ದೇವತೆಗಳಿಗೂ ಅಧಿಪತಿ ಎಂದು ನಂಬಿರುವರು. ಆದ್ದರಿಂದಲೇ ಇಷ್ಟು ಮನೋಹರವಾದ ಮಾತುಗಳನ್ನಾಡಿರುವೆ. ಇದೇ ಮಾತುಗಳು ನನ್ನ ಕಿವಿಗಳಿಗೆ ಇಂದು ಒಂದು ಅಪೂರ್ವವಾದ ಆಭರಣಗಳನ್ನಿಟ್ಟು ಕೊಂಡಂತೆ ಆನಂದವುಂಟುಮಾಡುತ್ತಿರುವುವು. ನಿನ್ನ ಮಾತುಗಳೆಂದರೆ ಕೇವಲ ಅಮೃತಪ್ರವಾಹದ ಸಾರಾಂಶವಿದ್ದಂತೆ ನನಗೆ ಭಾಸವಾಗುತ್ತಿತ್ತು. ಆ ಮಾತುಗಳು ಅತ್ಯಂತ ನ್ಯಾಯಬದ್ಧವಾಗಿಯೂ ತರ್ಕಶುದ್ಧವಾಗಿಯೂ ಇದ್ದುದರಿಂದ ಅದೇ ಒಂದು ಅಪೂರ್ವವಾದ ರತ್ನಮಣಿಯಂತೆ ಇದ್ದಿತು. ಇಂಥ ಅಪೂರ್ವವಾದ ಅಲಂಕಾರದಿಂದ ನನ್ನ ಕಿವಿಗೆ ಇಂದು ಉತ್ತಮ ಭೂಷಣವನ್ನು ನೀನೇ ಕಲ್ಪಿಸಿದೆ. ಆದರೆ ನನ್ನದು ಇನ್ನೊಂದು ವಿನಂತಿ ಇರುತ್ತದೆ. ॥೨॥

ಲೋಕ ಶಂಕರನೇ! ನೀನು ಹೇಳಿದಂತೆ ಆ ಅಗ್ನಿನರಕದಲ್ಲಿ ಬಿದ್ದಿರುವವನು. ಪಾಪಿಯೇ ನಿಜ. ಆದರೆ ಆತನಿಗೆ ಒಂದು ಸುಯೋಗವೂ ದೊರಕಿರುತ್ತದೆ. ಏನೆಂದರೆ, ಆ ಪಾಪಿಯು ಯಾವ ಅರಣ್ಯದಲ್ಲಿ ಮರಣವನ್ನು ಹೊಂದಿದನೋ ಅಲ್ಲಿಯೇ ಒಂದು ಶಿವಾಲಯವಿದ್ದಿತು. ಅದು ದೂರದಲ್ಲಿದ್ದರೂ ಅದರ ಮೇಲೆ ಬೀಸಿದ ಗಾಳಿಯು ಈ ಪಾಪಿಯ ಶವದಮೇಲೂ ಬೀಸಿರುತ್ತದೆ. ಆ ಪುಣ್ಯಗಾಳಿಯ ಸಂಪರ್ಕದಿಂದ ಈತನೂ ಪವಿತ್ರನೂ ಪುಣ್ಯವಂತನೂ ಆಗಿಬಿಟ್ಟನಷ್ಟೆ. ಹೀಗೆ ಈತನು ಧನ್ಯನಾದಮೇಲೆ ಈತನಿಗೆ ನರಕಯಾತನೆಯು ಯೋಗ್ಯವಾಗಿರುವುದಿಲ್ಲ. ಆ ಪುಣ್ಯಸಂಯೋಗ ಲಾಭದಿಂದ ಈತನು ನರಕಯಾತನೆಯಿಂದ ಮುಕ್ತಿಯನ್ನು ಪಡೆಯಲು ಯೋಗ್ಯನಾಗಿದ್ದಾನೆಯಲ್ಲವೇ ? ॥೩॥

ಽ

ವಾತೇನೈವ ಹಿ ತೇನ ನೀತಮಮುಲಂ ತತ್ಕಾನನವ್ಯಾಪೃತಂ
ಯತ್ಕಿಂಚಿದ್ದವಭಸ್ಮ ತೇನ ಚ ತನುಸ್ತಸ್ಯಾತಿಪೂತಾ ತನುಃ ।
ಯಸ್ಯೇಯಂ ಯಮಯಾತನಾ ಕಥಮಯಂ ಮುಕ್ತೋಽಸ್ತು ಕಾ ತಾವತಾ
ಹಾನಿಃ ಸ್ಯಾದಪರಾಧಿನಾಮವನಮಪ್ಯರ್ಥೇಂದುಮೌಳೇ ಸ್ಮೃತಂ ॥೪॥

ಯಸ್ಯಾಂಗೇ ದವಭಸ್ಮರೇಣುಪವನಸ್ತಂ ಪಾವನಂ ಮೇನಿರೇ
ವಾತಶ್ಯಂಕರಮಂದಿರಾದುಪಗತಃ ಪಾಪಾಪಹಾರೋದ್ಧೃತಃ ।
ತೇನಾಪ್ಯನ್ವಿತ ಏವ ಸೋಽಯಮಘುನಾ ಮುಕ್ತೋಽಸ್ತು ಮಯ್ಯಸ್ತಿ ಚೇತ್
ಸ್ನೇಹಸ್ತೇ ಸ್ಮರಶಾಸಕಾಸಕೃದಿದಂ ವಕ್ತವ್ಯಮಪ್ಯಸ್ತಿ ಕಿಂ ॥೫॥

---

ಗಾಳಿಯು ಅರಣ್ಯದಲ್ಲೆಲ್ಲಾ ಬೀಸುತ್ತಾ ಅಲ್ಲಲ್ಲೇ ಕಾಡುಗಿಚ್ಚಿನಿಂದ ಉಂಟಾದ ಭಸ್ಮವನ್ನೂ ತಂದು ಆ ಪಾಪಿಯ ಶವದಮೇಲೆ ಹಾಕಿರುತ್ತದೆ. ಇಂಥ ಪವಿತ್ರವಾದ ಭಸ್ಮದ ಸಂಪರ್ಕದಿಂದಲೇ ಈ ಪಾಪಿಯ ಶರೀರವು ಪವಿತ್ರವಾಗಿರುತ್ತದೆ. ಹೀಗೆ ಪುಣ್ಯಸಂಬಂಧವುಳ್ಳವನಿಗೆ ನರಕಯಾತನೆಯು ಉಚಿತವಾಗಿರುವುದಿಲ್ಲವಷ್ಟೆ. ಅಲ್ಲದೇ ಅಪರಾಧಿಗಳನ್ನು ಕ್ಷಮಿಸಿ ಕಾಪಾಡುವುದೂ ನಮ್ಮ ಕರ್ತವ್ಯವಾಗಿರುವುದು. ಆದುದರಿಂದ ಈ ಪಾಪಿಯನ್ನು ಆ ನರಕದಿಂದ ಬಿಡಿಸಿ ಕಾಪಾಡು. ಅಥವಾ ಈ ಒಬ್ಬ ದುಃಖಿಯನ್ನು ಕಾಪಾಡಿದರೆ ಪ್ರಮಾದವೇನಿದೆ ? ॥೪॥

ಪವಿತ್ರವಾದ ಕಾಡುಗಿಚ್ಚಿನ ಭಸ್ಮಸಂಪರ್ಕವುಳ್ಳ ವಾಯುವು ಯಾವಾತನ ಶರೀರದಮೇಲೆ ಬೀಸಿರುವುದೋ, ಆತನನ್ನು ಪುಣ್ಯಾತ್ಮನೆಂದೇ ಹೇಳುವರು. ಅಲ್ಲದೇ ಆ ಗಾಳಿಯು ಶಿವಮಂದಿರದ ಮೇಲೆಯೂ ಬಂದಿರುವುದರಿಂದ ಅದರ ಸಂಪರ್ಕವಾದೊಡನೆಯೇ ಸಕಲ ಪಾಪಗಳೂ ನಾಶವಾಗುವುವು. ಹೀಗೆ ಪುಣ್ಯಸಂಗ್ರಹ ಮಾಡಿದ ಈತನು ನರಕಯಾತನೆಯ ದೆಸೆಯಿಂದ ಮುಕ್ತನಾಗಲು ಯೋಗ್ಯನಾಗಿದ್ದಾನೆ. ಓ ಮನ್ಮಥಧ್ವಂಸಿಯೇ! ನನಗೆ ಆತನು ಸಂಕಟಪಡುವುದನ್ನು ನೋಡುವುದಕ್ಕಾಗುವುದಿಲ್ಲ. ನಿನಗೆ ನನ್ನ ಮೇಲೆ ಪ್ರೀತಿ ಇದ್ದರೆ ನನ್ನ ಪ್ರಾರ್ಥನೆಯನ್ನು ನಡೆಸಿಕೊಡು. ನಾನು ಕೇಳುವುದೊಂದೇ ಇದು. ಆ ಪಾಪಿಯನ್ನು ನರಕದಿಂದ ಬಿಡಿಸಿ ಕಾಪಾಡು. ಇದಕ್ಕಿಂತಲೂ ಹೆಚ್ಚಾದ ಇಷ್ಟಾರ್ಥವು ನನಗಿಲ್ಲ. ॥೫॥

ದವಸಿತಭಸಿತಾಣುವ್ಯಾಪ್ತವಾತ್ಯಾ ವಿನೀತ
ಛವಪತನಜಭೀತಿವ್ಯಾವೃತಾ ಭೂತಸಂಘಾಃ ।
ನಿಜತನುಮತಿಘೋರಾಂ ಕ್ಷುತ್ಪಿಪಾಸಾತಿದೂನಾಂ
ಜಹುರತಿಮುದಿತಾಸ್ತೇ ಬ್ರಹ್ಮಲೋಕಂ ಪ್ರಪನ್ನಾಃ ॥೬॥

ಸಿತಭಸಿತಕಣಾನಾಂ ಯಃ ಪ್ರಭಾವಸ್ಸ ವೇದ್ಯೈಃ
ಕಥಮಪಿ ವದಿತೋ ವಾ ನಾಮರ್ತ್ಯೈರ್ವಾ ಮಯಾ ವಾ ।
ಶಿವ ಸಿತಭಸಿತೇನೋದ್ಧೂಳಿತಸ್ತಸ್ಯ ತತ್ತ್ವಂ
ಸ್ತುತಮಪಿ ನಿಗಮಾಂತೈರ್ಜ್ಞಾಯತೇ ನ ತ್ವಯಾ ಕಿಂ ॥೭-೮॥

ಭೂತಪ್ರೇತಪಿಶಾಚಘಾತುಕತಯಾ ಜ್ಞಾತಾ ವಿಭೂತಿಸ್ತ್ವಯಾ
ಸಾ ಸಂಸಾರಪಿಶಾಚನಾಶಕತಯಾ ಜ್ಞಾತಾ ನ ಕಿಂ ಶಂಕರ ।

ಪ್ರಪಂಚದಲ್ಲಿ ಎಷ್ಟೋ ಪ್ರಾಣಿಗಳು ಇದೇ ರೀತಿಯಾಗಿ ಕೇವಲ ವಾಯು ಸಂಸರ್ಗದಿಂದಲೂ, ಅದೇ ವಾಯುವು ಮೇಲೆ ತಂದುಹಾಕಿದ ಕಾಡುಕಿಚ್ಚಿನ ಭಸ್ಮ ಸಂಪರ್ಕದಿಂದುಂಟಾದ ಪುಣ್ಯದಿಂದಲೂ, ಹಸಿವು ಬಾಯಾರಿಕೆಗಳಿಂದ ದುಃಖ ಪೂರ್ಣವಾದ ತಮ್ಮ ಶರೀರವನ್ನು ತ್ಯಜಿಸಿ ಬ್ರಹ್ಮಲೋಕವನ್ನು ಪಡೆದಿರುತ್ತವೆ. ಆ ಕಾಡುಗಿಚ್ಚಿನ ಭಸ್ಮದಿಂದಲೇ ಅವುಗಳ ಸಕಲ ಪಾಪಗಳೂ ನಾಶವಾದವು. ಅದರಿಂದಲೇ ಸಕಲ ಘೋರ ಯಾತನೆಗಳನ್ನೂ ತಪ್ಪಿಸಿಕೊಂಡು ಶಾಶ್ವತವಾದ ಆನಂದವನ್ನು ಹೊಂದಿರುವಾಗ ಈತನೂ ಪುಣ್ಯಾತ್ಮನೇ ಆಗಿರುವನಷ್ಟೆ. ॥೬॥

ಆ ಧವಳವಾದ ಭಸ್ಮಧೂಳಿಯ ಮಹಿಮೆಯು ಇಷ್ಟೆಂದು ಹೇಳಲು ವೇದಕ್ಕೇ ಶಕ್ತಿ ಇಲ್ಲ. ಅಂದಮೇಲೆ ತದಿತರರಾದ ದೇವಗಣಗಳಾಗಲಿ ಅಥವಾ ನಾನಾಗಲಿ ಅದನ್ನು ಹೇಗೆ ವಿವರಿಸಲು ಸಾಧ್ಯ? ನಮ್ಮಿಂದ ಆ ಮಹಿಮೆಯನ್ನು ತಿಳಿಸಲೂ ಸಹ ಶಕ್ಯವಿಲ್ಲ. ಆದರೆ ವೇದಾಂತಗಳು ಆ ಭಸ್ಮಧಾರಣೆಯ ಮಹಿಮೆಯನ್ನು ಅನೇಕಪ್ರಕಾರವಾಗಿ ಶ್ಲಾಘಿಸಿರುತ್ತವೆ. ಆ ತತ್ತ್ವರಹಸ್ಯವು ನಿನಗೆ ತಿಳಿದಿರುವುದಿಲ್ಲವೇ? ನೀನು ಸರ್ವಜ್ಞನೇ ಆಗಿರುತ್ತೀಯಷ್ಟೆ! ॥೭-೮॥

ವಿಭೂತಿಯು ಮಹಾಪವಿತ್ರವಾದದ್ದು. ಅದು ತನ್ನ ಮಾಹಾತ್ಮ್ಯೆಯಿಂದ ಸಕಲ ಭೂತಪ್ರೇತಪಿಶಾಚಗಳನ್ನೂ ಓಡಿಸಿ ನಾಶಮಾಡುವುದು ಎಂದು ಪ್ರಸಿದ್ಧವಾಗಿರುವುದು. ಅದೇ ವಿಭೂತಿಯು ಈ ಸಂಸಾರವೆಂಬ ಪಿಶಾಚವನ್ನು ನಾಶಮಾಡ

ತದ್ವಾತೇನ ವಿಧೂತಪಾತಕಕಲುಷಾಸ್ತೇ ಕಾಲಕಾಲಾಧುನಾ
ಸರ್ವೇಷಾಮಪಿ ಪಾವನಾಸ್ಸುರಸರಿದ್ವಾತಾನ್ ಪುನಂತ್ಯೇವ ತೇ ॥೯॥

ಹರ ಜಾತು ನ ಜಾಯತೇ ನರಃ
ಸ್ಮರಣೇನಾಪಿ ವಿಭೂತಿಧಾರಿಣಃ ॥
ದವಭೂತಿರಜಃಪ್ರಸಾರಜಃ
ಪವನಃ ಪಾವಯತೀತಿ ನಾದ್ಭುತಂ ॥೧೦॥

ಇತಿ ತದ್ವಚನಂ ಶ್ರುತ್ವಾ ಪ್ರಹೃಷ್ಟಃ ಪರಮಾದರಾತ್ ।
ಹರೋಽಪಿ ಪ್ರೇರಯಾಮಾಸ ತಮಾನೇತುಂ ಸ್ವಕಿಂಕರಾನ್ ॥೧೧॥

ಲಾರದೇ! ಈ ಸಂಸಾರಬಂಧನವನ್ನೂ ನರಕಯಾತನೆಯನ್ನೂ ತಪ್ಪಿಸಲಾರದೇ? ಈ ತತ್ತ್ವವಿಚಾರಗಳನ್ನು ನೀನು ಅರಿಯೆಯಾ? ಆ ಭಸ್ಮಕ್ಕೆ ಸಕಲ ಪಾಪಗಳನ್ನೂ ನಾಶಮಾಡಲು ಸಾಮರ್ಥ್ಯವಿದೆ ಎಂದು ನಾನು ತಿಳಿಯುತ್ತೇನೆ. ಅಂಥ ಪವಿತ್ರವಾದ ಭಸ್ಮಸಂಪರ್ಕದಿಂದ ಅಥವಾ ಅದರ ಗಾಳಿಯ ಸಂಪರ್ಕದಿಂದ ಕೂಡ ಎಷ್ಟೋ ಜನರೂ, ದೇವತೆಗಳೂ, ಸಕಲ ಪಾಪಗಳನ್ನೂ ಕಳೆದುಕೊಂಡು ಪವಿತ್ರರಾಗಿ ಪುಣ್ಯಾತ್ಮರಾಗಿರುತ್ತಾರೆ. ಅಂಥ ಪುಣ್ಯಾತ್ಮರು ಸ್ವತಃ ಪವಿತ್ರಳಾದ ಗಂಗಾನದಿಯನ್ನೂ ಸಹ ಪವಿತ್ರಗೊಳಿಸುತ್ತಾರೆ. ಆ ಭಸ್ಮದ ಮಹಿಮೆಯು ಅಪಾರವಾದುದು. ॥೯॥

ಕೇವಲ ಭಸ್ಮವನ್ನು ಧರಿಸಿದವನನ್ನು ಸ್ಮರಿಸಿಕೊಂಡರೇ ಮನುಷ್ಯನು ಪುನರ್ಜನ್ಮವನ್ನು ಪಡೆಯದೇ ಮುಕ್ತನಾಗುತ್ತಾನೆ. ಅಂದಮೇಲೆ ಭಸ್ಮದಿಂದ ಪವಿತ್ರವಾದ ಅದೇ ಭಸ್ಮವಿಶಿಷ್ಟವಾದ ಗಾಳಿಯು ಪವಿತ್ರಗೊಳಿಸುತ್ತದೆ ಎಂಬುದರಲ್ಲಿ ಆಶ್ಚರ್ಯವೇನಿದೆ? ಇದು ಯಥಾರ್ಥವೇ ಆಗಿರುತ್ತದೆ. ಆದುದರಿಂದ ಈ ಮನುಷ್ಯನೂ ಅಂಥ ಭಸ್ಮಸಂಪರ್ಕದಿಂದ ಪೂಜ್ಯನಾಗಿದ್ದಾನೆ. ಆತನನ್ನು ಆ ನರಕಯಾತನೆಯಿಂದ ತಪ್ಪಿಸಿ ಕಾಪಾಡು." ॥೧೦॥

ಈ ರೀತಿಯಾದ ಪಾರ್ವತಿಯ ಪ್ರಾರ್ಥನೆಯನ್ನು ಕೇಳಿ, ಪರಮೇಶ್ವರನು ಅತ್ಯಂತ ಸಂತುಷ್ಟನಾದನು. ಪಾರ್ವತಿಯ ಮಾತಿನಲ್ಲಿ ಆದರದಿಂದ, ಕೂಡಲೇ ಆ ಪಾಪಿಯನ್ನು ಕರೆತರಲು ತನ್ನ ದೂತರನ್ನು ಕಳುಹಿಸಿದನು. ॥೧೧॥

ನಂದಿಕೇಶಂ ಚ ಭೃಂಗೀಶಂ ರಿಟಿಂ ಚಾಹೂಯ ಸಾದರಂ ।
ಪ್ರಾಹ ಪ್ರಸನ್ನವದನೋ ಹರೋ ಗೌರೀಮನೋಹರಃ ॥೧೨॥

ಪಶ್ಯ ಪಶ್ಯ ಸ ಭೂಪಾಲೋ ನೀಯತೇ ಯಮಕಿಂಕರೈಃ ।
ಪಾತಿತೋ ವಹ್ನಿಕುಂಡೇಷು ಕಶಾಘಾತಾತಿಪೀಡಿತಃ ॥೧೩॥

ತೇನ ಯದ್ಯಪಿ ಪಾಪಾನಿ ಕೃತಾನ್ಯೇವ ಪ್ರತಿಕ್ಷಣಂ ।
ತಥಾಪಿ ತಸ್ಯ ಪಾಪಾನಿ ನಷ್ಟಾನಿ ದವಭಸ್ಮನಾ ॥೧೪॥

ಅತಸ್ತಸ್ಯ ನಿವಾಸೋಽಸ್ತು ಬ್ರಹ್ಮಲೋಕೇ ತತಃಪರಂ ।
ಸ ಪುನರ್ಭೂಪತಿರ್ಭೂತ್ವಾ ಲಿಂಗಾರ್ಚನರತೋ ಭವೇತ್ ॥೧೫॥

ಗೌರೀವಲ್ಲಭನಾದ ಪರಮೇಶ್ವರನು ನಂದಿ, ಭೃಂಗಿ, ರಿಟಿ, ಮುಂತಾದ ಗಣ ದೂತರನ್ನು ಕರೆಯಿಸಿ ಅವರನ್ನು ಕುರಿತು ಉದಾತ್ತವಾಗಿ ಹೀಗೆ ಅಪ್ಪಣೆಯಿತ್ತನು. ॥೧೨॥

"ನೋಡಿರಿ! ಇದೋ ಈ ಯಮದೂತರು ಆ ರಾಜನನ್ನು ನರಕಕ್ಕೆ ಸೆಳೆಯುತ್ತಿದ್ದಾರೆ. ಈತನನ್ನು ಅಗ್ನಿನರಕದಲ್ಲಿ ಹಾಕಿದ್ದಾರಲ್ಲದೇ ಮೇಲಿಂದ ಚಾಟಿಯ ಪೆಟ್ಟುಗಳನ್ನು ಹೊಡೆದು ಅತ್ಯಂತವಾಗಿ ಪೀಡಿಸುತ್ತಿದ್ದಾರೆ. ಆತನನ್ನು ಕೂಡಲೇ ನೀವು ಹೋಗಿ ಬಿಡಿಸಿರಿ. ॥೧೩॥

ಯದ್ಯಪಿ ಆ ರಾಜನು ಪದೇಪದೇ ಅನೇಕ ಪಾಪಗಳನ್ನು ಮಾಡಿದ್ದಾನೆ. ಆತನ ಪಾಪವು ಅಪಾರವಾಗಿದೆ. ಆದರೆ ಆ ಪಾಪಗಳೆಲ್ಲವೂ ದವಭಸ್ಮ ಸಂಪರ್ಕದಿಂದ ನಾಶವಾಗಿ ಹೋಗಿವೆ. ಕಾಡುಗಿಚ್ಚಿನಿಂದ ಉಂಟಾದ ದವಭಸ್ಮದಲ್ಲಿಯೂ ಪಾಪನಾಶಕತೆಯ ಸಾಮರ್ಥ್ಯವಿದ್ದೇ ಇದೆ. ॥೧೪॥

ಆತನು ದವಭಸ್ಮದಿಂದ ಪೂತನಾಗಿರುತ್ತಾನೆ. ಮುಂದೆ ಬ್ರಹ್ಮಲೋಕದಲ್ಲಿಯೇ ವಾಸಮಾಡುವನು. ಪುನಃ ಆತನು ರಾಜನಾಗಿಯೇ ಹುಟ್ಟಿ ಶಿವಲಿಂಗವನ್ನು ಅರ್ಚಿಸುವುದರಲ್ಲಿ ಆಸಕ್ತನಾಗುವನು. ॥೧೫॥

ಸ ಮೋಚನೀಯೋ ಯತ್ನೇನ ಯಮೋऽತಿಕುಪಿತೋऽಧುನಾ ।
ಸ ಸಾಂತ್ವನೀಯೋ ಯತ್ನೇನ ಮದಾಜ್ಞಾವಚನೈರ್ಮುಹುಃ ॥೧೬॥

ದವಭಸ್ಮಾನ್ವಯೋ ವೃತ್ತಸ್ತಸ್ಯೈವ ಮರಣೋತ್ತರಂ ।
ಇತಿ ತತ್ಸಾಂತ್ವನಂ ಯುಕ್ತಮನ್ಯಥಾ ಕುಪಿತೋ ಭವೇತ್ ॥೧೭॥

ಇತ್ಯುಕ್ತಮೀಶ್ವರೇಣೇತಿ ತೈರುಕ್ತಾ ವಯಮಾದರಾತ್ ।
ಅತಸ್ಸಮಾಗತಾ ಏವ ವಯಮಸ್ಮಾದರಾದಿಹ ॥೧೮॥

ಇತಿ ಶಂಕರದೂತದೂತವಾಕ್ಯೈಃ
ಸ ಯಮಸ್ತಾವದತೀವ ಹೃಷ್ಟಚಿತ್ತಃ

---

ಆತನು ಮಹಾಪಾಪಿ ಎಂದು ಆತನ ಮೇಲೆ ಯಮನು ಅತ್ಯಂತ ಕುಪಿತನಾಗಿದ್ದಾನೆ. ಮಹಾ ಘೋರವಾದ ಯಾತನೆಯ ಶಿಕ್ಷೆಯನ್ನು ವಿಧಿಸಬೇಕೆಂದು ಸಂಕಲ್ಪಿಸಿದ್ದಾನೆ. ಆ ಯಮನಿಗೆ ನನ್ನ ಅಪ್ಪಣೆ ಈರೀತಿ ಎಂದು ಹೇಳಿ ಸಮಾಧಾನಪಡಿಸಿ ಆ ರಾಜನನ್ನು ಕೂಡಲೇ ನರಕದಿಂದ ಬಿಡಿಸಿರಿ. ||೧೬||

ಈ ಸಮಯದಲ್ಲಿ ಯಮನಿಗೆ ಮಹಾ ಕೋಪವಿರುತ್ತದೆ. ಆತನು ಮತ್ತೇನನ್ನು ಹೇಳಿದರೂ ಲಕ್ಷಿಸುವುದಿಲ್ಲ. ಪಾಪಿಯನ್ನು ಶಿಕ್ಷಿಸಿಯೇ ಕೈ ಬಿಡುವೆನೆಂದು ಹಟ ಹಿಡಿಯುವನು. ಆದ್ದರಿಂದ ನೀವು ಆ ದವಭಸ್ಮ ಸಂಪರ್ಕದ ವಿಚಾರವನ್ನೇ ಹೇಳಿ ಸಮಾಧಾನ ಪಡಿಸತಕ್ಕದ್ದು. ಆ ಪಾಪಿಯ ಮರಣ ಸಮಯದಲ್ಲಿ ದವಭಸ್ಮವು ಆತನ ಮೈಮೇಲೆ ಇದ್ದಿತೆಂದು ಹೇಳಿ ಸಮಾಧಾನ ಪಡಿಸಿರಿ. ಅನ್ಯಥಾ ಯಮನು ಮತ್ತೂ ಕೋಪಗೊಳ್ಳುವನು. ||೧೭||

ಈ ರೀತಿಯಾಗಿ ಪರಮೇಶ್ವರನು ನಮಗೆ ಅಪ್ಪಣೆ ಮಾಡಿರುವನೆಂದು ಹೇಳಿ ಯಮನು ಕೊಡುತ್ತಿರುವ ಯಾತನೆಯಿಂದ ಆ ರಾಜನನ್ನು ಬಿಡಿಸಿರಿ" ಹೀಗೆಂದು ಪರಮೇಶ್ವರನು ಅಪ್ಪಣೆ ಮಾಡಲು ನಾವು ನಿಮ್ಮಲ್ಲಿಗೆ ಓಡಿಬಂದೆವು, ಎಂದು ಆ ದೂತರು ಕೂಡಲೇ ಯಮನ ಮುಂದಿನ ಕರ್ತವ್ಯದಲ್ಲಿ ಈರೀತಿ ಪರಮೇಶ್ವರನ ಆಜ್ಞೆ ಇರುತ್ತದೆಂದು ಹೇಳಿದರು. ||೧೮||

ಎಲೈ ರಾಜನೇ! ಈ ರೀತಿಯಾದ ಶಿವದೂತನಾದ ನಂದೀಶ್ವರನ ದೂತರ ಮಾತನ್ನು ಕೇಳಿದ ಕೂಡಲೇ ಯಮನು ಸಂತುಷ್ಟನಾಗಿ ಆ ರಾಜನನ್ನು ಯಾತನೆ

ತಮುಪಾಯನಕಲ್ಪನೈಃ ಪ್ರಹೃಷ್ಟಂ
ಸ ಚಕಾರ ಪ್ರಯತೋ ನೃಪಂ ನೃಪ ॥೧೯॥

ಶಿವಾಜ್ಞಾವಚನೈಃ ಕಾಲಸ್ಸಸಂತುಷ್ಟಸ್ತದಾ ನೃಪಂ ।
ರತ್ನಾಸನಸ್ಥಂ ಕೃತ್ವಾಶು ಪೂಜಯಾಮಾಸ ಸಾದರಂ ॥೨೦॥

ತತಃ ಪ್ರಾಹಾತಿಸಂತೋಷಾಚ್ಚಿತ್ರಗುಪ್ತಂ ಸ ವಿಸ್ಮಿತಃ ।
ನಂದಿಕೇಶ್ವರದೂತೇಷು ಶೃಣ್ವತ್ಸ್ವೇವ ನೃಪೋತ್ತಮ ॥೨೧॥

॥ ಯಮ ಉವಾಚ ॥

ಕರುಣಾರಸಸಾರಸಾಗರೋ ಹರ ಏವೈಷ ಮುಹುಃಶ್ರುತಾ ಶ್ರುತಿಃ ।
ಅತ ಏವ ಹಿ ತಸ್ಯ ಸಾ ದಯಾಪ್ಯತಿದೀನೇಷ್ವಪರಾಧಸಿಂಧುಷು ॥೨೨॥

ಯಿಂದ ಬಿಡುಗಡೆ ಮಾಡಿ ಅತ್ಯಾದರದಿಂದ ಅನೇಕ ಕೈಗಾಣಿಕೆಗಳಿಂದಲೂ ಉಪಚಾರಗಳಿಂದಲೂ ಉಪಚರಿಸಿ ಸಂತೋಷ ಪಡಿಸಿದನು. ॥೧೯॥

ಶಿವದೂತರು ಬಂದು ಶಿವಾಜ್ಞೆಯನ್ನು ತಿಳಿಸಿದ ಕೂಡಲೇ ಯಮನಿಗೆ ಆ ರಾಜನಪೂರ್ವೋತ್ತರಗಳು ಸ್ಮೃತಿಗೆ ಬಂದುವು. ದವಭಸ್ಮದ ಮಹಿಮೆಯಿಂದ ಆತನ ಸಕಲ ಪಾಪಗಳು ನಾಶವಾಗಿವೆ ಎಂದು ಜ್ಞಾಪಿಸಿಕೊಂಡು, ಅತ್ಯಂತ ಸಂತೋಷದಿಂದ ಆ ರಾಜನನ್ನು ಯಾತನೆಯಿಂದ ಮುಕ್ತಗೊಳಿಸಿ, ಅನಂತರ ರತ್ನ ಸಿಂಹಾಸನದ ಮೇಲೆ ಕುಳ್ಳಿರಿಸಿ ಆದರಿಸಿದನು. ॥೨೦॥

ಹಾಗೆಯೇ ಯಮನು ಹತ್ತಿರದಲ್ಲಿಯೇ ಇದ್ದ ಚಿತ್ರಗುಪ್ತನನ್ನು ಕುರಿತು ಹೀಗೆಂದನು. ಆಗ ಅಲ್ಲಿಯೇ ನಂದೀಶ್ವರನೇ ಮೊದಲಾದ ದೂತರು ಇದ್ದರು. ಈ ವಿಚಿತ್ರ ಘಟನೆಯಿಂದ ಚಿತ್ರಗುಪ್ತನಿಗೆ ಅತ್ಯಾಶ್ಚರ್ಯವಾಗಿದ್ದಿತು. ॥೨೧॥

"ಆಹಾ, ಪರಮೇಶ್ವರನಿಗಿಂತಲೂ ಮಿಗಿಲಾದ ಕರುಣಾಳುಗಳು ಇದ್ದಾರೆಯೇ? ಯಾರೂ ಅಂತಹವರು ಕಾಣುವುದಿಲ್ಲ. ಆ ಪರಮೇಶ್ವರನು ಇಂದು ಈ ಪಾಪಸಾಗರದಂತಿರುವ ರಾಜನಲ್ಲಿಯೂ ಸಹ ದೀನನೆಂದು ದಯೆ ತೋರಿಸಿರುವನು. ಆದ್ದರಿಂದಲೇ ವೇದಗಳು ಆ ಪರಮೇಶ್ವರನೇ ಸರ್ವೋತ್ತಮನಾದ ದಯಾಳು ಎಂದು ಬಹುಧಾ ಸ್ತುತಿಸುತ್ತವೆ. ॥೨೨॥

ಮಹೇಶ ಕರುಣಾರಸಪ್ರಸರಮಾತ್ರಮೇವ ಕ್ಷಣಂ
ಭವಿಷ್ಯತಿ ಯದಾ ತದಾ ಸಕಲಶೋಕನಾಶಃ ಕ್ಷಣಾತ್ ।
ಅಪಾರಕರುಣಾನಿಧಿಸ್ತ್ರಿದಶವರ್ಗವಂದ್ಯಶ್ಶಿವಃ
ಸ ಏವ ಗತಿರಿತ್ಯಹಂ ದಿವಸಯಾಪನಂ ಮನ್ಮಹೇ ॥೨೩॥

ಅಹಂ ತಾವದ್ಧನ್ಯಸ್ಸಕಲಸುರವರ್ಗೇಷ್ವಪಿ ಗಣಾಃ
ಕ್ಷಣಂ ವಾ ಮನ್ನಾಮವ್ಯವಹರಣಯೋಗ್ಯಂ ಕಥಮಪಿ ।
ಮಹಾದೇವಸ್ಯಾಸೀದಿದಮಮಿತಿಪುಣ್ಯೈರಿತಿ ಮತಿಃ
ಪ್ರವೃತ್ತಾ ಸಾ ಗೌರೀಕರಕಮಲಲೀಲಾ ಸುಕಲಿತಾ ॥೨೪॥

ಪರಂ ಬ್ರಹ್ಮಾನಂದಾಭ್ಯುದಯಸಮಯೋಽಯಂ ಮಮ ಯತೋ
ಮಹಾದೇವೋ ದೇವಃ ಪ್ರಮಥಗಣವೃಂದಾರಕಗಣೈಃ ।

ಯಾವಾಗ ಆ ಶಂಕರನ ಕರುಣಾರಸ ಲೇಶವಾದರೂ ಯಾವಾತನ ಮೇಲೆ ಹರಿಯುವುದೋ, ಆ ಕೂಡಲೇ ಆತನ ಸಕಲ ಶೋಕಗಳೂ ನಾಶವಾಗುವುವು. ಆದ್ದರಿಂದಲೇ ಪರಮೇಶ್ವರನು ಅಪಾರಕರುಣಾನಿಧಿ ಎಂದು ಸ್ತುತಿಸುತ್ತಾ ದೇವತೆಗಳು ಸದಾ ಆತನನ್ನು ವಂದಿಸುವರು. ಅಂಥ ಆ ಶಂಕರನೇ ನಮಗೂ ಗತಿ. ಹೀಗೆಂತಲೇ ನಂಬಿಕೊಂಡು ನಾನು ಕಾಲ ಕಳೆಯುತ್ತಿದ್ದೇನೆ. ಇದೇ ಪರಮ ಶ್ರೇಯಸ್ಸನ್ನು ಪಡೆಯಲು ಉತ್ತಮ ಉಪಾಯವೆಂದೂ ನಾನು ನಂಬಿದ್ದೇನೆ. ॥೨೩॥

ಇಂದು ನಾನೇ ಸಕಲ ದೇವತೆಗಳಿಗಿಂತಲೂ ಧನ್ಯನೆನಿಸಿದೆನು. ನನ್ನ ಹೆಸರು ಆ ಪರಮೇಶ್ವರನ ಬಾಯಲ್ಲಿಯೂ ಇಂದು ಕೇಳಿಬಂದದ್ದರಿಂದ ನಾನೇ ಕೃತಕೃತ್ಯನು. ನನ್ನ ನಾಮಧೇಯವು ಒಂದು ಕ್ಷಣಕಾಲವಾದರೂ, ಹೇಗಾದರೂ ಆಗಲಿ ಆ ಶಂಕರನ ವ್ಯವಹಾರಕ್ಕೆ ಯೋಗ್ಯವಾಯಿತಲ್ಲಾ! ಇದರಿಂದಲೇ ನಾನು ಭಾಗ್ಯವಂತನು! ನನ್ನ ಪುಣ್ಯದಿಂದಲೇ ಇಂದು ಆ ಮಹಾದೇವನು ನನ್ನನ್ನು ಸ್ಮರಿಸಿಕೊಂಡನು. ಆ ಪಾರ್ವತೀಲೋಲನು ಸದಾ ಸಾಮಾನ್ಯ ಜನರನ್ನು ಸ್ಮರಿಸಿಕೊಳ್ಳುವುದಿಲ್ಲವಷ್ಟೆ. ॥೨೪॥

ನನಗೆ ಇಂದೇ ಇಂಥ ಆನಂದವು ಲಭಿಸಿದುದು. ನನಗೆ ಈಗ ಬ್ರಹ್ಮಾನಂದವೇ ದೊರಕಿದಷ್ಟು ಆನಂದವಾಗುತ್ತಿದೆ. ಏಕೆಂದರೆ ಆ ಶಂಕರನು ವಾಚಾಮಗೋಚರನು. ಆತನನ್ನು ನೋಡುವುದು ಪ್ರಮಥಗಣಗಳಿಗೂ ಸಾಧ್ಯವಿಲ್ಲ. ದೇವತೆ

ನ ದೃಷ್ಟೋ ವೇದಾಂತೈರಪಿ ಗಿರಿಜಯಾ ಸಾಕಮಸಕೃತ್
ಮದೀಯಾ ವಾರ್ತಾಭೂದಮಿತದಯಯಾ ಕೇವಲಮಹೋ ॥೧೫॥

ಅಹಂ ತಾವದ್ಗೌರೀರಮಣಚರಣಾಂಭೋಜರಜಸಃ
ಪ್ರಭಾವಜ್ಞಸ್ತಜ್ಞಪ್ರವರವರವಾರ್ತಾಸು ಚತುರಃ ।
ಹರೋ ಧೀರೋ ವೀರಃ ಖಲು ಕರುಣಯಾ ಮಯ್ಯಪಿ ಮುಹುಃ
ದಯಾಪೂರವ್ಯಾಪ್ತೋ ವಿತರತಿ ಮುದಾ ಮಾಮಕಮಿತಿ ॥೧೬॥

ಮಹಾದೇವಸ್ಯಾಹಂ ಹಿತಕರವದತ್ವೇನ ವಿದಿತೋ
ಶಿವೇ ಭಕ್ತಿಃ ಶ್ರದ್ಧಾಪ್ಯನವರತಮಸ್ಯಾಸ್ತು ನಿಯತಾ ।
ತಯಾ ಮುಕ್ತಿರ್ಭಾಗ್ಯಂ ಸಕಲಜನವಂದ್ಯತ್ವಮಪಿ ಮೇ
ಭವಿಷ್ಯತ್ಯೇವೇತಿ ಪ್ರಮಿತಿರಭವತ್ಸಾ ಶಿವಕೃಪಾ ॥೧೭॥

ಗಳಿಗೂ ಅಸಾಧ್ಯವೇ. ವೇದಾಂತಗಳಿಗೂ ಸಹ ಆತನು ಅಗೋಚರನಾಗಿರುವನು. ಅಂಥ ದೇವತಾಸಾರ್ವಭೌಮನು ತನ್ನ ವಿಷಯವಾಗಿಯೇ ಮಹಾದೇವಿಯಾದ ಪಾರ್ವತಿಯೊಡನೆ ಸಂಭಾಷಣೆಯನ್ನು ನಡೆಸಿದನು. ನನ್ನನ್ನು ಸ್ಮರಿಸಿಕೊಂಡಿರುವನು. ಅಂದಮೇಲೆ ನನ್ನ ಆನಂದಕ್ಕೆ ಪರಿಮಿತಿ ಉಂಟೆ ? ಅಹೋ ಭಾಗ್ಯ. ||೧೫||

ಆ ಗಿರಿಜಾರಮಣನ ಪಾದಧೂಳಿಯ ಮಹಿಮೆಯು ಮಹತ್ತರವಾದದ್ದೆಂದು ನಾನು ಬಲ್ಲೆನು. ಆ ಮಹಿಮೆಯ ವರ್ಣನೆಯು ಎಲ್ಲರಿಗಿಂತಲೂ ಹೆಚ್ಚಾಗಿಯೇ ನನಗೆ ತಿಳಿದಿರುತ್ತದೆ. ಆದರೆ ಇವೆಲ್ಲವುಗಳಿಗಿಂತಲೂ ಪರಮೇಶ್ವರನ ದಯೆಯೇ ಅಪಾರವಾದದ್ದು. ಆತನು ಧೀರನು, ಗಂಭೀರನು. ಆದ್ದರಿಂದಲೇ ನನ್ನ ಮೇಲೆ ಮಮತೆಯಿಂದ ಇಷ್ಟೊಂದು ದಯೆಯನ್ನು ತೋರಿಸಿದ್ದಾನೆ ||೧೬||

ನಾನು ಸದಾ ಉಚಿತಕಾರಿ ಎಂದೂ, ಸತ್ಯವಾದಿ ಎಂತಲೂ ಪರಮೇಶ್ವರನಿಗೆ ತಿಳಿದೇ ಇದೆ. ಆದರೂ ಮತ್ತು ಪರಮೇಶ್ವರನ ಅನುಗ್ರಹವನ್ನು ನಾನು ಸಂಪಾದಿಸಬೇಕಾಗಿರುವುದರಿಂದ, ಆತನಲ್ಲಿಯೇ ನನಗೆ ಶಾಶ್ವತ ಭಕ್ತಿಯುಂಟಾಗಲಿ. ಆ ಭಕ್ತಿಯೊಂದಿದ್ದರೇ ಸಾಕು. ಎಲ್ಲವೂ ಸ್ವಾಧೀನವಾದಂತೆಯೇ ಸರಿ. ಆ ಶಿವನ ಕೃಪೆಯಿಂದಲೇ ಸಕಲ ಭಾಗ್ಯಗಳೂ, ಸಕಲ ಜನ ವಂದ್ಯತ್ವವೂ, ಅಲ್ಲದೇ ಪರಮಪುರುಷಾರ್ಥವಾದ ಮೋಕ್ಷವೂ ಲಭಿಸುವುದು. ಇದೇ ನನ್ನ ದೃಢ ನಂಬಿಕೆ. ||೧೭||

ಇತಿ ತದ್ವಚನಂ ಶ್ರುತ್ವಾ ಗಣಾಸ್ಸಂತುಷ್ಟಮಾನಸಾಃ ।
ತಂ ನೀತ್ವಾ ಬ್ರಹ್ಮಸದನಂ ಪ್ರಾಪುರ್ಯಮಸಮರ್ಚಿತಾಃ ॥೨೮॥

ತಮಾಗತಂ ವಿಧಿರ್ದೃಷ್ಟ್ವಾ ಗಣಾನೀತಂ ಗಣಾನಪಿ ।
ಪೂಜಯಾಮಾಸ ವಿಧಿವತ್ಸಂತೋಷಂ ಜನಯನ್ಮುದಾ ॥೨೯॥

ತತಃಪರಂ ಗಣಾಸ್ಸರ್ವೇ ಶಿವಲೋಕಂ ಯಯುರ್ಮುದಾ ।
ಸ ಭೂಪತಿರ್ಬ್ರಹ್ಮಲೋಕೇ ಬಹುಕಾಲಂ ಸ್ಥಿತೋ ನೃಪ ॥೩೦॥

ತತಃಪರಮುವಾಸಾಯಂ ದಿವ್ಯಂ ದೇಹಮುಪಾಶ್ರಿತಃ ।
ರೇವಾತೀರಂ ಬಾಲದೇಹೋ ರೂಪಲಾವಣ್ಯಸಂಯುತಃ ॥೩೧॥

ತತ್ರ ರೇವಾಜಲೇ ಸ್ನಾತ್ವಾ ಭಸ್ಮನೋದ್ಧೂಲ್ಯ ಭಕ್ತಿತಃ ।
ಸ್ವಾಂಗಾನ್ಯುನ್ಮೀಲ್ಯ ನಯನೇ ದದರ್ಶ ವಿಪುಲಾಂ ನದೀಂ ॥೩೨॥

ಈ ರೀತಿಯಾಗಿ ಹೇಳಿ ಯಮನು ಆ ಶಿವದೂತರನ್ನೂ ಯಥೋಚಿತವಾಗಿ ಸತ್ಕರಿಸಿದನು. ಆತನ ಉಪಚಾರದಿಂದಲೂ ಮಧುರವಾದ ಮಾತುಗಳಿಂದಲೂ ಶಿವದೂತರು ಅತ್ಯಂತ ಸಂತುಷ್ಟರಾದರು. ಅನಂತರ ಆ ರಾಜನನ್ನು ಬ್ರಹ್ಮಲೋಕಕ್ಕೆ ಕಳುಹಿಸಲು ಆತನನ್ನು ಕರೆದುಕೊಂಡು ಹೊರಟುಹೋದರು. ॥೨೮॥

ಆ ರಾಜನೊಡನೆ ಶಿವದೂತರು ಬ್ರಹ್ಮಲೋಕವನ್ನು ಪ್ರವೇಶಿಸಲು, ಅವರನ್ನು ಕಂಡು, ಬ್ರಹ್ಮನು ಅತ್ಯಾದರದಿಂದ ಅವರೆಲ್ಲರಿಗೂ ಸಂತುಷ್ಟಿಯಾಗುವಂತೆ ವಿಧಿವತ್ತಾಗಿ ಸತ್ಕರಿಸಿದನು. ॥೨೯॥

ಬ್ರಹ್ಮನು ಮಾಡಿದ ಉಪಚಾರವನ್ನು ಸ್ವೀಕರಿಸಿ, ಶಿವದೂತರು ಸಂತೋಷದಿಂದ ಶಿವಲೋಕಕ್ಕೆ ತೆರಳಿದರು. ಅನಂತರ ಆ ರಾಜನು ಅದೇ ಬ್ರಹ್ಮಲೋಕದಲ್ಲಿ ಅನೇಕ ಕಾಲದ ವರೆಗೂ ವಾಸವಾಗಿದ್ದನು. ॥೩೦॥

ಹೀಗೆ ಆ ರಾಜನು ದಿವ್ಯದೇಹಧಾರಿಯಾಗಿ ಬ್ರಹ್ಮಲೋಕದಲ್ಲಿ ಅನೇಕ ವರ್ಷ ಪರ್ಯಂತ ವಾಸಿಸಿದ ಅನಂತರ, ರೂಪಲಾವಣ್ಯಯುಕ್ತನಾಗಿಯೂ ಬಾಲ್ಯವಯಸ್ಕನಾಗಿಯೂ ರೇವಾನದೀ ತೀರದಲ್ಲಿ ಬಂದಿಳಿದನು. ॥೩೧॥

ಒಂದು ದಿನ ಆತನು ನರ್ಮದಾನದಿಯಲ್ಲಿ ಭಕ್ತಿಯಿಂದ ಸ್ನಾನಮಾಡಿ ಮೈಗೆಲ್ಲಾ ಭಸ್ಮವನ್ನು ಧರಿಸಿಕೊಂಡು, ಶಿವಧ್ಯಾನವನ್ನು ಮಾಡಿದ ಬಳಿಕ

ತತಃ ಪ್ರಾಹ ಸ ಬಾಲೋಽಪಿ ಪ್ರಾಹಾತಿಚತುರಂ ವಚಃ ।
ಯದ್ವಚಃ ಶ್ರವಣಾದೇವ ಮುಕ್ತಿಃ ಕರತಲಸ್ಥಿತಾ ॥೩೩॥

॥ ಬಾಲ ಉವಾಚ ॥

ನರ್ಮದೇ ಶರ್ಮದೇ ಪಾಹಿ ಶಂಗಂ ಲಿಂಗಂ ಮನೋಹರಂ ।
ಪರಸ್ಯಾಪ್ಯನುವಾರಂ ತೇ ವಿಲೋಕನಮಹೋತ್ಸವಃ ॥೩೪॥

ತೀರಜಾಸ್ತರವೋಽಪ್ಯಂಬ ಲಿಂಗರೂಪಾಸ್ತವಾಮಲೇ ।
ಚರಲಿಂಗಸ್ವರೂಪಾಸ್ತೇ ವಿಚರಂತಿ ನರಾ ಅಪಿ ॥೩೫॥

ಅಚಲಂ ಯಚ್ಚಲಂ ತೀರೇ ನೀರೇ ವಾ ತವ ನರ್ಮದೇ ।
ತತ್ಸರ್ವಂ ಲಿಂಗರೂಪೇಣ ದೃಶ್ಯತೇ ಪಾಪನಾಶನಂ ॥೩೬॥

ಕಣ್ಣುಗಳನ್ನು ಬಿಟ್ಟು ನೋಡಲು ಅದೇ ನದಿಯೇ ಆತನಿಗೆ ಅದ್ಭುತವಾಗಿ ಕಂಡು ಬಂದಿತು. ॥೩೨॥

ಅನಂತರ ಅತ್ಯಾಶ್ಚರ್ಯ ಭಕ್ತಿಸಮನ್ವಿತನಾದ ಆ ಬಾಲಕನು ಹೀಗೆ ನರ್ಮದೆಯನ್ನು ಸ್ತುತಿಸಿದನು. ಆ ಸ್ತುತಿವಚನಗಳು ಅತ್ಯಂತಾಶ್ಚರ್ಯವನ್ನು ಸೂಚಿಸುತ್ತಿದ್ದುವಲ್ಲದೇ ಯುಕ್ತಿಯುಕ್ತವಾಗಿಯೂ ಇದ್ದವು. ಅಂಥ ಮಾತುಗಳನ್ನು ಯಾರು ಕೇಳುವರೋ ಅವರಿಗೆ ಮೋಕ್ಷವು ಸ್ವಾಧೀನವಾದಂತೆಯೇ ಸರಿ. ॥೩೩॥

ಓ ತಾಯಿ, ನರ್ಮದೆಯೇ, ನೀನೇ ಸುಖವನ್ನು ಪ್ರದಾನಮಾಡತಕ್ಕವಳು. ದೀನನಾದ ನನ್ನನ್ನು ಕಾಪಾಡು. ನಿನ್ನ ಅನುಗ್ರಹದಿಂದಲೇ ಇಂದು ಆ ಪರಮೇಶ್ವರ ಸ್ವರೂಪಗಳಾದ ಲಿಂಗಗಳನ್ನು ನೋಡುವ ಸೌಭಾಗ್ಯವು ನನಗೆ ಲಭಿಸಿತು. ಈ ಒಂದೊಂದೂ ಲಿಂಗವೂ ಅತ್ಯಂತ ಮನೋಹರವಾಗಿರುತ್ತದೆ. ॥೩೪॥

ಓ ತಾಯಿ, ನೀನು ಅತ್ಯಂತ ಪವಿತ್ರಾತ್ಮಳು. ಆದ್ದರಿಂದಲೇ ನಿನ್ನ ತೀರ ಪ್ರದೇಶಗಳಲ್ಲಿ ಬೆಳೆದಿರುವ ಮರಗಳೂ ಸಹ ಲಿಂಗಸ್ವರೂಪಗಳಾಗಿವೆ. ನಿನ್ನ ತೀರದಲ್ಲಿ ಸಂಚರಿಸುವ ಜನರೂ ಸಹ ಜಂಗಮರೆನಿಸಿ ಶಿವಾಭೇದವನ್ನು ಪಡೆದಿರುವರು. ॥೩೫॥

ಬ್ರಹ್ಮಲೋಕೇಽಪಿ ಲಿಂಗಾನಿ ತವ ದೃಷ್ಟಾನಿ ಕೋಟಿಶಃ ।
ಬ್ರಹ್ಮಣಾ ತೇಷು ಲಿಂಗೇಷು ಕ್ರಿಯತೇ ಶಂಕರಾರ್ಚನಂ ॥೩೭॥

ಶಕ್ತಿರತ್ಯದ್ಭುತಾ ದೃಷ್ಟಾ ತವ ಲಿಂಗೇ ಶಿವಾತ್ಮಕೇ ।
ಯಲ್ಲಿಂಗದರ್ಶನಾದೇವ ಮುಚ್ಯತೇ ಪಾಪಕೋಟಿಭಿಃ ॥೩೮॥

ನರ್ಮದಾತೀರತರವಃ ಪ್ರಯಾಂತಿ ಶಿವಮಂದಿರಂ ।
ಗಣಾಸ್ತತ್ಪೂಜನೋದ್ಯುಕ್ತಾಸ್ಸರ್ವದಾ ಖಲು ನರ್ಮದೇ ॥೩೯॥

ಅತಃಪರಮಹಂ ತೀರೇ ತವೈವ ಹಿ ನಿರಂತರಂ ।
ವಸಾಮಿ ಶಿವಸಾಯುಜ್ಯಂ ತೇನ ವಾ ತಪ್ಸ್ಯವಿಷ್ಯತಿ ॥೪೦॥

---

ಓ ನರ್ಮದೆಯೇ, ನಿನ್ನ ತೀರದಲ್ಲಿರುವ ಸ್ಥಾವರಜಂಗಮವಸ್ತುಗಳೆಲ್ಲವೂ ಪಾಪನಾಶಕಗಳಾದ ಲಿಂಗಸ್ವರೂಪಗಳಾಗಿಯೇ ನನಗೆ ತೋರುತ್ತಿವೆ. ॥೩೬॥

ಬ್ರಹ್ಮಲೋಕದಲ್ಲಿಯೂ ನಿನ್ನ ಲಿಂಗಗಳನ್ನು (ರೇವಾಲಿಂಗ) ನೋಡಿದ್ದೆನು. ಅಲ್ಲಿಯೂ ಅನೇಕ ಲಿಂಗಗಳಿದ್ದವು. ಅವುಗಳನ್ನೇ ಆಯತನವನ್ನಾಗಿ ಮಾಡಿಕೊಂಡು ಬ್ರಹ್ಮನು ನಿತ್ಯವೂ ಶಿವಾರ್ಚನೆಯನ್ನು ಮಾಡುತ್ತಿರುವನು. ॥೩೭॥

ನಿನ್ನಲ್ಲಿ ಉತ್ಪನ್ನವಾದ ಲಿಂಗವು ಅತ್ಯದ್ಭುತವಾದದ್ದು. ಅದು ಸಾಕ್ಷಾತ್ ಪರಮೇಶ್ವರ ಸ್ವರೂಪವೇ ಆಗಿರುತ್ತದೆ. ಆದ್ದರಿಂದಲೇ ಅದಕ್ಕೆ ಲೋಕೋತ್ತರವಾದ ಸಾಮರ್ಥ್ಯವಿರುವುದು. ಆ ಲಿಂಗದ ದರ್ಶನಮಾತ್ರದಿಂದಲೇ ಜನರ ಕೋಟಿ ಕೋಟಿ ಪಾಪಗಳೂ ನಾಶವಾಗುವುವು. ಅಂದಮೇಲೆ ಆ ಲಿಂಗದ ಮಹಿಮೆಯು ಎಷ್ಟು ಮಹತ್ತರವಾದುದು ? ॥೩೮॥

ಎಲೌ ನರ್ಮದೆಯೇ, ನಿನ್ನ ಮಾಹಾತ್ಮ್ಯೆಯನ್ನು ಎಷ್ಟೆಂದು ಕೊಂಡಾಡಲಿ ? ನಿನ್ನ ತೀರದಲ್ಲಿ ಬೆಳೆದಿರುವ ವೃಕ್ಷಗಳೆಲ್ಲವೂ ಸದ್ಗತಿಯನ್ನು ಪಡೆಯುವುವು. ಅವು ಸಾಕ್ಷಾತ್ ಶಿವಸನ್ನಿಧಿಗೇ ಹೋಗತಕ್ಕವುಗಳು. ಆದ್ದರಿಂದಲೇ ಶಿವಗಣಗಳೂ ಸಹ ಅವನ್ನು ಪೂಜಿಸುವರು. ॥೩೯॥

ನಿನ್ನ ತೀರವು ಇಷ್ಟೊಂದು ಪುಣ್ಯಕ್ಷೇತ್ರವಾಗಿರುವುದರಿಂದಲೇ ನಾನೂ ಇಲ್ಲಿಂದ ಬಿಟ್ಟುಹೋಗುವುದಿಲ್ಲ. ಇಲ್ಲಿಯೇ ಸದಾ ವಾಸಿಸುತ್ತೇನೆ. ಈ ವಾಸದಿಂದಲೇ ನನಗೆ ಆ ಪರಶಿವನ ಸಾಯುಜ್ಯವು ದೊರೆಯುವುದು. ॥೪೦॥

ಇತ್ಯುಕ್ತ್ವಾ ನರ್ಮದಾಲಿಂಗೇ ತಜ್ಜಲೈರ್ವಿಮಲೈರಪಿ ।
ಅಭಿಷಿಚ್ಯ ಪ್ರಯತ್ನೇನ ಪ್ರಾಪ್ಯ ತಚ್ಚ ಪುನಃ ಪುನಃ ॥೪೧॥

ತತ್ತೀರಬಿಲ್ವಪತ್ರಾಣಿ ನವಾನಿ ವಿಮಲಾನ್ಯಪಿ ।
ಪ್ರಕ್ಷಿಪನ್ನೇವ ಬಹುಧಾ ಚಚಾರ ಸ ಶನೈಶ್ಶನೈಃ ॥೪೨॥

ತತ್ತೀರವಾಸಿನಸ್ಸರ್ವೇ ತಂ ದೃಷ್ಟ್ವಾ ಬಾಲಕಂ ಮುಹುಃ ।
ಪರಮಾಶ್ಚರ್ಯಸಂಪನ್ನಾಃ ಪ್ರಹೃಷ್ಟಾಸ್ತೇ ಪುನಃಪುನಃ ॥೪೩॥

ತತಸ್ತತ್ತೀರನಗರೇ ಚಿತ್ರಕೇತುರಿತಿ ಶ್ರುತಃ ।
ತಸ್ಮೈ ನಿವೇದಯಾಮಾಸುರ್ಬಾಲವೃತ್ತಾಂತಮಾಸ್ತಿಕಾಃ ॥೪೪॥

ಪ್ರಧಾನಪುರುಷಾ ಏವ ವಿನಯಾನತಕಂಧರಾಃ ।
ಕೃತಾಂಜಲಿಪುಟಾಸ್ತಜ್ಞಾಶ್ಶಿವಭಕ್ತಿಪರಾಯಣಾಃ ॥೪೫॥

ಹೀಗೆಂದು ಹೇಳುತ್ತಾ ಆ ಬಾಲಕನು ಅಲ್ಲಿಯೇ ನೆಲಸಿದನು. ನಿತ್ಯವೂ ನರ್ಮದಾನದಿಯ ಪವಿತ್ರವಾದ ನಿರ್ಮಲೋದಕದಿಂದ ಶಿವಲಿಂಗಕ್ಕೆ ಭಕ್ತಿಯಿಂದ ಅಭಿಷೇಕವನ್ನು ಮಾಡುತ್ತಿದ್ದನು. ॥೪೧॥

ಅದೇ ತೀರದಲ್ಲಿ ಬೆಳೆದಿರುತ್ತಿದ್ದ ಬಿಲ್ವವೃಕ್ಷಗಳಿಂದ ಉತ್ತಮವಾದ ಬಿಲ್ವದಳಗಳನ್ನು ಕೊಯಿದು ತಂದು, ಶಿವಲಿಂಗಕ್ಕೆ ಭಕ್ತಿಯಿಂದ ಪೂಜಿಸುತ್ತಲೇ ಕಾಲಕಳೆಯುತ್ತಾ ಬಂದನು. ॥೪೨॥

ಆ ತೀರದಲ್ಲಿ ವಾಸಮಾಡಿಕೊಂಡಿದ್ದ ಜನರೆಲ್ಲರೂ ಈ ಬಾಲಕನ ಭಕ್ತಿಯನ್ನೂ, ಶಿವಪೂಜೆಯ ವಿಧಾನವನ್ನೂ, ನೋಡಿನೋಡಿ ಆನಂದಪಡುತ್ತಿದ್ದರಲ್ಲದೇ ಪುನಃಪುನಃ ನೋಡಬೇಕೆಂದು ತವಕಪಡುತ್ತಿದ್ದರು. ॥೪೩॥

ಅದೇ ತೀರದಲ್ಲಿ ಒಂದು ನಗರವಿದ್ದಿತು. ಅಲ್ಲಿ ಚಿತ್ರಕೇತುವೆಂಬ ಪ್ರಖ್ಯಾತನಾದ ರಾಜನು ರಾಜ್ಯಭಾರವನ್ನು ನಡೆಸುತ್ತಿದ್ದನು. ಆ ರಾಜನಿಗೆ ಈ ಬಾಲಕನ ವೃತ್ತಾಂತವೆಲ್ಲವನ್ನೂ ಕೆಲವು ಜನ ಆಸ್ತಿಕರು ಹೋಗಿ ತಿಳಿಸಿದರು. ॥೪೪॥

ಆಸ್ತಿಕರಲ್ಲಿ ಕೆಲವರು ಆ ರಾಜನ ಮಂತ್ರಿಗಳೇ ಆಗಿದ್ದರು. ಅವರು ವಿಚಾರಜ್ಞರಾಗಿದ್ದುದರಿಂದ ತಮ್ಮ ರಾಜನಿಗೆ ಈ ವಿಚಾರವನ್ನು ತಿಳಿಸಬೇಕೆಂದು ಉತ್ಸುಕ

ರಾಜನ್ನತ್ಯದ್ಭುತಂ ದೃಷ್ಟಂ ರೇವಾತೀರೇ ಮನೋಹರೇ ।
ಪುರಾ ನ ದೃಷ್ಟಮಸ್ಮಾಭಿಸ್ತಾದೃಶಂ ವಿಸ್ಮಯಾವಹಂ ॥೪೬॥

॥ ಪ್ರಧಾನಾ ಊಚುಃ ॥

ರಾಜನ್ ಬಾಲೋತಿವಿಮಲಸ್ಸಂಜಾತಃ ಪ್ರಾಯಶಃ ಪ್ರಿಯಃ ।
ನೇತ್ರಯೋಸ್ತಸ್ಯ ಮಾತಾ ವಾ ಪಿತಾ ವಾ ನೈವ ದೃಶ್ಯತೇ ॥೪೭॥

ಸೂರ್ಯಮಂಡಲಸಂಕಾಶೋ ಮನ್ಮಥಾಪರವಿಗ್ರಹಃ ।
ಯಾದೃಶಂ ತಸ್ಯ ಸೌಂದರ್ಯಂ ತಾದೃಶಂ ದೃಷ್ಟಮೇವ ನ ॥೪೮॥

ವಿಶಾಲನೇತ್ರಕಮಲಪ್ರಸಾದಕಮಲಶ್ರಿಯಾ ।
ತಿರಸ್ಕರೋತಿ ಕಮಲಾನ್ಯಾರಕ್ತಾನಿ ನೃಪೋತ್ತಮ ॥೪೯॥

ರಾಗಿದ್ದರು. ಅವರು ಪರಮ ಶಿವಭಕ್ತರೂ ಆಗಿದ್ದರು. ಅವರು ರಾಜಮರ್ಯಾದೆಯನ್ನು ಮೀರದೆ ವಿನಯದಿಂದ ರಾಜನಿಗೆ ನಮಸ್ಕರಿಸಿ ಹೇಳಿದರು. ||೪೫||

" ಎಲೈ ರಾಜನೇ ! ಕೇಳು ಕೇಳು. ಒಂದು ಅದ್ಭುತವಾದ ಸಂಗತಿ ಇದೆ. ರೇವಾ ನದೀತೀರದಲ್ಲಿ ಒಂದು ವಿಚಿತ್ರ ಸಂಗತಿ ನಡೆಯುತ್ತಿದೆ. ಇಂಥ ಆಶ್ಚರ್ಯಕರವಾದ ಸಂಗತಿಯನ್ನು ಈ ಮೊದಲು ನಾವು ಎಲ್ಲಿಯೂ ನೋಡಿರುವುದಿಲ್ಲ. ||೪೬||

ಎಲೈ ರಾಜನೇ, ಆ ನದೀತೀರದಲ್ಲಿ ಅತ್ಯಂತ ಸುಂದರನಾದ ಒಬ್ಬ ಬಾಲಕನಿದ್ದಾನೆ. ನೋಡಲು ಅತ್ಯಂತ ಮುದ್ದಾಗಿದ್ದಾನೆ. ಆದರೆ ಆತನ ತಾಯಿಯಾಗಲಿ ತಂದೆಯಾಗಲಿ ಯಾರೂ ಹತ್ತಿರದಲ್ಲಿ ಕಣ್ಣಿಗೆ ಕಾಣುವುದಿಲ್ಲ. ||೪೭||

ಆ ಬಾಲಕನು ನೋಡುವುದಕ್ಕೆ ಸಾಕ್ಷಾತ್ ಬಾಲ ಮನ್ಮಥನಂತೆ ತೋರುತ್ತಾನೆ. ಅಲ್ಲದೇ ಆತನ ತೇಜಸ್ಸು ಸೂರ್ಯನಂತೆ ಪ್ರಖರವಾಗಿದೆ. ಆತನಿಗಿರುವಷ್ಟು ಸೌಂದರ್ಯವನ್ನು ನಾವು ಮತ್ತೆಲ್ಲಿಯೂ ನೋಡಿಲ್ಲ. ||೪೮||

ಆತನ ಕಣ್ಣುಗಳು ಕಮಲದಂತೆ ಸುಂದರಗಳಾಗಿವೆ. ಕಾಲುಗಳು ತಾವರೆಯಂತೆ ಕೋಮಲಗಳಾಗಿವೆ. ಆ ಕಣ್ಣು ಮತ್ತು ಕಾಲುಗಳ ಕಾಂತಿಯು ಅರುಣವರ್ಣದಿಂದ ಉಜ್ವಲವಾಗಿರುವುದಲ್ಲದೇ ಸಾಕ್ಷಾತ್ ಕಮಲಗಳನ್ನು ಸಹ ತಿರಸ್ಕರಿಸುವಂತಿದೆ. ||೪೯||

ಪ್ರದಕ್ಷಿಣಪ್ರಕ್ರಮೇಣ ಸ್ಖಲತ್ಯೇವ ಸ ಯದ್ಯಪಿ ।
ತಥಾಪಿ ಕುರುತೇ ರಾಜನ್ ಸ ಲಿಂಗಾನಾಂ ಪ್ರದಕ್ಷಿಣಂ ॥೫೦॥

ನೃತ್ಯತ್ಯಗ್ರೇ ಸ ಲಿಂಗಾನಾಂ ಕರಸಂಪುಟಘಾತನೈಃ ।
ಸ್ವೇದಧಾರಾಪರಿಕ್ರಾಂತಶರೀರಮಪಿ ವಿಸ್ಮರನ್ ॥೫೧॥

ಕ್ಷಣಂ ನಿಮೀಲ್ಯ ನಯನೇ ಕರೋತಿ ಧ್ಯಾನಮಾದರಾತ್ ।
ಪಶ್ಚಾದಾಶ್ಚರ್ಯಸಂಯುಕ್ತೈಃ ಪುನರ್ಲಿಂಗಾನಿ ಬಾಲಕಃ ॥೫೨॥

ತಂ ದೃಷ್ಟ್ವಾ ಮುನಯಸ್ಸರ್ವೇ ರೇವಾತೀರೇ ನಿವಾಸಿನಃ ।
ಪರಮಾಶ್ಚರ್ಯಸಂಪನ್ನಾಸ್ತಿಷ್ಠಂತಿ ಪರಿವೃತ್ಯ ತಂ ॥೫೩॥

ತೇ ತಂ ಪಶ್ಯಂತಿ ಮುನಯ ಸ್ಸ ಬಾಲಸ್ತಾನ್ನ ಪಶ್ಯತಿ ।
ಸ ಚಾನಿಮಿಷಯಾ ದೃಷ್ಟ್ಯಾ ಧೀರೋ ಲಿಂಗಾನಿ ಪಶ್ಯತಿ ॥೫೪॥

ಆ ಬಾಲಕನು ಇನ್ನೂ ಚಿಕ್ಕ ವಯಸ್ಸಿನವನಾದ್ದರಿಂದ ಆತನಿಗೆ ಮಧ್ಯೆಮಧ್ಯೆ ನಡಗೆಯಲ್ಲಿ ಎಡರುಂಟಾಗುತ್ತದೆ. ಆದರೂ ಆತನು ಅತ್ಯಂತ ಆಸಕ್ತಿಯಿಂದ ಶಿವ ಲಿಂಗ ಪೂಜೆಯನ್ನೂ ಪ್ರದಕ್ಷಿಣೆಗಳನ್ನೂ ಮಾಡುತ್ತಿರುವನು. ||೫೦||

ಆ ಬಾಲಕನು ಪ್ರದಕ್ಷಿಣೆ ಮಾಡುತ್ತ ಮಾಡುತ್ತಾ, ಆತನ ಶರೀರವೆಲ್ಲಾ ಆಯಾಸದಿಂದ ಬೆವರುವುದು. ಆದರೂ ಅದನ್ನು ಲೆಕ್ಕಿಸದೇ ಮತ್ತೆಮತ್ತೆ ಪ್ರದಕ್ಷಿಣೆ ಮಾಡುವನು. ಲಿಂಗದೆದುರಿನಲ್ಲಿ ತಾಳಹಾಕುತ್ತಾ ನಾಟ್ಯವಾಡುವನು. ||೫೧||

ಪುನಃ ಆ ಬಾಲಕನು ವಿಸ್ಮಯಾನಂದಾದಿಗಳಿಂದ ಪುಲಕಿತನಾಗಿ ಎರಡೂ ಕಣ್ಣುಗಳನ್ನು ಮುಚ್ಚಿಕೊಂಡು ಆ ಶಿವಲಿಂಗಗಳನ್ನೇ ಭಕ್ತಿಯಿಂದ ಧ್ಯಾನಿಸುವನು. ||೫೨||

ಇಂಥ ಅದ್ಭುತಸ್ವಭಾವದ ಬಾಲಕನನ್ನು ನೋಡಿ, ಆ ನದೀತೀರ ನಿವಾಸಿಗಳಾದ ಋಷಿಗಳೆಲ್ಲಾ ಅತ್ಯಾಶ್ಚರ್ಯಾನ್ವಿತರಾಗಿ ಆತನನ್ನೇ ನೋಡುತ್ತಾ ಆತನ ಸಮೀಪದಲ್ಲಿಯೇ ಇರುತ್ತಾರೆ. ||೫೩||

ಈರೀತಿ ವಿಸ್ಮಯದಿಂದ ಆ ಋಷಿಗಳೆಲ್ಲರೂ ಬಾಲಕನನ್ನೇ ನೋಡುತ್ತಿರುತ್ತಾರೆ. ಆದರೆ ಆ ಬಾಲಕನು ಅವರನ್ನು ಕಣ್ಣೆತ್ತಿಯೂ ನೋಡುವುದಿಲ್ಲ. ಆತನು

ಉದಹಾರ್ಯೋಽಪಿ ಪಶ್ಯಂತಿ ಜಲಕುಂಭಾನ್ವಿಹಾಯ ತೇ ।
ಗೋಪಾಲಾ ಅಪಿ ಪಶ್ಯಂತಿ ಗೋಭಿಸ್ಸಹ ವಿಶೇಷತಃ ॥೫೫॥

ಮಧುರಂ ಶಿವನಾಮಾನಿ ಸ ಗಾಯತಿ ಮುಹುರ್ಮುಹುಃ ।
ಗಂಧರ್ವಗಾನವಿದ್ಯಾಯಾಂ ನಿಪುಣಃ ಪ್ರಾಯಶಸ್ಸ ತು ॥೫೬॥

ಇತಿ ತದ್ವಚನಂ ಶ್ರುತ್ವಾ ರಾಜಾ ವಿಸ್ಮಿತಮಾನಸಃ ।
ತದ್ದರ್ಶನಾಯ ತ್ವರಯಾ ನಿರ್ಗತೋ ವಾಜಿವಾಹನಃ ॥೫೭॥

ಬಾಲಕಾಲೋಕನಂ ಕರ್ತುಂ ಭೂಪತಿಸ್ತ್ವರಯಾ ಗತಃ ।
ರೇವಾತೀರಂ ತದಾ ತಾವದ್ಗತಿಭೇದೋಽಪಿ ವಾಜಿನಾಂ ॥೫೮॥

ನ ಜ್ಞಾತಸ್ತ್ವರಯಾ ತಸ್ಯ ಗಮನೋತ್ಕಂಠಯಾ ನೃಪ ।
ತುರಂಗಕೋಟಿಘಟಿತೋ ಮತ್ತಮಾತಂಗಕೋಟಿಭಿಃ ॥೫೯॥

ಕೇವಲ ಧೀರವಾದ ನೋಟದಿಂದ ರೆಪ್ಪೆಯನ್ನು ಸಹ ಮುಚ್ಚದೇ ಶಿವಲಿಂಗವನ್ನೇ ನೋಡುತ್ತಾನೆ. ॥೫೪॥

ಆ ನದಿಗೆ ನೀರನ್ನು ತರಬೇಕೆಂದು ಹೋದವರು ತಮ್ಮ ಕೆಲಸವನ್ನು ಸಹ ಮರೆತು, ನೀರಿನ ಕೊಡಗಳನ್ನು ಎಲ್ಲೆಂದರೆ ಅಲ್ಲಿಯೇ ಬಿಟ್ಟು ವಿಸ್ಮಯದಿಂದ ಆತನನ್ನೇ ನೋಡುತ್ತಾ ನಿಲ್ಲುತ್ತಾರೆ. ಗೋಪಾಲರಂತೂ ಆತನ ಸಮೀಪದಲ್ಲಿಯೇ ಹಸುಗಳನ್ನು ಬಿಟ್ಟುಕೊಂಡು ಅಲ್ಲಿಯೇ ನೆಲೆಸಿರುತ್ತಾರೆ. ॥೫೫॥

ಆ ಬಾಲಕನು ಬಹುಶಃ ಗಂಧರ್ವ ವಿದ್ಯೆಯಲ್ಲಿಯೂ, ಅತ್ಯಂತ ನಿಪುಣನ ಹಾಗೆ ತೋರುತ್ತಾನೆ. ಏಕೆಂದರೆ, ಪದೇಪದೇ ಆತನು ಶಿವನಾಮಗಳನ್ನು ಅತ್ಯಂತ ಮಧುರಧ್ವನಿಯಿಂದ ರಾಗತಾಲಲಯ ಯುಕ್ತವಾಗಿಯೇ ಹಾಡುತ್ತಾನೆ." ॥೫೬॥

ಈ ರೀತಿಯಾಗಿ ಮಂತ್ರಿಗಳು ಹೇಳಲು, ರಾಜನಿಗೆ ಅತ್ಯಂತ ಆಶ್ಚರ್ಯವಾಯಿತು. ಆ ಕೂಡಲೇ ರಾಜನೂ ಆ ಬಾಲಕನನ್ನು ನೋಡಬೇಕೆಂದು ಕುತೂಹಲದಿಂದ ಕುದುರೆಯನ್ನೇರಿ ಕೂಡಲೇ ಹೊರಟನು. ॥೫೭॥

ಆ ರಾಜನಿಗೆ ಆ ಬಾಲನನ್ನು ಎಷ್ಟು ಹೊತ್ತಿಗೆ ನೋಡಿಯೇನು ! ಎನ್ನುವ ಆತುರ ಉಂಟಾಯಿತು. ತನ್ನ ಕುದುರೆಯು ಎಷ್ಟು ಓಡುತ್ತಿದ್ದರೂ ಆತನಿಗೆ ನಿಧಾನ

ಸಂವೃತೋ ಭೂಪತಿಸ್ತೀವ್ರಂ ರೇವಾತೀರಂ ಉಪಾಯಯೌ ।
ತತೋ ದೂರಾತ್ಸ ರಾಜಾಪಿ ಮುನಿವೃಂದಾನಿ ಕೋಟಿಶಃ ॥೬೦॥

ಉಪರ್ಯುಪರಿಸಂಕ್ರಾಂತಶರೀರಾಣಿ ವಿಲೋಕಯನ್ ।
ಆನಂದಾಶ್ರುಸಮಾಕೀರ್ಣಸ್ತುರಂಗಾದವತೀರ್ಯ ಸಃ ॥೬೧॥

ಯಯೌ ಪ್ರಧಾನಸಂವೀತಸ್ಸನಕಾದ್ಯೈಸ್ಸಮಾವೃತಃ ।
ಬಾಲಸ್ಯ ನಿಕಟೇ ಗತ್ವಾ ಸ ರಾಜಾ ವಿಸ್ಮಿತಃ ಪರಂ ॥೬೨॥

ಮಂದಂ ಪ್ರದಕ್ಷಿಣೀಕೃತ್ಯ ದಂಡವತ್ಪ್ರಣತೋ ಮುಹುಃ ।
ತತಸ್ಸರ್ವೇ ಸಮಾಲೋಕ್ಯ ಬಾಲಕಂ ವಿಸ್ಮಯಾವಹಂ ॥೬೩॥

ಸ್ಥಿತಾಸ್ಸರ್ವೇಽಪಿ ಪರಿತಸ್ತತ್ರ ಚಿತ್ರಾರ್ಪಿತಾ ಇವ ।
ಸ ನ ಪಶ್ಯತಿ ರಾಜಾನಂ ನ ಪ್ರಧಾನಾನ್ಮುನೀಶ್ವರಾನ್ ॥೬೪॥

---

ವಾಗಿಯೇ ತೋರುತ್ತಿತ್ತು. ಆತನು ಕುದುರೆಯನ್ನೇರಿ ಹೊರಟೊಡನೆಯೇ ಅನೇಕ ಕುದುರೆಗಳೂ ಆನೆಗಳೂ ಆತನನ್ನು ಹಿಂಬಾಲಿಸಿ ಹೊರಟವು. ॥೫೮-೫೯॥

ಹಾಗೆ ರಾಜನು ಕುದುರೆಯನ್ನು ತೀವ್ರವಾಗಿ ಓಡಿಸಿಕೊಂಡು ರೇವಾನದಿಗೆ ಹೋಗುತ್ತಿದ್ದನು. ಆತನು ದೂರದಲ್ಲಿರುವಾಗಲೇ ಋಷಿಗಳ ಗುಂಪು ಕಾಣಿಸಿತು. ಆ ಋಷಿಗಳೆಲ್ಲಾ ಒಬ್ಬರಮೇಲೊಬ್ಬರಂತೆ ಒತ್ತಾಗಿ ಗುಂಪುಕೂಡಿದ್ದರು. ಇದನ್ನೆಲ್ಲಾ ವಿಸ್ಮಯದಿಂದಲೇ ನೋಡುತ್ತಾ ಆ ತೀರಕ್ಕೆ ತಲಪಿದನು. ॥೬೦॥

ಈ ಅದ್ಭುತಗಳನ್ನೆಲ್ಲಾ ನೋಡಿ ಆತನಿಗೆ ಆನಂದಬಾಷ್ಪಗಳುಂಟಾದವು. ಆಗ ಅಲ್ಲಿಯೇ ಕುದುರೆಯಿಂದಿಳಿದು ತನ್ನ ಮಂತ್ರಿಗಳೊಡನೆಯೂ, ಅಲ್ಲಿಯೇ ನೆರೆದಿದ್ದ ಸನಕಾದಿಮುನಿಗಳೊಡನೆಯೂ ಆ ಬಾಲಕನ ಸಮೀಪಕ್ಕೆ ಹೋದನು. ಅಲ್ಲಿಯೂ ಆತನನ್ನು ನೋಡಿ ಅತ್ಯಂತ ವಿಸ್ಮಿತನಾದನು. ॥೬೧-೬೨॥

ಅನಂತರ ಆ ರಾಜನು ಭಕ್ತಿಯಿಂದ ಆ ಬಾಲಕನಿಗೆ ಪ್ರದಕ್ಷಿಣೆಮಾಡಿ ಸಾಷ್ಟಾಂಗಪ್ರಣಾಮಗೈದನು. ಆದರೂ ಅವಿಚಲಿತನಾದ ಆ ಬಾಲಕನನ್ನು ನೋಡಿ ನೋಡಿ ಮತ್ತು ವಿಸ್ಮಿತನಾದನು. ॥೬೩॥

ಆ ಬಾಲಕನ ಅದ್ಭುತ ಅವಸ್ಥೆಯನ್ನೂ, ವಿಚಿತ್ರ ವರ್ತನೆಯನ್ನೂ, ನೋಡುತ್ತ ನೋಡುತ್ತಾ ಚಿತ್ರದ ಬೊಂಬೆಯಂತೆ ಎಲ್ಲರೂ ಸ್ತಬ್ಧವಾಗಿ ನಿಂತಿದ್ದರು. ಆದರೆ

ನಾತ್ಮಾನಂ ಚ ಪರಂ ಲಿಂಗಂ ಪಶ್ಯನ್ನಭ್ಯರ್ಚಿತಂ ಮುಹುಃ ।
ನ ವದತ್ಯೇವ ಕೇನಾಪಿ ಶಿವನಾಮಪರಶ್ಶಿವಂ ॥೬೫॥

ಉಚ್ಚೈರಭ್ಯರ್ಚಯನ್ ಧೀರೋಽಪ್ಯಾನಂದಾಶ್ರುಪರಿಪ್ಲುತಃ ।
ತಂ ದೃಷ್ಟ್ವಾ ವಿಸ್ಮಯಾವಿಷ್ಟಾಸ್ತೇ ಸರ್ವೇ ವಿಷ್ಟರಾಶ್ರಯಾಃ ॥೬೬॥

ತ್ರಿವಿಷ್ಟಪಸಮಂ ಮತ್ವಾ ಸ್ಥಾನಂ ಹಾರಾಶ್ರಿತಂ ಸ್ಥಿತಾಃ ।
ಸ ಪುನಃ ಪುನರಾದಾಯ ಶೀತಲಂ ವಿಮಲಂ ಜಲಂ ॥೬೭॥

ಅಭಿಷಿಂಚತಿ ಲಿಂಗಾನಿ ಬಿಲ್ವೈಸ್ಸಂಪೂಜಯನ್ಮುಹುಃ ।
ತಂ ವಿಲೋಕ್ಯ ಸಲಜ್ಜಾಸ್ತೇ ಸನೃಪಾಲಾ ಮುನೀಶ್ವರಾಃ ॥೬೮॥

---

ಬಾಲಕನು ಆ ರಾಜನನ್ನಾಗಲಿ, ಅಮಾತ್ಯರನ್ನಾಗಲಿ, ಮುನಿಗಳನ್ನಾಗಲಿ ಕಣ್ಣೆತ್ತಿಯೂ ಸಹ ನೋಡದೇ ಒಂದೇ ರೀತಿ ಶಿವಧ್ಯಾನವನ್ನೇ ಮಾಡುತ್ತಿದ್ದನು. ॥೬೪॥

ಆ ಬಾಲಕನು ಏನೊಂದೂ ಮಾತನಾಡದೇ ತನ್ನ ಶರೀರದ ಕಡೆಯೂ ಲಕ್ಷಿಸದೇ, ಕೇವಲ ತನ್ಮಯತೆಯಿಂದ ಶಿವಲಿಂಗವನ್ನೇ ಪೂಜಿಸುವನು. ಶಿವಲಿಂಗವನ್ನೇ ಸಂದರ್ಶಿಸುವನು. ಶಿವನಾಮವನ್ನೇ ಹಾಡುವನು. ॥೬೫॥

ಆ ಬಾಲಕನು ಪದೇ ಪದೇ ಶಿವಲಿಂಗವನ್ನೇ ಆರಾಧಿಸುವನು. ಅದೇ ತಾದಾತ್ಮ್ಯದಿಂದ ಆತನಿಗೆ ಅತ್ಯಂತ ಆನಂದವಾಗಿ ಆನಂದಾಶ್ರುಪರಿಪೂರ್ಣನಾಗುವನು. ಇದನ್ನು ನೋಡಿ ಅಲ್ಲಿ ನೆರೆದಿರುವವರೆಲ್ಲರೂ ಅತ್ಯಂತ ವಿಸ್ಮಿತರಾಗುವರು. ॥೬೬॥

ಆ ಬಾಲಕನು ನಿರ್ಮಲವಾಗಿಯೂ ಶೀತಲವಾಗಿಯೂ ಇರುವ ಜಲದಿಂದ ಪದೇ ಪದೇ ಶಿವಲಿಂಗಕ್ಕೆ ಅಭಿಷೇಕವನ್ನು ಮಾಡುವನು. ಮತ್ತೆ ಬಿಲ್ವದಳಗಳಿಂದ ಪೂಜೆಯನ್ನು ನಡೆಸುವನು. ಈ ವಿಚಿತ್ರವನ್ನು ನೋಡುತ್ತಾ ಆ ಋಷಿಗಳೂ ರಾಜನೇ ಮುಂತಾದವರೂ ಶಿವಭಕ್ತರು ನೆಲಸಿರುವ ಸ್ಥಳವನ್ನೇ ಸ್ವರ್ಗವೆಂದು ತಿಳಿಯುತ್ತಾ ಅಲ್ಲಿಯೇ ನಿಂತಿರುವರು. ಇಂಥ ಬಾಲಕನು ಇಷ್ಟು ಶಿವಸೇವೆಯನ್ನು ಮಾಡುತ್ತಿರುವನು; ನಾವು ಮಾತ್ರ ವ್ಯರ್ಥವಾಗಿ ಕಾಲಕಳೆಯುತ್ತಿರುವೆವೆಂದು ನಾಚಿಕೊಳ್ಳುವರು. ॥೬೭-೬೮॥

ನತ್ವಾ ತಮೂಚುಃ ಕೋಽಸೀತಿ ತೇ ಕೃತಾಂಜಲಯಸ್ತದಾ ।
ತತಸ್ಸೋಽಪಿ ಮಹಾದೇವ ಸದಾಶಿವ ಇತೀರಯನ್ ॥೬೯॥

ನಾನ್ಯಾಂ ವಾಚಮುವಾಚಾಪಿ ನ ದದರ್ಶ ಚ ತಾನ್ನೃಪ ।
ತತಃಪರಂ ಜಿತಾಹಾರಾಸ್ತೇ ಸರ್ವೇ ವಿಸ್ಮಯಾಕುಲಾಃ ॥೭೦॥

ಆಸಾಯಂ ತಂ ವಿಲೋಕ್ಯೈವ ಸ್ಥಿತಾಃ ಕೇವಲಮಾದರಾತ್ ।
ಸ್ನಾತ್ವಾ ರೇವಾಜಲೇ ಸರ್ವೇ ತ್ರಿಪುಂಡ್ರಾಂಕಿತಮಸ್ತಕಾಃ ॥೭೧॥

ಉದ್ಧೂಲಿತಾಂಗಾಶ್ಯಾಂಗಾಸ್ತೇ ಶಂಗಾರ್ಚನಪರಾಯಣಾಃ ।
ಸೋಽಪಿ ಬಾಲಃ ಪುನಃ ಸ್ನಾತ್ವಾ ಭಸ್ಮನೋದ್ಧೂಲ್ಯ ಸಾದರಂ ॥೭೨॥

ಹೀಗೆಯೇ ವಿಸ್ಮಯದಿಂದ ನೋಡುತ್ತ, ಕೊನೆಗೆ ಆತನಿಗೆ ನಮಸ್ಕರಿಸಿ ವಿನಯದಿಂದ ನೀನು ಯಾರೆಂದು ಕೇಳಿದರು. ಆದರೆ ಆ ಬಾಲಕನು ಅದಕ್ಕೆ ಏನೂ ಉತ್ತರವನ್ನೇ ಕೊಡಲಿಲ್ಲ. ಕೇವಲ ಶಿವನಾಮಗಳನ್ನು ಸ್ಮರಿಸಿಕೊಂಡನು. ಮಹಾದೇವ, ಸದಾಶಿವ ಎಂದು ಮುಂತಾಗಿ ಉದ್ಗಾರಮಾಡಿದನು. ಅವರನ್ನು ಕಣ್ಣೆತ್ತಿಯೂ ನೋಡಲಿಲ್ಲ. ॥೬೯॥

ಅನಂತರ ಇಷ್ಟು ತನ್ಮಯನಾಗಿರುವುದನ್ನು ನೋಡಿ ಅಲ್ಲಿ ನೆರೆದಿರುವವರಿಗೆಲ್ಲರಿಗೂ ಆತ್ಯಾಶ್ಚರ್ಯವಾಯಿತು. ಆಗ ಅವರು ಅನ್ನಾಹಾರಗಳನ್ನೂ ಸಹ ಬಿಟ್ಟು ಅಲ್ಲಿಯೇ ಸಂಜೆಯವರೆಗೂ ಕಾದುಕೊಂಡಿದ್ದರು. ॥೭೦॥

ಆ ಬಾಲಕನ ಧೀರ ಭಕ್ತಿಯನ್ನು ನೋಡಿ ಅವರಿಗೂ ಶಿವನಲ್ಲಿ ಅತ್ಯಂತ ಭಕ್ತಿಯುಂಟಾಯಿತು. ಆಗ ಅವರೆಲ್ಲರೂ ಆ ರೇವಾನದಿಯಲ್ಲಿ ಸ್ನಾನ ಮಾಡಿ ಹಣೆಗೆ ಭಸ್ಮತ್ರಿಪುಂಡ್ರವನ್ನೂ, ಅಂಗಾಂಗಗಳಿಗೆ ಭಸ್ಮವನ್ನೂ ಧರಿಸಿಕೊಂಡು ಶಿವನನ್ನೇ ಧ್ಯಾನಮಾಡುತ್ತಿದ್ದರು. ॥೭೧॥

ಆಗ ಮಧ್ಯಾಹ್ನವಾಗಲು ಆ ಬಾಲಕನು ಪುನಃ ರೇವಾನದಿಯಲ್ಲಿ ಸ್ನಾನ ಮಾಡಿ ಭಸ್ಮತ್ರಿಪುಂಡ್ರವನ್ನು ಹಚ್ಚಿಕೊಂಡನು. ಅಂಗಾಂಗಗಳಿಗೂ ಭಸ್ಮವನ್ನು ಬಳಿದುಕೊಂಡನು. ಅಲ್ಲದೇ ರುದ್ರಾಕ್ಷಮಾಲೆಗಳನ್ನೂ ಧರಿಸಿಕೊಂಡನು. ॥೭೨॥

ತ್ರಿಪುಂಡ್ರಧಾರಣಂ ಚಕ್ರೇ ರುದ್ರಾಕ್ಷಸಮಲಂಕೃತಃ ।
ಪಶ್ಚಾದ್ವಿಲೋಕಿತಂ ತುಂಗಂ ಶಾಂಗಂ ಲಿಂಗಂ ಸ ನಾರ್ಮದಂ ॥೭೩॥

ಅಭಿಷಿಚ್ಯ ನವ್ಯೈರ್ಬಿಲ್ವೈಃ ಪೂಜಯಾಮಾಸ ಶಂಕರಂ ।
ತಂ ದೃಷ್ಟ್ವಾ ತೇ ಜನಾಸ್ಸರ್ವೇ ವಿಸ್ಮಯಾವಿಷ್ಟಚೇತನಾಃ ॥೭೪॥

ಧನ್ಯೋಽಯಂ ಕೃತಕೃತ್ಯೋಽಯಂ ಕೋಽಪಿ ಮಾನುಷವಿಗ್ರಹಃ ।
ಪ್ರಾಹುಃ ಕೋಯಮಿತಿ ಪ್ರೀತ್ಯಾ ಹಾರೋ ಹಾರಮನೋಹರಃ॥೭೫॥

ನ ಚಾಸ್ಯಾಹಾರಲೇಶೋಽಪಿ ಪ್ರಾತರಾರಭ್ಯ ಸರ್ವಥಾ ।
ತಚ್ಚರಿತ್ರಂ ವಿಚಿತ್ರಂ ಹಿ ತ್ರಿಣೇತ್ರಾರ್ಚನಯಾ ಚಿರಂ ॥೭೬॥

ಕಾಲಂ ನಯತಿ ಬಾಲೋಽಪಿ ನ ಚೇದಂ ಬಾಲಚೇಷ್ಟಿತಂ ।
ನ ಚಾಸ್ಯ ತತ್ತ್ವಂ ವಿಜ್ಞಾತುಂ ಶಕ್ಯತೇ ಮನುಜೈರಿಹ ॥೭೭॥

---

ಅನಂತರ ಆ ಬಾಲಕನು ಆ ನರ್ಮದೆಯ ಲಿಂಗಗಳ ಬಳಿಗೆ ಬಂದು ಸಂದರ್ಶನ ಮಾಡಿದನು. ಅಲ್ಲದೇ ನಿರ್ಮಲವಾದ ಜಲದಿಂದ ಅಭಿಷೇಕವನ್ನು ಮಾಡಿ ಬಿಲ್ವದಳಗಳಿಂದ ಭಕ್ತಿಪೂರ್ವಕವಾಗಿ ಶಿವಾರ್ಚನೆಯನ್ನು ಮಾಡತೊಡಗಿದನು. ||೭೩||

ಈ ರೀತಿಯಾಗಿ ಸತತವೂ ಶಿವಾರ್ಚನೆಯನ್ನೇ ಮಾಡುತ್ತಿರುವ ಬಾಲಕನನ್ನು ನೋಡಿ ಅಲ್ಲಿರುವವರಿಗೆಲ್ಲರಿಗೂ ಅತ್ಯಾಶ್ಚರ್ಯವಾಯಿತು. ಆಹಾ! ಈ ಬಾಲಕನೇ ನಿಜವಾಗಿಯೂ ಧನ್ಯನು. ಸದಾ ಶಿವಪೂಜೆಯನ್ನೇ ಮಾಡುತ್ತಿರುವುದರಿಂದ ಈತನೇ ಸತ್ಯವಾಗಿಯೂ ಕೃತಕೃತ್ಯನು. ಈ ಪರಶಿವಭಕ್ತನು ಯಾರಿರಬಹುದು? ಬಹುಶಃ ಈತನು ಮಹಾತ್ಮನು. ಕೇವಲ ಬಾಲಕರೂಪವನ್ನು ಧರಿಸಿಕೊಂಡಿರುವನು ಎಂದು ಮುಂತಾಗಿ ಆತನನ್ನೇ ಶ್ಲಾಘಿಸುತ್ತಿದ್ದರು. ||೭೪-೭೫||

ಹಾಗೆಯೇ ಆ ರಾಜನೂ ಆಲೋಚಿಸುತ್ತಿದ್ದನು. ಆಹಾ, ಇದೇನಾಶ್ಚರ್ಯ? ಈ ಬಾಲಕನಿಗೆ ಬೆಳಗಿನಿಂದಲೂ ಆಹಾರವಿಲ್ಲ. ಆದರೂ ಉತ್ಸಾಹದಿಂದಲೇ ಪುನಃ ಶಿವಾರ್ಚನೆಯಲ್ಲಿ ತೊಡಗಿರುವನಲ್ಲಾ! ಈತನ ವರ್ತನೆಯೇ ವಿಚಿತ್ರವಾಗಿರುವುದು. ||೭೬||

ಕೇವಲ ಬಾಲ್ಯವಯಸ್ಕನಾಗಿದ್ದರೂ ಸಹ ಈರೀತಿ ಶಿವಾರ್ಚನೆಯಲ್ಲಿ ತತ್ಪರನಾಗಿರುವನು. ಸರ್ವಥಾ ಈತನು ಸಾಮಾನ್ಯ ಬಾಲಕನಲ್ಲ. ಬಾಲಕರು ಈರೀತಿ

ತ್ಯಕ್ತ್ವಾ ಬಾಲಂ ನ ಗಂತುಂ ಚ ಪ್ರವೃತ್ತಂ ಮಾನಸಂ ಖಲು ।
ಅನಾದರೋಽಯಮಾಹಾರೇ ಕಿಂ ಚ ನಾಹಾರದೋಽಸ್ತ್ಯತಃ ॥೭೮॥

ನ ನಾರದೋಽಪಿ ನಾರೀ ವಾ ತಸ್ಯಾನಾದರ ಏವ ಹಿ ।
ಇತ್ಯಾಲೋಚ್ಯ ನೃಪಸ್ಸೋಽಪಿ ಕೃಪಯಾ ಪರಯಾ ಯುತಃ ॥೭೯॥

ಗೋಕ್ಷೀರಾಹಾರಮಾದಾಯ ಯಯೌ ಬಾಲಕಸನ್ನಿಧಿಂ ।
ಏತಸ್ಮಿನ್ನಂತರೇ ಕಾಲೇ ವಿಧಿಸ್ಸಾಯಂ ಶಿವಾರ್ಚನಂ ॥೮೦॥

ಕೃತ್ವಾ ರೇವಾಮುಪಾಪಾಥ ತಂ ದದರ್ಶ ಸ ಬಾಲಕಂ ।
ಭೂತಿರುದ್ರಾಕ್ಷಪೂತಾಂಗಂ ಶಿವನಾಮಜಪೋತ್ಸುಕಂ ॥೮೧॥

---

ಶಿವಾರಾಧನೆಯನ್ನು ಎಂದಿಗೂ ಮಾಡಲಾರರು. ಈತನಾರೋ ಮಹಾತ್ಮನಿರುವನು. ಈತನ ಸ್ವರೂಪವನ್ನು ಮನುಷ್ಯರಾದ ನಮ್ಮಿಂದ ತಿಳಿಯಲು ಸರ್ವಥಾ ಸಾಧ್ಯವಿಲ್ಲ. ॥೭೭॥

ಆದರೆ ಈ ಬಾಲಕನನ್ನು ಬಿಟ್ಟುಹೋಗಲು ಮನಸ್ಸೇ ಬರುವುದಿಲ್ಲ. ಈ ಬಾಲಕನಾದರೋ ಅನ್ನಾಹಾರಗಳ ಯೋಚನೆಯನ್ನೇ ಬಿಟ್ಟಿರುತ್ತಾನೆ. ಈತನಿಗೆ ಆಹಾರವನ್ನು ಕೊಡುವವರೂ ಸಹ ಇಲ್ಲಿ ಯಾರೂ ಕಾಣುವುದಿಲ್ಲ. ನಾರದನಾಗಲಿ ಅಥವಾ ದೇವಸ್ತ್ರೀಯಾಗಲಿ ಇಲ್ಲಿ ಯಾರೂ ಆಹಾರ ಕೊಡುವವರಿಲ್ಲ. ॥೭೮॥

ಹೀಗೆಂದು ಯೋಚಿಸಿದ ಕೂಡಲೇ ಆ ರಾಜನಿಗೆ ಬಾಲಕನ ವಿಷಯದಲ್ಲಿ ಅತಿ ದಯೆಯುಂಟಾಯಿತು. ಆ ಬಾಲಕನಿಗಾಗಿ ಅನ್ನಾಹಾರಗಳನ್ನೂ ಹಾಲುಹಣ್ಣುಗಳನ್ನೂ ತರಬೇಕೆಂದು ಹೋಗಿ ಎಲ್ಲವನ್ನೂ ತೆಗೆದುಕೊಂಡು, ಪುನಃ ಆ ಬಾಲಕನ ಸಮೀಪಕ್ಕೆ ಬಂದನು. ಅಷ್ಟು ಹೊತ್ತಿಗೆ ಸಂಜೆ ಆಗಿತ್ತು. ॥೭೯॥

ಆ ಸಮಯದಲ್ಲಿ ಬ್ರಹ್ಮನು ಸಾಯಂಕಾಲದ ಶಿವಾರ್ಚನೆಯನ್ನು ಪೂರೈಸಿಕೊಂಡು ಹಾಗೆಯೇ ಸಂಚರಿಸುತ್ತಾ ಆ ರೇವಾನದೀ ತೀರಕ್ಕೆ ಬಂದನು. ಮತ್ತು ಅಲ್ಲಿಯೇ ಶಿವಪೂಜಾತತ್ಪರನಾಗಿ ಭಸ್ಮರುದ್ರಾಕ್ಷಮಾಲೆಗಳನ್ನು ಧರಿಸಿಕೊಂಡು ಶಿವನಾಮಜಪದಲ್ಲಿ ತಲ್ಲೀನನಾದ ಆ ಬಾಲಕನನ್ನು ನೋಡಿದನು. ॥೮೦-೮೧॥

ಚತುರ್ಮುಖಂ ವಿಲೋಕ್ಯಾಹ ಬಾಲಶ್ಶಿವಶಿವೇತಿ ಸಃ ।
ತತಃಪರಂ ಸ ರಾಜಾಪಿ ತಂ ವಿಲೋಕ್ಯ ಚತುರ್ಮುಖಂ ॥೮೨॥

ಪೂಜಯಾಮಾಸ ಹೃಷ್ಟಾತ್ಮಾ ಶಿವಭಕ್ತಿಧಿಯಾ ಪರಂ ।
ತತಃ ಪರ್ಯನುವಾಚಾಯಂ ರಾಜಾ ಪರಮಧಾರ್ಮಿಕಃ ॥೮೩॥

ಕೋಽಯಂ ತ್ವಯಾ ಜ್ಞಾಯತೇ ಕಿಂ ನ ವೇತಿ ವಿನಯಾನ್ವಿತಃ ॥೮೪॥

॥ ರಾಜೋವಾಚ ॥

ಪ್ರಾತರಾರಭ್ಯ ಬಾಲೋಽಯಂ ಕರೋತಿ ಗಿರಿಶಾರ್ಚನಂ ।
ನೃತ್ಯತ್ಯಗ್ರೇ ಮಹೇಶಸ್ಯ ಲಿಂಗರೂಪಸ್ಯ ಕೇವಲಂ ॥೮೫॥

ಪ್ರಾತರಾರಭ್ಯ ಸರ್ವೇಽಪಿ ವಿಧೇ ನಗರವಾಸಿನಃ ।
ನಾಹಾರೇಷ್ವಾದರಾ ಏವ ವಿಹಾರೇ ಸುತರಾಮಪಿ ॥೮೬॥

ಬ್ರಹ್ಮನು ಸಮೀಪಕ್ಕೆ ಬರಲು ಆ ಬಾಲಕನು ಕೇವಲ ಒಂದು ಸಲ ಆತನನ್ನು ನೋಡಿ ಶಿವ ಶಿವ ಎಂದು ಉದ್ಗಾರಮಾಡಿದನು. ಮತ್ತೇನನ್ನೂ ಆಡಲೇ ಇಲ್ಲ. ಆಗ ಅಲ್ಲಿಗೆ ಬಂದ ರಾಜನೂ ಬ್ರಹ್ಮನನ್ನು ನೋಡಿದನು. ॥೮೨॥

ಆ ರಾಜನು ಬ್ರಹ್ಮನನ್ನು ಕೂಡಲೇ ವಂದಿಸಿ ಅತ್ಯಂತ ಆನಂದಪಟ್ಟವನಾಗಿ ಅತಿ ಭಕ್ತಿಯಿಂದ ಪೂಜಿಸಿದನು. ಪೂಜಾಸತ್ಕಾರಗಳಾದ ನಂತರ ಸಂತುಷ್ಟನಾದ ಬ್ರಹ್ಮನನ್ನು ಕುರಿತು, ಈ ಬಾಲಕನಾರು? ಈತನ ವಿಚಾರವೇನು? ಎಂದು ವಿನಯದಿಂದ ಕೇಳಿದನು. ॥೮೩-೮೪॥

ಪ್ರಾತಃಕಾಲದಿಂದ ಆರಂಭಮಾಡಿ ಈ ಬಾಲಕನು ಇನ್ನೂ ಶಿವಾರ್ಚನೆಯನ್ನೇ ಮಾಡುತ್ತಿರುವನು. ಶಿವಾರ್ಚನೆಯಲ್ಲಿ ಸ್ವಲ್ಪವೂ ಈತನಿಗೆ ಬೇಸರಿಕೆ ಇರುವುದಿಲ್ಲ. ಸದಾ ಪೂಜೆಮಾಡುವನು. ಮತ್ತೆ ಶಿವಲಿಂಗದೆದುರಿನಲ್ಲಿ ತನ್ಮಯತೆಯಿಂದ ಕುಣಿಯುವನು. ॥೮೫॥

ಎಲೈ ಬ್ರಹ್ಮನೇ, ಈ ಅದ್ಭುತ ಬಾಲಕನನ್ನು ನೋಡುವ ತವಕದಿಂದ ಪಟ್ಟಣಿಗರೆಲ್ಲಾ ಬೆಳಗಿನಿಂದಲೂ ಅನ್ನಾಹಾರಗಳ ಯೋಚನೆಯನ್ನೂ ಬಿಟ್ಟು, ವಿಹಾರಸುಖಗಳನ್ನೂ ಗಮನಿಸದೇ, ಇಲ್ಲೇ ಆಶ್ಚರ್ಯದಿಂದ ನಿಂತು ನೋಡುತ್ತಿರುವರು. ॥೮೬॥

ಅದ್ಭುತಾ ಬಾಲಚೇಷ್ಟೇಯಂ ದೃಶ್ಯತೇ ಗೋಧನೈರಪಿ ।
ನ ಪೀತಂ ಚ ಜಲಂ ಗೋಭಿರ್ಯವಸಂ ಚ ನ ಭಕ್ಷಿತಂ ॥೮೭॥

ಅಗ್ನಿಹೋತ್ರಾದಿಕರ್ಮಾಣಿ ಮುನಿಭಿರ್ವಿಸ್ಮೃತಾನ್ಯಪಿ ।
ಲಜ್ಜಯಾ ನೀಯತೇ ಕಾಲಃ ಕೇವಲಂ ತದ್ವಿಲೋಕನಾತ್ ॥೮೮॥

ಮುನೀಶ್ವರಕಲತ್ರಾಣಾಂ ಗಾತ್ರಾಣ್ಯಪಿ ವಿಶೇಷತಃ ।
ವಿಚಿತ್ರಾಣೀವ ದೃಶ್ಯಂತೇ ತೇಷು ಸಂಚಾರಏವ ನ ॥೮೯॥

ಮುನಿಬಾಲಾಶ್ಚ ಪಶ್ಯಂತಿ ತಸ್ಯ ಬಾಲಸ್ಯ ಚೇಷ್ಟಿತಂ ।
ಆಹಾರಸ್ತೈರಪಿ ತ್ಯಕ್ತೋ ವಾರ್ತಾ ನಾನ್ಯಸ್ಯ ಸರ್ವಥಾ ॥೯೦॥

ಈ ಬಾಲಕನ ವರ್ತನೆಯು ಕೇವಲ ಮನುಷ್ಯರಿಗೇ ಆಶ್ಚರ್ಯಕಾರಿಯಾಗಿಲ್ಲ. ಪಶುಪಕ್ಷಿಗಳೂ ಈತನನ್ನೇ ನೋಡುತ್ತಾ ನಿಂತಿರುತ್ತವೆ. ಹಸುಗಳು ಹುಲ್ಲು ನೀರು, ಕಡ್ಡಿಗಳನ್ನು ಸಹ ತಿನ್ನಲು ಇಷ್ಟಪಡದೇ ಈ ಬಾಲಕನನ್ನೇ ನೋಡುತ್ತಿವೆ. ॥೮೭॥

ಋಷಿಗಳೂ ಸಹ ತಮ್ಮ ಅಗ್ನಿಹೋತ್ರಾದಿಕರ್ಮಗಳ ಅನುಷ್ಠಾನವನ್ನು ಮರೆತು ಈತನನ್ನೇ ನೋಡುತ್ತಾ ನಿಂತಿರುವರು. ಈ ಬಾಲಕನಷ್ಟು ಚಿತ್ತಶುದ್ಧಿಯು ತಮಗಿರುವುದಿಲ್ಲವೆಂದು ಎಲ್ಲರಿಗೂ ಲಜ್ಜೆಯಾಗಿದೆ. ॥೮೮॥

ಈ ಬಾಲಕನನ್ನು ನೋಡುವ ಸಡಗರದಲ್ಲಿ ಋಷಿಪತ್ನಿಯರ ಅವಸ್ಥೆಯೇ ವಿಚಿತ್ರವಾಗಿ ಹೋಗಿದೆ. ತನ್ಮಯತೆಯಿಂದ ಅವರು ನೋಡುತ್ತಿರುತ್ತಾರೆ. ಅವರ ಶರೀರದಲ್ಲಿ ಆಗ ಸ್ವಲ್ಪವೂ ಚಲನಕ್ರಿಯೆಯೇ ಇರುವುದಿಲ್ಲ. ಎಲ್ಲರಿಗೂ ಅಷ್ಟೊಂದು ಆಶ್ಚರ್ಯವಾಗಿರುವುದು. ॥೮೯॥

ಋಷಿಪುತ್ರರಿಗೂ ಈ ಬಾಲಕನ ಸ್ಥಿತಿಯನ್ನು ನೋಡುತ್ತಿರುವುದೇ ಮುಖ್ಯ ಕೆಲಸವಾಗಿಹೋಗಿದೆ. ಈತನನ್ನು ನೋಡುವ ತವಕದಿಂದ ಆ ಬಾಲಕರಿಗೂ ಅನ್ನಾಹಾರ, ಹಸಿವು ನೀರಡಿಕೆಯ ಪರಿವೆ ಇರುವುದಿಲ್ಲ. ಇನ್ನು ಬೇರೆ ಆಟಪಾಟಗಳಂತೂ ಸರ್ವಥಾ ತ್ಯಜಿಸಲ್ಪಟ್ಟಿವೆ. ॥೯೦॥

ನಾಯಂ ಮುನಿರ್ನ ಗಂಧರ್ವಃ ಪನ್ನಗೋ ವಾ ನರೋಽಪಿ ವಾ
ಸುರೋಽಯಮಸುರೋವಾಪಿ ಸಿದ್ಧೋ ವಾ ಯಕ್ಷ ಏವ ವಾ ॥೯೧॥

ಕೇಯಂ ಸೃಷ್ಟಿರ್ಮಹೇಶಸ್ಯ ಲೋಕಾನಾಂ ವಿಸ್ಮಯಾವಹಾ ।
ನ ಮಾತಾ ದೃಶ್ಯತೇ ತಸ್ಯ ನ ಭ್ರಾತಾ ನ ಚ ಬಾಂಧವಃ ॥೯೨॥

ನ ಸಖಾ ನೋಪದೇಷ್ಟಾ ಚ ನ ವದತ್ಯಪಿ ಬಾಲಕಃ ।
ನಗರಂ ಪ್ರತಿಗಂತುಂ ವಾ ನ ಮನೋ ಜಾಯತೇ ಮಮ ॥೯೩॥

ವೃಥೈವ ಗತಮಾಯುರ್ಮೇ ಚಿಂತಾ ತಾವತ್ಪ್ರಜಾಯತೇ ।
ಪಂಚವತ್ಸರಪರ್ಯಂತಂ ಶಿವವಾರ್ತಾಪಿ ನ ಶ್ರುತಾ ॥೯೪॥

---

ಇಷ್ಟು ಅದ್ಭುತಸ್ವಭಾವದ ಈ ಬಾಲಕನಾರು? ಈತನು ಮುನಿಯಂತೆ ಆಗಲಿ ಅಥವಾ ಗಂಧರ್ವನಂತೆ ಕಾಣುವುದಿಲ್ಲ. ಈತನಾರು? ಈತನು ನಿಜವಾಗಿ ಮನುಷ್ಯನೇ? ಅಥವಾ ಪನ್ನಗನೇ? ದೇವತೆಯೇ? ಅಸುರನೇ? ಸಿದ್ಧನೋ ಅಥವಾ ಈತನು ಯಕ್ಷನೋ? ॥೯೧॥

ಎಲೈ ಬ್ರಹ್ಮನೇ? ಈ ವಿಚಿತ್ರ ಸೃಷ್ಟಿ ಏನು? ಸಕಲರಿಗೂ ವಿಸ್ಮಯಕಾರಿಯಾದ ಈ ಬಾಲಕನನ್ನೂ ಪರಮೇಶ್ವರನೇ ಸೃಷ್ಟಿಸಿರುವನೇ? ಈ ಬಾಲಕನಿಗಾದರೋ ತಾಯಿಯಾಗಲಿ ತಂದೆಯಾಗಲಿ ಎಲ್ಲಿಯೂ ಕಾಣುತ್ತಿಲ್ಲ. ಅಥವಾ ಸಹೋದರನೂ ಅಥವಾ ಒಬ್ಬ ಬಂಧುವೂ ಸಹ ಹತ್ತಿರ ಇದ್ದಂತೆ ಇಲ್ಲ. ॥೯೨॥

ಈ ಬಾಲಕನಿಗೆ ಉಪದೇಶ ಹೇಳುವವನು ಒಬ್ಬ ಮಿತ್ರನಾಗಲಿ ಅಥವಾ ಗುರುವಾಗಲಿ ಇರುವುದಿಲ್ಲ. ಆದರೂ ಕೇವಲ ಸ್ವಪ್ರವೃತ್ತಿಯಿಂದಲೇ ಸದಾ ಶಿವನನ್ನು ಆರಾಧಿಸುತ್ತಿರುವನು. ಇಂಥ ಅದ್ಭುತಚರಿತ್ರೆಯ ಬಾಲಕನನ್ನು ಬಿಟ್ಟು ನನಗೆ ಪಟ್ಟಣಕ್ಕೆ ಹೋಗುವುದಕ್ಕೂ ಸಹ ಮನವಾಗುವುದಿಲ್ಲ. ॥೯೩॥

ನನ್ನ ಆಯುಷ್ಯವೆಲ್ಲಾ ಶಿವಾರಾಧನೆ ಇಲ್ಲದೇ ವ್ಯರ್ಥವಾಗಿ ಕಳೆದು ಹೋಯಿತು. ಈ ಬಾಲಕನು ಇಷ್ಟು ಬಾಲ್ಯವಯಸ್ಸಿನಲ್ಲಿಯೇ ತನ್ಮಯತೆಯಿಂದ ಶಿವನನ್ನು ಆರಾಧಿಸುತ್ತಿರುವನು. ಆದರೆ ನನಗೆ ಐದುವರ್ಷ ತುಂಬುವವರೆಗೂ ನನ್ನ ಕಿವಿಗೆ ಶಿವನೆಂಬ ಹೆಸರೂ ಕೇಳಿದ್ದಿಲ್ಲ ಅದೇ ನನ್ನನ್ನು ಚಿಂತೆಗೆ ಈಡು ಮಾಡಿದೆ. ॥೯೪॥

ಗರ್ಭವಾಸೇ ಬಹೂನ್ಯೇವ ದುಃಖಾನಿ ವಿವಿಧಾನ್ಯಪಿ ।
ಭುಕ್ತಾನ್ಯೇವ ನ ತೇಷಾಂ ತು ಗಣನಾ ಗಣನಾಪಿ ನ ॥೬೫॥

ಜನನೀಜಠರಾನಲೇನ ತಪ್ತಾ
ಜಠರೇ ತಾವದಿಯಂ ತನುಸ್ತನುರ್ಮೇ ।
ಅಧುನಾಪಿ ನ ವಾಸನಾ ಗತಾ ಮೇ
ಬತ ಹಾ ಹಂತ ಬತೇತಿ ಹಾ ಮಹೇಶ ॥೯೬॥

ಜಠರಾನಲತಾಪಪಾಪಭೀತಿಃ
ನ ಗತಾ ತಾವದಿಹಾಪಿ ನೂನಮಸ್ಯ ।
ನರಕಾಲಯ ಏವ ಗರ್ಭವಾಸಃ
ನ ನ ಸಹ್ಯಃ ಖಲು ಸರ್ವಥಾ ಮಮಾಸೀತ್ ॥೯೭॥

ಈ ರೀತಿಯಾಗಿ ಶಿವಾರಾಧನ ವಿಮುಖನಾದ ನಾನು ಗರ್ಭವಾಸದಲ್ಲಿ ಎಷ್ಟೊಂದು ದುಃಖಗಳನ್ನನುಭವಿಸಿದೆ. ಆ ದುಃಖಗಳು ಎಣಿಕೆಗೂ ನಿಲುಕುವುದಲ್ಲ. ॥೯೫॥

ಆ ಗರ್ಭದಲ್ಲಿ ವಾಸಮಾಡುವಾಗ ತಾಯಿಯ ಜಠರಾಗ್ನಿಯಿಂದ ನನ್ನ ಶರೀರವೆಲ್ಲಾ ಸುಡುತ್ತಿತ್ತು. ಅಂಥ ಯಾತನೆಯನ್ನು ಇನ್ನೂ ಅನೇಕವಾಗಿ ಅನುಭವಿಸಿದ್ದೇನೆ. ಆದರೂ ನನ್ನ ಪಾಪಸಂಸ್ಕಾರವು ತೀರಿರುವುದಿಲ್ಲ. ಹಾ, ಶಿವಶಿವ, ನನ್ನ ಸಕಲ ಪಾಪಗಳನ್ನೂ ಆ ಪರಮೇಶ್ವರನೇ ಪರಿಹರಿಸಬೇಕು. ॥೯೬॥

ಮತ್ತೆ ಆ ನರಕಕ್ಕೆ ಸಮನಾದ ಗರ್ಭದಲ್ಲಿ ವಾಸಮಾಡಬೇಕಾಗುವುದಲ್ಲ, ಎಂಬುದೇ ನನಗೆ ಮಹಾ ಭೀತಿಗೆ ಕಾರಣವಾಗಿದೆ. ಪಾಪವಾಸನೆಯು ಎಲ್ಲಿಯವರೆಗೆ ನಾಶವಾಗುವುದಿಲ್ಲವೋ, ಆಗ ಪದೇಪದೇ ಗರ್ಭವಾಸವೂ ಯಾತನೆಯೂ ಒದಗುತ್ತಲೇ ಇರುತ್ತದೆ. ಆ ಗರ್ಭದಲ್ಲಿಯೋ ನರಕದಲ್ಲಿ ಯಾವಯಾವ ಯಾತನೆಗಳಾಗುವುವೋ ಅವೆಲ್ಲಾ ತೋರುವುವು. ಅಂಥ ಘೋರಯಾತನೆಯನ್ನು ನನ್ನಿಂದ ಸಹಿಸಲು ಸಾಧ್ಯವಿರುವುದಿಲ್ಲವಲ್ಲ! ॥೯೭॥

ಬಹುಧಾ ಖಲು ದುಃಖಮೇವ ಭುಂಕ್ತೇ
ಜನನೀಯೋನಿವಿನಿರ್ಗಮಕ್ಷಣೇಽಪಿ ।
ತದನು ಕ್ಷುಧಯಾತಿಪೀಡಿತೋಽಹಂ
ಜನನೀಸ್ತನ್ಯಮಪೇಕ್ಷಿತಂ ತದಾ ಹಿ ॥೯೮॥

ನ ಚ ವಾಗಪಿ ನಿರ್ಗತಾ ಮಮಾಭೂತ್
ವದನಾತ್ಸಾ ರಸನಾತಿಕುಂಠಿತಾ ।
ಮಲಸಂಕುಲದೇಹಪೀಡಯಾಪಿ
ಪ್ರಬಲಂ ದುಃಖಮಭೂತ್ಪುನಃ ಪುನರ್ಮೇ ॥೯೯॥

ಅಂಗಾರಶಕಟೀಧಾಟೀಖಡ್ಗಾ ನಿಕಟಿತಾಪಿನೀ ।
ಸಾಪಿ ತಾಪಾಯ ತತ್ತಾಪಪ್ರನಾಶೋ ನಾಭವತ್ ಖಲು ॥೧೦೦॥

ಔಷಧಾನಿ ಕಟೂನ್ಯೇವ ತಿಕ್ತಾನ್ಯಪಿ ಕದಾಚನ ।
ಸೇವಿತಾನ್ಯತಿದುಃಖಾಯ ಜಾತಾನ್ಯಪಿ ವಿಶೇಷತಃ ॥೧೦೧॥

ಅಂತೂ ಆ ಗರ್ಭದಲ್ಲಿ ಮಾತ್ರವೇ ಯಾತನೆಯು ಪೂರೈಸುವುದಿಲ್ಲ. ಜನನ ಕಾಲದಲ್ಲಂತೂ ಅತಿ ಘೋರವಾದ ಯಾತನೆಯಾಗುವುದು. ಅಲ್ಲಿಗೂ ದುಃಖವು ಮುಗಿಯುವುದಿಲ್ಲ. ಕೂಡಲೇ ಹಸಿವು ಬಾಯಾರಿಕೆಗಳಿಂದ ದುಃಖವಾಗುವುದು. ಕ್ಷಣಕ್ಷಣಕ್ಕೂ ಸ್ತನ್ಯಪಾನ ಮಾಡಲು ಅಪೇಕ್ಷೆಯಾಗುವುದು. ॥೯೮॥

ಆ ಬಾಲ್ಯದಲ್ಲಿಯಾದರೋ ಎಷ್ಟು ದುಃಖಗಳು ಸಂಭವಿಸುವುವು. ಅವಕ್ಕೇನಾದರೂ ಲೆಕ್ಕವುಂಟೇ! ಇಲ್ಲ. ಇಂಥ ದುಃಖವಾಗುತ್ತಿದೆ ಎಂದು ಹೇಳುವುದಕ್ಕೂ ಸಹ ಮಾತು ಬರುವುದಿಲ್ಲ. ನಾಲಿಗೆ ಹಾಗೆಹಾಗೆಯೇ ಮುದುರಿಹೋಗುತ್ತಿರುತ್ತದೆ. ಮೈಯೆಲ್ಲಾ ಮಲಮೂತ್ರಗಳಲ್ಲಿ ಹೊರಳಾಡಿ ಪದೇಪದೇ ದುಃಖವು ಒದಗುತ್ತಿರುತ್ತದೆ. ॥೯೯॥

ಹತ್ತಿರದಲ್ಲಿಯೇ ಬೆಂಕಿಯ ಖಡ್ಗಯಂತ್ರವನ್ನಿಟ್ಟು ಸುಡುವಂತೆ ಯಾತನೆಯಾಗುವುದು. ಅಂಥ ತಾಪಕ್ಕೆ ಎಂದೂಕೊನೆಯಾಗುವಂತೆ ತೋರುವುದಿಲ್ಲ. ॥೧೦೦॥

ರೋಗಾದಿ ದುಃಖಗಳು ಬಂದಾಗ ಆ ದುಃಖಾನುಭವವಂತೂ ಇರಲಿ. ಅದರ ಜೊತೆಗೆ ಹುಳಿಯಾದ ಮತ್ತು ಕಹಿಯಾದ ಔಷಧಗಳನ್ನು ಸೇವಿಸಬೇಕು.

ತತಃ ಪರಂ ದುರ್ವ್ಯಸನೇನ ನೀತಂ
ವಯಃ ಕಿಯತ್ಕಾಮವಿಮೋಹಿತೇನ ।
ಹಾ ಹಂತ ನಾರಾಧಿತ ಏವ ಶಂಭುಃ
ಭೂಯೋ ಭವಾಂಭೋನಿಧಿಕರ್ಣಧಾರಃ ॥೧೦೨॥

ಹಾರೇಷು ದಾರೇಷ್ವಪಿ ಯೋಽನುರಾಗಃ
ಸ ಏವ ಹಾರೇ ನ ಹರೇಽಪಿ ಹಾರೇ ।
ಲಿಂಗೇತಿತುಂಗೇ ತತ ಏವ ನಾಯುಃ
ಗತಂ ಕಿಮೇತಸ್ಯ ವೃಥಾ ತದಾಯುಃ ॥೧೦೩॥

ಉಪಾಯ ರಹಿತನಾಗಿ ಆ ದುಃಖಗಳನ್ನೂ ಅನುಭವಿಸಬೇಕು. ಇವೆಲ್ಲವೂ ಈ ಜನ್ಮ ಪ್ರಾಪ್ತಿಯ ಫಲವಲ್ಲವೇ? ಆ ಯಾತನೆಗಳನ್ನು ಸಾಮಾನ್ಯಗಳಾದವೆಂದು ಹೇಳ ಲಾಗುತ್ತದೆಯೇ? ॥೧೦೧॥

ಆ ಬಾಲ್ಯವು ಕಳೆದಮೇಲೆ ಕೇವಲ ಕಾಮಾಂಧನಾಗಿ ದುಷ್ಟವ್ಯಸನಗಳಲ್ಲಿ ತಲ್ಲೀನನಾದೆ. ಭೋಗವಿಲಾಸಗಳಲ್ಲಿಯೇ ಮಗ್ನನಾಗಿ ಎಷ್ಟೋ ಅಮೋಘವಾದ ಆಯುಷ್ಯವನ್ನು ದುರ್ವ್ಯಯಮಾಡಿಕೊಂಡೆ. ಅಂಥ ಸುಸಮಯಗಳಲ್ಲಿ ಶ್ರೇಯಸ್ಕರ ವಾದ ಶಿವಾರಾಧನೆಯನ್ನು ನಾನು ಮಾಡಲಿಲ್ಲವಲ್ಲ! ಅಯ್ಯೋ, ಎಷ್ಟು ಅನುಚಿತ ವಾಯಿತು! ಆ ಪರಮೇಶ್ವರನನ್ನು ಭವಸಾಗರ ತಾರಕನೆನ್ನುವರು. ಇಷ್ಟು ದಿವಸ ಆತನನ್ನೇ ಆರಾಧಿಸಿದ್ದರೆ ಸುಖವಾಗಿ ಈ ದುಃಖಮಯವಾದ ಸಂಸಾರವನ್ನು ದಾಟಬಹುದಾಗಿತ್ತು. ॥೧೦೨॥

ಮುಕ್ತಾಹಾರಗಳಲ್ಲಿಯೂ ಸ್ತ್ರೀಯರಲ್ಲಿಯೂ ಯಾವ ಪ್ರೇಮವಿದ್ದಿತೋ ಅದೇ ಪ್ರೇಮವು ಶಿವಭಕ್ತನಲ್ಲಿಯೋ ಶಿವನಲ್ಲಿಯೋ ಅಥವಾ ಮನೋಹರವಾದ ಉನ್ನತ ಶಿವಲಿಂಗದಲ್ಲಿಯೋ ಇದ್ದಿದ್ದರೆ ಎಷ್ಟು ಒಳ್ಳಿತಾಗುತ್ತಿತ್ತು? ಹಾಗೆ ಒಂದು ದಿನವೂ ಆಗಲಿಲ್ಲ. ಆ ಶಿವಲಿಂಗಾದಿಗಳಲ್ಲಿ ಪ್ರೇಮವನ್ನಿಡದೆ ನನ್ನ ಆಯುಷ್ಯ ವೆಲ್ಲವೂ ವ್ಯರ್ಥವಾಗಿಯೇ ಕಳೆದುಹೋಯಿತಲ್ಲಾ! ನಾನು ಎಷ್ಟು ಅನುಚಿತವನ್ನು ಮಾಡಿದೆ. ॥೧೦೩॥

ಯಥಾ ಮನೋತ್ತುಂಗತುರಂಗವಾಂಛಾ
ಮಾತಂಗವಾಂಛಾಪಿ ತಥಾ ಕಥಾಪಿ ।
ಲಿಂಗೇ ನ ಶಾಂಗೇ ಖಲು ಸಸ್ಪೃಹೋಽಹಂ
ಹಾ ಹಾ ಹತೋಽಹಂ ವಿಧಿಸಂಹತೋಽಹಂ ॥೧೦೪॥

ಯಥಾ ಮನೋತ್ತುಂಗಕುರಂಗಲೋಚನಾ
ವಿಲೋಚನಾಲೋಚನಧೀಸ್ತಥಾ ಚೇತ್ ।
ಉತ್ತುಂಗಲಿಂಗೇಷ್ವಪಿ ಶಾಂಗಸಂಗೇ
ಷ್ವತ್ಯದ್ಭುತಾ ತರ್ಹಿ ವಿಮುಕ್ತ ಏವ ॥೧೦೫॥

ದಾರಾಃ ಕುಮಾರಾಶ್ಚ ಧನಂ ಹರಂತಿ
ವಯೋ ಹರತ್ಯೇವತರಾಂ ಹರಸ್ತು ।
ನ ಸಂಸ್ತುತೋ ನ ಶ್ರುತ ಏವ ನೂನಂ
ಹಾ ಹಾ ಹತೋಽಹಂ ಹತ ಏವ ನೂನಂ ॥೧೦೬॥

ನಾನು ದಿವ್ಯಜಾತಿಯ ಕುದುರೆಗಳನ್ನು ಸಂಪಾದಿಸಬೇಕು. ಉತ್ತಮವಾದ ಆನೆಗಳನ್ನು ಸಂಗ್ರಹಿಸಬೇಕು ಎಂದು ಮುಂತಾಗಿ ಅಪೇಕ್ಷಿಸುತ್ತಾ ಕಾಲವನ್ನು ಕಳೆದೆ. ಆಸೆ ಆಸಕ್ತಿಯು ಶಿವಲಿಂಗದಲ್ಲಾಗಲಿ ಅಥವಾ ಶಿವಭಕ್ತನಲ್ಲಾಗಲಿ ಇಲ್ಲದೇ ಹೋಯಿತಲ್ಲಾ. ಅಯ್ಯೋ ಏನು ನನ್ನ ದೌರ್ಭಾಗ್ಯ! ನಿಜವಾಗಿಯೂ ನಾನು ದುರ್ದೈವದಿಂದ ನಷ್ಟನಾಗಿಹೋಗಿದ್ದೇನೆ. ॥೧೦೪॥

ನಾನು ಯೌವನದಲ್ಲಿ ಭೋಗವಿಲಾಸಿಯಾಗಿಬಿಟ್ಟೆ. ಸದಾ ಹರಿಣಾಕ್ಷಿಯರ ಲೋಚನಗಳ ಸೌಂದರ್ಯವನ್ನು ಅಳತೆಮಾಡುವುದರಲ್ಲಿಯೇ ನನ್ನ ಮನಸ್ಸು ಆಸಕ್ತವಾಗಿರುತ್ತಿತ್ತು. ಅದೇ ಮನಃಪ್ರವೃತ್ತಿಯು ಶಿವಲಿಂಗದಲ್ಲಿಯೋ ಅಥವಾ ಶಿವಭಕ್ತರ ಸಹವಾಸದಲ್ಲಿಯೋ ಇದ್ದಿದ್ದರೆ ನಿಜವಾಗಿಯೂ ನಾನು ಈ ಸಂಸಾರದಿಂದ ಮುಕ್ತನಾಗುತ್ತಿದ್ದೆನು. ॥೧೦೫॥

ಧನವಾಗಲಿ, ಆಯುಷ್ಯವಾಗಲಿ ನಮ್ಮದಾಗಿ ಎಂದೂ ಸ್ಥಿರವಾಗಿರುವುದಿಲ್ಲ. ನಮ್ಮ ಸಕಲ ಧನಗಳನ್ನೂ ಪತ್ನೀಪುತ್ರರು ಹರಣಮಾಡುತ್ತಾರೆ. ಆಯುಷ್ಯವು ದಿನೇ ದಿನೇ ಕಳದೇಹೋಗುವುದು. ಹೀಗಿದ್ದರೂ ನಾನು ಅವಿವೇಕದಿಂದ

ದಾರಪ್ರಸಂಗೇಷು ನ ಶಂಗವಾರ್ತಾ
ಯುತಸ್ತದಾ ಮಾರಶರಾಭಿಘಾತಃ ।
ಶರಾಭಿಘಾತೇನ ಸುರೋಽಪಿ ಮೂಢಃ
ತತೋ ಮೃಡೇ ಭಕ್ತಿರಭೂದ್ದೃಢಾ ಕಾ ॥೧೦೭॥

ಕೌಮಾರೇ ವಾ ಯೌವನೇ ವಾರ್ಧಕೇ ವಾ
ಬುದ್ಧಿ ರ್ನಾಸೀತ್ತುಂಗಲಿಂಗಾರ್ಚನೇಷು ।
ನಾಭ್ಯಸ್ತಾ ವಾ ಶಾಂಭವೀಜ್ಞಾನವಿದ್ಯಾ
ಲೋಕೇ ಯಾಮೇ ಕಾ ಗತಿರ್ಮೇ ಭವಿತ್ರೀ ॥೧೦೮॥

ಶಂಭೋ ಗೌರೀವಲ್ಲಭಾನಾಥನಾಥ
ಪಾಹಿ ಸ್ವಾಮಿನ್ ಪಾಪರಾಶಿಂ ಕೃಶಾಶಂ ।
ವಧ್ಯಂ ಮೃತ್ಯುರ್ಮಾಮನ್ವೈತಿ ಪ್ರಕಾಮಂ
ಕಿಂ ಕಾಮಾರೇ ಮಯ್ಯುಪೇಕ್ಷಾ ತವಾಪಿ ॥೧೦೯॥

ಶಿವನನ್ನು ಆರಾಧಿಸಲಿಲ್ಲ. ಅಯ್ಯೋ ಏನು ಅನ್ಯಾಯಮಾಡಿದೆ! ನನ್ನಂಥ ಅಪರಾಧಿಗಳು ಮತ್ತೆ ಯಾರಿರುವರು ? ನಾಶವನ್ನು ತಂದುಕೊಂಡೆನಲ್ಲಾ! ||೧೦೬||

ಅಂಥ ಸ್ತ್ರೀಯರೊಂದಿಗೆ ಭೋಗವಿಲಾಸವನ್ನು ಅನುಭವಿಸುವ ಸಮಯಗಳಲ್ಲಿ ಶಿವನನ್ನು ಧ್ಯಾನಿಸುವುದಾಗಲಿ ಎಲ್ಲಿಬಂತು ? ಆ ವಿವೇಕತಾನೆ ಹೇಗೆ ಬಂದೀತು ? ಏಕೆಂದರೆ ಆಗ ಮನ್ಮಥವಿಕಾರದಿಂದ ಅಂಧನಾಗಿಹೋಗಿದ್ದೆ. ಕಾಮಾಸಕ್ತಿಯಿಂದ ಎಂಥ ದೇವತೆಗಳೂ ಸಹ ಮೂಢರಾಗಿ ಹೋಗುತ್ತಾರೆ. ಅಂದಮೇಲೆ ನನ್ನಂಥ ಮನುಜನಿಗೆ ಪರಮೇಶ್ವರನಲ್ಲಿ ದೃಢಭಕ್ತಿ ಹೇಗೆ ಉಂಟಾದೀತು ?||೧೦೭||

ಹೀಗೆ ಶಿವನಲ್ಲಿ ಭಕ್ತಿಯೇ ಇಡದೇ ಬಾಲ್ಯ, ಯೌವನ, ವಾರ್ಧಕ್ಯಗಳೆಲ್ಲವೂ ಕಳೆದುಹೋದವು. ನಾನು ವಿದ್ಯೆಯ ಜೊತೆಯಲ್ಲಿ ಶಾಂಕರವಿದ್ಯೆಯನ್ನೂ ಸಹ ಕಲಿಯಲಿಲ್ಲ. ಅಂದಮೇಲೆ ನನಗೆ ಮುಂದೆ ಯಮಲೋಕದಲ್ಲಿ ಏನು ದುರ್ಗತಿಯು ಪ್ರಾಪ್ತವಾಗುವುದೋ ಏನೋ ? ಯೋಚಿಸಿಕೊಂಡರೆ ಈಗಲೇ ಭಯವಾಗುವುದು. ||೧೦೮||

ಓ ಶಂಭೋ! ನೀನು ಗೌರೀಪತಿಯು ; ನೀನೇ ನಮ್ಮಂಥ ಅನಾಥರಿಗೆ ಸಂರಕ್ಷಕನಾಗಿದ್ದೀಯೆ. ನಾನು ಅನೇಕ ಪಾಪಗಳನ್ನು ಮಾಡಿ ಮಹಾಪರಾಧಿಯಾ

ತ್ವಂ ಮೇ ಮಾತಾ ತ್ವಂ ಪಿತಾ ಮೇ ಸಖಾಪಿ
ತ್ವಂ ಭ್ರಾತಾ ಮೇ ಶಾಂಕರೋಽಪಿ ತ್ವಮೇವ ।
ತ್ವಂ ಮೇ ತ್ರಾತಾ ಪ್ರಾಣರಕ್ಷಾಮಣಿಸ್ತ್ವಂ
ನಾನ್ಯಂ ಜಾನೇ ತ್ವಾಂ ವಿನಾ ಮೇ ಶರಣ್ಯಂ ॥೧೧೦॥

ಕದಾ ರೇವಾತೀರೇ ಹರಹರ ಮಹಾದೇವ ಭಗವನ್
ಮಹಾರುದ್ರೇಶಾನ ಸ್ಮರಹರ ಹರಾಂಧಾಂಧಕರಿಪೋ ।
ಉಮಾಕಾಂತಾಭ್ರಾಂತಪ್ರಕಟಿತಜಟಾಜೂಟಿ ಭಗವನ್
ಇತಿ ಪ್ರಾಣತ್ಯಾಗಂ ಕ್ವಚಿದಪಿ ಕರೋಮಿ ಪ್ರಸಭತಃ ॥೧೧೧॥

ಗಿದ್ದೇನೆ. ಅನಾಥನಾಗಿದ್ದೇನೆ. ನನ್ನನ್ನು ಕಾಪಾಡು. ಮೃತ್ಯುವು ನನ್ನನ್ನು ಅಟ್ಟಿಸಿಕೊಂಡು ಬರುತ್ತಿದ್ದಾನೆ. ಮೃತ್ಯುಂಜಯನೇ! ನೀನೂ ನನ್ನನ್ನು ಉಪೇಕ್ಷಿಸುವೆಯಾ? ದಯೆಯಿಟ್ಟು ನನ್ನನ್ನು ಕಾಪಾಡು. ॥೧೦೯॥

ಓ ಪರಮೇಶ್ವರ! ನಾನು ನಿನ್ನನ್ನೇ ತಾಯಿತಂದೆ ಎಂದು ತಿಳಿದಿದ್ದೇನೆ. ನೀನೇ ನನ್ನ ಮಿತ್ರನೂ, ಸಹೋದರನೂ, ಆಗಿದ್ದೀಯೆ. ಶಾಂಭವರಂತೆ ನೀನು ಸಕಲರಿಗೂ ಪೂಜ್ಯನು. ಹಾಗೆಯೇ ನನಗೂ ನೀನೇ ಸರ್ವಸ್ವವು. ನನ್ನ ಪ್ರಾಣಗಳಿಗೆ ನೀನೇ ರಕ್ಷಾಮಣಿ. ಆದ್ದರಿಂದ ನೀನೇ ನನ್ನನ್ನು ಕಾಪಾಡಬೇಕು. ನಿನ್ನನ್ನು ಬಿಟ್ಟು ಮತ್ತೆ ಯಾರನ್ನೂ ಸಂರಕ್ಷಕನೆಂದು ನಾನು ತಿಳಿದಿಲ್ಲ. ನೀನೇ ಪರಮ ಶರಣಾಗತರಕ್ಷಕ ಎಂದು ನಂಬಿದ್ದೇನೆ. ॥೧೧೦॥

ಓ ಪರಮೇಶ್ವರ! ನನಗೆ ಇದೊಂದೇ ಚಿಂತೆಯಿರುವುದು. ನಾನು ಅಪೇಕ್ಷಿಸುವುದೂ ಇದೊಂದನ್ನೇ. ಎಂದು ನನ್ನ ಮಹಾಪ್ರಯಾಣವು ಒದಗುವುದು? ಆ ದಿವಸ ನಾನು ಹೇಗೆ ಪರಮೇಶ್ವರನಲ್ಲಿ ಮೊರೆಯನ್ನಿಡಲಿ! ರೇವಾನದೀ ತೀರದಲ್ಲಿಯೇ ಹರ, ಮಹಾದೇವ, ಮಹಾರುದ್ರ, ಈಶಾನ ಎಂದು ಮುಂತಾಗಿ ಪರಮೇಶ್ವರನ ಪುಣ್ಯನಾಮಗಳನ್ನು ಸಂಕೀರ್ತನೆ ಮಾಡುತ್ತ ಮಾಡುತ್ತ ಪ್ರಾಣತ್ಯಾಗಮಾಡುವ ಸುಯೋಗವು ಎಂದಾದರೂ ನನಗೆ ಲಭಿಸೀತೇ? ಅಂಥ ಭಾಗ್ಯವು ದೊರೆತರೆ ನಿಶ್ಚಿಂತೆಯಿಂದ ಪ್ರಾಣಬಿಡುವೆನು. ನಾನು ನಿನ್ನಲ್ಲಿ ಅಂಥ ಸುಯೋಗವನ್ನೇ ಕೊಡೆಂದು ಪ್ರಾರ್ಥಿಸುವೆನು. ॥೧೧೧॥

ಕದಾ ವಾ ಸದ್ಭಸ್ಮಪ್ರಕರರುಚಿರಾ ಸ್ಯಾತ್ತನುರಿಯಂ
ಮಹಾರುದ್ರಾಕ್ಷಾಣಾಮಪಿ ವಿತತಮಾಲಾತಿರುಚಿರಾ ।
ವರೇ ರೇವಾತೀರೇ ರುಚಿರಹರಲಿಂಗಸ್ಯ ನಿಕಟೇ
ಶರೀರಸ್ಯ ತ್ಯಾಗಂ ಶಿವ ಶಿವ ಮಹೇಶೇತಿ ವಿಲಪನ್ ॥೧೧೨॥

ಮುಹುರ್ಭಸ್ಮ ಛನ್ನಂ ಸಿತಭಸಿತರುದ್ರಾಕ್ಷವಲಯಂ
ಶರೀರಸ್ಯ ತ್ಯಾಗಂ ಹರ ಹರ ಮಹೇಶೇತಿ ಕಲಯೇ ॥೧೧೩॥

ಕದಾ ಮುದಾ ಶಂಕರಮಂದಿರೇಷು
ವೃಂದಾರಮಂದಾರವಿಜೃಂಭಿತೇಷು ।
ಲಿಂಗೇಷು ತುಂಗೇಷು ವಿಲೋಕಿತೇಷು
ಮಹಾಪ್ರಯಾಣಾವಸರೋಽಸ್ಯ ಭಾವೀ ॥೧೧೪॥

ಭಾವಸ್ಯ ಭಾವಾನುಚರಸ್ಯ ಶಂಭೋ
ಕಥಂ ಭವಾಂಭೋನಿಧಿಭಂಜನಂ ಸ್ಯಾತ್ ।

ನನ್ನ ಈ ಶರೀರವು ಎಂದು ಪವಿತ್ರವಾದ ಭಸ್ಮದಿಂದ ಅಲಂಕೃತವಾದೀತು? ಮನೋಹರವಾದ ರುದ್ರಾಕ್ಷಮಾಲೆಗಳನ್ನು ಧರಿಸಿಕೊಂಡು ಎಂದು ಈ ಶರೀರವು ಪಾವನವಾದೀತು? ರೇವಾ ತೀರದಲ್ಲಿ ಮನೋಹರವಾದ ಶಿವಲಿಂಗದ ಎದುರಿನಲ್ಲಿ ಶಿವ ಶಿವ ಎಂದು ಶಿವಧ್ಯಾನಮಾಡುತ್ತಾ ಎಂದು ಈ ತುಚ್ಛ ಶರೀರವನ್ನು ತ್ಯಾಗ ಮಾಡಿಯೇನು? ||೧೧೨||

ಮೈಗೆಲ್ಲಾ ಪುಣ್ಯಭಸ್ಮವನ್ನು ಲೇಪಿಸಿಕೊಂಡು, ದಿವ್ಯವಾದ ರುದ್ರಾಕ್ಷಮಾಲೆಗಳನ್ನು ಧರಿಸಿಕೊಂಡು ಹರ ಹರ ಎಂದು ತಾರಕಮಂತ್ರವನ್ನು ಜಪಿಸುತ್ತಾ ಎಂದು ಈ ದುಃಖನಿಲಯವಾದ ಶರೀರವನ್ನು ತ್ಯಾಗಮಾಡಿಯೇನು? ||೧೧೩||

ಪಾವನತಮವಾದ ಶಿವಮಂದಿರದಲ್ಲಿ, ಮಂದಾರ ಮುಂತಾದ ದಿವ್ಯಪುಷ್ಪಗಳಿಂದ ಅಲಂಕೃತವಾದ ಉನ್ನತ ಶಿವಲಿಂಗಗಳನ್ನು ನೋಡುತ್ತಾ, ಈ ಶರೀರವನ್ನು ಬಿಟ್ಟು ಪ್ರಾಣಗಳಿಗೆ ಪ್ರಯಾಣ ಮಾಡುವ ಸುಯೋಗವು ಎಂದಾದರೂ ಲಭಿಸುವುದೇ? ||೧೧೪||

ಶಿವಭಕ್ತನೂ, ಶಿವಭಕ್ತರ ಸಂಗಡಿಗನೂ ಆದ ನನಗೆ ಎಂದು ಈ ಸಂಸಾರ ಬಂಧದಿಂದ ಹೇಗೆ ವಿಮೋಚನೆ ಆದೀತು? ಓ ಪರಮೇಶ್ವರ! ನೀನೇ ಈ ಸಂಸಾರ

ತ್ವಂ ಚೇದ್ಭವಾಂಭೋನಿಧಿಕರ್ಣಧಾರೋ
ಮಹೇಶ್ವರಶ್ಯಾಂಭವಸಂಘಬಂಧುಃ ॥೧೧೫॥

ಕದಾ ರೇವಾತೀರೇ ಹರ ಹರ ಮಹೇಶೇತಿ ವಿಲಪನ್
ಮುಹುಃ ಪ್ರಾಣಾಂಸ್ತ್ಯಕ್ತ್ವಾ ಶಿವಭವವಿಮಾನೋತ್ತಮಗತಃ ।
ಯಮೇಂದ್ರಬ್ರಹ್ಮಾದಿಸ್ತುತಿಮುದಿತಚಿತ್ತಶ್ಶಿವಪದಂ
ಪ್ರಪದ್ಯೇ ಯತ್ಪ್ರಾಪ್ತ್ಯಾ ಪುನರಪಿ ನ ಸಂಸಾರಕಲನಂ ॥೧೧೬॥

ಕದಾ ಶರೀರಂ ಭಸಿತೇನ ಪೂತಂ ರುದ್ರಾಕ್ಷಮಾಲಾಭಿರಲಂಕೃತಂ ಚ ।
ತ್ಯಕ್ಷ್ಯೇ ವಿರೂಪಾಕ್ಷವಿಲೋಕನೇನ ಸ್ಮರನ್ ವಿರೂಪಾಕ್ಷಪದಾರವಿಂದಂ॥೧೧೭॥

ಮತ್ಪ್ರಾರ್ಥನೀಯಂ ಮರಣೇ ಮಹೇಶ
ಮಹೇಶನಾಮಸ್ಮರಣಂ ಸಭಸ್ಮ ।
ರುದ್ರಾಕ್ಷಮಾಲಾಭರಣಂ ಮದಂಗೇ
ತುಂಗಂ ಚ ಲಿಂಗಂ ಮಮ ಸರ್ವದಾಯಾಃ ॥೧೧೮॥

ಸಾಗರಕ್ಕೆ ತಾರಕನಾಗಿದ್ದೀಯಷ್ಟೆ! ನಿನ್ನ ಭಕ್ತರಿಗೆಲ್ಲಾ ನೀನೇ ಪರಮ ಬಂಧು ವಾಗಿರುವೆ! ಆದುದರಿಂದ ನೀನೇ ನನ್ನ ಕೋರಿಕೆಯನ್ನು ಸಲ್ಲಿಸಬೇಕು. ||೧೧೫||

ಯಾವ ದಿನ ನಾನು ರೇವಾತೀರದಲ್ಲಿ ಶಿವನಾಮಗಳನ್ನು ಸ್ಮರಿಸಿಕೊಳ್ಳುತ್ತಾ ಪ್ರಾಣಗಳನ್ನು ತ್ಯಜಿಸಿ, ಶಿವದೂತರು ತಂದಿರುವ ವಿಮಾನವನ್ನೇರಿ ಬ್ರಹ್ಮ, ದೇವೇಂದ್ರ, ಮುಂತಾದವರಿಂದ ಶ್ಲಾಘಿಸಿಕೊಳ್ಳುತ್ತಾ, ಶಿವ ಸಾನ್ನಿಧ್ಯವನ್ನು ಪಡೆದು ಆನಂದ ಪಟ್ಟೆನು? ಯಾವ ಸನ್ನಿಧಿಯು ದೊರೆತರೆ ಮತ್ತೆ ಈ ಕ್ಲೇಶಕರವಾದ ಸಂಸಾರಬಂಧನದ ಪ್ರಸಕ್ತಿ ಇರುವುದಿಲ್ಲವೊ, ಅಂಥ ಶಿವ ಸನ್ನಿಧಿಯನ್ನು ಎಂದು ನಾನು ಸಂಪಾದಿಸಿಯೇನು? ||೧೧೬||

ಭಸ್ಮಧಾರಣೆಯಿಂದಲೂ ರುದ್ರಾಕ್ಷಮಾಲೆಗಳಿಂದಲೂ ಶರೀರವನ್ನು ಅಲಂಕರಿಸಿಕೊಂಡು, ಈಶಪಾದಾರವಿಂದಗಳನ್ನು ಸ್ಮರಿಸುತ್ತಾ ಎಂದು ಪ್ರಯಾಣ ಮಾಡಿಯೇನು? ||೧೧೭||

ಓ ಪರಮೇಶ್ವರ! ನಾನು ಮರಣಸಮಯ ಬಂದರೂ ನಿನ್ನನ್ನು ಕೇಳಿ ಕೊಳ್ಳುವುದು ಇದೇ. ನಾನು ಆ ಕಾಲದಲ್ಲಿಯೂ ಶಿವನಾಮಗಳನ್ನು ಸ್ಮರಿಸಿಕೊಳ್ಳು

ರೇವಾಲಿಂಗಂ ಮರಣಸಮಯೇ ಯಸ್ಯ ನಾಸ್ತ್ಯೇವ ತುಂಗಂ ।
ಶ್ರೌತಂ ಭಸ್ಮ ಸ್ಫಟಿತರುಚಿರಸ್ಥೂಲರುದ್ರಾಕ್ಷಮಾಲಾ ॥೧೧೯॥

ವಿದ್ಯಾ ಶುದ್ಧಾ ಶಾಂಭವೀ ತಸ್ಯ ಮುಕ್ತಿಃ ।
ನಾಸ್ತೀತ್ಯುಕ್ತಂ ಸರ್ವಥಾ ಸಿದ್ಧಸಂಘೈಃ ॥೧೨೦॥

ಸಂತೋಷೋಽಯಂ ಭೂರಿ ಪುಣ್ಯೈಕಲಭ್ಯಃ
ಶಂಭೋ ಶಂಭುಧ್ಯಾನಮಾತ್ರಾನುರಾಗಃ ।
ತ್ವನ್ನಾಮೋಕ್ತಿರ್ಮುಕ್ತಿಕಾಂತಾನುರಾಗೇ
ಹೇತುರ್ನೂನಂ ಸತ್ಯಮೇತತ್ತ್ರಿಸತ್ಯಂ ॥೧೨೧॥

---

ವಂತೆ ಅನುಗ್ರಹಿಸು. ಭಸ್ಮರುದ್ರಾಕ್ಷಮಾಲೆಗಳನ್ನು ಧರಿಸಿಕೊಂಡು ನರ್ಮದಾ ತೀರದಲ್ಲಿ ಶಿವಲಿಂಗದ ದರ್ಶನವನ್ನು ಮಾಡುತ್ತಾ ಪ್ರಾಣಬಿಡುವಂತೆ ನನಗೆ ಕರುಣಿಸು. ॥೧೧೮॥

ರೇವಾಲಿಂಗದ ದರ್ಶನವಾಗಲಿ, ಭಸ್ಮ ರುದ್ರಾಕ್ಷಮಾಲೆಗಳ ಅಲಂಕಾರ ವಾಗಲಿ, ಮರಣಸಮಯದಲ್ಲಿ ಯಾವನಿಗೆ ಇರುವುದಿಲ್ಲವೋ ಆತನೇ ದುರ್ದೈವಿಯು. ॥೧೧೯॥

ಶಿವಲಿಂಗದರ್ಶನಾದಿಗಳೂ ಇಲ್ಲದೇ, ಶಾಂಕರ ವಿದ್ಯೆಯೂ ಇಲ್ಲದಿದ್ದರೆ ಆತನಿಗೆ ಎಂದೂ ಈ ಸಂಸಾರ ಬಂಧನದಿಂದ ಮುಕ್ತಿಯೇ ಇಲ್ಲವೆಂದು ಸಿದ್ಧಪುರುಷ ರೆಲ್ಲರೂ ಸಾರಿದ್ದಾರೆ. ॥೧೨೦॥

ಶಿವಧ್ಯಾನದಲ್ಲಿಯೇ ಸದಾ ಆಸಕ್ತಿ ಇರುವುದು, ಮತ್ತು ಶಿವಾರಾಧನೆಯನ್ನೇ ಸರ್ವದಾ ಮಾಡುತ್ತಿರುವುದು ಇವುಗಳೆಲ್ಲಾ ಪರಮಾನಂದಪ್ರದವಾದುದು. ಪುಣ್ಯ ರಾಶಿಯಿಂದ ಮಾತ್ರ ಲಭಿಸತಕ್ಕದ್ದು. ಎಲ್ಲರಿಗೂ ಸುಲಭವಾಗಿ ಈರೀತಿ ಪ್ರವೃತ್ತಿ ಯುಂಟಾಗಲಾರದು. ಓ ಪರಮೇಶ್ವರ! ನಿನ್ನ ಪುಣ್ಯನಾಮಸಂಕೀರ್ತನವೊಂದೇ ಸಾಕ್ಷಾತ್ ಮುಕ್ತಿಕಾಂತೆಯಲ್ಲಿ ಅನುರಾಗಕ್ಕೆ ಕಾರಣವಾಗುವುದು. ನಿನ್ನನ್ನು ಧ್ಯಾನಿಸಿದವರಿಗೆ ಮೋಕ್ಷವು ಸಿದ್ಧವಾಗಿಯೇ ಇರುವುದು. ಇದು ಸತ್ಯ. ಇದು ತ್ರಿಕಾಲಾಬಾಧಿತ ಸತ್ಯವೆಂದು ಸಾರಿ ಸಾರಿ ಹೇಳಬಲ್ಲೆನು. ॥೧೨೧॥

ಅಸ್ಮಾಕಂ ಮರಣಕ್ಷಣೇ ಯದಿ ಮುದಾ ರೇವಾತಟೇ ನಾರ್ಮದಂ
ಲಿಂಗಂ ಲೋಚನಗೋಚರಂ ನವಲಸದ್ಬಿಲ್ವೀದಳಾಭ್ಯರ್ಚಿತಂ ।
ಭಸ್ಮಾಂಗೇಽಪಿ ವಿಶೇಷತೋ ಯದಿ ಭವೇದ್ರುದ್ರಾಕ್ಷಮಾಲಾ ಶಿವ
ಧ್ಯಾನಂ ಶಾಂಭವಸಂಗತಿಶ್ಶಿವಶಿವೇತ್ಯುಕ್ತಿಸ್ತದಾ ಕಿಂ ಭಯಂ ॥೧೨॥

ಶಿವಸ್ಮರಣಪೂರ್ವಕೋ ಯದಿ ಭವೇದ್ವಿಹಾರಸ್ತದಾ
ಜಿತಂ ಖಲು ಜಗತ್ತ್ರಯಂ ಕ್ವ ಯಮದುರ್ದಶಾ ವಾಸನಾ ।
ಕ್ವ ವಾಸವಚತುರ್ಮುಖಾದ್ಯಮರಭಾವವಾಂಛಾ ತದಾ
ಮಹೇಶ್ವರಪದಾಂಬುಜಸ್ಮರಣಮೇವ ಮುಕ್ತಿರ್ಮಮ ॥೧೩॥

ಇತಿ ಶ್ರೀಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ರೇವಾಲಿಂಗಮಹಿಮಾಯಾಂ ರಾಜೋಕ್ತಿವರ್ಣನಂ ನಾಮ
ತ್ರಯೋದಶೋಽಧ್ಯಾಯಃ

ನಮಗೆ ಮರಣಸಮಯಲ್ಲಿ ಇಷ್ಟೊಂದು ಸುಯೋಗವು ದೊರೆತರೆ ಸಾಕು. ರೇವಾನದಿಯ ತೀರದಲ್ಲಿರಬೇಕು. ರೇವಾಲಿಂಗವನ್ನು ನೂತನವಾದ ಕೋಮಲ ಬಿಲ್ವದಳಗಳಿಂದ ಸಂಪೂಜಿಸಿ ಸಂದರ್ಶನವನ್ನು ಮಾಡುತ್ತಿರಬೇಕು. ಮೈಗೆಲ್ಲಾ ಭಸ್ಮವನ್ನು ಹಚ್ಚಿಕೊಂಡಿರಬೇಕು. ರುದ್ರಾಕ್ಷಿಮಾಲೆಗಳನ್ನೂ ಧರಿಸಿರಬೇಕು. ವರ ಶಾಂಭವರ ಸಹವಾಸವು ಲಭಿಸಿರಬೇಕು. ಸತತವೂ ಶಿವನನ್ನೇ ಧ್ಯಾನಿಸುತ್ತಿರಬೇಕು. ಅನ್ಯಚಿಂತೆ ಒಂದೂ ಇಲ್ಲದೇ ಶಿವನಾಮ ಸಂಕೀರ್ತನವನ್ನೇ ಮಾಡುತ್ತಾ ಶಿವಶಿವ ಎಂದೆನ್ನುತ್ತಿರಬೇಕು. ಅಂಥ ಸಮಯದಲ್ಲಿ ನಮಗೆ ಮರಣ ಸಂಭವಿಸಿದರೆ ಯಾವ ಭಯವುಂಟಾದೀತು ? ಆಗ ನಮ್ಮ ಸಕಲ ಯೋಗಕ್ಷೇಮಗಳನ್ನು ನೋಡಿಕೊಳ್ಳಲು ಕರುಣಾಳುವಾದ ಮೃತ್ಯುಂಜಯನು ಸಿದ್ಧನಾಗಿರುತ್ತಾನಷ್ಟೆ. ||೧೨||

ಯಾವ ಆಹಾರ ವಿಹಾರ ಕರ್ಮಗಳನ್ನು ಮಾಡುವಾಗಲೂ ಶಿವನನ್ನೇ ಧ್ಯಾನಿಸಿ ಶಿವನಿಗೇ ಅವುಗಳನ್ನು ಅರ್ಪಿಸಿ ಉಪಭೋಗಿಸಿದರೆ ಮೂರು ಲೋಕವನ್ನೂ ಗೆಲ್ಲಬಹುದಲ್ಲವೇ ? ಶಿವಭಾವವನ್ನೇ ಸದಾ ಸಾಧಿಸಿದರೆ ಮೃತ್ಯುಭಯವೆಲ್ಲಿಂದ ಬಂದೀತು ? ಪಾಪವಾಸನೆಯಾದರೂ ಹೇಗೆ ಉಂಟಾದೀತು ? ಅಂಥ ಉತ್ಕೃಷ್ಟವಾದ ಭಾವನೆಯೇ ಲಭಿಸಿರುವಾಗ ಯಾವನಿಗೆ ತಾನೇ ದೇವೇಂದ್ರತ್ವದಲ್ಲಿಯಾಗಲಿ

ಬ್ರಹ್ಮತ್ವದಲ್ಲಿಯಾಗಲಿ ಆಸೆಯುಂಟಾದೀತು ? ಅಂಥ ಪರಮಾನಂದ ಸ್ಥಿತಿಯಲ್ಲಿ ಏನೂ ಅಪೇಕ್ಷಿತವಾಗಲಾರದು. ಆಗಲೇ ನಿತ್ಯತೃಪ್ತಿಯು ಲಭಿಸೀತು. ಪರಮ ಶಾಂತಿಯು ನೆಲೆಗೊಂಡೀತು. ಇದಿಷ್ಟೂ ಆ ಪರಮೇಶ್ವರನ ಅನುಗ್ರಹದಿಂದಲೇ ಪ್ರಾಪ್ತವಾಗಬೇಕು. ಆದುದರಿಂದ ಆ ಶಂಕರನ ಚರಣಕಮಲಗಳಲ್ಲಿ ಭಕ್ತಿಯೇ ಮುಕ್ತಿಕಾರಣವೆಂದೂ ಮುಕ್ತಿಸ್ವರೂಪವೆಂದೂ ನಾನು ನಂಬಿ ಆತನನ್ನೇ ಸದಾ ಧ್ಯಾನಿಸುವೆನು. ಎಂದು ಚಿತ್ರಕೇತುವು ಸ್ವಾಭಿಪ್ರಾಯವನ್ನು ವಿವರಿಸಿದನು. ||೧೨||

ಇಲ್ಲಿಗೆ ಶಿವರಹಸ್ಯದಲ್ಲಿ ಹರನಾಮಕವಾದ ಮೂರನೆಯ ಅಂಶದ ಉತ್ತರಾರ್ಧದಲ್ಲಿ ರೇವಾಲಿಂಗ ಮಹಿಮೆಯನ್ನು ವಿವರಿಸುವ ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

# ಅಥ ಶ್ರೀ ಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಚತುರ್ದಶೋಽಧ್ಯಾಯಃ

॥ ಯಾಜ್ಞವಲ್ಕ್ಯ ಉವಾಚ ॥

ಇತಿ ತದ್ವಚನಂ ಶ್ರುತ್ವಾ ಸರ್ವಪಾಪಹರಂ ಪರಂ ।
ತಮಾಹ ಧನ್ಯಧನ್ಯೋಽಸಿ ಧನ್ಯೋಽಸೀತಿ ಮುಹುರ್ಮುಹುಃ ॥೧॥

ಯದ್ವಕ್ತವ್ಯಂ ಮಯಾ ತದ್ಧಿ ತ್ವಯೈವೋಕ್ತಂ ನರಾಧಿಪ ।
ಅತಃಪರಂ ಕಿಮತ್ರಾಸ್ಮಿನ್ ಪ್ರಸಂಗೇಽವಸರೋ ಮಮ ॥೨॥

## ಹದಿನಾಲ್ಕನೆಯ ಅಧ್ಯಾಯ

ಈ ರೀತಿಯಾಗಿ ಚಿತ್ರಕೇತುವು ತನ್ನ ಇಂಗಿತವೆಲ್ಲವನ್ನೂ ಹೇಳಿಕೊಂಡನು. ಆತನು ಹೇಳಿದ ಮಾತೇ ಶಿವಸ್ತೋತ್ರರೂಪವಾಗಿದ್ದುದರಿಂದ ಪಾಪನಾಶಕವೇ ಆಗಿತ್ತು. ಇದೆಲ್ಲವನ್ನೂ ಕೇಳಿ ಬ್ರಹ್ಮನು ಆ ರಾಜನನ್ನು ಧನ್ಯಧನ್ಯನೆಂದು ಹೀಗೆ ಶ್ಲಾಘಿಸಿದನು. ॥೧॥

"ಎಲೈ ರಾಜನೇ! ನಾನು ಏನನ್ನು ಉತ್ತರವಾಗಿ ಹೇಳಬೇಕಾಗಿದ್ದಿತೋ, ಅಥವಾ ಉಪದೇಶಿಸಬೇಕಾಗಿದ್ದಿತೋ ಅದೆಲ್ಲವನ್ನೂ ನೀನೇ ಹೇಳಿರುವೆ. ನೀನು ಸ್ವತಃ ಇಷ್ಟೊಂದು ತಿಳಿವಳಿಕೆಯುಳ್ಳವನಾಗಿರಲು ನಾನು ಮತ್ತೆ ಹೇಳಬೇಕಾಗಿರುವುದು ಯಾವುದು? ॥೨॥

ರೇವಾತೀರನಿವಾಸಿನಶ್ಶಿವಪದಧ್ಯಾನಾಮೃತಾಸ್ವಾದನಾತ್ ।
ಶುದ್ಧಾ ಬುದ್ಧಿರಭೂದಿಹೇತಿ ಕಿಮಿದಂ ಚಿತ್ರಂ ಸ್ವತಸ್ತೇ ಯತಃ ॥
ಶುದ್ಧಾಂತಃಕರಣಾಃ ಪ್ರಮಾಣವಿಷಯಾಸ್ತದ್ಧೀತತಸ್ತೇ ಪರಂ ।
ರೇವಾಲಿಂಗಸಮರ್ಚಕಾಶ್ಶಿವಪದಂ ಯಾಂತ್ಯೇವ ನಾತ್ರಾದ್ಭುತಂ ॥೩॥

ಮುಕ್ತಿಃ ಪ್ರಾಪ್ತಾ ಪರಾ ತಾವದ್ರೇವಾತೀರಾಂಕುರೈರಪಿ ।
ನರೈರಿವ ಕಿಮತ್ರ ಸ್ಯಾದದ್ಭುತಂ ನರಪುಂಗವ ॥೪॥

ರೇವಾತೀರತರಂಗಸಂಗತಮಹಾವಾತಾಭಿಘಾತಾದ್ಯದಾ ।
ತತ್ತೀರೇ ತರವಃ ಪತಂತಿ ಪತಿತಾಸ್ತೇ ತಾವದತ್ಯುತ್ತಮಾಂ ॥
ಸಂಪ್ರಾಪ್ಯೈವ ಗತಿಂ ಪ್ರಯಾಂತಿ ಶಿವಮಿತ್ಯೇತೇಽಪಿ ಧನ್ಯಾಸ್ತತಃ ।
ತತ್ತೀರಪ್ರಭವಾಃ ಪ್ರಭೂತಿವಿಭವಾಸ್ಸರ್ವೇ ನ ಲಿಂಗಾನಿ ಕಿಂ ॥೫॥

ನೀನು ವಾಸಿಸಿರುವುದು ರೇವಾನದೀತೀರದಲ್ಲಿ. ಇಲ್ಲಿ ವಾಸವಾಗಿರುವ ಶಿವ ಧರ್ಮಜ್ಞರಿಂದ ಎಲ್ಲ ತತ್ತ್ವಗಳನ್ನೂ ನೀನು ಅರಿತುಕೊಂಡು ಶಿವಧ್ಯಾನವನ್ನೇ ಸದಾ ಮಾಡುತ್ತಿರುವಾಗ ತಾತ್ವಿಕವಾದ ಜ್ಞಾನವು ನಿನಗೆ ಸ್ವತಃ ಉಂಟಾಗಿರುವು ದೆಂದರೆ ಆಶ್ಚರ್ಯವೇನು ? ನಿನ್ನ ಅಭಿಪ್ರಾಯವೆಲ್ಲವೂ ಸ್ವಾಭಾವಿಕವಾಗಿಯೇ ಸತ್ಯವಿರುವುದು. ನೀನು ಹೇಳುವಂತೆ ಶಿವಲಿಂಗವನ್ನು ಪೂಜಿಸುವ ಯೋಗವು ದೊರೆತು, ಶಿವಾರಾಧನೆಯನ್ನು ಮಾಡಿದರೆ ಖಂಡಿತವಾಗಿಯೂ ಚಿತ್ತಶುದ್ಧಿಯೂ ತತ್ತ್ವಜ್ಞಾನವೂ ಲಭಿಸಿ ಶಿವಸಾನ್ನಿಧ್ಯವು ದೊರಕುವುದು. ಇದರಲ್ಲೇನೂ ಆಶ್ಚರ್ಯ ವಾಗಲಿ ಸಂಶಯವಾಗಲಿ ಇಲ್ಲ. ॥೩॥

ಈ ರೇವಾನದೀ ತೀರದಲ್ಲಿ ವಾಸಿಸುವ ಜನರಂತೆ, ಇಲ್ಲಿ ಬೆಳೆದಿರುವ ಹುಲ್ಲು, ಗಿಡ, ಮರಗಳೂ ಮುಕ್ತಿಯನ್ನು ಪಡೆಯುತ್ತವೆ. ಅಂದಮೇಲೆ ಮಾನವರು ಮುಕ್ತ ರಾಗುವುದರಲ್ಲಿ ಆಶ್ಚರ್ಯವೇನು ? ॥೪॥

ರೇವಾನದಿಯಮೇಲೆ ಬೀಸಿ ಬಂದ ಗಾಳಿಯ ಹೊಡೆತದಿಂದ ಎಷ್ಟೋ ದೂರ ದಲ್ಲಿರುವ ಮರಗಳು ಬಿದ್ದು ಮಗುಚಿಕೊಂಡರೆ, ಅವುಗಳೂ ಸಹ ಅತ್ಯುತ್ತಮವಾದ ಸದ್ಗತಿಯನ್ನು ಪಡೆಯುವುವು. ಅಲ್ಲದೇ ಸಾಕ್ಷಾತ್ ಶಿವನ ಸನ್ನಿಧಿಯೇ ಅವುಗಳಿಗೆ ದೊರಕುವುದು. ಆದುದರಿಂದ ಈ ರೇವಾನದಿಯ ತೀರದಲ್ಲಿರುವ ಸಕಲ ಜಂತುಗಳೂ,

ಯಾವದ್ರೇವಾತೀರವಾತಪ್ರವೃತ್ತಿ
ಸ್ತಾವನ್ಮುಕ್ತಿರ್ಜಂತುಜಾತಸ್ಯ ಸತ್ಯಂ ।
ಜೀವನ್ಮುಕ್ತೋ ನರ್ಮದಾತೀರಜಂತು
ರ್ಮುಕ್ತಿಶ್ಚಾಂತೇ ಸ್ಯಾತ್ಪರಾಸ್ಯಂತಕಾಲೇ ॥೬॥

ತಸ್ಮಾದ್ಭಾಗ್ಯೈರ್ನರ್ಮದಾತೀರವಾಸೋ
ದೇವಾಶಾಸ್ಯಃ ಕಾಶಿಕಾವಾಸತುಲ್ಯಃ ।
ಕಾಶೀದೇಶಪ್ರಸ್ತರೋ ನೈವ ಲಿಂಗಂ
ರೇವಾತೀರಪ್ರಸ್ತರೋ ಲಿಂಗಮೇವ ॥೭॥

ವಸ್ತುಗಳೂ, ಧನ್ಯವಾದವುಗಳು. ಅಷ್ಟೇ ಅಲ್ಲದೇ ಇಲ್ಲಿರುವ ವಸ್ತುಗಳೆಲ್ಲವೂ ಸಾಕ್ಷಾತ್ ಶಿವಲಿಂಗಸ್ವರೂಪಗಳೇ ಆಗಿರುತ್ತವೆ. ॥೫॥

ಯಾವ ಪ್ರಾಣಿಗೇ ಆಗಲಿ ರೇವಾನದೀತೀರದ ವಾಯುವಿನ ಸಂಪರ್ಕವಾಗುವರೆಗೇ ಈ ಸಂಸಾರ ಬಂಧನವಿರುವುದು. ಆ ಪುಣ್ಯತಮವಾದ ವಾಯುವನ್ನು ಸೇವಿಸಿದೊಡನೆಯೇ ಸಕಲ ಬಂಧನಗಳೂ ನಾಶವಾಗುವುವು. ಆದುದರಿಂದ ಈ ಈ ರೇವಾತೀರದಲ್ಲಿರುವ ಸಕಲ ಜಂತುಗಳೂ ಜೀವನ್ಮುಕ್ತಗಳೇ ಆಗಿರುತ್ತವೆ. ಕೇವಲ ಪ್ರಾಣಸಂಯೋಗದಿಂದ ಸಂಸಾರಿಗಳಂತೆ ತೋರುತ್ತವೆ. ಆದರೆ ಪ್ರಾಣ ಪ್ರಯಾಣವಾದ ಕೂಡಲೇ ಇವುಗಳಿಗೆಲ್ಲಕ್ಕೂ ಪರಮಪದವಾದ ಮುಕ್ತಿಯೇ ಲಭಿಸುವುದು. ॥೬॥

ಈ ರೇವಾನದೀ ತೀರದಲ್ಲಿ ವಾಸವು ಕೇವಲ ಭಾಗ್ಯವಂತರಿಗೇ ಲಭಿಸುವುದು. ಇಲ್ಲಿ ವಾಸಮಾಡಿದರೆ ಸಾಕ್ಷಾತ್ ಕಾಶಿಯಲ್ಲಿ ವಾಸಮಾಡಿದಂತೆಯೇ ಸರಿ. ಅಥವಾ ಅದಕ್ಕಿಂತಲೂ ಮಹತ್ತರವಾದುದು. ಅದಕ್ಕೆ ದೇವತೆಗಳೂ ಸಹ ಇಲ್ಲಿ ವಾಸಿಸಲು ಅತ್ಯಂತ ತವಕಪಡುತ್ತಿರುವರು. ಏಕೆಂದರೆ ಕಾಶಿಯಲ್ಲಿ ಇರುವ ಎಲ್ಲಾ ಕಲ್ಲುಗಳೂ ಶಿವಲಿಂಗವೆನಿಸುವುದಿಲ್ಲ. ಈ ರೇವಾತೀರದಲ್ಲಾದರೋ ಇರುವ ಎಲ್ಲಾ ಶಿಲೆಗಳೂ ಸಾಕ್ಷಾತ್ ಶಿವಲಿಂಗಗಳೇ ಆಗಿವೆ. ಇದಕ್ಕೊಂದು ಇತಿಹಾಸವುಂಟು. ಹೇಳುವೆನು ಕೇಳು. ॥೭॥

ಪುರಾ ನದೀಸಮೂಹೇನ ತಪಸ್ತಪ್ತಂ ನೃಪೋತ್ತಮ ।
ಪಾವನತ್ವಂ ಪ್ರಸನ್ನಾಃ ಸ್ಮಃ ಪಾವನೇಷ್ವಿತಿ ನಿಶ್ಚಯಾತ್ ॥೮॥

ಹಿಮವತ್ಕಂಧರೇ ಗಂಗಾ ತಪಶ್ಚಕ್ರೇ ಮನೋರಥೈಃ ।
ಯುಗಾನಾಮಯುತಂ ರಾಜನ್ ದೇವಾನಾಂ ವಿಸ್ಮಯಾವಹಂ ॥೯॥

ಪ್ರಜ್ವಾಲ್ಯ ಪಾವಕಂ ಪಶ್ಚಾತ್ಪುರತಃ ಪಾರ್ಶ್ವಯೋರಪಿ ।
ಪಶ್ಯಂತೀ ಮಂಡಲಂ ಭಾನೋರ್ಧ್ಯಾಯಂತೀ ಸಾಂಬಮೀಶ್ವರಂ॥೧೦॥

ಸೂರ್ಯಮಂಡಲಮಧ್ಯಸ್ಥಂ ಸ್ವರ್ಣಕುಂಡಲಮಂಡಿತಂ ।
ಸ್ವರ್ಣಾಂಗದಪ್ರಭಾಕೀರ್ಣಂ ಸ್ವರ್ಣಕೇಯೂರಭಾಸುರಂ ॥೧೧॥

ಹಿಂದೆ ಒಂದು ಕಾಲದಲ್ಲಿ ಎಲ್ಲಾ ನದಿಗಳೂ ಶಿವನನ್ನು ಕುರಿತು ತಪಸ್ಸನ್ನು ಮಾಡಿದುವು. ಪ್ರಪಂಚದ ಎಲ್ಲಾ ಪವಿತ್ರವಾದ ವಸ್ತುಗಳಿಗಿಂತಲೂ ತಾವೇ ಹೆಚ್ಚು ಪವಿತ್ರರಾಗಬೇಕೆಂಬುದೇ ಅವರ ಆಪೇಕ್ಷೆಯಾಗಿತ್ತು. ಈ ಇಷ್ಟಾರ್ಥವನ್ನು ಸಂಪಾದಿಸಿ ಕೊಳ್ಳಬೇಕೆಂಬ ದೃಢ ಸಂಕಲ್ಪದಿಂದ ತೀವ್ರವಾಗಿ ತಪಸ್ಸನ್ನಾಚರಿಸಿದುವು. ||೮||

ಅವರಲ್ಲಿ ಗಂಗೆಯೂ ಹಿಮವತ್ಪರ್ವತದ ತಪ್ಪಲಲ್ಲಿ ಉಗ್ರವಾದ ತಪಸ್ಸನ್ನು ಆರಂಭಿಸಿದಳು. ಎಷ್ಟೇ ಕಷ್ಟವಾದರೂ ತನ್ನ ಅಭಿಲಾಷೆಯನ್ನು ಸಂಪಾದಿಸಿಕೊಳ್ಳಬೇಕೆಂಬ ಹಟದಿಂದ ಅನೇಕ ಯುಗಗಳವರೆಗೆ ತಪಸ್ಸನ್ನಾಚರಿಸಿದಳು. ಅವಳ ಆ ತೀವ್ರವಾದ ತಪಸ್ಸನ್ನು ನೋಡಿ ದೇವತೆಗಳಿಗೆ ಅತ್ಯಾಶ್ಚರ್ಯವಾಯಿತು. ||೯||

ಆ ಗಂಗೆಯು ಹಿಂದೆ ಮುಂದೆ ಮತ್ತು ಅಕ್ಕಪಕ್ಕಗಳಲ್ಲಿ ಬೆಂಕಿಯನ್ನುರಿಸಿ ಕೊಂಡು ಸೂರ್ಯನನ್ನೇ ದೃಷ್ಟಿಸಿ ನೋಡುತ್ತಾ, ಪಂಚಾಗ್ನಿಮಧ್ಯದಲ್ಲಿದ್ದು ಆ ಪಾರ್ವತೀಸಮೇತನಾದ ಶಂಕರನನ್ನೇ ಧ್ಯಾನಿಸುತ್ತಿದ್ದಳು. ||೧೦||

ಆ ಗಂಗೆಯು ಧ್ಯಾನಿಸುವಾಗ ಪರಮೇಶ್ವರನ ಸ್ವರೂಪವನ್ನು ನಾನಾ ವಿಧವಾಗಿ ಮನಸ್ಸಿನಲ್ಲಿ ಚಿತ್ರಿಸಿಕೊಂಡು ಭಾವಿಸುತ್ತಿದ್ದಳು. “ಪರಮೇಶ್ವರನು ಸೂರ್ಯಮಂಡಲದ ಮಧ್ಯದಲ್ಲಿ ವಿರಾಜಿಸುತ್ತಿದ್ದಾನೆ. ಆತನು ಕಿವಿಗೆ ಸುವರ್ಣದ ಕುಂಡಲಗಳನ್ನು ಧರಿಸಿದ್ದಾನೆ. ತೋಳುಗಳಲ್ಲಿ ಸುವರ್ಣದ ಒತ್ತುಕಡಗವನ್ನು ಇಟ್ಟಿದ್ದಾನೆ. ಭುಜಗಳಿಗೆ ಸುವರ್ಣದ ಭುಜಕೀರ್ತಿಗಳು ಆಭರಣವಾಗಿವೆ. ||೧೧||

ದಿವ್ಯರತ್ನಾಂಗುಲೀಯಾನಾಂ ಶೋಭಯಾ ಚ ವಿರಾಜಿತಂ ।
ಕಿರೀಟತಾರಾಹಾರಾಣಾಂ ರಾಜಿಭಿಶ್ಚ ವಿರಾಜಿತಂ ॥೧೨॥

ಸುವರ್ಣರಚಿತಾನಂತಮಣಿಮೇಖಲಯಾ ವೃತಂ ।
ಸ್ಫುರನ್ನೂಪುರಸಂಭೂತಶಿಂಜಿತೈಶ್ಚ ವಿರಾಜಿತಂ ॥೧೩॥

ದಿವ್ಯಾಭರಣಸಂಪೂರ್ಣಂ ವಾಮಾಂಗಗಿರಿಜಾಯುತಂ ।
ಸೇವ್ಯಮಾನಂ ಸುರಗಣೈಃ ಪ್ರಮಥಾದ್ಯೈಶ್ಚ ಸೇವಿತಂ ॥೧೪॥

ಸ್ತೂಯಮಾನಂ ವೇದಸಂಘೈರ್ನೀಲಗ್ರೀವಂ ಮನೋಹರಂ ।
ಫಾಲಲೋಚನಮಾರಾಧ್ಯಂ ತ್ರಿಶೂಲಾಭಯಪಾಣಿನಂ ॥೧೫॥

---

ಆ ಪರಮೇಶ್ವರನು ಬೆರಳುಗಳಲ್ಲಿ ರತ್ನಮಯವಾದ ಉಂಗುರಗಳನ್ನು ಧರಿಸಿದ್ದಾನೆ. ಕಿರೀಟವನ್ನು ಮತ್ತು ನಕ್ಷತ್ರಮಾಲೆಗಳನ್ನು ಸಹ ಹಾಕಿಕೊಂಡಿದ್ದಾನೆ. ಈ ಎಲ್ಲಾ ಆಭರಣಗಳ ಕಾಂತಿ ಪ್ರಭೆಗಳಿಂದ ಆತನು ಅತ್ಯಂತ ಉಜ್ಜ್ವಲನಾಗಿದ್ದಾನೆ. ॥೧೨॥

ಸುವರ್ಣದ ಅನೇಕ ಉಡಿದಾರಗಳನ್ನು ಧರಿಸಿದ್ದಾನೆ. ಕಾಲುಗಳಿಗೆ ಕಾಲಂದಿಗೆಗಳನ್ನು ಧರಿಸಿದ್ದಾನೆ. ಆ ಕಾಲಂದಿಗೆಗಳು ಅವ್ಯಕ್ತಮಧುರವಾಗಿ ಧ್ವನಿಗೈಯ್ಯುತ್ತಲಿವೆ. ಅಂತಹ ಅಲಂಕಾರದಿಂದ ಆತನು ಅತ್ಯಂತವಾಗಿ ವಿರಾಜಿಸುತ್ತಾನೆ. ॥೧೩॥

ಆ ಶಂಕರನು ಸಕಲ ದಿವ್ಯಾಭರಣಗಳನ್ನೂ ಧರಿಸಿಕೊಂಡು ಒಪ್ಪುತ್ತಿದ್ದಾನೆ. ಆತನ ಎಡತೊಡೆಯ ಮೇಲೆ ಪಾರ್ವತಿಯು ವಿರಾಜಿಸುತ್ತಿದ್ದಾಳೆ. ಆ ಪಾರ್ವತೀ ಪರಮೇಶ್ವರರನ್ನು ದೇವತೆಗಳೂ ಪ್ರಮಥಗಣಗಳೂ ಸುತ್ತಲೂ ನಿಂತು ಸೇವೆಮಾಡುತ್ತಿದ್ದಾರೆ. ॥೧೪॥

ಆ ಪರಮೇಶ್ವರನನ್ನು ವೇದಗಳೆಲ್ಲವೂ, ನೀಲಗ್ರೀವ, ಮಹೇಶ್ವರ, ತ್ರಿನಯನ, ಸರ್ವಸಂಪೂಜ್ಯ ಎಂದು ಮುಂತಾಗಿ ಸ್ತುತಿಸುತ್ತಿರುವುವು. ಈತನು ಒಂದು ಕೈಯ್ಯಲ್ಲಿ ತ್ರಿಶೂಲವನ್ನೂ ಮತ್ತೊಂದರಲ್ಲಿ ಅಭಯ ಮುದ್ರೆಯನ್ನೂ ಧರಿಸಿರುವನು. ॥೧೫॥

ಕಟಾಕ್ಷೈರಮೃತಾಕಾರೈಃ ಪ್ರಪಶ್ಯಂತಂ ಮುಹುರ್ಮುಹುಃ ।
ಸ್ವಭಕ್ತಾನ್ನಂದಿಕೇಶಾದೀನ್ ಮಂದಾರಾಸಾರಸೇವಿತಂ ॥೧೬॥

ಗೌರೀಮನೋಹರಂ ಧೀರಂ ಜರಾಮರಣವರ್ಜಿತಂ ।
ಅಪ್ರಮೇಯಮನಾದ್ಯಂತಂ ವ್ಯುಪ್ತಕೇಶಂ ಕಪರ್ದಿನಂ ॥೧೭॥

ಕಲ್ಯಾಣರೂಪಮಾನಂದಮಾನಂದಘನಮದ್ವಯಂ ।
ಉತ್ಪತ್ತಿಸ್ಥಿತಿಸಂಹಾರಹೇತುಭೂತಂ ಸನಾತನಂ ॥೧೮॥

ತಟಿನ್ಮಂಡಲಸಂಕಾಶದಿವ್ಯವಸ್ತ್ರವಿಭೂಷಿತಂ ।
ಹಿರಣ್ಯಬಾಹುಮೀಶಾನಮಪರಾಜಿತಮದ್ವಯಂ ॥೧೯॥

ಆತನು ಪದೇ ಪದೇ ಅಮೃತವನ್ನೇ ಸುರಿಸುತ್ತಿರುವನೋ ಎಂಬಂತೆ ಮಂದಹಾಸಪರಿಪೂರ್ಣವಾದ ಕಟಾಕ್ಷವನ್ನು ಸುತ್ತಲೂ ಬೀರುತ್ತಿರುವನು. ತನ್ನ ಭಕ್ತರಾದ ನಂದಿಯೇ ಮೊದಲಾದವರನ್ನು ಗಂಭೀರವಾಗಿ ಈಕ್ಷಿಸುವನು. ಮೈಗೆಲ್ಲಾ ಮಂದಾರವೆಂಬ ದಿವ್ಯವಾದ ಪುಷ್ಪದಿಂದ ನಿರ್ಮಿಸಿದ ಗಂಧೋದಕವನ್ನು ಲೇಪಿಸಿ ಕೊಂಡಿರುವನು. ॥೧೬॥

ಆತನೇ ಪಾರ್ವತಿಯ ವಲ್ಲಭನು. ಆತನು ಸಮುದ್ರದಂತೆ ಗಂಭೀರನಾಗಿರು ವನು. ಪರಶಿವನಿಗೆ ಎಂದೂ ವಾರ್ಧಕ್ಯವಾಗಲಿ ಮರಣವಾಗಲಿ ಇರುವುದಿಲ್ಲ. ಆದಿಯೂ ಅಂತ್ಯವೂ ಆತನಿಗಿಲ್ಲ. ಯಾವ ಪ್ರಮಾಣಗಳಿಗೂ ಅಗೋಚರವಾಗಿರು ವನು. ಮಹಾದೇವನು ಪ್ರಶಸ್ತವಾದ ಜಟಾಧಾರಿಯಾಗಿದ್ದಾನೆ. ॥೧೭॥

ಆತನೇ ಸಕಲ ಕಲ್ಯಾಣಸ್ವರೂಪನೂ, ಆನಂದಸ್ವರೂಪನೂ, ಅದ್ವಿತೀಯ ಪರಬ್ರಹ್ಮವಸ್ತುವೂ ಆಗಿದ್ದಾನೆ. ಪರಮೇಶ್ವರನೇ ಅತ್ಯಂತ ಪ್ರಾಚೀನನು. ಆದ್ದ ರಿಂದಲೇ ಈ ಜಗತ್ತಿನ ಸೃಷ್ಟಿಗೂ ಪಾಲನೆಗೂ, ಸಂಹಾರಕ್ಕೂ, ಮುಖ್ಯ ಕಾರಣ ನಾಗಿದ್ದಾನೆ. ॥೧೮॥

ಮಿಂಚಿನಂತೆ ಮಿರಿಮಿರಿ ಮಿಂಚುವ ದಿವ್ಯವಸ್ತ್ರಗಳನ್ನು ಆತನು ಧರಿಸಿ ದ್ದಾನೆ. ದೇವದೇವನ ಭುಜಗಳು ಸುವರ್ಣದಂತೆ ಕಾಂತಿಯುಕ್ತವಾಗಿವೆ. ಪರಶಿವನು ಅಜೇಯನು, ಅದ್ವಿತೀಯನು. ॥೧೯॥

ಮಹಾವಿದ್ಯಾಪ್ರದಾತಾರಂ ದಾತಾರಂ ಸಂಪದಾಮಪಿ ।
ಸ್ಮೇರಧಾರಾಧರಧರಂ ನಿತ್ಯಂ ಗೌರೀಮನೋಹರಂ ॥೨೦॥

ಅಪಾರಕರುಣಾಪೂರಂ ಪರಿಪೂರ್ಣಂ ಚ ಸುಂದರಂ ।
ಪ್ರತಿಕ್ಷಣೇಽಪ್ಯಭಿನವಂ ಮಹೋದಾರಂ ಸುರಸ್ತುತಂ ॥೨೧॥

ಅನಂತಾಪ್ರತಿಮಾಮೇಯಕಲ್ಯಾಣಗುಣಸಾಗರಂ ।
ವರದಾನೋನ್ಮುಖಂ ಶಾಂತಂ ಸರ್ವಾಶಾಸ್ಯವರಪ್ರದಂ ॥೨೨॥

ಏತಾದೃಶಂ ಮಹಾದೇವಂ ಧ್ಯಾಯಂತೀ ಮನಸಾ ಶಿವಂ ।
ಗಂಗಾ ಪರಂ ತಪಸ್ತೇಪೇ ದಿವ್ಯಸುಂದರವಿಗ್ರಹಾ ॥೨೩॥

ದೇವಾಸ್ತತ್ತಪಸಾ ಕ್ಷುಬ್ಧಾಃ ಸರ್ವೇ ಮುನಿವರಾ ಅಪಿ ।
ಗಿರಿಕಂದರಸಂಕೀರ್ಣಾ ಚಕಂಪೇ ಸಧರಾಧರಾ ॥೨೪॥

ಮಹಾವಿದ್ಯೆಯನ್ನೂ (ದಿವ್ಯಜ್ಞಾನವನ್ನು) ಉಪದೇಶಿಸುವವನು ಅವನೇ. ಆತನೇ ಸಕಲ ಸಂಪತ್ತುಗಳನ್ನೂ ಪ್ರದಾನಮಾಡುವವನು. ಆ ಸ್ವಾಮಿಯು ಆಕಾರದಲ್ಲಿ ಸದಾ ಮಂದಹಾಸಯುಕ್ತನಾಗಿ ಗೌರೀಮನೋಹರನಾಗಿರುವನು. ||೨೦||

ಸದಾ ಸಂತುಷ್ಟನೂ ಸುಂದರನೂ ಆಗಿದ್ದಾನೆ. ಪ್ರತಿಕ್ಷಣದಲ್ಲಿಯೂ ಹೊಸ ಹೊಸದಾಗಿ ತೋರುತ್ತಾನೆ. ಆತನೇ ಪರಮೋದಾರ ಎಂದು ದೇವತೆಗಳೆಲ್ಲರೂ ಸ್ತುತಿಸುತ್ತಾರೆ. ||೨೧||

ಶಂಕರನು ಅಂತವಿಲ್ಲದವನೂ, ಅಪ್ರತಿಮನೂ, ಕಲ್ಯಾಣಗುಣ ಪರಿಪೂರ್ಣನೂ ಆಗಿದ್ದಾನೆ. ಶಾಂತಗಂಭೀರವಾದ ಆತನ ಆಕಾರವು ಸರ್ವರಿಗೂ ವರವನ್ನು ಪ್ರದಾನ ಮಾಡುವುದಕ್ಕೇ ಸಿದ್ಧವಾಗಿದೆಯೋ ಎಂಬಂತೆ ಮನೋಹರವಾಗಿರುವುದು." ||೨೨||

ಈ ಪ್ರಕಾರ ಪರಮೇಶ್ವರನ ಸ್ವರೂಪವನ್ನು ನಾನಾವಿಧವಾಗಿ ಭಾವಿಸುತ್ತಾ, ಅವನನ್ನು ಮನಸ್ಸಿನಲ್ಲಿಯೇ ಧ್ಯಾನಿಸುತ್ತಾ ಆ ಗಂಗೆಯು ಉಗ್ರವಾದ ತಪಸ್ಸನ್ನಾಚರಿಸಿದಳು. ||೨೩||

ಆಕೆಯ ಉಗ್ರ ತಪಸ್ಸಿನ ಪ್ರಖರತೆಯಿಂದ ದೇವತೆಗಳೂ, ಋಷಿ ಜನಗಳೂ ಹೆದರಿ ನಡುಗಿದರು. ಭೂಮಿಯು ಗುಡ್ಡಗಾಡುಗಳ ಸಮೇತವಾಗಿ ಕಂಪಿತವಾಯಿತು. ||೨೪||

ಮೇರುಮಂದರಮುಖ್ಯಾಶ್ಚ ಗಿರಯಸ್ತತ್ತಪೋಗ್ನಿನಾ ।
ಸಂತಪ್ತಾ ಏವ ಹಿಮವಾನ್ ಪ್ರತಪ್ತೋ ಗಂಧಮಾದನಃ ॥೨೫॥

ವಿಂಧ್ಯಶ್ಚ ನಿಷಧಶ್ಚಾನ್ಯೇ ಶೈಲಾಪಃ ಪರ್ವತೇಶ್ವರಃ ।
ಅನ್ಯೇ ಚ ಗಿರಯಸ್ಸರ್ವೇ ಸಂತಪ್ತಾಸ್ತತ್ತಪೋಗ್ನಿನಾ ॥೨೬॥

ರೇವಯಾ ಚ ತಪಸ್ತಪ್ತಂ ತಥಾ ಯಮುನಯಾ ನೃಪ ।
ಸರಸ್ವತ್ಯಾ ತಪಸ್ತಪ್ತಂ ಶತ್ತಪ್ತಂ ಶೋಣಭದ್ರಯಾ ॥೨೭॥

ಭದ್ರಯಾ ಚ ತಪಸ್ತಪ್ತಂ ಫಲ್ಗುನ್ಯಾ ಶೋಣಯಾಪಿ ಚ ।
ಗೋದಾವರ್ಯಾ ತಪಸ್ತಪ್ತಂ ವೇಣ್ಯಾಽಥೋ ಕೃಷ್ಣವೇಣ್ಯಯಾ॥೨೮॥

ಭೀಮಯಾಪಿ ತಪಸ್ತಪ್ತಂ ಕಾವೇರ್ಯಾಪಿ ನೃಪೋತ್ತಮ ।
ಕುಮುದ್ವತ್ಯಾ ತಪಸ್ತಪ್ತಂ ಧಾರಯಾ ಕ್ಷೀರಯಾ ತಥಾ ॥೨೯॥

ಅನ್ಯೈರಪಿ ನದೀಭೇದೈಸ್ತಪಸ್ತಪ್ತಂ ಸುದುಸ್ಸಹಂ ।
ಕ್ಷುಬ್ಧಂ ಲೋಕತ್ರಯಂ ತೇನ ತಪಸಾ ಕೇವಲಂ ನೃಪ ॥೩೦॥

ಆ ತಪೋಜ್ವಾಲೆಯಿಂದ ಮೇರುಪರ್ವತ ಮತ್ತು ಗಂಧಮಾಧನ ಪರ್ವತ ಮುಂತಾದವುಗಳೆಲ್ಲಾ ಸಂತಾಪಿತವಾದವು. ಹಿಮವತ್ಪರ್ವತ ಮತ್ತು ಗಂಧಮಾದನ ಪರ್ವತಗಳಂತೂ ಬೆಂದು ಹೋದವಂತೆ ತತ್ತರಿಸಿ ಹೋದವು. ||೨೫||

ವಿಂಧ್ಯ, ನಿಷಧ, ಶೈಲಾದ ಇನ್ನೂ ಅನೇಕ ಪರ್ವತಗಳು ತಪೋ ಜ್ವಾಲೆ ಯಿಂದ ಉರಿದುಹೋದವು. ||೨೬||

ಆ ಗಂಗೆಯಂತೆಯೇ ತಾವೂ ಅತ್ಯಂತ ಪಾವಿತ್ರ್ಯವನ್ನು ಸಂಪಾದಿಸ ಬೇಕೆಂಬ ಅಪೇಕ್ಷೆಯಿಂದ ರೇವಾ, ಯಮುನಾ, ಸರಸ್ವತೀ, ಶೋಣಭದ್ರಾ, ಫಲ್ಗುನೀ, ಶೋಣಾ, ಗೋದಾವರೀ, ವೇಣೀ, ಕೃಷ್ಣವೇಣೀ, ಭೀಮಾ, ಕಾವೇರಿ, ಕುಮುದ್ವತೀ, ಕ್ಷೀರಧಾರೆ, ಮುಂತಾದ ಎಲ್ಲಾ ನದಿಗಳೂ ಪರಮೇಶ್ವರನನ್ನು ಕುರಿತು ಅತ್ಯುಗ್ರ ವಾದ ತಪಸ್ಸನ್ನು ಮಾಡಿದರು ಅವರ ತಪೋಜ್ವಾಲೆಯಿಂದ ಅಖಂಡವಾದ ಮೂರು ಲೋಕಗಳೂ ಸಂತಪ್ತವಾಗಿ ಭೀತಿಯಿಂದ ಕಂಪಿತವಾಗಿದ್ದುವು. ಎಲ್ಲಾ ಅಲ್ಲೋಲ ಕಲ್ಲೋಲವಾಗುತ್ತಿದ್ದುವು. ||೨೭-೨೮-೨೯-೩೦||

ಅತ್ಯುಗ್ರತಪಸಾ ತಸ್ತಾಂ ರೇವಾಂ ದೃಷ್ಟ್ವಾ ಮಹೇಶ್ವರಃ ।
ಪ್ರಸನ್ನಃ ಪಾರ್ವತೀಯುಕ್ತಸ್ತಾಮುವಾಚ ದಯಾನಿಧಿಃ ॥೩೧॥

॥ ಶ್ರೀ ಸದಾಶಿವ ಉವಾಚ ॥

ನರ್ಮದೇ ಶರ್ಮದೇ ದೇವಿ ವರಂ ವೃಣು ಮನೋಹರಂ ।
ಕಿಂ ತವಾಭೀಪ್ಸಿತಂ ಲೋಕೇ ತತ್ಪ್ರಯಚ್ಛಾಮಿ ಸರ್ವಥಾ ॥೩೨॥

ಇತಿ ತದ್ವಚನಂ ಶ್ರುತ್ವಾ ನರ್ಮದಾ ಪ್ರಾಹ ಶಂಕರಂ ।
ಮಯಿ ಸಂವಸ ಗೌರೀಶ ಸರ್ವದಾ ಶಿವಯಾ ಸಹ ॥೩೩॥

ಪ್ರಾರ್ಥನೀಯಂ ಮಹಾದೇವ ಮಮ ತಾವದಿದಂ ಪ್ರಭೋ ।
ಏತಾವತಾ ಕೃತಾರ್ಥಾಸ್ಮಿ ಸನ್ನಿಧಾನಂ ತವೇಪ್ಸಿತಂ ॥೩೪॥

---

ಎಲ್ಲರಿಗಿಂತಲೂ ರೇವೆಯು ಅತ್ಯಂತ ಉಗ್ರ ತಪಸ್ಸನ್ನಾಚರಿಸಿದಳು. ಆಕೆಯ ತಪಸ್ಸಿಗೂ ಭಕ್ತಿಗೂ ಮೆಚ್ಚಿ, ಪಾರ್ವತಿಯೊಡನೆ ಶಂಕರನು ಪ್ರತ್ಯಕ್ಷನಾದನು. ಮತ್ತು ಆ ದಯಾನಿಧಿಯು ಪ್ರಸನ್ನಮುಖನಾಗಿ ರೇವೆಯನ್ನು ಕುರಿತು ಹೀಗೆ ಹೇಳಿದನು. ॥೩೧॥

"ಎಲೌ ನರ್ಮದೆಯೇ! ನಿನ್ನ ಭಕ್ತಿಗೆ ಸಂತುಷ್ಟನಾಗಿದ್ದೇನೆ. ನಿನಗೆ ಈ ಲೋಕದಲ್ಲಿ ಏನನ್ನು ಪಡೆಯಬೇಕೆಂಬ ಅಪೇಕ್ಷೆ ಇದೆಯೋ ಹೇಳು. ಅದೆಲ್ಲವನ್ನೂ ಖಂಡಿತವಾಗಿ ಅನುಗ್ರಹಿಸಿ ಕೊಡುವೆನು. ನಿನಗೆ ಇಷ್ಟವಾದ ಯಾವ ವರವನ್ನಾದರೂ ಕೇಳು". ॥೩೨॥

ಪರಮೇಶ್ವರನು ಹೀಗೆ ಪ್ರಸನ್ನನಾಗಿರುವುದನ್ನು ನೋಡಿ ಆತನ ಮಾತನ್ನು ಕೇಳಿ ನರ್ಮದೆಗೆ ಅತ್ಯಂತ ಆನಂದವಾಯಿತು. ಆಗ ಆಕೆಯು ಈ ರೀತಿಯಾಗಿ ವರವನ್ನು ಬೇಡಿಕೊಂಡಳು. "ಓ ಸ್ವಾಮಿನ್ ಶಂಕರನೇ! ನೀನು ಸದಾ ನನ್ನಲ್ಲಿಯೇ ಪಾರ್ವತೀ ಸಮೇತನಾಗಿ ವಾಸಿಸಬೇಕು. ನನ್ನ ತಪಸ್ಸಿನಿಂದ ನೀನು ಸಂತುಷ್ಟನಾಗಿದ್ದರೆ ನನಗೆ ಇದೇ ವರವನ್ನೇ ಅನುಗ್ರಹಿಸು. ॥೩೩॥

ನಾನು ಬೇಡಿಕೊಳ್ಳುವುದು ಇದೊಂದನ್ನೇ. ನಿನ್ನ ಪೂರ್ಣಸಾನ್ನಿಧ್ಯವು ಸದಾ ನನ್ನಲ್ಲಿರಬೇಕು. ಇಷ್ಟೊಂದನ್ನು ಅನುಗ್ರಹಿಸಿದರೆ ನಾನು ಕೃತಾರ್ಥಳಾಗುತ್ತೇನೆ. ॥೩೪॥

ಸದಾ ಸನ್ನಿಹಿತಸ್ಯಾಪಿ ಸನ್ನಿಧಾನಂ ವಿಶೇಷತಃ ।
ಅಪೇಕ್ಷಿತಂ ಮಮೇಶಾನ ತಪಸಸ್ತತ್ಫಲಂ ಪ್ರಭೋ ॥೩೫॥

ಮತ್ತೀರತರುಷು ಸ್ವಾಮಿನ್ ಮತ್ತೀರಾಂಕುರರಾಜಿಷು ।
ಪ್ರಸ್ತರೇಷ್ವಪಿ ಮತ್ತೀರೇ ಸದಾ ಸನ್ನಿಹಿತೋ ಭವ ॥೩೬॥

ನ ಚಾಗಮಪ್ರತಿಷ್ಠಾಯಾಸ್ತ್ವಪೇಕ್ಷಾ ಸ್ತ್ವದನುಗ್ರಹಾತ್ ।
ಮತ್ಪ್ರಸ್ತರಾರ್ಚನೇನೈವ ತುಷ್ಟೋ ಭವ ಸದಾ ಶಿವ ॥೩೭॥

ಯದ್ಯತ್ಪ್ರತಿಷ್ಠಿತಂ ಲಿಂಗಮಿದಮುತ್ತಮಮಸ್ತು ಮೇ ।
ಮತ್ತೀರನೀರಜೋ ವಾಯುರ್ಯದ್ದೇಹೇ ವಾತಿ ತತ್ತನುಃ ॥೩೮॥

ಯದ್ಯಪಿ ನೀನು ಸರ್ವಾಂತರ್ಯಾಮಿಯಾಗಿರುವುದರಿಂದ ನನ್ನಲ್ಲಿ ನಿನ್ನ ಸನ್ನಿಧಿಯು ಇದ್ದೇ ಇದೆ. ಆದರೂ ಇನ್ನೂ ವಿಶೇಷವಾಗಿ, ನೀನೇ ಸಾಕ್ಷಾತ್ ಬಂದು ನನ್ನಲ್ಲಿ ನೆಲೆಸಿರಬೇಕೆಂದು ಪ್ರಾರ್ಥಿಸುತ್ತೇನೆ. ಇದನ್ನೇ ಅನುಗ್ರಹಿಸಿದರೆ ನನ್ನ ತಪಸ್ಸಿಗೆ ಫಲ ದೊರೆತಂತಾಗುವುದು. ಅದೇ ಫಲವನ್ನೇ ನಾನು ಅಪೇಕ್ಷಿಸುವುದು. ॥೩೫॥

ಎಲ್ಲಾ ನದಿಗಳಿಗಿಂತಲೂ ನನ್ನ ಮಾಹಾತ್ಮ್ಯೆಯು ಮಹತ್ತರವಾಗಬೇಕು. ಹಾಗಾಗಬೇಕಾದರೆ ನೀನು ನನ್ನ ಪ್ರಾರ್ಥನೆಯನ್ನು ಸಲ್ಲಿಸಿಕೊಡಬೇಕು. ನೀನು ನನ್ನ ತೀರಪ್ರದೇಶದಲ್ಲಿರುವ ಮರಗಳಲ್ಲಿಯೂ, ಹುಲ್ಲು ಗರಿಕೆಗಳಲ್ಲಿಯೂ, ಕಲ್ಲು ಮಣ್ಣುಗಳಲ್ಲಿಯೂ ಸನ್ನಿಹಿತನಾಗಿ ಸದಾ ವಾಸಮಾಡಬೇಕು. ॥೩೬॥

ನನ್ನ ತೀರದಲ್ಲಿರುವ ಕಲ್ಲುಗಳಲ್ಲಿಯೂ ನಿನ್ನ ಸನ್ನಿಧಿ ಇರಬೇಕು. ಅದಕ್ಕೇನೂ ಆಗಮ ಶಾಸ್ತ್ರ ವಿಧಿಯಂತೆ ಪ್ರತಿಷ್ಠೆ ಮುಂತಾದವುಗಳ ಆವಶ್ಯಕತೆ ಇರಕೂಡದು. ನಿನ್ನ ಅನುಗ್ರಹದಿಂದ ಸ್ವಾಭಾವಿಕವಾಗಿಯೇ ನನ್ನ ತೀರದ ವಸ್ತುಗಳೆಲ್ಲವೂ ನಿನ್ನ ಸಾನ್ನಿಧ್ಯವನ್ನು ಪಡೆದುಕೊಂಡಿರಬೇಕು. ಯಾರೇ ಆಗಲಿ ನನ್ನ ತೀರದಲ್ಲಿರುವ ವಸ್ತುವನ್ನು ಅರ್ಚಿಸಿದರೆ ನೀನು ಸಂತುಷ್ಟನಾಗಬೇಕು. ॥೩೭॥

ಪ್ರಪಂಚದಲ್ಲಿ ಆಗಮೋಕ್ತ ವಿಧಿಯಂತೆ ಪ್ರತಿಷ್ಠಿತವಾದ ಲಿಂಗಗಳು ಹೇಗೆ ಶ್ರೇಷ್ಠವೆಂದೆನಿಸಿರುವುವೋ, ಅವುಗಳಷ್ಟೇ ಮಹಿಮೆಯು ನನ್ನ ತೀರದ ಪ್ರತಿಯೊಂದು ಕಲ್ಲಿಗೂ ಇರಬೇಕು. ನನ್ನ ತೀರದ ವಾಯುವು ಯಾವಾತನ ಮೈಗೆ ಸೋಂಕು

ಪವಿತ್ರಾ ಭವತು ಸ್ವಾಮಿನ್ ತ್ವನ್ನಾಮಸ್ಮರಣಾದಿಹ ।
ಮಲ್ಲಿಂಗಪೂಜಯಾ ಶಂಭೋ ಮುಕ್ತೋ ಭವತು ಮಾನವಃ ॥೩೯॥

ಮಲ್ಲಿಂಗಸದೃಶಂ ಲಿಂಗಂ ಮಾಸ್ತು ಸರ್ವಾತ್ಮನಾ ಪ್ರಭೋ ।
ಕಾಶ್ಮೀರೇ ರಸಲಿಂಗೇ ವಾ ರತ್ನಲಿಂಗೇಷ್ವಪಿ ಪ್ರಭೋ ॥೪೦॥

ತವಾಭಿಮಾನೇನ ತಥಾ ಯಥಾ ಮತ್ಪ್ರಸ್ತರೋತ್ತಮೋ ।
ಇದಂ ಸೋಮೇಶ್ವರೋ ನಾಮ ಲಿಂಗಂ ಮಂಗಳದಾಯಕಂ ॥೪೧॥

ಏತದ್ದರ್ಶನಮಾತ್ರೇಣ ಮುಕ್ತಿರಸ್ತು ಸದಾಶಿವ ।
ಸೋಮೇಶಕುಂಡಲಿಂಗಾನಿ ಭುಜಂಗಾಭರಣಾನ್ಯಪಿ ॥೪೨॥

---

ವುದೋ ಆತನು ಪವಿತ್ರನಾಗಬೇಕು. ನನ್ನ ತೀರದಲ್ಲಿ ಯಾರೇ ಆಗಲಿ ನಿನ್ನನ್ನು ಧ್ಯಾನಿಸಿದರೆ ಸಿದ್ಧಿ ಪಡೆಯಬೇಕು. ॥೩೯॥

ನನ್ನ ತೀರದಲ್ಲಿರುವ ಶಿವಲಿಂಗಗಳಿಗಿರುವಷ್ಟು ಮಾಹಾತ್ಮ್ಯೆಯು ಮತ್ತೆ ಯಾವ ಲಿಂಗಗಳಿಗೂ ಇರಕೂಡದು. ಕಾಶ್ಮೀರ ಲಿಂಗಕ್ಕಿಂತಲೂ, ರಸಲಿಂಗ ಮತ್ತು ರತ್ನಮಯವಾದ ಲಿಂಗ ಇವುಗಳಿಗಿಂತಲೂ ನನ್ನ ತೀರದ ಲಿಂಗಗಳೇ ಶ್ರೇಷ್ಠವೆನಿಸಬೇಕು. ನನ್ನಲ್ಲಿರುವ ರೇವಾಲಿಂಗವನ್ನು ಪೂಜಿಸುವ ಯಾವ ಮನುಷ್ಯನಾದರೂ ಆತನು ಭವಬಂಧನದಿಂದ ಮುಕ್ತನೇ ಆಗಬೇಕು. ॥೪೦॥

ಓ ಪರಮೇಶ್ವರ, ನಿನ್ನ ಅನುಗ್ರಹವು ಸಂಪೂರ್ಣವಾಗಿರಬೇಕು. ನನ್ನಲ್ಲಿರುವ ಈ ಕಲ್ಲು ಸೋಮೇಶ್ವರವೆಂಬ ಲಿಂಗವಾಗಬೇಕು. ಇದು ಸಕಲ ಕಲ್ಯಾಣವನ್ನೂ ಅನುಗ್ರಹಿಸುವಂತಿರಬೇಕು. ಮುಖ್ಯವಾಗಿ ಇದರಲ್ಲಿ ನಿನ್ನ ಪೂರ್ಣಸಾನ್ನಿಧ್ಯವಿರಬೇಕು. ॥೪೧॥

ಈ ಲಿಂಗವನ್ನು ಸಂದರ್ಶಿಸಿದರೂ ಮನುಷ್ಯಮಾತ್ರರಿಗೆ ಮುಕ್ತಿಯು ಪ್ರಾಪ್ತವಾಗಬೇಕು. ನನ್ನಲ್ಲಿರುವ ಸೋಮೇಶ್ವರ ತೀರ್ಥದ ಸಕಲ ಲಿಂಗಗಳೂ ಸರ್ಪಾಭರಣವುಳ್ಳವುಗಳಾಗಬೇಕು. ಅಲ್ಲದೇ ಅವುಗಳಲ್ಲಿ ಸದಾ ನಿನ್ನ ಪೂರ್ಣ ಸಾನ್ನಿಧ್ಯವಿರಬೇಕು. ॥೪೨॥

ಭವಂತು ತೇಷು ಸರ್ವೇಷು ಸದಾ ಸನ್ನಿಹಿತೋ ಭವ ।
ಸೋಮೇಶಕುಂಡನಿಲಯಂ ಸ್ಥೂಲಮಸ್ಥೂಲಮೇವ ವಾ ॥೪೩॥

ಲಿಂಗಂ ಭುಜಂಗಾಭರಣಂ ಪೂಜಿತಂ ಭಕ್ತಿಮುಕ್ತಿದಂ ।
ಯಃ ಪ್ರಾರ್ಥಿತೋ ವರಶ್ಶಂಭೋ ಮಯಾ ತ್ವದ್ಭಕ್ತಿಪೂತಯಾ॥೪೪॥

ತಾದೃಶೋ ನ ವರೋ ದೇಯೋ ಮದ್ಭಿನ್ನಾಯ ಮಹೇಶ್ವರ ॥೪೫॥

ಸರ್ವಾತ್ಮನಾಪ್ಯನ್ಯವಿಲಕ್ಷಣತ್ವಂ
ಮಯ್ಯಸ್ತು ಶಂಭೋ ತ್ವದನುಗ್ರಹೇಣ ।
ಅಯಂ ವರೋಽನ್ಯೋಽತಿವಿಲಕ್ಷಣೋ ಮೇ
ದೇಯಸ್ತ್ವಯಾ ಶಂಕರ ದೀನಬಂಧೋ ॥೪೬॥

ವರಾಂತರಾಣಾಂ ನ ಮಮಾಸ್ತ್ಯಪೇಕ್ಷಾ
ಶ್ರೀಮನ್ವಿರೂಪಾಕ್ಷಕೃಪಾಕಟಾಕ್ಷೈಃ ।

ಆ ಸೋಮೇಶ್ವರ ತೀರ್ಥದಲ್ಲಿ ಸೂಕ್ಷ್ಮವಾಗಿರಲಿ ಅಥವಾ ಸ್ಥೂಲವಾಗಿರಲಿ ಸರ್ವಾಭರಣವೇಷ್ಟಿತವಾದ ಆ ಲಿಂಗವನ್ನು ಯಾರು ಪೂಜಿಸಿದರೂ, ಅವರಿಗೆ ಇಹದಲ್ಲಿ ಸುಖವೂ ಪರದಲ್ಲಿ ಮುಕ್ತಿಯೂ ಲಭಿಸಬೇಕು. ॥೪೩॥

ನಾನು ಅತ್ಯಂತ ಭಕ್ತಿಯಿಂದ ನಿನ್ನನ್ನು ಸಂತುಷ್ಟಗೊಳಿಸಿದ್ದೇನೆ. ನಾನು ಕೇಳಿದಂತೆಯೇ ನನಗೆ ವರವನ್ನು ಕೊಡಬೇಕು. ಇಂಥ ವರವನ್ನು ಮತ್ತೆ ಯಾರಿಗೂ ಕೊಡಕೂಡದು. ಎಲ್ಲರಿಗಿಂತಲೂ ಶ್ರೇಷ್ಠವಾದ ವರವನ್ನು ನೀನು ನನಗೆ ಅನುಗ್ರಹಿಸಬೇಕು. ॥೪೪-೪೫॥

ಓ ಪರಮೇಶ್ವರ! ನಿನ್ನ ಅನುಗ್ರಹದಿಂದ ಎಲ್ಲಾ ವಿಷಯದಲ್ಲಿಯೂ ನನ್ನಲ್ಲಿಯೇ ವಿಶೇಷವಾದ ಅತಿಮಾಹಾತ್ಮ್ಯೆಯು ಕಂಡುಬರಬೇಕು. ಈ ನನ್ನ ಬೇಡಿಕೆಯು ವಿಲಕ್ಷಣವಾಗಿರಬಹುದು. ಆದರೂ ನಾನು ಈ ವರವನ್ನೇ ಅಪೇಕ್ಷಿಸುತ್ತೇನೆ. ದೀನಬಂಧುವಾದ ನೀನು ಅದೇ ವರವನ್ನೇ ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತೇನೆ. ॥೪೬॥

ವಿರೂಪಾಕ್ಷನೇ! ನನಗೆ ಮತ್ತೆ ಯಾವ ವರಗಳಲ್ಲಿಯೂ ಅಪೇಕ್ಷೆ ಇಲ್ಲ. ಕೇವಲ ಇದೊಂದು ವರವನ್ನೇ ಪ್ರಾರ್ಥಿಸುತ್ತೇನೆ. ನಿನ್ನ ಕೃಪಾಕಟಾಕ್ಷದಿಂದ ನನ್ನ

ಅಪೇಕ್ಷಿತಂ ತೇ ಮಯಿ ಸನ್ನಿಧಾನಂ
ಮತ್ಪ್ರಸ್ತರೇಷು ಪ್ರಥಿತೇಷ್ವಪೀಶ ॥೪೭॥

ತವಾಪ್ಯದೇಯೋ ನ ಪರೋ ಮಹೇಶ
ದೇಯೇಷು ತಾವದ್ಗಣನೀಯ ಏವ ।
ಅಯಂ ವರಃ ಪ್ರಾರ್ಥಿತ ಏವ ನಾನ್ಯೈ
ರ್ಮಯಾ ವರಂ ಪ್ರಾರ್ಥಿತ ಇತ್ಯವೈಮಿ ॥೪೮॥

ಸರ್ವಜ್ಞಮೂರ್ತೇಃ ಕರುಣಾಕರಸ್ಯ
ಕಿಮಸ್ಯ ದೇಯಂ ತವ ಚಂದ್ರಮೌಳೇ ।
ಅಯಂ ವರೋ ಲೋಕಹಿತಾಯ ತಾವ
ನ್ಮಯಾಪಿ ಸಂಪ್ರಾರ್ಥಿತ ಏವ ನೂನಂ ॥೪೯॥

ಲೋಕೇಽಪಿ ತಾವದ್ಬಹವೋಽಪ್ಯಶಕ್ತಾಃ
ಕದಾಚಿದಾಲಸ್ಯಪರಾಹತಾಶ್ಚ ।

ಲ್ಲಿನ ಪ್ರತಿಯೊಂದು ಕಲ್ಲೂ, ಚಪ್ಪಡಿಯೂ ನಿನ್ನ ಸಾನ್ನಿಧ್ಯವನ್ನು ಪಡೆದಿರಬೇಕು. ಎಲ್ಲವೂ ಸಾಕ್ಷಾತ್ ನಿನ್ನ ಸ್ವರೂಪವುಳ್ಳದ್ದೇ ಆಗಬೇಕು. ॥೪೭॥

ನಿನಗೆ ಕೊಡಲಾಗದ ವರವು ಒಂದೂ ಇಲ್ಲ. ಹಾಗೆಯೇ ನಾನು ಕೇಳುವ ವರವೂ ಕೊಡಬಾರದುದೂ ಅಲ್ಲ. ಮಹೇಶ್ವರನೇ! ಇಂಥ ವರವನ್ನು ಈವರೆಗೆ ಯಾರೂ ಕೇಳಿರಲಾರರು. ಆದರೆ ನಾನು ಬೇಡುತ್ತೇನೆ. ಅನುಗ್ರಹಿಸಬೇಕು.॥೪೮॥

ನೀನು ಸರ್ವಜ್ಞನೂ ಸರ್ವಶಕ್ತನೂ ಆಗಿರುವೆಯಲ್ಲದೇ ಕರುಣಾನಿಧಿ ಯೆನಿಸಿರುವೆ. ನಿನಗೆ ನಾನು ಕೇಳಿದ ವರವನ್ನು ಕೊಡಲು ಅಸಮಾಧಾನವೇ? ಇದೇನೂ ನಿನಗೆ ಮಹಾಘನವಾಗಿ ತೋರಲಾರದು. ನಾನು ಈ ವರವನ್ನು ಕೇಳು ತ್ತಿರುವುದೂ ಸಹ, ಕೇವಲ ಭೂಲೋಕದ ಜನರ ಹಿತಾರ್ಥವಾಗಿ ಎಲ್ಲಾ ಜನರಿಗೂ ನಿನ್ನನ್ನು ಆರಾಧಿಸಲು ಸುಲಭವಾಗಲೆಂದೇ ನಾನು ಈ ವರವನ್ನು ಬೇಡುತ್ತಿ ದ್ದೇನೆ. ॥೪೯॥

ಪ್ರಪಂಚದಲ್ಲಿನ ಜನರಿಗೆ ಪದೇ ಪದೇ ಕಷ್ಟಗಳು ಒದಗುತ್ತಿರುತ್ತವೆ. ಅವು ಗಳನ್ನು ಅನುಭವಿಸಿ ಅನುಭವಿಸಿ ಜನರು ಬಹಳ ಉದಾಸೀನರಾಗಿರುತ್ತಾರೆ. ಅವರಿಗೆ ಶಿವಾರಾಧನೆಯನ್ನು ಶ್ರಮವಹಿಸಿ ಮಾಡಲೂ ಸದಾ ಶಕ್ತಿಯಿರುವುದಿಲ್ಲ. ಹೆಚ್ಚು

ತೇಷಾಂ ವಿಮುಕ್ತಿಃ ಕಠಿನೇತಿ ಮತ್ವಾ
ವರೋ ಮಯಾ ಪ್ರಾರ್ಥಿತ ಏವ ಸೋಽಯಂ ॥೫೦॥

ಬಿಲ್ವೀದಳಂ ವಾ ಸಜಲಂ ಜಲಂ ವಾ
ದೂರ್ವಾಂಕುರಂ ವಾ ಸಿತಭೂತಿಪೂತಃ ।
ಮತ್ಪ್ರಸ್ತರೇ ಯಃ ಪ್ರದದಾತಿ ತತ್ತೇ
ಪ್ರಿಯಂ ಭವತ್ವರ್ಧಶಶಾಂಕಮೌಳೇ ॥೫೧॥

ಯೇ ನರ್ಮದೇ ದೇವಿ ಶಿವಪ್ರಿಯೇತಿ
ಮನಸ್ನಮ ನಿದ್ರಾಸಮಯೇ ಸ್ಮರಂತಿ ।
ತೇಷಾಂ ನ ದುಃಸ್ವಪ್ನಭಯಾನಿ ತಾವ
ದ್ಭವಂತು ಶಂಭೋ ತ್ವದನುಗ್ರಹೇಣ ॥೫೨॥

ತ್ವತ್ಪಾದಸಂದರ್ಶನಪೂತಚಿತ್ತಾಂ
ಮಾಂ ಯಃ ಸಕೃದ್ವಾ ಸ್ಮರತಿ ಪ್ರಭಾತೇ ।

---

ಪ್ರಯತ್ನವನ್ನೂ ಅವರೂ ಮಾಡಲಾರರು. ಅಂತಹವರಿಗೆ ಆ ಸಂಸಾರಬಂಧನದಿಂದ ಮುಕ್ತಿದೊರೆಯುವುದೇ ಬಹಳ ಕಠಿಣ. ಅವರಿಗೆ ಅನುಕೂಲವಾಗಲೆಂದೇ ನಾನು ಈ ವರವನ್ನು ಕೇಳಿಕೊಳ್ಳುತ್ತೇನೆ. ಆದ್ದರಿಂದ ಅನುಗ್ರಹಿಸಬೇಕು. ॥೫೦॥

ಭಸ್ಮಲಿಪ್ತಗಾತ್ರನಾಗಿ ನನ್ನ ತೀರದಲ್ಲಿರುವ ಯಾವ ಕಲ್ಲಿಗೇ ಆಗಲಿ, ಬಿಲ್ವ ಪತ್ರೆ, ಜಲ ಮುಂತಾದವುಗಳಿಂದ ಯಾರೇ ಪೂಜೆಮಾಡಲಿ, ಆ ಪೂಜೆಯಿಂದ ಚಂದ್ರಮೌಳಿಯಾದ ನೀನು ಸಂತುಷ್ಟನಾಗಬೇಕು. ॥೫೧॥

ಯಾರೇ ಆಗಲಿ, ಮಲಗುವಾಗ ನನ್ನನ್ನು "ಹೇ ನರ್ಮದೇ, ನೀನು ಮಹಾದೇವಿಯು ; ಶಿವನ ಪ್ರೀತಿಗೆ ಪಾತ್ರಳಾಗಿರುವವಳು" ಎಂದು ಮುಂತಾಗಿ ನನ್ನ ಹೆಸರನ್ನು ಸ್ಮರಿಸಿಕೊಂಡರೆ ಅಂಥವರಲ್ಲಿಯೂ ನಿನ್ನ ಅನುಗ್ರಹವಿರಬೇಕು. ನನ್ನನ್ನು ಸ್ಮರಿಸುವವರಿಗೆ ಎಂದೂ ದುಸ್ಸ್ವಪ್ನಗಳ ಹೆದರಿಕೆ ಇರಕೂಡದು. ॥೫೨॥

ಇಂದು ನಿನ್ನ ದಿವ್ಯಸಂದರ್ಶನದಿಂದ ನಾನು ಅತ್ಯಂತ ಪವಿತ್ರಾತ್ಮಳಾಗಿ ದ್ದೇನೆ. ನನ್ನನ್ನು ಯಾರು ಪ್ರಾತಃಕಾಲದಲ್ಲಿ ಸ್ಮರಿಸಿಕೊಳ್ಳುವರೋ ಅವರಿಗೆ ನಿನ್ನಲ್ಲಿ ಅಚಲವಾದ ಭಕ್ತಿಯುಂಟಾಗಲಿ. ಅದೇ ಭಕ್ತಿಯ ದೆಸೆಯಿಂದ ಅವರು

ತಸ್ಯಾಸ್ತು ಭಕ್ತಿಸ್ತ್ವಯಿ ಚಂದ್ರಮೌಳೇ
ತಯಾ ಸಮುಕ್ತೋಽಸ್ತು ಕೃಪಾನಿಧಾನ ॥೫೩॥

॥ ಬ್ರಹ್ಮೋವಾಚ ॥

ಇತಿ ತತ್ಪ್ರಾರ್ಥಿತಾನ್ ಸರ್ವಾನ್ ವರಾನ್ ದತ್ವಾ ಮಹೇಶ್ವರಃ।
ತತ್ರೈವಾಂತರ್ದಧೇ ರಾಜನ್ ಸರ್ವದೇವಪಿತಾಮಹಃ ॥೫೪॥

ತತಃಪರಂ ಮಹಾದೇವಃ ಕೈಲಾಸನಿಲಯಃ ಪ್ರಭುಃ।
ಗಂಗಾಕೃತಂ ತಪೋ ದೃಷ್ಟ್ವಾ ಪರಮಂ ವಿಸ್ಮಯಂ ಗತಃ ॥೫೫॥

ಕೋ ವಾ ವರೋ ಮಯಾ ದೇಯಃ ಕಸ್ತ್ವಯಾ ಪ್ರಾರ್ಥ್ಯತೇ ವರಃ।
ತಪೋ ಘೋರತರಂ ತಸ್ಯಾಸ್ಸರ್ವಲೋಕಭಯಂಕರಂ ॥೫೬॥

ಇತ್ಯೇವಂ ಸ್ಮರತಶ್ಶಂಭೋರ್ಗಣಾಸ್ಸರ್ವೇ ನೃಪೋತ್ತಮ ।
ಪ್ರಣತಾಶ್ಶಂಕರಂ ಪ್ರಾಹುಃ ಪಾಹಿ ಪಾಹೀತಿ ಸಾದರಂ ॥೫೭॥

ಸಂಸಾರ ಬಂಧನದಿಂದ ವಿಮುಕ್ತರೂ ಆಗಲಿ. ಇವೆಲ್ಲವನ್ನೂ ದಯಾನಿಧಿಯಾದ ನೀನೇ ಅನುಗ್ರಹಿಸಿ ವರಕೊಡಬೇಕೆಂದು ಬೇಡಿಕೊಳ್ಳುತ್ತೇನೆ." ॥೫೩॥

ಹೀಗೆಂದು ರೇವಾನದಿಯು ಕೇಳಿಕೊಳ್ಳಲು, ಪರಮೇಶ್ವರನು "ತಥಾಸ್ತು" ಎಂದು ಆ ಎಲ್ಲಾ ವರಗಳನ್ನೂ ಕೊಟ್ಟನು. ಅನಂತರ ಆ ಸಕಲ ದೇವತೆಗಳಿಗೂ ಪಿತಾಮಹನೆಂತಿರುವ ಮಹೇಶ್ವರನು ಅಲ್ಲಿಯೇ ಅದೃಶ್ಯನಾದನು. ॥೫೪॥

ಮುಂದೆ ಪರಮೇಶ್ವರನು ಕೈಲಾಸಕ್ಕೆ ತೆರಳಲು ಆಗ ಆತನಿಗೆ ಗಂಗೆಯು ಮಾಡುತ್ತಿರುವ ಘೋರವಾದ ತಪಸ್ಸು ಗೋಚರಿಸಿತು. ಆ ಅಖಂಡವಾದ ತಪಸ್ಸನ್ನು ನೆನೆದು ಅತ್ಯಂತ ವಿಸ್ಮಿತನಾದನು. ॥೫೫॥

ಆ ಗಂಗೆಯ ತಪಸ್ಸಿನ ವಿಚಾರವಾಗಿ ಪರಮೇಶ್ವರನಿಗೆ ದೊಡ್ಡ ಚಿಂತೆಯೇ ಉಂಟಾಯಿತು. ಈಕೆಯು ಈಗ ಭಯಂಕರವಾದ ತಪಸ್ಸನ್ನು ಮಾಡುತ್ತಿರುವಳು. ಇವಳು ಇನ್ನು ಏನೇನನ್ನು ಅಪೇಕ್ಷಿಸುವಳೋ ? ಏನು ವರವನ್ನು ಕೇಳುವಳೋ ? ಯಾವ ವರವನ್ನು ಕೊಡಬೇಕಾಗುವುದೋ ? ಹೀಗೆಂದು ಚಿಂತಿಸುತ್ತಿದ್ದನು. ॥೫೬॥

ಈರೀತಿಯಾಗಿ ಪರಮೇಶ್ವರನು ಯೋಚಿಸುತ್ತಿರಲು ಪ್ರಮಥ ಗಣದವರೆಲ್ಲಾ ಕಾಪಾಡು ಕಾಪಾಡು ಎಂದು ಮೊರೆಯಿಡುತ್ತಾ ಬಂದು ಕಾಲಿಗೆ ಬಿದ್ದರು. ಸಮಾಚಾರ ವೇನೆಂದು ಕೇಳಲು ಹೀಗೆ ಹೇಳತೊಡಗಿದರು. ॥೫೭॥

|| ಗಣಾಊಚುಃ ||

ಸ್ವಾಮಿನ್ ಹಿಮಗಿರೇಃ ಕನ್ಯಾ ಜ್ಯೇಷ್ಠಾ ಗಂಗೇತಿ ವಿಶ್ರುತಾ ।
ಸಾ ತಪಃ ಕುರುತೇ ಘೋರಂ ತಪಸಾಮಪಿ ತತ್ತಪಃ ॥೫೮॥

ತೇನೈವ ತಪಸಾ ಸರ್ವೇ ಸಂತಪ್ತಾಃ ಪರ್ವತಾ ಅಪಿ ।
ವಿನಾ ಸಂಘರ್ಷಣೇನೇಶ ತರುಭ್ಯೋ ವಹ್ನಿರುದ್ಗತಃ ॥೫೯॥

ಕುಲಾಚಲಾದಯಸ್ಸರ್ವೇಽಪ್ಯಚಲಾಶ್ಚಲಿತಾಪಿ ತೇ ।
ಅಮಿತಾಸ್ತಪಸಾ ತೇನ ಕ್ಷುಬ್ಧಾಸ್ಸರ್ವೇ ಸುರಾ ಅಪಿ ॥೬೦॥

ಅತಃಪರಂ ಮಹಾದೇವ ಪ್ರಸೀದ ಕರುಣಾನಿಧೇ ।
ಅನ್ಯಥಾ ಪ್ರಲಯೋಽಪಿ ಸ್ಯಾದಕಾಂಡೇ ಗಿರಿಜಾಪತೇ ॥೬೧॥

ಇತಿ ತತ್ಪ್ರಾರ್ಥಿತಶ್ಶಂಭುರ್ಗಣಕೋಟಿಸಮನ್ವಿತಃ ।
ತೂರ್ಯಧ್ವನಿಸಮಾಕೀರ್ಣೋ ಗಂಗಾಪ್ರತ್ಯಕ್ಷತಾಂ ಗತಃ ॥೬೨॥

---

"ಸ್ವಾಮಿಯೇ! ಹಿಮವಂತನ ಜ್ಯೇಷ್ಠಪುತ್ರಿಯಾದ ಗಂಗೆಯು ಹಿಮಗಿರಿಯಲ್ಲಿ ತಪಸ್ಸನ್ನು ಮಾಡುತ್ತಿರುವಳು. ಆ ತಪಸ್ಸೆಂದರೆ ಸಾಮಾನ್ಯವಾದುದಲ್ಲ. ಘೋರತಪಸ್ಸಿಗಿಂತಲೂ ಘೋರವಾಗಿದೆ. ||೫೮||

ಆ ತಪಸ್ಸಿನ ಜ್ವಾಲೆಯಿಂದ ಸಕಲ ಪರ್ವತಗಳೂ ಸುಟ್ಟು ಹೋಗುತ್ತವೆ. ಮರಗಳಲ್ಲಿ ತಿಕ್ಕಾಟವಿಲ್ಲದೇ ಇದ್ದರೂ ಹಾಗೆಯೇ ಬೆಂಕಿಯು ಹತ್ತಿಕೊಂಡು ಉರಿಯುತ್ತಿದೆ. ಆಕೆಯ ತಪಸ್ಸು ಇಷ್ಟು ಉಗ್ರವಾಗಿದೆ. ||೫೯||

ಅತ್ಯಂತ ಸ್ಥಿರವಾದ ಕುಲಪರ್ವತಗಳೂ ಆಕೆಯ ತಪಸ್ಸಿನಿಂದ ಕಂಪಿಸುತ್ತಿವೆ. ದೇವತೆಗಳೆಲ್ಲರೂ ಭಯದಿಂದ ದಿಕ್ಕುಗೆಟ್ಟಿದ್ದಾರೆ. ||೬೦||

ಪಾರ್ವತೀ ರಮಣನೇ! ಇನ್ನು ಜಾಗ್ರತೆ ಪ್ರಸನ್ನನಾಗಿ ಒದಗಿರುವ ಉತ್ಪಾತಗಳನ್ನು ಪರಿಹರಿಸಿ ಕಾಪಾಡು. ಇಲ್ಲದೇ ಸಾವಕಾಶಮಾಡಿದರೆ ಅಕಾಲದಲ್ಲೇ ಪ್ರಲಯವು ಆಗಿ ಹೋಗುವುದೋ ಎಂಬಂತೆ ಹೆದರಿಕೆ ಆಗುತ್ತಿರುವುದು." ||೬೧||

ಈ ರೀತಿಯಾಗಿ ಗಣದವರೆಲ್ಲರೂ ಕಾತುರತೆಯಿಂದ ಬೇಡಿಕೊಳ್ಳಲು ಪರಮೇಶ್ವರನು ಗಂಗೆಗೆ ಅನುಗ್ರಹ ನೀಡಲು ನಿಶ್ಚಯಿಸಿದನು. ಅನಂತರ ಅನೇಕ

ತತಃಪರಂ ಮಹಾದೇವೇ ಪ್ರಸನ್ನೇ ಸತಿ ಶಂಕರೇ ।
ಪ್ರಣಮ್ಯ ದಂಡವದ್ಭೂಮೌ ಗಂಗಾ ತುಷ್ಟಾವ ಶಂಕರಂ ॥೬೩॥

ನಮೋ ನಮಸ್ತೇ ಗಿರಿಜಾಸಹಾಯ
ನಮೋ ನಮಸ್ತೇ ಪುನರಿಂದುಮೌಳೇ ।
ನಮೋ ನಮಸ್ತೇಽಸ್ತು ಪುನರ್ನಮಸ್ತೇ
ನಮೋ ನಮಸ್ತೇ ಕರುಣಾಸಮುದ್ರ ॥೬೪॥

ಶ್ರೀಮನ್ಮಹಾರುದ್ರ ನಮೋನಮಸ್ತೇ
ಶ್ರೀವೀರಭದ್ರಾಯ ನಮೋ ನಮಸ್ತೇ ।
ನಮೋ ನಮಸ್ತೇ ಗಿರಿಶ ತ್ರಿನೇತ್ರ
ವಿಭೂತಿಗಾತ್ರಾಯ ನಮೋ ನಮಸ್ತೇ ॥೬೫॥

ಶ್ರೀನೀಲಕಂಠಾಯ ನಮೋ ನಮಸ್ತೇ
ಫಾಲಪ್ರದೇಶಾನಲಲೋಚನಾಯ ।
ನಮೋ ನಮಸ್ತೇಽಸ್ತುಕಪರ್ದಿನೇ ವೈ
ನಮೋನಮಸ್ತೇಽಸ್ತು ಸದಾಶಿವಪ್ರಭೋ ॥೬೬॥

ಗಣಗಳೊಡನೆ ವಾದ್ಯ, ಮೇಳ ಮುಂತಾದುವುಗಳಿಂದ ಧ್ವನಿಗೈಯ್ಯುತ್ತಾ ಗಂಗೆಯ ಎದುರಿನಲ್ಲಿ ಹೋಗಿ ಪ್ರತ್ಯಕ್ಷನಾದನು. ॥೬೨॥

ಪರಮೇಶ್ವರನು ಪ್ರಸನ್ನನಾಗಿ ಎದುರಿಗೆ ಮೈದೋರಲು, ಗಂಗೆಯು ಮೊದಲು ಆ ಭವ್ಯವಾದ ಪರಶಿವನ ಆಕೃತಿಯನ್ನು ನೋಡಿ ಅತ್ಯಾನಂದದಿಂದ ದಂಡಾಕಾರವಾಗಿ ನಮಸ್ಕರಿಸಿ ಈ ರೀತಿ ಸ್ತುತಿಸಿದಳು. ॥೬೩॥

" ಪರಮೇಶ್ವರನೇ ! ನಿನಗೆ ಶತಶಃ ನಮಸ್ಕಾರ. ನೀನು ದಯಾನಿಧಿಯಾಗಿದ್ದೀಯೆ. ಆದ್ದರಿಂದಲೇ ಇಂದು ನನಗೆ ಪ್ರತ್ಯಕ್ಷನಾಗಿರುವೆ. ಪಾರ್ವತೀರಮಣನೇ, ನಿನಗೆ ಅನಂತ ವಂದನೆಗಳು. ಚಂದ್ರಶೇಖರನೇ, ಪದೇಪದೇ ನಿನ್ನನ್ನೇ ನಮಸ್ಕರಿಸುವೆನು. ॥೬೪॥

ಓ ಶಿವಪ್ರಭುವೇ, ನೀನೇ ಮಹಾರುದ್ರದೇವತೆ ಎನಿಸಿರುವೆ. ವೀರಭದ್ರಾವತಾರವನ್ನು ಮಾಡಿದವನೂ ನೀನೇ. ಮುಕ್ಕಣ್ಣನೇ! ನಿನ್ನನ್ನು ಗಿರಿಶನೆಂದು

ಮಾರ್ತಂಡಮಂಡಲನಿವಾಸ ನಮೋ ನಮಸ್ತೇ
ಮಾರ್ತಂಡಕುಂಡಲವಿರಾಜಿತಭೂಷಣಾಯ ।
ಮಾರ್ತಂಡಚಂಡಕರಸಂಕುಲಮಂಡಪಾಯ
ತಸ್ಮೈ ಮೃಡಾಯ ಭಗವನ್ ಭವ ತೇ ನಮೋಽಸ್ತು ॥೬೭॥

ಯದ್ವೀಕ್ಷಣಪ್ರವಣಮಾತ್ರವಿಧೂತಪಾಪಾಃ
ಸಂಪ್ರಾಪ್ನುವಂತಿ ಪರಮಂ ಪದಮಿಂದುಮೌಳೇ ।
ತೈರೇವ ಮಾಂ ಮುಹುರಪಿ ಪ್ರಣತಾಂ ಪ್ರಪಶ್ಯ
ಪಶ್ಯಾದ್ಯ ವಹ್ನಿನಿಕರಾಶ್ರಿತತಪ್ತದೇಹಾಂ ॥೬೮॥

ಮಾತಾ ತ್ವಮೇವ ಭಗವನ್ ಜನಕಸ್ತ್ವಮೇವ
ಮಿತ್ರಂ ತ್ವಮೇವ ಮಮ ಚಂದ್ರಕಲಾವತಂಸ ।
ಭ್ರಾತಾ ತ್ವಮೇವ ಭಗವನ್ ಗಿರಿಜಾಸಹಾಯ
ತ್ರಾತಾ ತ್ವಮೇವ ಭಗವನ್ ಹರ ನೀಲಕಂಠ ॥೬೯॥

ಸ್ತುತಿಸುವರು. ನೀಲಕಂಠ! ನೀನು ಸರ್ವಾಂಗಗಳಲ್ಲಿಯೂ ಭಸ್ಮದಿಂದ ಅಲಂಕೃತನಾಗಿದ್ದೀಯೆ. ಲಲಾಟದಲ್ಲಿ ಅಗ್ನಿಯನ್ನು ಧರಿಸಿರುವೆ. ಕಪರ್ದಿಯೇ! ನಿನಗೆ ಕೋಟಿಶಃ ನಮಸ್ಕಾರ. ||೬೫-೬೬||

ಸೂರ್ಯಮಂಡಲದ ಮಧ್ಯದಲ್ಲಿ ನಿವಾಸಿಸುವ ಶಂಕರನೇ! ನಿನಗೆ ನಮಸ್ಕಾರ. ಸೂರ್ಯಮಂಡಲವನ್ನೇ ಕುಂಡಲಾಭರಣವನ್ನಾಗಿ ಧರಿಸುವ ಪರಶಿವನೇ! ನಿನಗೆ ವಂದನೆ. ಮೃಡನೇ! ನಿನ್ನ ಮಂಟಪವನ್ನು ದ್ವಾದಶಾದಿತ್ಯರೂ ಸುತ್ತುವರೆದು ಸೇವಿಸುತ್ತಿರುವರು. ಅಂಥ ಭಗವಂತನಾದ ನಿನಗೆ ಕೋಟಿಶಃ ತಲೆಬಾಗುವೆನು. ||೬೭||

ಚಂದ್ರಮೌಳಿಯೇ! ಕೇವಲ ನಿನ್ನ ಕೃಪಾಕಟಾಕ್ಷದಿಂದ ಸಕಲ ಪಾಪಗಳನ್ನೂ ಕಳೆದುಕೊಂಡು ಅನೇಕ ಜನರು ಪರಮ ಪದವನ್ನು ಸಹ ಪಡೆಯುವರು. ಇಂದು ನಾನು ಪಂಚಾಗ್ನಿ ಮಧ್ಯದಲ್ಲಿ ಸಂತಪ್ತಳಾಗಿದ್ದೇನೆ. ಇಷ್ಟು ಕಠಿಣವಾದ ತಪಸ್ಸನ್ನು ಮಾಡಿದ್ದೇನೆ. ಶತಶಃ ನಮಸ್ಕರಿಸುತ್ತಿದ್ದೇನೆ. ನನ್ನ ಮೇಲೆ ಪ್ರಸನ್ನನಾಗಿ ನಿನ್ನ ಕೃಪಾಕಟಾಕ್ಷದಿಂದ ನನ್ನನ್ನೂ ಈಕ್ಷಿಸು. ||೬೮||

ಸಮಸ್ತ ಜಗತ್ತಿಗೂ ಸರ್ವಸ್ವರೂಪನಾಗಿರುವಂತೆ ನನಗೂ ನೀನೇ ತಾಯಿ,

ತ್ವಂ ಕಾಲಕೂಟವಿಷಧಾರಣಧೀರಚಿತ್ತಃ
ತ್ವಂ ಮಾರಸಂಹರಣಕಾರಣಭೂತ ಏವ ।
ಬ್ರಹ್ಮಾಂಡಮಂಡಲಸುಖಂಡನಹೇತುಭೂತಃ
ತ್ವಾಮೇವ ತಾವದಧುನಾ ಶರಣಂ ಪ್ರಪನ್ನಾ ॥೭೦॥

ತ್ವನ್ನಾಮಕೀರ್ತನಸುಧಾರಸಪಾನಪೀನೋ
ದೀನೋಽಪಿ ದೈನ್ಯಮುಪಹಾಯ ದಿವಂ ಪ್ರಯಾತಿ ।
ಪಶ್ಚಾದುಪೈತಿ ಪರಮಂ ಪದಮೀಶ ತಸ್ಮೈ
ತದ್ಭಾಗ್ಯಯೋಗ್ಯಕರುಣಾಂ ಕುರು ಮಾಮಪೀಶ ॥೭೧॥

ವರೋ ವರಃ ಪ್ರಾರ್ಥಿತ ಏವ ದೇಯಃ
ಪ್ರಾಗೇವ ಯೋ ತಾವದುಮಾಸಹಾಯ ।

---

ತಂದೆ, ಮಿತ್ರ, ಸಹೋದರ, ಬಂಧು, ಗುರು ಎಲ್ಲವೂ ಆಗಿರುವೆ. ಗಿರಿಜಾರಮಣನಾದ ನೀಲಕಂಠನೇ! ಈಗ ನೀನೇ ನನಗೆ ರಕ್ಷಕನಾಗಿರುವೆ. ॥೬೯॥

ಪರಮೇಶ್ವರನೇ! ನೀನು ಆ ಭಯಂಕರವಾದ ಕಾಲಕೂಟ ವಿಷವನ್ನು ಪಾನಮಾಡುವಾಗ ಸ್ವಲ್ಪವೂ ಹಿಂಜರಿಯಲಿಲ್ಲ. ಅಂದಮೇಲೆ ನಿನ್ನ ಧೈರ್ಯ ಗಾಂಭೀರ್ಯಗಳು ಎಷ್ಟು ಮಹತ್ತರಗಳಾಗಿವೆ? ನೀನು ಹಿಂದೆ ಆ ಉದ್ಧತನಾದ ಮನ್ಮಥನನ್ನು ಸಂಹರಿಸಿ ಎಷ್ಟು ಲೋಕಕ್ಕೆ ಉಪಕಾರ ಮಾಡಿದೆ! ಆಹಾ! ನೀನೇ ಈ ಪ್ರಪಂಚದ ಪ್ರಲಯಕ್ಕೆ ಕಾರಣನಾಗಿರುವೆಯಲ್ಲವೇ? ನೀನು ಮಹಾದೇವನಿದ್ದೀಯೆ. ನಿನ್ನನ್ನೇ ಇಂದು ರಕ್ಷಕನೆಂದು ನಾನು ಮರೆ ಹೊಕ್ಕಿದ್ದೇನೆ. ॥೭೦॥

ಮನುಷ್ಯನು ಎಂಥ ಹತಭಾಗ್ಯನೇ ಇರಲಿ ಅಥವಾ ದೀನನೇ ಆಗಿರಲಿ, ಆ ನಿನ್ನ ಪುಣ್ಯನಾಮವೆಂಬ ಅಮೃತವನ್ನು ಪಾನಮಾಡಿದರೆ ಆತನು ತನ್ನ ಸಕಲ ದುರವಸ್ಥೆಗಳನ್ನೂ ಕಳೆದುಕೊಂಡು ಸ್ವರ್ಗವನ್ನು ಸೇರುತ್ತಾನೆ. ಅನಂತರದಲ್ಲಿ ತಾನು ಆ ಪರಮಪದವನ್ನೂ ಪಡೆಯುತ್ತಾನೆ. ಪರಮೇಶ್ವರನೇ? ನನ್ನನ್ನೂ ಆ ಸೌಭಾಗ್ಯಕ್ಕೆ ಪಾತ್ರಳಾಗುವಂತೆ ದಯೆಯಿಟ್ಟು ಅನುಗ್ರಹಿಸು. ॥೭೧॥

ಎಂಥ ಉತ್ಕೃಷ್ಟವಾದ ವರವನ್ನು ಕೇಳಿದರೂ ನೀನು ಕೂಡಲೇ ಕೊಡುವವನಿದ್ದೀಯೆ. ಆದ್ದರಿಂದಲೇ ಆ ನರ್ಮದೆಗೆ ಅಂಥ ವರವನ್ನು ನೀನು ಅನುಗ್ರಹಿ

ದತ್ತೋ ವರಶ್ಯರ್ನುದ ನರ್ಮದಾಯೈ
ಸಾ ಶರ್ಮದಾ ಸರ್ವಸುರಾಸುರಾಣಾಂ ॥೭೨॥

ಅತಃಪರಂ ತಾದೃಶ ಏವ ಜೇಯೋ
ವರೋ ನ ಲೋಕೇಷು ತಥಾಚ ತಸ್ಯ ।
ನ ಪ್ರಾರ್ಥನೀಯತ್ವಮತೋ ವರೋ ಮೇ
ದೇಯಸ್ತದನ್ಯೋ ಮಮ ಮುಕ್ತಿಹೇತುಃ ॥೭೩॥

ಜಲಸ್ವರೂಪೇಣ ಮಮಾಸ್ತು ಕಾಶ್ಯಾಂ
ವಾಸೋ ಮದೀಯೋ ನ ಜಲೇ ನ ನಿತ್ಯಂ ।
ತವಾಭಿಷೇಕೋಽಸ್ತು ಕೃಪೈಕಸಿಂಧೋ
ಶ್ರೀವಿಶ್ವನಾಥಾತ್ಮಕ ಲಿಂಗರೂಪ ॥೭೪॥

ಲಿಂಗಸ್ವರೂಪೇಣ ಮಹೇಶ ಕಾಶ್ಯಾ
ಮವಸ್ಥಿತಿಸ್ತತ್ರ ಮಿತಾ ಮಯಾತಃ ।
ತತ್ರಾಭಿಷೇಕೋಽಸ್ತು ಜಲೈರ್ಮದೀಯೈಃ
ಅಯಂ ವರೋ ಮೇ ವರ ಏವ ಶಂಭೋ ॥೭೫॥

---

ಸಿದೆ. ಆ ವರದ ಪ್ರಭಾವದಿಂದಲೇ ಈಗ ನರ್ಮದೆಯು ಸಕಲ ಸುರಾಸುರರಿಗೂ ಕಲ್ಯಾಣಕಾರಿಣಿಯಾದಳು. ॥೭೨॥

ಆ ರೇವಾನದಿಗೆ ದಯಪಾಲಿಸಿದಂಥ ವರವನ್ನೇ ನನಗೂ ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತೇನೆ. ಅಂತಹ ಉತ್ಕೃಷ್ಟವಾದ ವರವು ಪ್ರಪಂಚದಲ್ಲಿ ಯಾರಿಗೂ ದೊರಕುವುದಿಲ್ಲ. ಆದರೂ ಅವಶ್ಯವಾಗಿ ಆ ವರವನ್ನೇ ಪ್ರಾರ್ಥಿಸಬೇಕಾಗಿದೆ. ಆದುದರಿಂದ ನನಗೂ ಮುಕ್ತಿಯು ದೊರೆಯುವಂಥ ಉತ್ಕೃಷ್ಟವಾದ ವರವನ್ನೇ ಕೊಡಬೇಕು. ॥೭೩॥

ಕಾಶೀ ಕ್ಷೇತ್ರದಲ್ಲಿ ನಾನು ಸದಾ ಜಲಸ್ವರೂಪದಿಂದ ವಾಸಮಾಡುತ್ತಿರುವಂತೆ ವರವನ್ನು ಕೊಡು. ಶ್ರೀ ವಿಶ್ವನಾಥ ಲಿಂಗಕ್ಕೆ ನನ್ನ ಜಲದಿಂದಲೇ ನಿತ್ಯವೂ ಅಭಿಷೇಕವಾಗುತ್ತಿರುವಂತೆಯೂ ವರವನ್ನು ಅನುಗ್ರಹಿಸು. ॥೭೪॥

ಕಾಶೀಕ್ಷೇತ್ರದಲ್ಲಿ ನೀನು ಲಿಂಗಸ್ವರೂಪದಿಂದ ಸದಾ ಸನ್ನಿಹಿತನಾಗಿರುವೆ ಎಂದು ವೇದ ಪ್ರಮಾಣಗಳಿಂದ ತಿಳಿದು ಬರುವುದು. ಆದುದರಿಂದ ಅಲ್ಲಿರುವ

ಏತಸ್ಮಾದಧಿಕೋಽ ವರೋಽಪಿ ನ ವರೋ ಯೇನೈವ ಕಾಶ್ಯಾಂ ಸ್ಥಿತಿಂ
ಮುಕ್ತ್ಯೈ ಸರ್ವಮತಾ ಮಮಾಪಿ ಸಹಸಾ ತಸ್ಮಾದ್ವರೋಽಯಂ ವರಃ ।
ಏವಂ ದೇಹಿ ಮಮಾಧುನಾ ವರಮುಮಾಕಾಂತಾಯಮೇವ ಪ್ರಿಯಃ
ಸರ್ವೇಷಾಮಿತಿ ರೇವಯಾಪಿ ನ ವರಃ ಸೋಽಯಂ ಖಲು ಪ್ರಾರ್ಥ್ಯತೇ॥೭೬॥

ತತ್ಪ್ರಾರ್ಥಿತಸ್ತು ಸ ವರೋ ವರ ಏವ ನೂನಂ
ಸರ್ವೋಪಕಾರಕತಯಾ ಪ್ರಥಿತಃ ಪೃಥಿವ್ಯಾಂ ।
ಸ್ವರ್ಗೇಽಪಿ ಸತ್ಯಭವನೇಽಪಿ ತತಸ್ತದನ್ಯೋ
ದೇಯೋ ವರೋ ಭವತಿ ತೇ ಸ ತು ದುರ್ಲಭೋಽಪಿ ॥೭೭॥

ಯಃ ಕಾಶೀನಗರೇ ಮದಂಬುಷು ಮುಹುಃ ಸ್ನಾತ್ವಾ ಕೃತೋದ್ಧೂಲನಃ
ಸರ್ವಾಂಗೇ ಭಸಿತತ್ರಿಪುಂಡ್ರರುಚಿರೋ ರುದ್ರಾಕ್ಷಮಾಲಾವೃತಃ ।

---

ಲಿಂಗಕ್ಕೆ ನನ್ನ ಜಲದಿಂದಲೇ ನಿತ್ಯವೂ ಅಭಿಷೇಕವಾಗುವಂತೆ ಅನುಗ್ರಹಿಸು. ಇದೇ ನನಗೆ ದೊಡ್ಡ ವರ ಎಂದು ನಾನು ಭಾವಿಸಿದ್ದೇನೆ. ||೭೫||

ಇದಕ್ಕಿಂತಲೂ ಹೆಚ್ಚಾಗಿ ನಾನು ಕೇಳಿಕೊಳ್ಳಬೇಕಾದ ವರವು ಮತ್ತೆ ಯಾವುದಿರುವುದು? ಏತಕ್ಕೆಂದರೆ ಈಗ ನಾನು ಕೇಳಿಕೊಂಡಿರುವ ವರದಿಂದ ನನಗೆ ಸದಾ ಕಾಶೀಕ್ಷೇತ್ರದಲ್ಲಿ ವಾಸಮಾಡುವ ಲಾಭವು ದೊರೆಯುವುದು. ಕಾಶಿವಾಸದಿಂದ ಮುಕ್ತಿಯು ದೊರೆಯುವುದೆಂದು ಪ್ರಮಾಣ ಸಿದ್ಧವಾಗಿದೆ. ಅಂದಮೇಲೆ ನನಗೂ ಮುಕ್ತಿ ಪ್ರಾಪ್ತಿಯಾಗುವುದು. ಆದುದರಿಂದ ಇದೇ ವರವು ನನಗೆ ಇಷ್ಟವಾದುದು. ಈ ವರವು ಸರ್ವರಿಗೂ ಅಪೇಕ್ಷಿತವಾದದ್ದೇ ಇರುವುದು. ಹಾಗಾದರೂ ಈ ವರವನ್ನು ರೇವೆಯು ಕೇಳಿಲ್ಲತಾನೆ? ||೭೬||

ರೇವೆಯು ಕೇಳಿಕೊಂಡ ವರವು ಸರ್ವಥಾ ಶ್ರೇಷ್ಠವಾದುದು. ಏತಕ್ಕೆಂದರೆ ಆಕೆಯ ವರದಿಂದ ಪ್ರಪಂಚದ ಜನರಿಗೆಲ್ಲಾ ಬಹಳ ಉಪಕಾರವಾಗುವುದು. ಹೀಗೆ ಕೇವಲ ಪರೋಪಕಾರದ ದೃಷ್ಟಿಯಿಂದ ಕೇಳಿದುದು ಶ್ರೇಷ್ಠವಲ್ಲದೇ ಏನು? ಇಂಥ ವರವು ಸ್ವರ್ಗದಲ್ಲಾಗಲಿ ಬ್ರಹ್ಮಲೋಕದಲ್ಲಾಗಲಿ ಖಂಡಿತ ದೊರೆಯುವುದಿಲ್ಲ. ಆ ವರವು ದುರ್ಲಭ, ಹಾಗೆಯೇ ಅತ್ಯಂತ ಮಹತ್ತರವೂ ಆದುದು. ||೭೭||

ಯಾವ ಮನುಷ್ಯನು ಕಾಶಿಕ್ಷೇತ್ರದಲ್ಲಿ ವಾಸಮಾಡಿ, ನನ್ನ ನೀರಿನಲ್ಲಿ ಸ್ನಾನವನ್ನು ಮಾಡಿ ಮೈಗೆ ಭಸ್ಮರುದ್ರಾಕ್ಷಿಗಳನ್ನು ಮತ್ತು ಭಸ್ಮತ್ರಿಪುಂಡ್ರವನ್ನೂ ಧರಿಸಿ

ಮನ್ನೀರೈರಭಿಷಿಚ್ಯ ಲಿಂಗಮಮಲಂ ವಿಶ್ವೇಶ್ವರಾಖ್ಯಂ ಸತಃ
ತ್ರಿಃ ಪೀತ್ವಾತ್ವಭಿಷೇಕವಾರಿ ಸ ಭವ ಪ್ರಾಯಃ ಪ್ರಿಯೋಽಸ್ತು ಪ್ರಭೋ ॥೭೮॥

ಕಲ್ಪಾಂತೇ ಮಮ ಮುಕ್ತಿರಸ್ತು ಭಗವನ್ ತ್ವನ್ನಾಮಸಂಕೀರ್ತನೈಃ
ತಾವಜ್ಜೀವನಮಸ್ತು ವಸ್ತುವಿಷಯೇ ಮಾಸ್ತು ಸ್ಪೃಹಾ ಮಾಸ್ತು ಮೇ ।
ಕಾಶೀವಾಸರತಿಸ್ಸಿತೇಽಪಿ ಭಸಿತೇ ರುದ್ರಾಕ್ಷಮಾಲಾಸ್ವಪಿ
ಶ್ರೀವಿಶ್ವೇಶ್ವರತುಂಗಲಿಂಗಭಜನೇ ಪ್ರೀತಿರ್ನಮಾಸ್ತು ಪ್ರಭೋ ॥೭೯॥

ಇತ್ಯುಕ್ತ್ವಾ ಪ್ರಣತಾಂ ಗಂಗಾಂ ತಥಾಸ್ತ್ವಿತಿ ಮಹೇಶ್ವರಃ ।
ತತ್ರೈವಾಂತರ್ದಧೇ ಸಾಂಬಸ್ಸರ್ವದೇವಗಣಸ್ತುತಃ ॥೮೦॥

ಗೋದಾವರೀಪ್ರಮುಖದೇವನದೀಭಿರೇವಂ
ಸಂಪ್ರಾರ್ಥಿತೋಽಪಿ ಸ ವರಂ ಪರಮುಕ್ತಿರೂಪಂ ।
ದತ್ವಾ ಮುಹುರ್ಮುಹುರಭಿಷ್ಟುತ ಏವ ತಾಭಿಃ
ಸಂಪ್ರಾಪ ಸೌಖ್ಯನಿಲಯಂ ನಿಲಯಂ ಸ್ವಕೀಯಂ ॥೮೧॥

ಕೊಂಡು ನನ್ನ ನೀರಿನಿಂದ ಶ್ರೀವಿಶ್ವನಾಥ ಲಿಂಗಕ್ಕೆ ಅಭಿಷೇಚಿಸಿ, ಆ ತೀರ್ಥವನ್ನು ಮೂರು ಸಲ ಪ್ರಾಶನಮಾಡುವನೋ, ಆತನು ನಿನ್ನ ಅತ್ಯಂತ ಪ್ರೀತಿಗೆ ಪಾತ್ರನಾಗಬೇಕು. ॥೭೮॥

ಪರಮೇಶ್ವರ! ನನಗೆ ಈ ಕಲ್ಪಾಂತದಲ್ಲಿ ಮುಕ್ತಿಯು ಲಭಿಸುವಂತೆ ಅನುಗ್ರಹಿಸು. ಅಲ್ಲಿನವರೆಗೆ ನಾನು ಸದಾ ಜೀವಂತಳಾಗಿ ನಿನ್ನನ್ನೇ ಭಜಿಸುತ್ತಾ ಕಾಲಹರಣ ಮಾಡುತ್ತಿರುವೆನು. ನನಗೆ ಯಾವ ವಿಷಯ ಸುಖದಲ್ಲಿಯೂ ಮೋಹವುಂಟಾಗುವುದು ಬೇಡ. ಕಾಶೀಕ್ಷೇತ್ರವಾಸದಲ್ಲಿ ಮತ್ತು ಭಸ್ಮರುದ್ರಾಕ್ಷಮಾಲೆಗಳಲ್ಲಿ ಆಸಕ್ತಿಯೂ, ಶ್ರೀವಿಶ್ವನಾಥಲಿಂಗಕ್ಕೆ ಸದಾ ಆರಾಧಿಸುವ ಪ್ರೀತಿಯೂ, ನನಗೆ ದೃಢವಾಗಿ, ನಿಶ್ಚಲವಾಗಿರುವಂತೆ ವರವನ್ನು ಕೊಡು." ॥೭೯॥

ಈ ಪ್ರಕಾರವಾಗಿ ಗಂಗೆಯು ವರವನ್ನು ಕೇಳಿಕೊಂಡು ನಮಸ್ಕರಿಸಲು ಪರಮೇಶ್ವರನು 'ತಥಾಸ್ತು' ಎಂದು ವರವನ್ನು ಕೊಟ್ಟು, ದೇವತೆಗಳು ಸ್ತುತಿಸುತ್ತಿದ್ದಂತೆಯೇ ಪಾರ್ವತೀ ಸಹಿತನಾಗಿ ಅಂತರ್ಧಾನವನ್ನೈದಿದನು. ॥೮೦॥

ಇದೇ ಪ್ರಕಾರವಾಗಿ ಎಲ್ಲಾ ದೇವನದಿಗಳಿಗೂ ಪರಮೇಶ್ವರನು ಪ್ರತ್ಯಕ್ಷನಾಗಿ ಅವರವರು ಕೇಳಿಕೊಂಡ ಮುಕ್ತಿಪ್ರಾಪ್ತಿರೂಪವಾದ ವರವನ್ನು ಎಲ್ಲರಿಗೂ ಕೊಟ್ಟು

ತಸ್ಮಾತ್ಸಾಯಂ ನರ್ಮದಾ ಶರ್ಮದಾ ಸ್ಯಾತ್
ಸರ್ವೇಷಾಂ ನಃ ಪ್ರಾಣಿನಾಂ ಮುಕ್ತಿಹೇತುಃ ।
ಯನ್ನೀರಂ ಯಸ್ತ್ರಿಃ ಪಿಬೇತ್ತಸ್ಯ ತಾವತ್
ನಾಪಾರ್ಣೈರ್ವಾ ಪಾಪತಾಪೈರ್ವಿಭೀತಿಃ ॥೮೨॥

ಸೇಯಂ ರೇವಾ ಸೇವಿತಾ ಯೇನ ಲಿಂಗಂ
ತಸ್ಯಾವಶ್ಯಂ ಮುಕ್ತಿರೇವೇತಿ ಮನ್ಯೇ ।
ಧನ್ಯಾ ಮಾನ್ಯಾ ಶರ್ಮದಾ ನರ್ಮದೇಯಂ
ಕಾ ವಾ ತುಲ್ಯಾ ರೇವಯಾ ವಾ ನದೀ ಸ್ಯಾತ್ ॥೮೩॥

ರೇವಾತೀರಂ ಪ್ರಾರ್ಥಯತ್ಯೇವ ಗಂಗಾ
ತೀರೋತ್ಪನ್ನೋ ಮುಕ್ತಿಕಾಮಃ ಪ್ರಕಾಮಂ ।
ರೇವಾತೀರೇ ಯಸ್ತಪಸ್ತತ್ತಪಃ ಸ್ಯಾತ್
ಮುಕ್ತ್ಯೈ ರೇವಾಲಿಂಗರೂಪಾ ವಿರೂಪಾ ॥೮೪॥

ಆ ನದಿಗಳು ಸ್ತುತಿಸುತ್ತಿದ್ದಂತೆಯೇ ಪರಮ ಸೌಖ್ಯನಿಧಿಯಾದ ಕೈಲಾಸವನ್ನು ಸೇರಿದನು. ॥೮೧॥

ಆದುದರಿಂದ ಸಾಯಂಕಾಲದಲ್ಲಿ ನರ್ಮದಾ ನದಿಯನ್ನು ಸೇವಿಸಿದರೆ ಸಕಲ ಸೌಭಾಗ್ಯಗಳೂ ಪ್ರಾಪ್ತವಾಗುವುವಲ್ಲದೇ ಮೋಕ್ಷವೂ ಲಭಿಸುವುದು. ನಮ್ಮೆಲ್ಲರಿಗೂ ಸುಲಭವಾಗಿ ಸುಖವನ್ನು ಸಂಪಾದಿಸಲು ಇದೇ ನದಿಯ ಸೇವನೆಯು ಸುಲಭವಾಗಿರುವುದು. ಈ ರೇವಾ ನದಿಯ ನೀರನ್ನು ಮೂರು ಸಲ ಪ್ರಾಶನಮಾಡಿದರೆ ಸಮಸ್ತ ಪಾಪಗಳ ಭೀತಿಯೂ ನಿವೃತ್ತವಾಗುವುದು. ॥೮೨॥

ಈ ನರ್ಮದೆಯೇ ಧನ್ಯಳು ಮತ್ತು ಪೂಜ್ಯಳು. ಈಕೆಯು ಸಕಲ ಸುಖವನ್ನೂ ಉಂಟುಮಾಡುವವಳು. ಈ ರೇವಾನದಿಯನ್ನು ಸೇವಿಸಿ ಯಾರು ಶಿವಲಿಂಗವನ್ನು ಆರಾಧಿಸುವರೋ ಅವರಿಗೆ ನಿಸ್ಸಂಶಯವಾಗಿಯೂ ಮುಕ್ತಿಯು ಲಭಿಸುವುದು. ಇಂಥ ಪುಣ್ಯತಮವಾದ ನದಿಗೆ ಸದೃಶವಾದ ಬೇರೆ ನದಿಯು ಯಾವುದಿರುವುದು? ॥೮೩॥

ಗಂಗಾನದೀ ತೀರದಲ್ಲಿ ಹುಟ್ಟಿದವನಾಗಿದ್ದರೂ ಮುಮುಕ್ಷುವಾದವನು ಈ ರೇವಾನದೀ ತೀರದಲ್ಲಿ ವಾಸಿಸಬೇಕೆಂದು ಅಪೇಕ್ಷೆಪಡುತ್ತಾನೆ. ಏಕೆಂದರೆ ಈ ತೀರ

ಪಾಪಾನಿ ಸಂಹರತಿ ನಿರ್ಮಲನರ್ಮದಾಂಭಃ
ಸಂಸೇವಿತಂ ಸಕೃದಪಾರಸುಖಂ ತನೋತಿ ।
ತಚ್ಛ್ರೀಮಹೇಶನಿಹಿತಾಂ ವಿತನೋತಿ ಮುಕ್ತಿಂ
ರೇವಾಜಲೇನ ಸದೃಶಂ ಕಿಮಿಹಾಸ್ತಿ ಲೋಕೇ ॥೮೫॥

ಇತ್ಯಾಕರ್ಣ್ಯ ವಿಧೇರ್ವಾಕ್ಯಂ ಸ ರಾಜಾ ವೀತಮತ್ಸರಃ ।
ಬಾಲಕಸ್ಯಾಸ್ಯ ವೃತ್ತಾಂತಂ ಪಪ್ರಚ್ಛ ನೃಪಸತ್ತಮಃ ॥೮೬॥

॥ ರಾಜೋವಾಚ ॥

ಕೋಽಯಂ ಬಾಲಃ ಕಿಮೇತಸ್ಯ ಜನಕೋಽಸ್ತಿ ನ ವಾ ವದ ।
ಮಾತಾ ವಾ ಕುತ್ರ ಸಂಜಾತಃ ಕಥಮತ್ರಾಗತೋ ವಿಧೇ ॥೮೭॥

ದಲ್ಲಿ ತಪಸ್ಸನ್ನು ಮಾಡಿದರೆ ರೇವಾಲಿಂಗರೂಪಿಯಾದ ಶಂಕರನು ಒಡನೆಯೇ ಮುಕ್ತಿಯನ್ನು ಕೊಡುತ್ತಾನೆ. ॥೮೪॥

ಈ ರೇವಾನದಿಯ ನೀರನ್ನು ಒಂದೇ ಸಲ ಸೇವಿಸಿದರೂ ಸಕಲ ಪಾಪಗಳೂ ನಾಶವಾಗುವುವು. ಅಲ್ಲದೇ ಅನಂತ ಸುಖಗಳೂ ಪ್ರಾಪ್ತವಾಗುತ್ತವೆ. ಅಂತ್ಯಕಾಲದಲ್ಲಿ ಆ ಪರಮೇಶ್ವರನ ಆಜ್ಞಾನುಸಾರವಾಗಿ ಈ ಜಲವೇ ಮುಕ್ತಿಯನ್ನೂ ಒದಗಿಸುತ್ತದೆ. ಇಂಥ ಈ ರೇವಾಜಲಕ್ಕೆ ಸದೃಶವಾದ ಜಲವು ಮತ್ತೆ ಬೇರೆ ಈ ಪ್ರಪಂಚದಲ್ಲಿ ಯಾವುದಿರುವುದು ? ॥೮೫॥

ಈ ರೀತಿಯಾಗಿ ಬ್ರಹ್ಮನು ರೇವಾನದಿಯ ಮಹಾತ್ಮ್ಯೆಯನ್ನು ವಿವರಿಸಲು ಆ ರಾಜನು ಅತ್ಯಂತ ಆನಂದಪಟ್ಟವನಾಗಿ ಮತ್ತೆ ಆ ಬಾಲಕನ ವೃತ್ತಾಂತವನ್ನು ದಯೆಯಿಂದ ಹೇಳಬೇಕೆಂದು ಕೇಳಿದನು. ॥೮೬॥

"ಬ್ರಹ್ಮನೇ! ಈ ಬಾಲಕನು ಯಾರು ? ಈತನಿಗೆ ತಂದೆ ಯಾರು ? ಅವರು ಈಗ ಎಲ್ಲಿರುವರು ? ತಾಯಿಯೆಲ್ಲಿರುವಳು ? ಈತನು ಎಲ್ಲಿ ಜನಿಸಿದನು ? ಇಲ್ಲಿಗೇತಕ್ಕೆ ಬಂದಿದ್ದಾನೆ ? ॥೮೭॥

ಕಥಮುಸ್ಯಾಮುವಸ್ಥಾಯಾಂ ಶಿವನಾಮುಜಪೋತ್ಸುಕಃ ।
ಶಿವಾರ್ಚನರತೋ ಧೀರೋ ನಿರಾಹಾರೋ ಗತಸ್ಪೃಹಃ ॥೮೮॥

ಅಹೋ ಕಿಮಿದಮಾಶ್ಚರ್ಯಂ ದೃಷ್ಟಪೂರ್ವಮಿದಂ ತು ನ ।
ಕಥಂ ಗಾಯತಿ ನಾಮಾನಿ ಮಧುರಾಣಿ ಮನೋಹರಃ ॥೮೯॥

ಮನೋಹರಾಣಿ ದಿವ್ಯಾನಿ ಮಹಾದೇವಸ್ಯ ಭೂರಿಶಃ ।
ನಾಮಾನಿ ಮಧುರಾಣ್ಯತ್ರ ಗಾಯನ್ನೃತ್ಯತಿ ಪಶ್ಯತಾಂ ॥೯೦॥

ಈದೃಶಃ ಕಥಮುತ್ಸಾಹಸ್ಸಮುತ್ಪನ್ನಶ್ಚತುರ್ಮುಖ ।
ಅಸ್ಯ ಬಾಲಸ್ಯ ಮಾಹಾತ್ಮ್ಯಂ ವದ ಸರ್ವಂ ವಿಶೇಷತಃ ॥೯೧॥

॥ ಬ್ರಹ್ಮೋವಾಚ ॥

ಚಿತ್ರಂ ಚಿತ್ರರಥೈತಸ್ಯ ಸ್ವರೂಪಂ ಶೃಣು ಸಾದರಂ ।
ಚರಿತ್ರೇಣ ಪವಿತ್ರಸ್ಯ ಪವಿತ್ರಂ ಗಾತ್ರಮಸ್ಯ ತು ॥೯೨॥

---

ಈತನಿಗೆ ಇಷ್ಟು ಚಿಕ್ಕವಯಸ್ಸಿನಲ್ಲಿ ಶಿವನಾಮಗಳನ್ನು ಜಪಿಸಬೇಕೆಂಬ ಬುದ್ಧಿಯು ಹೇಗೆ ಹುಟ್ಟಿತು ? ಈ ರೀತಿಯಾಗಿ ನಿರಾಹಾರಿಯಾಗಿದ್ದು ಚಾಪಲ್ಯ ವೇನೂ ಇಲ್ಲದೇ ಶಿವಾರ್ಚನೆಯಲ್ಲಿ ಈತನಿಗೆ ಭಕ್ತಿಯು ಹೇಗೆ ಉಂಟಾಯಿತು ?॥೮೮॥

ಆಹಾ ! ಏನು ಆಶ್ಚರ್ಯ. ಇಂಥಾ ಆಶ್ಚರ್ಯವನ್ನು ಎಲ್ಲಿಯೂ ನೋಡಿರ ಲಿಲ್ಲ. ಆತನು ಎಷ್ಟು ಇಂಪಾಗಿಯೂ ಮನೋಹರವಾಗಿಯೂ ಶಿವನಾಮಗಳನ್ನು ಹಾಡುತ್ತಾನೆ ? ॥೮೯॥

ಈ ಬಾಲಕನು ಎಷ್ಟು ಮಧುರವಾಗಿರುವ ಲೋಕೋತ್ತರವಾದ ಶಿವನಾಮ ಗಳನ್ನು ಕರ್ಣಾನಂದವಾಗುವಂತೆ ಹಾಡುತ್ತಿದ್ದಾನೆ ? ಎದುರಿಗೆ ಎಷ್ಟೇ ಜನರಿದ್ದರೂ ಅವರ ಕಡೆಗೆ ಸ್ವಲ್ಪವೂ ಗಮನ ಕೊಡದೆ ಕೇವಲ ತನ್ಮಯತೆಯಿಂದ ನಾಟ್ಯವಾಡು ತ್ತಿದ್ದಾನೆ. ॥೯೦॥

ಚತುರ್ಮುಖನೇ ! ಇಷ್ಟು ಚಿಕ್ಕವಯಸ್ಸಿನಲ್ಲಿ ಈ ಬಾಲಕನಿಗೆ ಹೇಗೆ ಶಿವಾ ರಾಧನೆಯಲ್ಲಿ ಉತ್ಸಾಹವುಂಟಾಯಿತು ? ಈತನ ಮಾಹಾತ್ಮ್ಯ ಏನಿರುವುದು ? ಇವೆಲ್ಲವನ್ನೂ ವಿಸ್ತಾರವಾಗಿ ನನಗೆ ದಯೆಯಿಟ್ಟು ಹೇಳು" ಎನ್ನಲು ಆಗ ಬ್ರಹ್ಮನು ॥೯೧॥

"ಎಲೈ ಚಿತ್ರರಥನೇ ! ಈ ಬಾಲಕನ ವೃತ್ತಾಂತವು ಅತ್ಯಂತ ವಿಚಿತ್ರವಾಗಿದೆ.

ಅಯಂ ಪೂರ್ವಭವೇ ರಾಜಾ ಮಹಾಪಾತಕಪರ್ವತಃ ।
ನ ಚೈತತ್ಪಾಪಗಣನಾ ಕರ್ತುಮೇವ ಹಿ ಶಕ್ಯತೇ ॥೯೩॥

ಏತಾದೃಶೋಽಪಿ ನರಕಾರ್ಣವಮಾರ್ಗಮಧ್ಯ
ಸರ್ಪೋದರೇಷು ಗತ ಏವ ವಿಷಾರ್ದಿತೋಽಪಿ ।
ನಿಷ್ಕಾಸಿತಶ್ಚ ಗಣದಂತನಿಘಾತಚೂರ್ಣಃ
ತದ್ವಹ್ನಿಕುಂಡಪತಿತಃ ಪರಿತಃ ಪ್ರವೃತ್ತಃ ॥೯೪॥

ಆನೀಲವೃಶ್ಚಿಕಗಣೈರಪಿ ದಷ್ಟ ಏವ
ತದ್ವೇದನಾರ್ಣವನಿಮಗ್ನಶರೀರಯುಕ್ತಃ ।
ತಪ್ತೇಷು ವಹ್ನಿಕುಹರೇಷು ಪುನಃ ಪ್ರತಪ್ತ
ಕುಲ್ಯಾಪ್ರವಾಹಪತಿತಃ ಪುನರುತ್ಥಿತೋಽಪಿ ॥೯೫॥

ಸಂತಾಡಿತೋಽಪ್ಯನಲತಪ್ತಸಭಿಂಡಿಪಾಲ
ಲೋಹೋರುದಂಡಕಠಿಣಾಗ್ರವಿಘಟ್ಟಿತೋಽಪಿ ।

---

ಈಗ ಈತನೇನೋ ಶಿವನನ್ನು ಆರಾಧಿಸುತ್ತಿರುವನು. ಆದ್ದರಿಂದ ಈಗ ಈತನ ಶರೀರ ಪವಿತ್ರವಾಗಿರುತ್ತದೆ. ಆದರೆ ಹೇಳುತ್ತೇನೆ ಕೇಳು" ಎಂದು ಬಾಲಕನ ವೃತ್ತಾಂತವನ್ನು ಮುಂದುವರಿಸಿದನು. ||೯೨||

"ಈತನು ಹಿಂದಿನ ಜನ್ಮದಲ್ಲಿ ರಾಜನಾಗಿದ್ದನು. ಆಗ ಈತನು ಮಾಡಿದ ಪಾಪಕ್ಕೆ ಲೆಕ್ಕವಿಲ್ಲ. ಅದನ್ನು ಎಣಿಸುವುದಕ್ಕೂ ಸಾಧ್ಯವಿಲ್ಲ. ಸಾಕ್ಷಾತ್ ಪಾಪದ ರಾಶಿಯೇ ಆಗಿದ್ದನು. ||೯೩||

ಈತನು ಪರಮ ಪಾಪಿಯಾಗಿದ್ದುದರಿಂದ ನರಕದಲ್ಲಿ ಅನೇಕ ಘೋರ ಯಾತನೆಗಳನ್ನೂ ಅನುಭವಿಸಿ ಸರ್ಪಗಳಿಂದ ಕಚ್ಚಿಸಿಕೊಂಡು ವಿಷವ್ಯಾಪನೆಯಿಂದ ಅತ್ಯಂತ ಪೀಡಿತನಾಗಿದ್ದನು. ಯಮದೂತರ ಹಲ್ಲುಮಧ್ಯದಲ್ಲಿ ಸಿಕ್ಕಿ ಕಡಿಸಿಕೊಂಡು, ಅಲ್ಲಿಂದಿಲ್ಲಿಗೆ ಓಡಿಸಲ್ಪಟ್ಟವನಾಗಿ ಅಗ್ನಿನರಕದಲ್ಲಿ ಬಿದ್ದಿದ್ದನು. ||೯೪||

ವಿಷಗಳಿಂದ ತುಂಬಿ ಮಿರಿಮಿರಿ ಮಿಂಚುವ ಚೇಳುಗಳಿಂದ ಈತನು ಕಚ್ಚಿಸಿಕೊಂಡು ಆ ಘೋರಯಾತನೆಯನ್ನು ಅನುಭವಿಸುತ್ತಲೇ ಬೆಂಕಿಯ ಪೊದೆಯಲ್ಲಿ ಬಿದ್ದನು. ಪುನಃ ಅಲ್ಲಿಂದ ಕಾದು ಮರಳುತ್ತಿರುವ ಪ್ರವಾಹದಲ್ಲಿ ಬಿದ್ದನು. ||೯೫||

ಕೆಂಪಗೆ ಕಾಯಿಸಿದ ಭಿಂಡಿಪಾಲ, ಲೋಹೋದರ, ಮುಂತಾದ ನಿಶಿತವಾದ ಆಯುಧಗಳಿಂದ ಏಟುಗಳನ್ನು ತಿನ್ನುತ್ತಾ ವ್ಯಥೆಪಡುತ್ತಿದ್ದನು. ಆದರೆ ಪುಣ್ಯದಿಂದ

ಏತಾವೃಶೋಽಪಿ ಯಮಮಾರ್ಗಮಹಾವ್ಯಥಾಭಿ
ರಾತ್ತರ್ಗಿರ್ತಿವಾನಯನಗೋಚರತಾಂ ಗತೋಽಸೌ ॥೯೩॥

ಪಶ್ಚಾದಯಂ ತು ಯಮಯಾತನಯಾ ವಿಮುಕ್ತಃ
ಕಾಲಾರ್ಚಿತಶ್ಶಿವಗಣೈಸ್ಸಹ ಮಾಮವಾಪ ।
ಪಶ್ಚಾನ್ಮಯಾಪಿ ಬಹುಧೈವ ಸಮರ್ಚಿತೋಽಯಂ
ಪ್ರೀತ್ಯಾ ಮಯಾ ಸಹ ಮದಾಲಯಸನ್ನಿವಿಷ್ಟಃ ॥೯೭॥

ಮಲ್ಲೋಕವಾಸಿಭಿರಯಂ ಸಹ ಸರ್ವದಾಪಿ
ಸ್ಥಿತ್ವಾ ಶಿವಾರ್ಚಕಕಥಾಶ್ರವಣೇನ ಪೂತಃ ।
ಲಿಂಗಾನಿ ಪಶ್ಯತಿ ಮುಹುರ್ಮುಹುರಾದರೇಣ
ತಾನ್ಯರ್ಚಯತ್ಯನುದಿನಂ ಚ ಮಯಾ ಸಹಾಯಂ ॥೯೮॥

ಹಾರಂ ತತ್ರ ಸುಧೋಪಹಾರಮಸಕೃತ್ಪೀತ್ವಾ ಸ್ಥಿತೋ ಭೂಪತಿಃ
ಯೋಗೇನಾಯಮಯೋನಿಜೇನ ನೃಪತೇ ರೇವೇನ ರೇವಾಂ ಗತಃ ।

ಈತನು ಯಾತನೆಯನ್ನು ಅನುಭವಿಸುತ್ತಿರುವಾಗಲೇ ಭಗವತಿಯಾದ ಪಾರ್ವತಿಯ ದೃಷ್ಟಿಯು ಈತನ ಮೇಲೆ ಬಿದ್ದಿತು. ಇಲ್ಲದಿದ್ದರೆ ಈತನು ಇನ್ನೂ ಎಷ್ಟು ಕಾಲ ಎಷ್ಟು ಶಿಕ್ಷೆಗಳನ್ನು ಅನುಭವಿಸುತ್ತಿದ್ದನೋ, ಯಾರು ಬಲ್ಲರು. ॥೯೬॥

ಈರೀತಿ ಮಹಾದೇವಿ ಪಾರ್ವತಿಯ ದೃಷ್ಟಿಗೆ ಬಿದ್ದುದರಿಂದ ಈತನು ಸಕಲ ಯಾತನೆಗಳಿಂದಲೂ ಬಿಡುಗಡೆ ಹೊಂದಿದನು. ಆಗ ಈತನನ್ನು ಯಮನೂ ಸಹ ಸಂಸ್ಕರಿಸಿ ಶಿವದೂತರೊಡನೆ ನನ್ನಲ್ಲಿಗೆ ಕಳುಹಿಸಿದನು. ನಾನೂ ಸಹ ಈತನಿಗೆ ತಕ್ಕಷ್ಟು ಪುರಸ್ಕಾರ ಮಾಡಿ ಪ್ರೇಮದಿಂದ ರಕ್ಷಿಸಿದೆ. ॥೯೭॥

ಈತನು ನನ್ನ ಲೋಕದಲ್ಲಿದ್ದಾಗ ನನ್ನ ಜನರೊಡನೆ ಯಾವಾಗಲೂ ಶಿವಾರ್ಚನೆಯನ್ನೇ ಮಾಡುತ್ತಿದ್ದನು. ಸದಾ ಶಿವಕಥಾ ಶ್ರವಣಮಾಡುತ್ತಿದ್ದನು. ಶಿವಲಿಂಗಗಳನ್ನು ಭಕ್ತಿಯಿಂದ ಸಂದರ್ಶಿಸುತ್ತಿದ್ದನು. ಈರೀತಿಯಾಗಿ ಬಾಲಕನು ಪವಿತ್ರಾತ್ಮನೆನಿಸಿ ನಿತ್ಯವೂ ನನ್ನೊಡನೆ ಶಿವಲಿಂಗಾರ್ಚನೆ ಮಾಡುತ್ತಿದ್ದನು. ॥೯೮॥

ನನ್ನಲ್ಲಿರುವಾಗ ಈತನು ನಿತ್ಯವೂ ಶಿವನಿವೇದಿತವಾಗಿರುವ ಆಹಾರವನ್ನು ಅಮೃತದೊಡನೆ ಭುಂಜಿಸುತ್ತಿದ್ದನು. ಅನಂತರ ಈತನು ತನ್ನ ಯೋಗಬಲದಿಂದ ಅಯೋನಿಜನಾಗಿ ಭೂಲೋಕದ ಈ ರೇವಾನದೀ ತೀರಕ್ಕೆ ಬಂದನು. ಇಲ್ಲಿ

ರೇವಾಲಿಂಗಸಮರ್ಚನೋದ್ಯತಮತಿಸ್ತೃಪ್ತಸ್ಸದಾ ಭಸ್ಮನಾ
ಪೂತಾಂಗಸ್ಸಮಲಂಕೃತಶ್ಶಿವರತೋ ರುದ್ರಾಕ್ಷಮಾಲಾಗಣೈಃ ॥೯೯॥

ಏತಚ್ಚಿತ್ರಚರಿತ್ರಮಾತ್ರಮಧುನಾ ತಾವತ್ಪವಿತ್ರಂ ಮಯಾ
ದೃಷ್ಟಾದೃಷ್ಟವಿಶೇಷಪುಣ್ಯಫಲದಂ ಕಷ್ಟಾಪಹಾರೋದ್ಯತಂ ।
ದ್ರಷ್ಟುಂ ತಾವದಿಹಾಗತಶ್ಶಿವನದೀ ದೃಷ್ಟಾ ಮಯಾ ಪುಣ್ಯತೋ
ದೃಷ್ಟೋಽಸಿ ತ್ವಮಿಹಾತಿಶಾಂಭವವರೋ ರೇವಾವಿಹಾರಾದರಃ ॥೧೦೦॥

ಸೋಽಯಂ ವೃದ್ಧಿಮುಪೇತ್ಯ ಶಾಂಕರವರೋ ರೇವಾಜಲೈಸ್ಸರ್ವದಾ
ರೇವಾಲಿಂಗಸಮರ್ಚನೇನ ಸಕಲಂ ಕಾಲಂ ನಯನ್ ಭೂಪತೇ ।
ಭೂಪಾಲತ್ವಮುಪೇತ್ಯ ಶಾಂಭವಗಣೈಸ್ಸಾಕಂ ಮಹೀಮಂಡಲೇ
ಚಂಡಾಲಾನಪಿ ಖಂಡಪರಶುಭಜನಾಸಕ್ತಾನ್ ಕರಿಷ್ಯತ್ಯಯಂ ॥೧೦೧॥

ಅಮೃತಪಾನಮಾಡಿರುವುದರಿಂದ ಹಸಿವು ಬಾಯಾರಿಕೆಗಳ ಬಾಧೆ ಇಲ್ಲದೇ ನಿತ್ಯ ತೃಪ್ತನಾಗಿ ಭಸ್ಮರುದ್ರಾಕ್ಷಿಗಳಿಂದ ಅಲಂಕರಿಸಿಕೊಂಡು, ಸರ್ವದಾ ರೇವಾನದಿಯ ಶಿವಲಿಂಗವನ್ನು ಆರಾಧಿಸುವುದರಲ್ಲಿಯೇ ತತ್ಪರನಾಗಿರುವನು. ॥೯೯॥

ಈ ಬಾಲಕನ ಪೂರ್ವಜನ್ಮದ ಕಥೆಯು ಈರೀತಿಯಾಗಿರುವುದು. ಈ ಚರಿತ್ರೆಯು ಅದ್ಭುತವಾಗಿರುವುದಲ್ಲದೇ ಪವಿತ್ರವಾಗಿಯೂ ಇದ್ದುದರಿಂದ ಇದನ್ನು ನಿನಗೆ ಹೇಳಿದ್ದೇನೆ. ಈಗ ಈ ಬಾಲಕನ ವರ್ತನೆಯು ಅನೇಕ ಪುಣ್ಯಫಲಪ್ರದವಾಗಿಯೂ ದುಃಖಪರಿಹಾರಕವಾಗಿಯೂ ಇರುವುದರಿಂದ ಈತನನ್ನು ನಾನು ನೋಡಲು ಇಲ್ಲಿಗೆ ಬಂದೆನು. ಭಾಗ್ಯವಶಾತ್ ಇಲ್ಲಿ ಶಿವನದಿಯಾದ ರೇವೆಯ ದರ್ಶನ ಲಾಭವು ದೊರೆಯಿತು. ಹಾಗೂ ಪರಮ ಶಿವಭಕ್ತನಾದ ನಿನ್ನ ದರ್ಶನವೂ ಉಂಟಾಯಿತು. ॥೧೦೦॥

ಈ ಬಾಲಕನು ಈಗ ಶಿವಾರಾಧನೆಯಿಂದ ಉನ್ನತಿಯನ್ನು ಹೊಂದಿದ್ದಾನೆ. ಈ ಶಿವಭಕ್ತ ಶ್ರೇಷ್ಠನು ಸರ್ವದಾ ರೇವಾನದಿಯ ಜಲದಿಂದ ರೇವಾಲಿಂಗದ ಪೂಜೆಯನ್ನು ಮಾಡುತ್ತಲೇ ಕಾಲವನ್ನು ಕಳೆಯುತ್ತಿದ್ದಾನೆ. ಮುಂದೆ ಈತನು ಅಖಂಡ ಭೂಮಂಡಲಕ್ಕೆ ರಾಜನಾಗುವನು. ಮತ್ತು ಪರಶಿವ ಭಕ್ತರೊಡನೆ ಸುಖವಾಗಿದ್ದುಕೊಂಡು ಶಿವಧರ್ಮದ ಪ್ರಚಾರವನ್ನು ಮಾಡುತ್ತಾನೆ. ಸಕಲ ಚಂಡಾಲರೂ ಸಹ ಶಿವಾರಾಧನೆಯನ್ನು ಮಾಡುವಂತೆ ಬೋಧಿಸಿ ಪ್ರೇರಿಸುತ್ತಾನೆ. ॥೧೦೧॥

ಏತದ್ದರ್ಶನಮನ್ವಹಂ ಮುಹುರಹಂ ಕರ್ತುಂ ಪ್ರವೃತ್ತಸ್ಸುರೈಃ
ಸಾಕಂ ಸ್ವರ್ಗನಿವಾಸಿಭಿರ್ಮುನಿವರ್ಯೈಸ್ಸಿದ್ಧೈಸ್ತಥಾ ಕಿನ್ನರೈಃ ।
ಗಂಧರ್ವೈರಪಿ ಯತ್ನಪೂರ್ವಕಮಯಂ ಪೂಜ್ಯೋ ಯತಶ್ಶಾಂಭವೋ
ರೇವಾಲಿಂಗಸಮರ್ಚನೇಷು ನಿಯತೋ ಬಿಲ್ವೈಶ್ಚ ರೇವಾಜಲೈಃ ॥೧೦೨॥

ಜನ್ಮಾತಿದುಷ್ಕರಮಥಾಪಿ ಮನುಷ್ಯಜನ್ಮ
ತತ್ರಾಪಿ ಶಂಕರಸಮರ್ಚನಧೀರತುಲ್ಯಾ ।
ಕೇನಾಪಿ ಧರ್ಮನಿಚಯೇನ ತು ಸ ಏವ ಧರ್ಮೋ
ಧರ್ಮೇಷು ತಾವದಧಿಕಸ್ತು ವಿಮುಕ್ತಿಹೇತುಃ ॥೧೦೩॥

ಧರ್ಮಾಸ್ಸಂತಿ ಸಹಸ್ರಶೋಽಪಿ ನಿಗಮೈರುಕ್ತೈಸ್ತಥಾ ತೇಷ್ವಯಂ
ಧರ್ಮಶ್ರೇಷ್ಠ ಇತಿ ಶ್ರುತೋ ಬಹುವಿಧೈರ್ವೇದಾಂತವಾಕ್ಯೈರಪಿ ।

---

ಈ ಬಾಲಕನು ಕೇವಲ ಶಿವಲಿಂಗಾರ್ಚನೆಯಲ್ಲಿಯೇ ತತ್ಪರನಾಗಿ ಬಿಲ್ವದಳಗಳಿಂದಲೂ ರೇವಾಜಲದಿಂದಲೂ ಶಿವಾರಾಧನೆಯನ್ನು ಮಾಡುತ್ತಿರುವನಾದ್ದರಿಂದ ಈಗ ಈತನು ಪರಮಶಿವಭಕ್ತನೆನಿಸಿರುವನು. ಪುಣ್ಯಾತ್ಮನಾಗಿರುವನು. ಈತನ ದರ್ಶನಕ್ಕಾಗಿ ದೇವತೆಗಳು, ಋಷಿಗಳು, ಗಂಧರ್ವರು, ಕಿನ್ನರರು ಎಲ್ಲರೂ ಬರುವರು. ಹಾಗೆಯೇ ನಾನೂ ಸಹ ಪದೇ ಪದೇ ಬಂದು ಈತನ ದರ್ಶನವನ್ನು ಮಾಡಿಕೊಂಡು ಹೋಗುವೆನು. ಶಿವಭಕ್ತರು ಪರಮಪೂಜ್ಯರಾಗಿರುತ್ತಾರಷ್ಟೆ! ||೧೦೨||

ಪ್ರಪಂಚದಲ್ಲಿ ಜನ್ಮಗಳಲ್ಲೆಲ್ಲಾ ಮನುಷ್ಯಜನ್ಮವು ಅತ್ಯಂತ ದುರ್ಲಭವಾದುದು. ಅದರಲ್ಲಿಯೂ ಶಿವಾರಾಧನೆಯನ್ನು ಮಾಡಬೇಕೆಂಬ ಸದ್ಬುದ್ಧಿಯು ಹುಟ್ಟುವುದು ಅಸಾಧ್ಯಪ್ರಾಯವಾದುದು. ಸಾಮಾನ್ಯ ಜನರಿಗೆ ಈ ಸಂದರ್ಭವು ಲಭಿಸಲಾರದು. ಕೇವಲ ಸದ್ಧರ್ಮರಾಶಿಯನ್ನು ಗಳಿಸಿ ಆ ಪುಣ್ಯಕೋಟಿ ಇದ್ದರೆ ಮಾತ್ರ ಅಂಥ ಶ್ರೇಯಸ್ಸಿಗೆ ಕಾರಣವಾದ ಸುಯೋಗವು ಪ್ರಾಪ್ತವಾಗುವುದು. ಸಕಲ ಧರ್ಮಗಳಿಗಿಂತಲೂ ಅತ್ಯಂತ ಶ್ರೇಷ್ಠವಾದುದು ಶಿವಧರ್ಮವು. ಅದೇ ಮೋಕ್ಷಕ್ಕೆ ಕಾರಣವಾಗಿರುವುದು. ||೧೦೩||

ವೇದಗಳಲ್ಲಿ ಜನರಿಗೆ ಕಲ್ಯಾಣಸಾಧಕಗಳಾದ ಅನೇಕವಿಧ ಧರ್ಮಗಳು ಉಕ್ತವಾಗಿರುತ್ತವೆ. ಆದರೆ ಆ ಎಲ್ಲಾ ಧರ್ಮಗಳಿಗಿಂತಲೂ ಶಿವಲಿಂಗಾರ್ಚನರೂಪವಾದ ಈ ಧರ್ಮವು ಉತ್ತಮೋತ್ತಮವೆಂದು ವೇದಾಂತಗಳೆಲ್ಲವೂ ಸಾರುತ್ತಿವೆ.

ಲಿಂಗಾರಾಧನಲಕ್ಷಣಃ ಕ್ಷಣಮಪಿ ತ್ಯಾಜ್ಯೋ ನ ಸರ್ವಾತ್ಮನಾ
ಲಿಂಗಾರಾಧನಮಂಬಿಕಾಪಿ ಕುರುತೇ ಶಂಗಾಂಕವಾಸಾಪಿ ಸಾ ॥೧೦೪॥

ಲಿಂಗಾರಾಧನಮುತ್ತಮೋತ್ತಮಮಿತಿ ಜ್ಞಾತಂ ಪ್ರವೃತ್ತಂ ತತಃ
ಕರ್ತುಂ ಕರ್ತುಮನಂತಜನ್ಮತಪಸಾ ಬುದ್ಧಿಃ ಪರಂ ಜಾಯತೇ ।
ಯದ್ವಾ ಶಂಕರಪಾದಪದ್ಮಜರಜಃಪುಂಜಪ್ರಸಾದಾದಿಯಂ
ಬುದ್ಧಿಸ್ಸಂಭವತೀತಿ ಭೂರಿವಿಭವೈರ್ಭಾಗ್ಯಂ ಪರಂ ಜಾಯತೇ ॥೧೦೫॥

ಕೋ ವಾ ಭೂತಿವಿಭೂಷಣೇ ಭುವಿ ಭವೇದ್ರುದ್ರಾಕ್ಷಮಾಲಾಶ್ರಯೋ
ಲಿಂಗಾರಾಧನತತ್ಪರಶ್ಶಿವಶಿವವ್ಯಾಹಾರಮಾತ್ರಾದರಃ ।
ಹಾರೋ ಹಾರಹಿತೋಪಹಾರಪರಮಪ್ರೀತೋ ನ ಜಾನೇ ಸ ಮೇ
ವಂದ್ಯಃ ಪೂಜ್ಯತಮೋಽಪಿ ಶಾಂಕರಗುಣಶ್ರೇಷ್ಠೋ ವಸಿಷ್ಠಾರ್ಚಿತಃ
॥೧೦೬॥

---

ಈ ಮಹತ್ತರವಾದ ಧರ್ಮವನ್ನು ಸಾಕ್ಷಾತ್ ಪರಮೇಶ್ವರನ ಅರ್ಧಾಂಗವನ್ನು ಪಡೆದುಕೊಂಡಿರುವ ಪಾರ್ವತಿಯೂ ಸಹ ಆಚರಿಸುತ್ತಾಳೆ. ಅಂದಮೇಲೆ ಈ ಧರ್ಮದ ಮಹಿಮೆಯು ಎಷ್ಟು ಮಹಸೀಯವಾಗಿರುವುದು? ಆದುದರಿಂದ ಒಂದು ಕ್ಷಣವನ್ನೂ ವ್ಯರ್ಥವಾಗಿ ಕಳೆಯದೇ ಶಿವಲಿಂಗಾರಾಧನೆಯನ್ನು ಮಾಡಬೇಕು. ||೧೦೪||

ಅನಂತ ಜನ್ಮಗಳಿಂದ ತಪಸ್ಸನ್ನು ಮಾಡಿ ಪುಣ್ಯಸಂಚಯ ಮಾಡಿದ್ದರೆ ಮಾತ್ರ ಶಿವಲಿಂಗಾರ್ಚನೆಯಲ್ಲಿ ಪ್ರವೃತ್ತಿಯು ಹುಟ್ಟುವುದು. ಇದರಿಂದಲೇ ಈ ಧರ್ಮವು ಎಷ್ಟು ಉತ್ಕೃಷ್ಟವಾದುದೆಂದು ಊಹಿಸಿಕೊಳ್ಳಬಹುದು. ಆ ಪರಮೇಶ್ವರನ ಪಾದಧೂಳಿಯ ಅನುಗ್ರಹ ಒಂದಿದ್ದರೆ ಮಾತ್ರ, ಶಿವಲಿಂಗಾರ್ಚನೆಯಲ್ಲಿ ಭಕ್ತಿಯೂ ಪ್ರವೃತ್ತಿಯೂ ಹುಟ್ಟುವುದು. ಅನ್ಯಥಾ ಸಾಮಾನ್ಯ ಜನರಿಗೆ ಇದರ ಮಹತ್ವವೇನೂ ತಿಳಿಯಲಾರದು. ಅವರು ಲಿಂಗಾರಾಧನೆಯನ್ನು ಮಾಡಲೂ ಆರರು. ಶಿವಲಿಂಗಾರಾಧನೆಯನ್ನು ಮಾಡುತ್ತಿದ್ದರೆ ದಿನದಿಂದ ದಿನಕ್ಕೆ ಸೌಭಾಗ್ಯವು ಅಭಿವೃದ್ಧವಾಗುತ್ತದೆ. ||೧೦೫||

ಯಾರು ಭಸ್ಮವನ್ನು ಧರಿಸಿಕೊಂಡು, ರುದ್ರಾಕ್ಷಮಾಲೆಗಳಿಂದ ಅಲಂಕೃತರಾಗಿ ಶಿವ ಶಿವ ಎಂದು ಸರ್ವದಾ ಶಿವಧ್ಯಾನವನ್ನು ಮಾತ್ರ ಮಾಡುತ್ತಾ ಶಿವಲಿಂಗಾರಾಧ

ಅಭ್ಯಾಸೇನ ನ ತಾದೃಶೀ ಮತಿರುದೇತ್ಯಾರಾಧಕಾವೇಕ್ಷಣಾತ್
ಕಿಂತ್ವಾಕಲ್ಪಕೃತಾತಿಘೋರತಪಸಾ ಭಕ್ತಿಶ್ಶಿವೇ ಜಾಯತೇ ।
ಸಾ ಭಕ್ತಿರ್ಯದಿ ಸಂತತಂ ಚ ತನುತೇ ಸಂತಾನಸಂಪತ್ಪ್ರಭಾ
ವೃದ್ಧಿಂ ವೃದ್ಧಿಮುಪೈತಿ ಸಾಪಿ ಸತತಂ ಲಿಂಗಾರ್ಚನೇನಾದರಾತ್ ॥೧೦೭॥

ಬ್ರಹ್ಮತ್ವಂ ಮಮ ಲಿಂಗಪೂಜನಕೃತಂ ತೇನೈವ ಸತ್ಯಾಭಿಧೋ
ಲೋಕೋ ಲೋಚನಗೋಚರೋಽಪಿ ನ ಸತಾಂ ಪ್ರಾಪ್ತೋ ಮಯಾ ದುರ್ಲಭಃ ।
ಲಿಂಗಾರಾಧನಪುಣ್ಯಮೇವ ನಯತಾ ಮುಕ್ತಿಃ ಪರಂ ಭಾವಿನೀ
ತತ್ಪುಣ್ಯಂ ತು ವಿಲಕ್ಷಣಂ ಕ್ಷಣಮಪಿ ತ್ಯಕ್ತುಂ ನ ಶಕ್ಯಂ ಮಯಾ ॥೧೦೮॥

---

ನೆಯಲ್ಲಿ ತತ್ಪರರಾಗಿ ಶಿವಭಕ್ತರಿಗೆ ದಾನಗಳನ್ನೂ, ಸಹಾಯಗಳನ್ನೂ, ಮಾಡುತ್ತಾ ಇರುವನೋ, ಆತನೇ ಶಿವಭಕ್ತರಲ್ಲೆಲ್ಲಾ ಶ್ರೇಷ್ಠನು. ಆತನೇ ನನಗೂ ವಸಿಷ್ಠಾದಿ ಋಷಿಗಳಿಗೂ ಪೂಜ್ಯನೆನಿಸುತ್ತಾನೆ. ॥೧೦೬॥

ಕೇವಲ ಸ್ವಪ್ರಯತ್ನದಿಂದಾಗಲಿ ಅಥವಾ ಪರಶಿವಭಕ್ತರನ್ನು ನೋಡುತ್ತಿರುವುದ ರಿಂದಾಗಲಿ, ಅವಿಚ್ಛಿನ್ನವಾಗಿ ಶಿವಾರಾಧನೆಯನ್ನು ಮಾಡುವ ಬುದ್ಧಿ-ಶ್ರದ್ಧೆಗಳು ಹುಟ್ಟಲಾರವು. ಪರಂತು ಕಲ್ಪದ ಮೊದಲಿಂದಲೂ ಘೋರತಪಸ್ಸನ್ನು ಮಾಡಿದ್ದರೆ ಆ ಪುಣ್ಯದಿಂದ ಶಿವನಲ್ಲಿ ಅಚಲವಾದ ಭಕ್ತಿಯು ಉತ್ಪನ್ನವಾಗುವುದು. ಅಂಥ ಭಕ್ತಿಯು ಅನುಸ್ಯೂತವಾಗಿದ್ದರೆ ಸಂತಾನಾದಿ ಸಕಲ ಸೌಭಾಗ್ಯ ಸಂಪತ್ತುಗಳೂ ಅಭಿವೃದ್ಧಿಯನ್ನು ಹೊಂದುತ್ತವೆ. ಮತ್ತು ಆ ಭಕ್ತಿಯೂ ಸಹ ಸತತ ಶಿವಲಿಂಗಾ ರ್ಚನೆಯಿಂದ ಅಭಿವೃದ್ಧವಾಗುತ್ತದೆ. ॥೧೦೭॥

ಆ ಸತ್ಯಲೋಕವೆಂಬುದು ಅನಾದಿಯಾಗಿದ್ದರೂ ಅದು ನನ್ನ ಕಣ್ಣಿಗೆಂದೂ ಗೋಚರನಾಗಿರಲಿಲ್ಲ. ಆದರೆ ನಾನು ಅವಿಚ್ಛಿನ್ನವಾಗಿ ಶಿವಲಿಂಗಪೂಜೆಯನ್ನು ಮಾಡಿದ್ದರಿಂದ ನನಗೆ ಪ್ರಜಾಪತಿ ಎಂಬ ಪದವಿಯೂ, ಆ ಸತ್ಯಲೋಕವೂ ಲಭಿಸಿತು. ನನ್ನ ಸಕಲ ಕ್ರಿಯಾಶಕ್ತಿಗಳೂ ಕೇವಲ ಶಿವಲಿಂಗಪೂಜನ ಪುಣ್ಯದಿಂದ ಪ್ರಾಪ್ತ ವಾಗಿವೆ. ಅತ್ಯಂತ ದುರ್ಲಭವಾದ ಫಲಗಳೂ ನನಗೆ ದೊರತಿವೆ. ಆದುದರಿಂದ ಶಿವಲಿಂಗಾರಾಧನೆಯನ್ನು ಮಾಡಿ ಪುಣ್ಯಗಳಿಸಿದರೆ, ಅದರಿಂದ ಅಲಭ್ಯವಾದದ್ದು ಒಂದೂ ಇರುವುದಿಲ್ಲ. ಸಾಕ್ಷಾತ್ ಪರಮಪದವಾದ ಮೋಕ್ಷವೂ ಸಹ ಅದರಿಂದಲೇ ಪ್ರಾಪ್ತವಾಗುತ್ತದೆ. ಆದುದರಿಂದ ಶಿವಲಿಂಗಾರಾಧನೆಯು ಅತ್ಯಂತ ವಿಲಕ್ಷಣ

**ಜಾರೋ ಜಾತು ನ ಜಾರಿಣೀಷ್ವನುರತಸ್ತಸ್ಮಾದ್ವಿರಕ್ತೋ ಯುವಾ**
**ನ ಸ್ಯಾತಾಂ ತರುಣೀಂ ಪ್ರಪಶ್ಯತಿ ಮುಹುಸ್ತ್ಯಕ್ತ್ವಾಪಿ ಕಾರ್ಯಾಂತರಂ ।**
**ತದ್ವಂದ್ಯಶ್ಶಿವಲಿಂಗಪೂಜನರತೋ ದೂರ್ವಾಂಕುರಾದ್ಯೈರ್ಮುದಾ**
**ವಾರಂ ವಾರಮುದೃಷ್ಟಭೇದಘಟಿತೋ ಹಾರಸ್ಸ ಲೋಕೋತ್ತರಃ ॥೧೦೯॥**

**ಇತಿ ಶ್ರೀ ಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ ಗಂಗಾ ನರ್ಮದಾದಿತಪೋವರ್ಣನ ತದ್ವರಪ್ರದಾನ ನರ್ಮದಾಮಹಿಮಾ ನರ್ಮದಾಲಿಂಗಪೂಜನಮಹಿಮಾ ಬಾಲಕಪೂರ್ವಜನ್ಮವೃತ್ತಾಂತಾದಿ ಕಥನಂ ನಾಮ ಚತುರ್ದಶೋಽಧ್ಯಾಯಃ**

ವಾದದ್ದು. ಅದರಿಂದುಂಟಾಗುವ ಪುಣ್ಯವು ಅತ್ಯಂತ ಮಹತ್ತರವಾದದ್ದು. ಅದಕ್ಕಾಗಿಯೇ ಆ ಶಿವಲಿಂಗಾರಾಧನೆಯನ್ನು ಬಿಡಲು ನನಗೆ ಎಂದೂ ಮನ ಬರುವುದಿಲ್ಲ. ಬಿಡಲಾರೆ. ॥೧೦೮॥

ಜಾರಿಣಿಯಲ್ಲಿ ಅನುರಕ್ತನಾದ ತರುಣನು ಎಂದೂ ಆಕೆಯನ್ನು ಅಗಲಿರಲಾರನು. ಆ ಜಾರನಿಗೆ ಅವಳನ್ನು ನೋಡಿದೊಡನೆ ಬಹಳ ಪ್ರೀತಿ ಹೆಚ್ಚುತ್ತದೆ. ಆ ಜಾರಿಣಿಯೇ ತನ್ನ ಪ್ರಾಣವೆಂಬಷ್ಟು ಆಸಕ್ತಿಯಿಂದ ಆಕೆಯನ್ನೇ ಸೇವಿಸುವನು. ಬೇರೆ ಯಾವ ಕೆಲಸವನ್ನೂ ಮಾಡನು. ಹಾಗೆಯೇ ಅನ್ಯಮನಸ್ಕನಾಗದೆ ಪರಶಿವಭಕ್ತರನ್ನೂ ಸಹ ಸದಾ ಪ್ರೀತಿಸಬೇಕು. ಅವರನ್ನು ಅಗಲಬಾರದು. ಅವರನ್ನೇ ಸೇವಿಸಬೇಕು. ಏಕೆಂದರೆ ಶಿವಾರಾಧನತತ್ಪರನಾಗಿ, ದೂರ್ವೆ, ಬಿಲ್ವ ಮುಂತಾದುವುಗಳಿಂದ ಪದೇಪದೇ ಶಿವಾರ್ಚನೆಯನ್ನು ಮಾಡತಕ್ಕವನು ಪರಮ ಭಾಗ್ಯಶಾಲಿ. ಆತನು ಮಹಾಮಹಿಮನೆನಿಸುವನು. ಅಂತಹ ಶಿವಭಕ್ತನೇ ಲೋಕೋತ್ತರನು. ಲೋಕವಂದ್ಯನು. ಆತನನ್ನೇ ಸೇವಿಸಿ ಪೂಜಿಸಿ ನಮಸ್ಕರಿಸಬೇಕು." ಎಂದು ಬ್ರಹ್ಮನು ಹೇಳಿದನು. ॥೧೦೯॥

ಇಲ್ಲಿಗೆ ಶಿವರಹಸ್ಯದಲ್ಲಿ ಹರನಾಮಕವಾದ ಮೂರನೆಯ ಅಂಶದ ಉತ್ತರಾರ್ಧದಲ್ಲಿ ರೇವಾಲಿಂಗ ಮಹಿಮೆಯನ್ನು ವಿವರಿಸುವ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಪಂಚಾದಶೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತಿ ತದ್ವಚನಂ ಶ್ರುತ್ವಾ ರಾಜಾ ವಿಸ್ಮಯಮಾಗತಃ ।
ವಿಧಿಂ ಪ್ರಾಹಾತಿವಿನತಃ ಕೃತಾಂಜಲಿಪುಟೋ ನೃಪ ||೧||

|| ರಾಜೋವಾಚ ||

ವಿಧೇ ಮಂದಿರಮಾಯಾಹಿ ಬಾಲಕೇನ ಸಹಾಮುನಾ ।
ಶಿವಮಂದಿರಸಂಕೀರ್ಣಂ ಮಂದಿರಂ ಮಣಿಸುಂದರಂ ||೨||

---

## ಹದಿನೈದನೆಯ ಅಧ್ಯಾಯ

ರಾಜನೇ ! ಈ ರೀತಿಯಾಗಿ ಬಾಲಕನ ವೃತ್ತಾಂತವನ್ನು ಬ್ರಹ್ಮನು ಹೇಳಲು, ಅದನ್ನು ಕೇಳಿ ಆ ಚಿತ್ರರಥ ನೃಪತಿಗೆ ಅತ್ಯಾಶ್ಚರ್ಯವಾಯಿತು. ಅನಂತರ ಆತನು ಬ್ರಹ್ಮನನ್ನು ಕುರಿತು ವಿನಯದಿಂದ ಹೀಗೆಂದನು. ಎಂದು ಯಾಜ್ಞವಲ್ಕ್ಯಮಹರ್ಷಿಯು ಜನಕರಾಜನಿಗೆ ಉಪದೇಶಿಸಿದನು. ||೧||

"ಎಲೈ ಬ್ರಹ್ಮನೇ! ನನ್ನ ಮೇಲೆ ಕೃಪೆಮಾಡಿ ಈ ಬಾಲಕನನ್ನೂ ಕರೆದುಕೊಂಡು ನಮ್ಮ ಮನೆಗೆ ಬರಬೇಕೆಂದು ಬೇಡುತ್ತೇನೆ. ನನ್ನ ಮನೆಯಲ್ಲಿಯೂ ಮಣಿಮಯವಾದ ಶಿವಮಂದಿರಗಳಿರುವುವು. ||೨||

ರತ್ನಮಂದಿರಮಧ್ಯಸ್ಥಾನ್ಯಪಾರಾಣಿ ಚತುರ್ಮುಖ ।
ರೇವಾಲಿಂಗಾನ್ಯರ್ಚಿತಾನಿ ದ್ರಷ್ಟವ್ಯಾನಿ ತ್ವಯಾಧುನಾ ॥೩॥

ಇತಿ ತದ್ವಚನಂ ಶ್ರುತ್ವಾ ವಿಧಿಸ್ಸಂತುಷ್ಟಮಾನಸಃ ।
ಯಯೌ ಸಾಕಂ ಬಾಲಕೇನ ನಗರಂ ನೃಪಮಂದಿರಂ ॥೪॥

ತದ್ರತ್ನತೋರಣಾಕೀರ್ಣಂ ರತ್ನಪ್ರಾಸಾದಸಂವೃತಂ ।
ರೇವಾಲಿಂಗಸಮಾಕೀರ್ಣಂ ದದರ್ಶ ಸ ವಿಧಿಸ್ತತಃ ॥೫॥

ತತ್ರ ಲಿಂಗಾನಿ ರಮ್ಯಾಣಿ ಪೂಜಿತಾನಿ ಮನೋಹರೈಃ ।
ಬಿಲ್ವೀದಳಾದಿಭಿಃ ಪುಷ್ಪೈರರ್ಚಿತಾನಿ ದದರ್ಶ ಸಃ ॥೬॥

ತತ ಸ್ಸಬಾಲಕಸ್ತತ್ರ ತತ್ತಲ್ಲಿಂಗಾವಲೋಕನಾತ್ ।
ಸಂತೋಷಂ ಪರಮಂ ಪ್ರಾಪ ಮುಕ್ತಿಬೀಜಮನುತ್ತಮಂ ॥೭॥

ಚತುರ್ಮುಖನೇ! ನಮ್ಮ ಅರಮನೆಯಲ್ಲಿರುವ ರತ್ನಮಯವಾದ ಶಿವ ಮಂದಿರಗಳಲ್ಲಿ ರೇವಾಲಿಂಗಗಳು ಪೂಜಿಸಲ್ಪಟ್ಟು ಅಲಂಕೃತವಾಗಿರುತ್ತವೆ. ಈ ಬಾಲಕನೊಡನೆ ನೀನೂ ಬಂದು ಅವೆಲ್ಲವನ್ನೂ ಇಂದು ಪರಾಮರ್ಶಿಸಬೇಕೆಂದು ಪ್ರಾರ್ಥಿಸುತ್ತೇನೆ." ॥೩॥

ರಾಜನ ಈ ಪ್ರಾರ್ಥನೆಯನ್ನು ಲಾಲಿಸಿ ಬ್ರಹ್ಮನು ಸಂತುಷ್ಟನಾಗಿ ಆ ಬಾಲಕನನ್ನೂ ಕರೆದುಕೊಂಡು ಅವನ ಪಟ್ಟಣಕ್ಕೆ ಹೋದನು. ಹಾಗೆಯೇ ಆ ಪಟ್ಟಣದ ಸಿರಿಯನ್ನು ನೋಡಿ ಆನಂದಿಸುತ್ತಾ ರಾಜನ ಅರಮನೆಯನ್ನು ಹೊಕ್ಕನು. ॥೪॥

ಅರಮನೆಯನ್ನು ಬ್ರಹ್ಮನು ಪ್ರವೇಶಿಸಿ ವಿಸ್ಮಯದಿಂದ ಸುತ್ತಲೂ ನೋಡಿದನು. ಎಲ್ಲೆಲ್ಲಿಯೂ ರತ್ನತೋರಣಗಳಿಂದ ಸಿಂಗರಿಸಿದ್ದಾರೆ. ರತ್ನಮಯವಾದ ಅನೇಕ ಉಪ್ಪರಿಗೆ ಅಂತಸ್ತುಗಳು ರಮ್ಯವಾಗಿವೆ. ಎಲ್ಲಾ ಕಡೆಯೂ ರೇವಾಲಿಂಗಗಳು ಅರ್ಚಿಸಲ್ಪಟ್ಟು ವಿರಾಜಮಾನವಾಗಿವೆ. ॥೫॥

ಆ ಅರಮನೆಯಲ್ಲಿ ಅಲ್ಲಲ್ಲೇ ಶಿವಲಿಂಗಗಳು ಪ್ರತಿಷ್ಠಿತಗಳಾಗಿವೆ ಅವುಗಳೆಲ್ಲವನ್ನೂ ಮನೋಹರವಾದ ಹೂಗಳಿಂದಲೂ ನಿರ್ಮಲವಾದ ಬಿಲ್ವದಳಗಳಿಂದಲೂ ಪೂಜಿಸಿ ಅಲಂಕರಿಸಿದ್ದಾರೆ. ॥೬॥

ಆ ಎಲ್ಲಾ ಶಿವಲಿಂಗಗಳನ್ನೂ ನೋಡಿ ಆ ಬಾಲಕನಿಗೆ ಪರಮಾನಂದ

ಅನಾಯಾಸೇನ ದೃಷ್ಟಾನಿ ಶಿವಲಿಂಗಾನಿ ಕೋಟಿಶಃ ।
ಪೂಜಿತಾನೀತಿ ಸಂತುಷ್ಟೋ ಬಾಲಕಸ್ಸ ಮುಹುರ್ಮುಹುಃ ॥೮॥

ಪೂಜಾದ್ರವ್ಯಾಣ್ಯಪಾರಾಣಿ ದದೌ ತಸ್ಮೈ ಸ ಭೂಪತಿಃ ।
ಸ ತೈಸ್ಸಮರ್ಚಯಾಮಾಸ ಲಿಂಗಾನಿ ಮುದಿತೋಽರ್ಭಕಃ ॥೯॥

ದುರ್ಭಗಾಣಾಮಸುಲಭಂ ಶಂಭುಪೂಜನಮಿತ್ಯಪಿ ।
ಬಾಲೋಽಪಿ ಪೂಜಯಾಮಾಸ ಲಿಂಗಾನಿ ಶಿವಮಂದಿರೇ ॥೧೦॥

ಪಂಚಾಮೃತಪ್ರವಾಹಾದ್ಯೈರರ್ಚಯಿತ್ವಾ ಸ ಬಾಲಕಃ ।
ನನರ್ತ ಪ್ರಣತೋ ಭೂಯೋ ಭೂಯೋಭೂಯಸ್ಸ ಭೂಪತೇ ॥೧೧॥

ವಾಯಿತು. ಪರಮಮೋಕ್ಷಸಾಧನವಾದ ಶಿವಲಿಂಗವನ್ನು ಈರೀತಿ ಪುರಸ್ಕರಿಸಿರುವುದಕ್ಕಾಗಿ ಆತನಿಗೆ ಬಹಳ ಸಂತೋಷವಾಯಿತು. ||೭||

ಆ ಶಿವಲಿಂಗಗಳನ್ನೆಲ್ಲಾ ನೋಡಿ ಆ ಬಾಲಕನು ಮನಸ್ಸಿನಲ್ಲಿಯೇ ಶ್ಲಾಘಿಸಿದನು. ಇಂದು ಅನಾಯಾಸವಾಗಿ ಈ ಅಲಂಕೃತವಾದ ಶಿವಲಿಂಗಗಳನ್ನೆಲ್ಲಾ ನೋಡುವ ಲಾಭವು ದೊರೆಯಿತಲ್ಲಾ ಎಂದು ಸಂತೋಷಪಟ್ಟನು. ||೮||

ಈರೀತಿ ಉತ್ಸುಕತೆಯಿಂದ ಆ ಬಾಲಕನು ನೋಡುತ್ತಿರಲು, ಆಗ ಶಿವಪೂಜೆಯನ್ನು ಮಾಡುವಂತೆ ಆ ರಾಜನು ಕೇಳಿಕೊಂಡನು. ಮತ್ತು ಅತ್ಯುತ್ತಮವಾದ ಪೂಜಾಸಾಮಗ್ರಿಗಳನ್ನೂ ತರಿಸಿಕೊಟ್ಟನು. ಆ ಸಾಮಗ್ರಿಗಳಿಂದ ಸಂತುಷ್ಟನಾಗಿ ಆತನು ಭಕ್ತಿಯಿಂದ ಶಿವಾರ್ಚನೆಯನ್ನು ಆರಂಭಿಸಿದನು. ||೯||

ಶಿವಾರ್ಚನೆಯ ಸುಯೋಗವು ಭಾಗ್ಯಹೀನರಿಗೆ ಲಭಿಸುವುದಿಲ್ಲವಷ್ಟೆ. ಕೇವಲ ಭಾಗ್ಯವಂತರು ಮಾತ್ರ ಶಿವಲಿಂಗವನ್ನು ಪೂಜಿಸುವರು ಎಂದು ಮುಂತಾಗಿ ಮನಸ್ಸಿನಲ್ಲಿಯೇ ಪರಾಮರ್ಶಿಸುತ್ತಾ ಆ ಬಾಲಕನು, ಆ ಎಲ್ಲಾ ಶಿವಮಂದಿರಗಳಲ್ಲಿರುವ ಶಿವಲಿಂಗವನ್ನೂ ಭಕ್ತಿಯಿಂದ ಪೂಜಿಸಿದನು. ||೧೦||

ಆ ಬಾಲಕನು ಪಂಚಾಮೃತಾಭಿಷೇಕವೇ ಮೊದಲಾದ ಎಲ್ಲಾ ಉಪಚಾರಗಳೊಡನೆ ಅತ್ಯಂತ ವಿಜೃಂಭಣೆಯಿಂದ ಶಿವಲಿಂಗವನ್ನು ಪೂಜಿಸಿ ಪೂಜಾಂತ್ಯದಲ್ಲಿ ಅತ್ಯಾನಂದ ಪರವಶನಾಗಿ ಲಿಂಗ ಸಮ್ಮುಖದಲ್ಲಿ ಶಿವಭಜನೆ ಮಾಡುತ್ತಾ ನರ್ತಿಸಿದನು. ||೧೧||

ತತಸ್ತಂ ಬಾಲಕಂ ದ್ರಷ್ಟುಂ ಸರ್ವಾಶ್ಚಿತ್ರರಥಾಂಗನಾಃ ।
ಸಮಾಗತಾಸ್ತಮಾಲೋಕ್ಯ ಸಂತೋಷಂ ಪರಮಂ ಯಯುಃ ॥೧೨॥

ನೃತ್ತಪ್ರಸಂಗಸಂತುಷ್ಟಂ ಬಾಲಂ ಸಂವೀಕ್ಷ್ಯ ಸಾದರಂ ।
ರಾಜಕನ್ಯಾ ಸಮಾಗತ್ಯ ಮುದಾ ನಾಟ್ಯಂ ಚಕಾರ ಸಾ ॥೧೩॥

ತತಸ್ತನ್ನಾಟ್ಯಮಾಲೋಕ್ಯ ಪೂಜಯಿತ್ವಾ ಮಹೇಶ್ವರಂ ।
ಪ್ರಣಮ್ಯ ಪ್ರಾಹ ರಾಜಾನಂ ಕನ್ಯಕಾಂ ವೀಕ್ಷ್ಯ ಸಾದರಂ ॥೧೪॥

॥ ಬ್ರಹ್ಮೋವಾಚ ॥

ರಾಜನ್ ಕೇಯಂ ಬಾಲಿಕಾಪಿ ಭೂತಿರುದ್ರಾಕ್ಷಭೂಷಣಾ ।
ಶಿವಗಾನರತಾ ನೃತ್ಯಂ ಕರೋತಿ ಪ್ರೀತಮಾನಸಾ ॥೧೫॥

ಈ ಬಾಲಕನು ಮಾಡುತ್ತಿರುವ ಶಿವಾರ್ಚನೆಯನ್ನು ನೋಡಲು ಆ ಚಿತ್ರರಥನ ರಾಣಿವಾಸದ ಸ್ತ್ರೀಯರೆಲ್ಲರೂ ಬಂದಿದ್ದರು. ಈ ಅಪೂರ್ವವಾದ ಶಿವಾರ್ಚನೆಯ ರೀತಿಯನ್ನು ನೋಡಿ ಅವರಿಗೆಲ್ಲರಿಗೂ ಅತ್ಯಾನಂದವಾಯಿತು. ॥೧೨॥

ಈ ಬಾಲಕನು ಆನಂದ ಪರವಶತೆಯಿಂದ ನರ್ತನಮಾಡುತ್ತಿರುವುದನ್ನು ರಾಜಕನ್ಯೆಯೊಬ್ಬಳು ನೋಡಿ ಅತ್ಯಾನಂದಪಟ್ಟು ತಾನೂ ಸಹ ಆತನೊಡನೆ ನಾಟ್ಯ ವಾಡಲು ತೊಡಗಿದಳು. ॥೧೩॥

ಈರೀತಿಯಾಗಿ ಸಾಂಗ ಶಿವಪೂಜೆಯನ್ನೂ ಆ ರಾಜಕನ್ಯೆಯು ನಾಟ್ಯವನ್ನೂ ನೋಡಿ ಬ್ರಹ್ಮನಿಗೆ ಅತ್ಯಾನಂದವಾಯಿತು. ಆ ರಾಜಕನ್ಯೆಯು ಕೌಶಲವನ್ನು ಕಂಡು ವಿಸ್ಮಯಪಟ್ಟನು. ಮತ್ತು ಶಿವನಿಗೆ ನಮಸ್ಕರಿಸಿ, ರಾಜನನ್ನು ಕುರಿತು ಹೀಗೆಂದನು. ॥೧೪॥

"ಎಲೈ ಮಹಾರಾಜನೇ! ಈ ಬಾಲಿಕೆ ಯಾರು? ಈಕೆಯು ಭಸ್ಮರುದ್ರಾಕ್ಷಿಗಳಿಂದ ಬಹಳ ಚೆನ್ನಾಗಿ ಒಪ್ಪುತ್ತಿದ್ದಾಳೆ. ಈಕೆಯು ಎಷ್ಟು ಆಸಕ್ತಿಯಿಂದ ಶಿವ ಕೀರ್ತನೆಯನ್ನು ಹಾಡುತ್ತಾ ಎಷ್ಟು ಚೆನ್ನಾಗಿ ನಾಟ್ಯವಾಡುತ್ತಿದ್ದಾಳೆ! ॥೧೫॥

ಏತಾದೃಶಂ ತು ಸೌಂದರ್ಯಂ ನಾಸ್ತಿ ದೇವಾಂಗನಾಸ್ವಪಿ ।
ವಯೋ ವಿಶೇಷಸಂಪನ್ನಾ ಸಂಪನ್ನಾ ಭಾಗ್ಯರಾಶಿಭಿಃ ॥೧೬॥

ವಿಧೇ ವನವಿಹಾರಾರ್ಥಂ ಪುರಾ ರೇವಾಮನೋಹರೇ ।
ತೀರೇ ಸ್ಥಿತಂ ಮಯಾ ತತ್ರ ದೃಷ್ಟೇಯಂ ಗಿರಿಗಹ್ವರೇ ॥೧೭॥

ತತ್ರೈಕಂ ನಾರ್ಮದಂ ಲಿಂಗಂ ಬಿಲ್ವಮೂಲೇ ಮನೋಹರೇ ।
ತತ್ಪೂಜನೇನ ಸುಪ್ರೀತಾ ಸೇಯಂ ಕನ್ಯಾ ಮನೋಹರಾ ॥೧೮॥

ಗಾಯಂತೀ ಶಿವನಾಮಾನಿ ವೀಣಾಮಾದಾಯ ಶಾಂಭವೀ ।
ದೃಷ್ಟ್ವಾ ಪ್ರಹೃಷ್ಟವದನಾ ಲಿಂಗಾರ್ಚನಪರಾಯಣಾ ॥೧೯॥

ತತಸ್ಸೇಯಂ ಸಮಾನೀತಾ ಶಪಥೈರ್ವಿವಿಧೈರ್ವಿಧೇ ।
ನಾಯಾತಿ ಸಹಸಾ ಕನ್ಯಾ ಶಿವಪೂಜನತತ್ಪರಾ ॥೨೦॥

ಈಕೆಯು ಎಷ್ಟು ಸುಂದರಿಯಾಗಿದ್ದಾಳೆ! ಇಷ್ಟು ಸೌಂದರ್ಯವು ಅಪ್ಸರ ಸ್ತ್ರೀಯರಲ್ಲಿಯೂ ಕಾಣಲಿಲ್ಲ. ಈಕೆಯು ಪ್ರಾಪ್ತವಯಸ್ಕಳಾಗಿದ್ದಾಳೆ. ಈಕೆಯನ್ನು ನೋಡಿದೊಡನೆಯೇ ಭಾಗ್ಯಶಾಲಿನಿ ಎಂದು ಹೇಳುವಂತಿದೆ." ||೧೬||

ಆಗ ರಾಜನು " ಬ್ರಹ್ಮನೇ ! ಹಿಂದೊಂದು ಸಲ ನಾನು ಉದ್ಯಾನದಲ್ಲಿ ವಿಹರಿಸುತ್ತಾ ರಮ್ಯವಾದ ರೇವಾನದೀತೀರದಲ್ಲಿ ಸಂಚರಿಸುತ್ತಿರಲು ಅಲ್ಲೇ ಹತ್ತಿರದ ಬೆಟ್ಟದ ತಪ್ಪಲಲ್ಲಿ ಈಕೆಯನ್ನು ನೋಡಿದೆನು. ||೧೭||

ಈ ಸರ್ವಲಕ್ಷಣ ಸುಸಂಪನ್ನೆಯು ಅಲ್ಲಿ ಒಂದು ಬಿಲ್ವವೃಕ್ಷದ ಕೆಳಗೆ ನಾರ್ಮದಲಿಂಗವನ್ನು ಸ್ಥಾಪಿಸಿಕೊಂಡು ಆ ಲಿಂಗಕ್ಕೆ ಸದಾ ಪೂಜೆಯನ್ನು ಮಾಡುತ್ತಾ ಅಲ್ಲಿಯೇ ಸಿರ್ಯೋಜನೆಯಿಂದಿದ್ದಳು. ||೧೮||

ಈ ಬಾಲಿಕೆಯು ಅಲ್ಲಿ ಸರ್ವದಾ ಶಿವಲಿಂಗವನ್ನು ಪೂಜಿಸುತ್ತಿದ್ದಳಲ್ಲದೇ ಮಧ್ಯೆ ಮಧ್ಯೆ ವೀಣೆಯನ್ನು ಮಿಾಟುತ್ತಾ, ಶಿವನಾಮಗಳನ್ನೂ ಶಿವಕೀರ್ತನೆಗಳನ್ನೂ ಹಾಡಿ ಅದರಿಂದ ಸಂತೃಪ್ತಳಾಗಿ ಸಂತುಷ್ಟಳಾಗಿದ್ದಳು. ||೧೯||

ನಾನು ಈಕೆಯನ್ನು ನನ್ನ ಮನೆಗೆ ಕರೆತರಲು ಅಪೇಕ್ಷೆಪಟ್ಟು ಬರುವಂತೆ ಹೇಳಿದೆ. ಆದರೆ ಈಕೆಯು ನನ್ನಲ್ಲಿಗೆ ಬರಲು ಸುಲಭವಾಗಿ ಸಮ್ಮತಿಸಲಿಲ್ಲ.

ಏತದ್ದರ್ಶನಮಾತ್ರೇಣ ಮಮ ಭಕ್ತಿರಜಾಯತ ।
ಶಿವಾರ್ಚನೇ ಶಿವಧ್ಯಾನೇ ಶಿವನಾಮಜಪೇಷ್ವಪಿ ॥೨೦॥

ಸೇಯಮತ್ಯುತ್ಸವಾ ದೃಷ್ಟಾ ಮಯಾದೃಷ್ಟವಿಶೇಷತಃ ।
ತತ್ತ್ವಜ್ಞೋಽಸಿ ತ್ವಯಾ ತಾವದೇತಜ್ಜನ್ಮ ಕಿಮಿತ್ಯಪಿ ॥೨೨॥

ನ ಜ್ಞಾಯತೇ ತತೋ ಜ್ಞಾತ್ವಾ ವಕ್ತವ್ಯಮಿತಿ ಮೇ ಮತಿಃ ।
ಇಯಂ ಕಾಲತ್ರಯೇ ಗತ್ವಾ ತತ್ರ ಲಿಂಗಾರ್ಚನಂ ಮುದಾ ॥೨೩॥

ಕರೋತಿ ವಿವಿಧೈರ್ದ್ರವ್ಯೈಸ್ತತ್ರ ಗಾನಂ ಕರೋತಿ ಚ ।
ಅಸ್ಯಾಸ್ತಿ ನ ಪಿತಾ ಮಾತಾ ನ ಭ್ರಾತಾ ನ ಚ ಬಾಂಧವಃ ॥೨೪॥

ನ ಜಾತಿರಪಿ ವಿಜ್ಞಾತಾ ತಸ್ಮಾತ್ಸರ್ವಾತ್ಮನಾ ಮಯಾ ।
ಏತದ್ದರ್ಶನಮಾತ್ರೇಣ ಮನೋತ್ಸಾಹಃ ಪ್ರಕಾಯತೇ ॥೨೫॥

---

ಎಷ್ಟೋ ಸಮಾಧಾನಗಳನ್ನು ಹೇಳಬೇಕಾಯಿತು. ಎಷ್ಟೋ ಆಣೆಗಳನ್ನಿಟ್ಟು ಬಲಾತ್ಕರಿಸಿದ ಮೇಲೆ ಸಮ್ಮತಿಸಿ ನನ್ನಲ್ಲಿಗೆ ಬಂದಳು. ॥೨೦॥

ಈಕೆಯನ್ನು ನೋಡಿದ ಕೂಡಲೇ ನನಗೆ ಈಕೆಯಲ್ಲಿ ಭಕ್ತಿಯುಂಟಾಯಿತು. ಆ ಮೊದಲುಗೊಂಡು ಶಿವಾರ್ಚನೆ ಶಿವಧ್ಯಾನಗಳನ್ನು ಮಾಡಬೇಕೆಂದೂ ಶಿವನಾಮಗಳನ್ನು ಜಪಿಸಬೇಕೆಂದೂ ನನಗೆ ಬುದ್ಧಿ ಹುಟ್ಟಿತು. ॥೨೧॥

ಈಕೆಯು ಸಾಕ್ಷಾತ್ ಹರ್ಷವೇ ಮೂರ್ತಿ ಎತ್ತಿದಂತೆ ಇರುವಳು. ಅದೃಷ್ಟ ವಿಶೇಷದಿಂದ ಈಕೆಯು ನನಗೆ ದೊರೆತಿರುವಳು. ಆದರೆ ಈಕೆಯ ತಂದೆತಾಯಿಗಳು ಯಾರು? ಈಕೆಯ ಜನ್ಮವೇನು ಎಂಬುದು ತಿಳಿಯಲಿಲ್ಲ. ಸರ್ವಜ್ಞನಾದ ನೀನು ಇದನ್ನು ತಿಳಿಸಬೇಕು. ॥೨೨॥

ಈಗಲೂ ಸಹ ಈಕೆಯು ಪ್ರತಿನಿತ್ಯವೂ ಮೂರು ಹೊತ್ತು ಆ ರೇವಾನದೀ ತೀರಕ್ಕೆ ಹೋಗಿ ಶಿವಲಿಂಗವನ್ನು ಪೂಜಿಸಿ ಭಕ್ತಿಯಿಂದ ಶಿವಕೀರ್ತನೆಯನ್ನು ಹಾಡುವಳು. ॥೨೩॥

ಈಕೆಯ ತಂದೆಯನ್ನಾಗಲಿ ತಾಯಿಯನ್ನಾಗಲಿ ನಾನು ನೋಡಿಲ್ಲ. ಅಥವಾ ಈಕೆಯ ಸಹೋದರರು, ಬಂಧುಗಳು ಯಾರೂ ಇದ್ದಂತೆ ಕಾಣಲಿಲ್ಲ. ಈಕೆಯ ಜಾತಿಯು ಕೂಡ ಗೊತ್ತಿಲ್ಲ. ಆದರೆ ಈಕೆಯನ್ನು ನೋಡಿದ ಕೂಡಲೇ ನನ್ನ

|| ಬ್ರಹ್ಮೋವಾಚ ||

ಇಯಂ ಪೂರ್ವಭವೇ ರಾಜನ್ ಸುತಾ ಭಿಲ್ಲಸ್ಯ ಕಸ್ಯಚಿತ್ ।
ಸ ಭಿಲ್ಲೋ ವನಮಧ್ಯಸ್ಥಃ ಸ್ವಕುಟುಂಬಂ ಸದಾಭರತ್ ||೨೬||

ತತ್ರ ಬಿಲ್ವತರುಃ ಕಶ್ಚಿತ್ಸರ್ವದಾ ನವಪಲ್ಲವಃ ।
ತನ್ಮೂಲೇ ಲಿಂಗಮಮಲಂ ನಾರ್ಮದಂ ಸ್ಥಿತಮುತ್ತಮಂ ||೨೭||

ತತ್ರೇಯಂ ಕನ್ಯಕಾ ಕ್ರೀಡಾಂ ಕೃತ್ವಾ ತಿಷ್ಠತಿ ಸರ್ವದಾ ।
ಕ್ರೀಡಾರ್ಥಂ ಜಲಸೇಕಂ ಚ ತತ್ರ ಕೃತ್ವಾಧಿತಿಷ್ಠತಿ ||೨೮||

ತತ್ರೇಯಂ ಸ್ವವಿಹಾರಾರ್ಥಂ ನಿತ್ಯಂ ಸಂಮಾರ್ಜನಾದರಾ ।
ತರುಣಂ ಬಿಲ್ವಮಾಲೋಕ್ಯ ಸಾ ದದಾತಿ ಜಲಂ ಮುದಾ ||೨೯||

ಮನಸ್ಸಿಗೆ ಬಹಳ ಹರ್ಷನಾಗುವುದು. ಚತುರ್ಮುಖನೇ! ಈಕೆ ಯಾರು? ಈಕೆಯ ವೃತ್ತಾಂತವೇನು? ದಯೆಯಿಟ್ಟು ವಿವರಿಸಿ ಹೇಳು." ಎಂದು ಪ್ರಾರ್ಥಿಸಿದನು. ||೨೪-೨೫||

ಆಗ ಬ್ರಹ್ಮನು ಹೀಗೆಂದನು "ಈ ಬಾಲಿಕೆಯು ತನ್ನ ಹಿಂದಿನ ಜನ್ಮದಲ್ಲಿ ಒಬ್ಬ ಭಿಲ್ಲನ ಮಗಳಾಗಿದ್ದಳು. ಈಕೆಯ ತಂದೆಯಾದ ಆ ಭಿಲ್ಲನು ತನ್ನ ಕುಟುಂಬದೊಡನೆ ಒಂದು ಅರಣ್ಯದ ಮಧ್ಯದಲ್ಲಿ ಇದ್ದು ಹೆಂಡತಿ ಮಕ್ಕಳನ್ನು ಕಾಪಾಡಿಕೊಂಡಿದ್ದನು. ||೨೬||

ಆ ಭಿಲ್ಲನ ಮನೆಯ ಹತ್ತಿರದಲ್ಲಿಯೇ ಒಂದು ಬಿಲ್ವವೃಕ್ಷವಿದ್ದಿತು. ಆ ವೃಕ್ಷವು ಸದಾ ಚಿಗುರಿ ಸುರಮ್ಯವಾಗಿರುತ್ತಿತ್ತು. ಅದರ ಕೆಳಗೆ ಒಂದು ರೇವಾಲಿಂಗವಿದ್ದಿತು. ||೨೭||

ಈಕೆಯು ಬಾಲಿಕೆಯಾಗಿದ್ದಾಗ ಅದೇ ಬಿಲ್ವವೃಕ್ಷದ ಕೆಳಗೆ ತನ್ನ ಎಲ್ಲಾ ಆಟವಾಡುತ್ತಾ ಇರುತ್ತಿದ್ದಳು. ಕೇವಲ ಮಕ್ಕಳು ಕ್ರೀಡಿಸುವಂತೆ ನೀರನ್ನು ತಂದು ಆ ಲಿಂಗಕ್ಕೆ ಹುಯ್ಯುತ್ತಿದ್ದಳು. ಇದೇ ರೀತಿಯಾಗಿ ಅಲ್ಲಿಯೇ ವಿಹರಿಸುತ್ತಿದ್ದಳು. ||೨೮||

ಆ ಚಿಕ್ಕ ಬಿಲ್ವವೃಕ್ಷದ ಕೆಳಗೇ ಆಟವಾಡಬೇಕೆಂಬ ಆಸೆಯಿಂದ ಅಲ್ಲೆಲ್ಲಾ ಚೊಕ್ಕಟ ಮಾಡುವಳು. ನೀರನ್ನು ತಂದು ಸುತ್ತಲೂ ಎರಚುವಳು. ಆ ಚಿಗುರಿದ ಬಿಲ್ವಮರಕ್ಕೂ ನೀರನ್ನು ಹೊಯ್ಯುವಳು. ಇದೇ ಆಕೆಗೆ ಒಂದು ಆಟವಾಗಿದ್ದಿತು.

ತರುಮೂಲಾರ್ಪಿತಂ ನೀರಂ ಲಿಂಗೋಪರಿ ಪತತ್ಯಪಿ ।
ತೇನಾಭಿಷಿಕ್ತಂ ತಲ್ಲಿಂಗಂ ತತ್ಪತ್ರೈರಪಿ ಪೂಜಿತಂ ॥೩೦॥

ಏವಂ ಸ್ಥಿತಾ ತದಾ ತತ್ರ ಕನ್ಯಾ ಸೇಯಂ ವನಾಂತರಂ ।
ಗತಾ ತತ್ರ ಮೃತಾ ದೈವಾತ್ ಸ್ಮೃತ್ವಾ ಕ್ರೀಡಾಸ್ಥಲಂ ಮುಹುಃ॥೩೧॥

ತತೋ ಯಮೋ ಗತಸ್ತತ್ರ ಸಂಚರನ್ ಪೃಥಿವೀಮಿಮಾಂ ।
ತಾಂ ಮೃತಾಂ ಸ ವಿಲೋಕ್ಯಾಹ ಚಿತ್ರಗುಪ್ತಂ ವಿಚಕ್ಷಣಂ ॥೩೨॥

ಕೇಯಂ ಪುಣ್ಯಾ ಕಿಮೇತಸ್ಯಾಃ ಕೃತಂ ಕಿಮನಯಾ ವದ ।
ಅನಯಾ ಕಾ ದಶಾ ಪ್ರಾಪ್ಯಾ ಸರ್ವಮೇವ ವಿಶೇಷತಃ ॥೩೩॥

ಆ ಮರದ ಬುಡಕ್ಕೆ ಹಾಕಿದ ನೀರು ಅಲ್ಲೇ ಇದ್ದ ಲಿಂಗದ ಮೇಲೂ ಬೀಳುತ್ತಿತ್ತು. ಆಟಕ್ಕಾಗಿ ಆ ಬಿಲ್ವಪತ್ರೆಯನ್ನು ಆಕೆಯು ಸುತ್ತಲೂ ಹರಡುತ್ತಿದ್ದರೆ ಅದೂ ಶಿವಲಿಂಗದ ಮೇಲೆ ಬೀಳುತ್ತಿತ್ತು. ಇದರಿಂದಲೇ ಲಿಂಗಾಭಿಷೇಕವೂ ಲಿಂಗಾರ್ಚನೆಯೂ ಆಕೆಗೆ ತಿಳಿಯದೇ ಅನಾಯಾಸವಾಗಿ ನಿತ್ಯವೂ ನಡೆಯುತ್ತಿತ್ತು. ॥೩೦॥

ಹೀಗೆಯೇ ಇರುತ್ತಿರಲು ಒಂದು ಸಲ ಈಕೆಯ ತಂದೆತಾಯಿಗಳು ಬೇರೊಂದು ಅರಣ್ಯಕ್ಕೆ ಹೋಗಲು ಅವರೊಡನೆ ಈಕೆಯೂ ಹೋಗಬೇಕಾಯಿತು. ಆದರೆ ಅಲ್ಲಿ ಈಕೆಯ ಆಯುಷ್ಯವು ತೀರಿದ್ದರಿಂದ, ಮರಣಕಾಲವು ಸನ್ನಿಹಿತ ವಾಗಲು, ತನ್ನ ಹಿಂದಿನ ಆಟವಾಡುತ್ತಿದ್ದ ಪ್ರದೇಶವನ್ನು ನೆನೆಸಿಕೊಳ್ಳುತ್ತಲೇ ಪ್ರಾಣಬಿಟ್ಟಳು. ॥೩೧॥

ಅದೇ ಹೊತ್ತಿಗೆ ಸರಿಯಾಗಿ ಯಮಧರ್ಮನು ಚಿತ್ರಗುಪ್ತನೊಂದಿಗೆ ಭೂಮಿಯಲ್ಲಿ ಸಂಚರಿಸುತ್ತಾ ಅಲ್ಲಿಗೆ ಬಂದು ಮೃತಳಾದ ಈಕೆಯನ್ನು ನೋಡಿ ಚಿತ್ರಗುಪ್ತನ ಸಂಗಡ, ॥೩೨॥

"ಎಲೈ ಚಿತ್ರಗುಪ್ತನೇ, ಇದೋ ಈಕೆಯು ಮೃತಳಾಗಿರುವಳು. ಈಕೆ ಯಾರು? ಈಕೆಯು ಏನೇನು ಕರ್ಮಗಳನ್ನು ಮಾಡಿದ್ದಾಳೆ? ಮುಂದೆ ಈಕೆಗೆ ಯಾವ ಗತಿಯು ಬರುವುದಿದೆ? ಎಂಬುದನ್ನು ವಿವರಿಸಿ ಹೇಳು" ಎಂದನು. ॥೩೩॥

|| ಚಿತ್ರಗುಪ್ತ ಉವಾಚ ||

ಇಯಂ ಭಿಲ್ಲಸ್ಯ ಕನ್ಯಾಸ್ಯಾತ್ಸದಾ ಮಾಂಸಂ ಕಿಲಾಶನಂ ।
ಏತತ್ಪಿತಾ ಬಿಲ್ವಮೂಲೇ ಚಕಾರ ವಿಪಿನೇ ಕುಟಿಂ ||೩೪||

ತಸ್ಯ ಬಿಲ್ವಸ್ಯ ಮೂಲೇ ತು ರೇವಾಲಿಂಗಂ ಸ್ಥಿತಂ ಯಮ ।
ಬಿಲ್ವಂ ಸಿಂಚತಿ ಯತ್ನೇನ ಛಾಯಾವೃದ್ಧ್ಯೈ ಜಲೈರ್ಮುಹುಃ ||೩೫||

ತಜ್ಜಲಂ ಪತಿತಂ ಲಿಂಗೇ ತುಂಗೇ ರೇವಾಜಲೋದ್ಭವೇ ।
ಹಸ್ತಲಭ್ಯಾನಿ ಪತ್ರಾಣಿ ತಾನ್ಯಾದಾಯ ಮುಹುರ್ಮುಹುಃ ||೩೬||

ಪಾತಯತ್ಯೇವ ಸಾ ಲಿಂಗೇ ಬಿಲ್ವಮೂಲಸ್ಥಿತೇ ಯಮ ।
ಸಂಮಾರ್ಜನಂ ಕರೋತ್ಯೇಷಾ ಬಿಲ್ವಸ್ಯ ಪುರತಸ್ತದಾ ||೩೭||

ಇಯಂ ತು ನಿತ್ಯಂ ಗಿರಿಮಲ್ಲಿಕಾಭಿಃ
ಬಿಲ್ವೀದಳೈರರ್ಚಯತಿ ಪ್ರಭಾತೇ ।

ಆಗ ಚಿತ್ರಗುಪ್ತನು ಯಮಧರ್ಮನೇ! ಈಕೆಯು ಭಿಲ್ಲನ ಮಗಳು. ಸರ್ವದಾ ಮಾಂಸವನ್ನೇ ತಿನ್ನುತ್ತಿದ್ದಳಾದ್ದರಿಂದ ಇವಳು ಬಹು ಪಾಪಿಷ್ಠಳಾಗಿದ್ದಾಳೆ. ಆದರೆ ಒಂದು ವಿಚಾರವಿದೆ. ಈಕೆಯ ತಂದೆಯು ಕಾಡಿನೊಳಗೆ ಒಂದು ಬಿಲ್ವವೃಕ್ಷದ ಸಮೀಪದಲ್ಲಿ ಗುಡಿಸಲನ್ನು ಕಟ್ಟಿಕೊಂಡು ಅದರಲ್ಲಿ ವಾಸಿಸುತ್ತಿದ್ದನು. ||೩೪||

ಅದೇ ಬಿಲ್ವವೃಕ್ಷದ ಕೆಳಗೆ ಒಂದು ರೇವಾಲಿಂಗವೂ ಇದ್ದಿತು. ಈ ಬಾಲಿಕೆಯು ಆ ಮರದಲ್ಲಿ ಮತ್ತು ಹೆಚ್ಚಾಗಿ ನೆರಳು ಬೇಕೆಂದು ಆ ಮರಕ್ಕೆ ನೀರನ್ನು ನಿತ್ಯವೂ ಹಾಕುತ್ತಿದ್ದಳು. ಇದೇ ಆಕೆಗೆ ಒಂದು ಆಟವೂ ಕೆಲಸವೂ ಆಗಿದ್ದಿತು ||೩೫||

ಆ ಬಿಲ್ವವೃಕ್ಷಕ್ಕೆ ಹುಯ್ದ ನೀರು ಆ ರೇವಾಲಿಂಗದ ಮೇಲೂ ಬೀಳುತ್ತಿದ್ದಿತು. ಅಲ್ಲದೇ ಕ್ರೀಡಾರ್ಥವಾಗಿ ಆ ವೃಕ್ಷಮೂಲವನ್ನು ನೀರು ಹಾಕಿ ಚೊಕ್ಕಟ ಮಾಡಿ ಕೈಗೆ ಸಿಲುಕುವ ಬಿಲ್ವಪತ್ರೆಯನ್ನು ಕಿತ್ತು ಆ ಮೂಲದಲ್ಲೆಲ್ಲಾ ಹಾಸುತ್ತಿದ್ದಳು. ಅವುಗಳು ಸಹ ಆ ಶಿವಲಿಂಗದ ಮೇಲೆ ಬೀಳುತ್ತಿದ್ದವು. ಈ ರೀತಿ ಒಂದು ವಿಧವಾದ ಲಿಂಗಾರ್ಚನೆಯೇ ಅವಳಿಗರಿಯದಂತೆ ನಡೆಯುತ್ತಿದ್ದಿತು. ||೩೬-೩೭||

ಈಕೆಯು ನಿತ್ಯವೂ ಪ್ರಾತಃಕಾಲದಲ್ಲಿ ಗಿರಿಮಲ್ಲಿಗೆಯ ಹೂಗಳನ್ನೂ ಬಿಲ್ವಪತ್ರೆಗಳನ್ನೂ ಆ ಬಿಲ್ವವೃಕ್ಷದ ಕೆಳಗೆ ಆ ಲಿಂಗದ ಮೇಲೆಯೇ ಶೇಖರಿಸಿ ಇಟ್ಟುಕೊಳ್ಳು

ಲಿಂಗಂ ಚ ಬಿಲ್ವಂ ಚ ಜಲಾಭಿಷಿಕ್ತ
ಮಗ್ರೇ ಪರಂ ನೃತ್ಯತಿ ತಸ್ಯ ನಿತ್ಯಂ ||೩೮||

ಸಂಮಾರ್ಜನಾದ್ಯೈಸ್ತ್ರದಲಂಕೃತಂ ಚ
ಸ್ಥಲಂ ವಿಲೋಕ್ಯಾಸಕೃದೇವ ಹೃಷ್ಟಾ ।
ಏವಂ ಸ್ಥಿತೇಯಂ ವಿಧಿತಸ್ಸಮಾಪಯತ್
ಪಂಚತ್ವಮಸ್ಯಾಸ್ತಿ ನ ಪಾತಕಾನಿ ||೩೯||

ಇತಿ ತದ್ವಚನಂ ಶ್ರುತ್ವಾ ತಾಂ ಪ್ರಣಮ್ಯ ಯಮಸ್ತತಃ ।
ಪುಷ್ಪಕೇ ತಾಂ ಚ ಸಂಸ್ಥಾಪ್ಯ ಪ್ರಯಯೌ ಸ್ವಪುರಂ ಪ್ರತಿ ||೪೦||

ತತ್ರ ಸ್ಥಿತೇಯಂ ಕಲ್ಯಾಣೀ ತೇನ ನಿತ್ಯಂ ಸಮರ್ಚಿತಾ ।
ತತೋ ಮತ್ಸದನಂ ಪ್ರಾಪ ವಿಮಾನವರಮಾಶ್ರಿತಾ ||೪೧||

ತ್ತಿದ್ದಳು. ನೀರನ್ನು ತಂದು ಅದರ ಮೇಲೆಲ್ಲಾ ಹಾಕುತ್ತಿದ್ದಳು. ಕೊನೆಗೆ ಆಟವಾಡುತ್ತಾ ಕುಣಿಯುತ್ತಿದ್ದಳು. ಇಷ್ಟು ಕೇವಲ ಕ್ರೀಡಾರ್ಥವಾಗಿ ಆಕೆಯು ಅಜ್ಞಾನದಿಂದ ಮಾಡುತ್ತಿದ್ದರೂ, ಅವು ಶಿವಲಿಂಗಾರ್ಚನೆಯ ವಿಧಿಯಂತೆಯೇ ನಡೆಯುತ್ತಿದ್ದವು. ||೩೮||

ಈಕೆಯು ಆ ಲಿಂಗವಿದ್ದ ಸ್ಥಳವನ್ನು ಗುಡಿಸಿ ನೀರುಹಾಕಿ ಚೊಕ್ಕಟಮಾಡಿ ಅದರಿಂದ ಒಂದು ಬಗೆಯ ತನ್ಮಯತೆಯ ಆನಂದವನ್ನನುಭವಿಸುತ್ತಿದ್ದಳು. ಆ ತನ್ನ ಕೆಲಸವನ್ನೇ ಪದೇ ಪದೇ ಔತ್ಸುಕ್ಯದಿಂದ ನೋಡಿ ಹರ್ಷಿಸುತ್ತಿದ್ದಳು. ಇದಿಷ್ಟೂ ಪರ್ಯಾಯವಾಗಿ ಶಿವಲಿಂಗಾರ್ಚನೆಯೇ ಆಗುತ್ತಿತ್ತು. ಹೀಗಿದ್ದರೂ ಏನೋ ಇಂದು ಮೃತಳಾಗಿರುವಳು. ಆದರೆ ಇವಳ ಪಾಪವೆಲ್ಲವೂ ಸ್ವತಃ ನಷ್ಟವಾಗಿ ಹೋಗಿದೆ.” ||೩೯||

ಚಿತ್ರಗುಪ್ತನ ಈ ಮಾತನ್ನು ಕೇಳಿ ಯಮನು ಈಕೆಯು ಪಾಪಶೂನ್ಯಳೆಂದು ನಿಶ್ಚಯಿಸಿ ಆಕೆಯನ್ನು ನಮಸ್ಕರಿಸಿದನು. ಮತ್ತು ತನ್ನ ಪುಷ್ಪಕ ವಿಮಾನದಲ್ಲಿಯೇ ಕೂರಿಸಿಕೊಂಡು ತನ್ನ ಜೊತೆಯಲ್ಲಿಯೇ ತನ್ನ ಪಟ್ಟಣಕ್ಕೆ ಕರೆದುಕೊಂಡು ಬಂದನು. ||೪೦||

ಆ ಯಮಧರ್ಮನ ಮನೆಯಲ್ಲಿಯೇ ಈಕೆಯು ಅನೇಕ ದಿನಗಳಿದ್ದಳು. ಯಮನು ನಿತ್ಯವೂ ಈಕೆಯನ್ನು ಪೂಜಾದಿಗಳಿಂದ ಸತ್ಕರಿಸುತ್ತಿದ್ದನು. ಅನಂತರ

ಯುಗಾನಾಮಯುತಂ ತತ್ರ ಸ್ಥಿತಾ ಲಿಂಗಾರ್ಚನಪ್ರಿಯಾ ।
ಯೋಗೇನಾಯೋನಿಜಂ ದೇಹಂ ಪ್ರಾಪ ಕನ್ಯಾ ಮನೋಹರಾ ॥೪೨॥

ಇಯಂ ಚ ಲಿಂಗಾರ್ಚನವಾಸನಾಯಾಂ
ದೃಷ್ಟ್ವಾತ್ರ ಲಿಂಗಾನಿ ಮನೋಹರಾಣಿ ।
ರೇವಾಜಲಸ್ಥೇ ಗಿರಿಕಂಧರೇಽಪಿ
ಚಕಾರ ವಾಸಂ ಶಿವಪೂಜನಾಯ ॥೪೩॥

ಭಗವನ್ ಕೌತುಕಂ ಜಾತಂ ಸಂದೇಹೋಽಪಿ ಗತೋ ಮಮ ।
ಜಾತ್ಯವಿಜ್ಞಾನಸಂದೇಹಃ ಸಮುಭೂತ್ಸಂಗತೋಽಧುನಾ ॥೪೪॥

ಅಯೋನಿಜೇಯಂ ಕಲ್ಯಾಣೀ ಕಸ್ಮೈ ದೇಯಾ ಮಯಾಧುನಾ ।
ಪ್ರೌಢಾಪಿ ಯುವತೀ ಸೇಯಂ ವಿವಾಹಾರ್ಹಾ ವಿಧೇ ಖಲು ॥೪೫॥

ಕೆಲವು ಕಾಲದ ಮೇಲೆ ಈಕೆಯು ಉತ್ತಮವಾದ ವಿಮಾನವನ್ನೇರಿ ನನ್ನ ಸತ್ಯ ಲೋಕಕ್ಕೆ ಬಂದಳು. ॥೪೧॥

ನಮ್ಮ ಸತ್ಯಲೋಕದಲ್ಲಿಯೇ ಈಕೆಯು ಅನೇಕ ಯುಗಗಳನ್ನು ಕಳೆದಳು. ಅಲ್ಲಿಯೂ ಸದಾ ಶಿವಲಿಂಗಾರ್ಚನೆಯನ್ನು ಮಾಡುತ್ತಾ ಕಾಲವನ್ನು ಕಳೆಯುತ್ತಿದ್ದಳು. ಅನಂತರ ಯೋಗಸಿದ್ಧಿಯನ್ನು ಪಡೆದುಕೊಂಡು, ಅಯೋನಿಜೆಯಾದ ಕನ್ಯಕೆಯ ರೂಪನ್ನು ಧರಿಸಿ ಈ ಲೋಕಕ್ಕೆ ಬಂದಳು. ॥೪೨॥

ಆ ಮೊದಲುಗೊಂಡು ಈಕೆಗೆ ಶಿವಲಿಂಗಾರ್ಚನೆ ಎಂದರೆ ಬಹಳ ಪ್ರಿಯವಾದುದಾಗಿದ್ದಿತು. ಆ ಆಸೆಯಿಂದಲೇ ಆಕೆಯು ಈ ರೇವಾನದೀ ತೀರದ ಅನೇಕ ಲಿಂಗಗಳನ್ನೂ ನೋಡಿ ಇಲ್ಲಿಯೇ ಲಿಂಗಾರ್ಚನೆಯನ್ನು ಮಾಡುತ್ತಾ ಇರಬೇಕೆಂದು ಆ ಬೆಟ್ಟದ ತಪ್ಪಲಲ್ಲಿ ವಾಸಿಸುತ್ತಿದ್ದಳು" ಎಂದು ಬ್ರಹ್ಮನು ಹೇಳಿದನು. ॥೪೩॥

ಭಗವನ್ ಬ್ರಹ್ಮನೇ! ಬಹಳ ಚೆನ್ನಾಯಿತು. ವಿಚಾರವನ್ನು ತಿಳಿದು ನೆಮ್ಮದಿಯಾಯಿತು. ಈಕೆಯ ಜಾತಿ, ಕುಲ, ಗೋತ್ರಗಳು ತಿಳಿಯದಿದ್ದುದರಿಂದ ನನಗೆ ಆಗಾಗ ಸಂದೇಹವಾಗುತ್ತಿತ್ತು. ಆದರೆ ಈಗ ನನಗೆ ಸಮಸ್ತ ವೃತ್ತಾಂತವೂ ತಿಳಿದು ನನ್ನ ಸಂದೇಹವು ದೂರವಾಯಿತು. ಬಹಳ ಔತ್ಸುಕ್ಯವೂ ಉಂಟಾಯಿತು. ॥೪೪॥

ಆದರೆ ಚತುರ್ಮುಖನೇ! ಈಗ ನನಗೊಂದು ಚಿಂತೆಯುಂಟಾಗಿದೆ. ಈಕೆಯು ಅಯೋನಿಜೆ. ಈಕೆಯನ್ನು ಯಾರಿಗೆ ಕೊಟ್ಟು ಮದುವೆ ಮಾಡುವುದು? ಈಗ

ಶ್ರೇಷ್ಠೇಯಂ ಕನ್ಯಕಾ ಜಾತ್ಯಾ ಯಸ್ಮಾದಿಯ ಮಯೋನಿಜಾ ।
ಅಯೋನಿಜೋ ವರೋ ಯೋಗ್ಯೋ ಯೋಗ್ಯಂ ಯೋಗ್ಯೇನ ಯುಜ್ಯತೇ ॥೪೬॥

ಅತ್ಯುತ್ತಮಾಯಾಃ ಕನ್ಯಾಯಾ ವರಃ ಸ್ಯಾದುತ್ತಮೋತ್ತಮಃ ।
ನ ಮಧ್ಯಮೋ ನಾಧಮೋಽಪಿ ನ ಜಾತ್ಯಂತರಸಂಯುತಃ ॥೪೭॥

ಅಯೋನಿಜೋಽಯಂ ಬಾಲಃ ಸ್ಯಾತ್ಪತಿಯೋಗ್ಯೋಽಯ ಮಿತ್ಯತಃ ।
ಅಯೋನಿಜತ್ವರೂಪಾ ತು ಜಾತಿರೇಕಾ ತಯೋರ್ಮತಾ ॥೪೮॥

ಅಯಮದ್ಯತನೋ ಬಾಲಃ ಪ್ರೌಢೇಯಂ ಖಲು ಕನ್ಯಕಾ ।
ಯುವತೀಯುವಯೋರ್ಯೋಗಃ ಖಲು ಲೋಕೇ ಸುಖಾವಹಃ ॥೪೯॥

ಇವಳು ಯುವತಿಯಾಗಿರುವಳು. ಮದುವೆಗೆ ಸಮಯವೂ ಪ್ರಾಪ್ತವಾಗಿರುವುದು. ಈಕೆಗೆ ಯೋಗ್ಯನಾದ ವರ ಯಾರಿರುವನು? ಇದನ್ನು ತಿಳಿಸಬೇಕು. ಎಂದು ರಾಜನು ನುಡಿಯಲು ||೪೫||

ಬ್ರಹ್ಮನು "ಎಲೈ ರಾಜನೇ! ನೀನು ಹೇಳುವುದು ಯುಕ್ತವಾಗಿದೆ. ಈಕೆಯು ಅಯೋನಿಜೆಯಾಗಿರುವುದರಿಂದ ಅತ್ಯುತ್ತಮ ಜಾತಿಯವಳು. ಈಕೆಗೆ ಯೋಗ್ಯನಾದ ವರನೆಂದರೆ ಅಯೋನಿಜನೇ ಆಗಿರಬೇಕು. ಸಮಾನಸ್ಕಂದರಿಗೆ ಸಂಬಂಧವು ಏರ್ಪಟ್ಟರೇ ತಾನೆ ಯುಕ್ತವಾಗುವುದು? ನಾವೂ ಹಾಗೆಯೇ ಅನುರೂಪ ನಾದ ವರನಿಗೇ ಕೊಟ್ಟು ವಿವಾಹವನ್ನು ಮಾಡಬೇಕಾದದ್ದು ನ್ಯಾಯ. ||೪೬||

ಅತ್ಯುತ್ತಮಳಾದ ಕನ್ಯೆಗೆ, ಅವಳಿಗೆ ಸದೃಶನಾದ ಅತ್ಯುತ್ತಮ ವರನೇ ಆಗ ಬೇಕು. ಹಾಗಿಲ್ಲದೇ ಮಧ್ಯಮನಾದ, ಅಧಮನಾದ ಅಥವಾ ಅನ್ಯಜಾತಿಯವನಾದ ವರನಿಗೆ ಕೊಡಕೂಡದು. ಆದುದರಿಂದ, ||೪೭||

ಈ ಬಾಲಕನೇ ಈಕೆಗೆ ಯೋಗ್ಯವರನಾಗಿರುವನು. ಈತನೂ ಸಹ ಅಯೋ ನಿಜನೇ ಆಗಿರುವುದರಿಂದ ಇವರಿಬ್ಬರ ಜಾತಿಯೂ ಒಂದೇ ಆದಂತಾಯಿತು. ಈತನೇ ಆಕೆಗೆ ಪತಿಯಾಗಲು ಯೋಗ್ಯನಾಗಿರುವನು.'' ಎಂದು ಹೇಳಲು ಆಗ ರಾಜ ನಿಂತೆಂದನು. ||೪೮||

" ಚತುರ್ಮುಖನೇ! ಅದು ಹೇಗಾಗುವುದು? ಈತನು ಇನ್ನೂ ಬಾಲಕನು. ತೀರ ಚಿಕ್ಕವಯಸ್ಸಿನವನು. ಈ ಕನ್ಯೆಯಾದರೋ ಆಗಲೇ ಪ್ರೌಢಳಾಗಿ ದೊಡ್ಡವಳಾಗಿ ದ್ದಾಳೆ. ಆದುದರಿಂದ ಇವರಿಬ್ಬರಿಗೆ ಹೇಗೆ ವಿವಾಹವು ಹೊಂದೀತು! ಪ್ರಪಂಚದಲ್ಲಿ

ಯದ್ಯಪ್ಯಯಂ ಪ್ರವೃದ್ಧೋಽಪಿ ಭವಿಷ್ಯತಿ ತಥಾಪಿ ಕಿಂ ।
ವಿರಕ್ತಶ್ಶಿವಪೂಜಾಯಾಮನುರಕ್ತಸ್ಸದಾ ಖಲು ॥೫೦॥

ವಿವಾಹಯೋಗ್ಯೋ ನ ವಿರಕ್ತಚಿತ್ತೋ
ವೃತ್ತೇ ವಿವಾಹೇಽಪಿ ವಿರಕ್ತ ಏವ ।
ಕಿಂ ವಾ ವಿರಕ್ತಸ್ಯ ವಿವಾಹಕೃತ್ಯಂ
ವಿರಕ್ತಬುದ್ಧಿಸ್ತು ವಿಲಕ್ಷಣೈವ ॥೫೧॥

ಅಸ್ಯಾಸ್ತು ತಾವನ್ನ ವಿರಕ್ತಿರಸ್ತಿ
ಸ್ತ್ರೀಣಾಂ ವಿರಾಗಃ ಖಲು ದುರ್ಲಭೋ ಹಿ ।
ವೈರಾಗ್ಯವಾರ್ತಾಽಪಿ ಭವೇದಸಹ್ಯಾ
ಸ್ತ್ರೀಣಾಮತೋ ನಾತ್ರ ವಿವಾಹಯೋಗಃ ॥೫೨॥

ಕೇವಲ ಯುವತಿ ಯುವಕರಿಗೆ ಸಂಬಂಧವೇರ್ಪಟ್ಟರೆ ತಾನೇ ಸುಖವಾಗುವುದು? ||೪೯||

ಯದ್ಯಪಿ ಈತನೂ ಮುಂದೆ ದೊಡ್ಡವನಾಗಬಹುದು. ಆಗಿಯೂ ಆಗುವನು. ಆದರೆ ಈತನು ಈ ಸಂಸಾರದಿಂದ ವಿರಕ್ತನಾಗಿರುವನಲ್ಲ! ಈತನಿಗೆ ಕೇವಲ ಶಿವಪೂಜೆಯಲ್ಲಿ ಮಾತ್ರ ಅನುರಾಗವಿರುತ್ತದೆ. ಈತನೊಡನೆ ಕನ್ಯಕೆಯು ವಿವಾಹವನ್ನು ಹೇಗೆ ಮಾಡುವುದು? ||೫೦||

ವಿಷಯ ಸುಖಗಳಲ್ಲಿ ಅಭಿಲಾಷೆ ಇಲ್ಲದವನು ವಿವಾಹಕ್ಕೆ ಯೋಗ್ಯನಲ್ಲ. ಏಕೆಂದರೆ ಆತನು ವಿವಾಹವಾದ ನಂತರವೂ ಹಾಗೆಯೇ ವಿರಕ್ತನಾಗಿಯೇ ಇರುತ್ತಾನೆ. ಅಲ್ಲದೇ ವೀತರಾಗಿಗೆ ವಿವಾಹದಿಂದ ಏನು ಪ್ರಯೋಜನ? ಪ್ರಪಂಚವೆಲ್ಲವೂ ವಿವಾಹ ಬಂಧನದಲ್ಲಿ ಪ್ರವೃತ್ತವಾಗಿದ್ದರೂ ವಿರಾಗಿಗಳ ಮನಸ್ಸು ಇದರಿಂದ ದೂರವಾಗಿರುವುದು. ||೫೧||

ಈ ಕನ್ಯೆಯಾದರೋ ಪ್ರಾಪ್ತವಯಸ್ಕಳಾಗಿ ಉಪಭೋಗಕ್ಕೆ ಯೋಗ್ಯಳಾಗಿದ್ದಾಳೆ. ಸ್ವಾಭಾವಿಕವಾಗಿಯೂ ಈಕೆಯು ರಸಿಕಳೂ ವಿದಗ್ಧಳೂ ಆಗಿದ್ದಾಳೆ, ವಿರಕ್ತಳಾಗಿಲ್ಲ. ಸ್ತ್ರೀಸಾಮಾನ್ಯಕ್ಕೂ ಕೂಡ ವೈರಾಗ್ಯವಿರುವುದಿಲ್ಲವಷ್ಟೆ. ಅವರು ಯಾವಾಗಲೂ ಸುಖಾಭಿಲಾಷಿಣಿಯರಾಗಿಯೇ ಇರುತ್ತಾರೆ. ಹೀಗಿರಲು ಇವರಿಬ್ಬರಿಗೆ ಹೇಗೆ ವಿವಾಹ ನಡೆಯಲು ಸಾಧ್ಯ? ||೫೨||

ಅಯಂ ವರಶ್ಚೇನ್ಮಮ ಭಾಗ್ಯಮೇವ
ವರತ್ವಸಂಪತ್ತಿರಿಹ ತ್ವಯಾಪಿ ।
ಕಿಂ ಕಲ್ಪನೀಯಾ ತವ ಶಕ್ತಿರಸ್ತಿ
ಮಹೇಶ್ವರಾರಾಧನಸಾಧನೇನ ॥೫೩॥

ಮಾಹೇಶ್ವರಾಣಾಂ ಕಿಮಿಹಾಸ್ತ್ಯಶಕ್ಯಂ
ಯಸ್ಮಾದಯೋಗ್ಯೋಽಪಿ ಖಲು ಕ್ಷಣೇನ ।
ಯೋಗ್ಯೋ ಭವತ್ಯೇವ ಶಿವಪ್ರಸಾದಾತ್
ಶಿವಪ್ರಸಾದಾತ್ಸಕಲಾರ್ಥಸಿದ್ಧಿಃ ॥೫೪॥

ಯದ್ಯದ್ದುರ್ಲಭಮೇವ ವಸ್ತು ತದಪಿ ಪ್ರಾಯಚ್ಛಿವಾರಾಧನೇ
ತತ್ಸರ್ವಂ ಸುಲಭಂ ಭವತ್ಯನುದಿನಂ ಕಿಂ ದುರ್ಲಭಂ ಭೂತಲೇ ।

ಈತನು ವಿವಾಹಕ್ಕೆ ಒಡಂಬಟ್ಟರೆ, ಈತನೇ ಈ ಕನ್ಯೆಗೆ ವರನಾದರೆ, ನನಗೆ ಬಹಳ ಸಂತೋಷವಾಗುವುದು. ಈತನು ವರನಿಗಿರಬೇಕಾದ ಸಕಲ ಲಕ್ಷಣಗಗಳಿಂದಲೂ ಪರಿಪೂರ್ಣನಾಗಿದ್ದಾನೆ. ಇವರಿಬ್ಬರನ್ನೂ ದಂಪತಿಗಳನ್ನಾಗಿ ಮಾಡುವಂತಾದರೆ ನಾನೇ ಭಾಗ್ಯಶಾಲಿ. ಎಂದು ಭಾವಿಸುತ್ತೇನೆ. ಆದರೆ ಈತನನ್ನು ವಿವಾಹಕ್ಕೆ ನೀನೇ ಒಡಂಬಡಿಸಬೇಕು. ಅದು ನಿನ್ನಿಂದಲೇ ಸಾಧ್ಯ. ಅತಿಶಯವಾದ ಶಿವರಾಧನೆಯಿಂದ ನೀನು ಸ್ವಾಧೀನಸಿದ್ಧಿಯಾಗಿದ್ದೀಯೆ. ॥೫೩॥

ನಿನ್ನಂತಹ ಶಾಂಭವರಿಗೆ ಸಾಧಿಸಲಸಾಧ್ಯವಾದದ್ದು ಈ ಪ್ರಪಂಚದಲ್ಲೇನಿದೆ? ಎಂಥಾ ಅಸಾಧ್ಯವಾದ ಕೆಲಸವಾಗಿದ್ದರೂ ನಿನ್ನಂತಹವರಿಗೆ ಅದು ಸುಲಭಸಾಧ್ಯವಾಗುವುದು. ಏಕೆಂದರೆ ಆ ಶಿವಾರಾಧನೆಯು ಅಷ್ಟು ಮಹತ್ತರವಾದುದು. ಆ ಪರಮೇಶ್ವರನ ಅನುಗ್ರಹದಿಂದಲೇ ಚಿಂತಿಸಿದ ಕಾರ್ಯವು ಕೈಗೂಡುವುದು. ಆದುದರಿಂದ ಶಿವಾರಾಧನೆಯನ್ನು ಮಾಡುತ್ತಿರುವವರಿಗೆ ಅಸಾಧ್ಯವಾದದ್ದೇ ಇರುವುದಿಲ್ಲ. ॥೫೪॥

ಪ್ರಪಂಚದಲ್ಲಿ ಯಾವ ಯಾವುದನ್ನು ಸಂಪಾದಿಸಲು ಅಸಾಧ್ಯವೆಂದಿರುತ್ತದೆಯೋ ಅವೆಲ್ಲವನ್ನೂ ಶಿವರಾಧನೆಯ ದೆಸೆಯಿಂದ ಸುಲಭವಾಗಿಯೇ ಪಡೆಯಬಹುದು. ಶಿವಭಕ್ತರಿಗೆ ದುರ್ಲಭವಾದದ್ದೇ ಇರುವುದಿಲ್ಲ. ಶಿವಾರಾಧನೆಯಿಂದ ಸರ್ವವೂ ಸ್ವಾಧೀನವಾಗುವುದೆಂದು ಮಹಾತ್ಮರಾದ ಶಾಂಭವರು ಹೇಳುವರು.

ಸರ್ವಂ ಶಂಕರಪೂಜನೇನ ಭವತೀತ್ಯಾಹುರ್ಮಹಾಶಾಂಭವಾಃ
ತಸ್ಮಾಚ್ಛಾಂಭವವರ್ಯ ಯೋಗ್ಯಮಧುನಾ ಬಾಲಂ ಕುರುಷ್ವಾದರಾತ್ ॥೫೫॥

ಸೋಽಯಂ ಯೌವನಸಂಯುತೋ ಯದಿ ಭವೇದ್ಬಾಲೋಽನುರಕ್ತೋಽಧುನಾ
ತರ್ಹಿ ಸ್ಯಾತ್ತ್ವದನುಗ್ರಹೇಣ ಶುಭದಃ ಪಾಣಿಗ್ರಹಸ್ಸತ್ವರಂ ।
ಏವಂ ಸ್ಯಾನ್ಮದಪೇಕ್ಷಿತಂ ಪುನರಯಂ ಕಾಲೋ ಭವೇದ್ದುರ್ಲಭಃ
ಸಂಪತ್ತಿರ್ಮಹತೀ ಮಮಾಸ್ತಿ ವಿವಿಧದ್ರವ್ಯಾನ್ವಯೋಽಪ್ಯಸ್ತಿ ಮೇ ॥೫೬॥

ಇತಿ ತದ್ವಚನಂ ಶ್ರುತ್ವಾ ತಮಾಹ ನೃಪತಿಂ ವಿಧಿಃ ।
ವೃದ್ಧಿಂ ಯಾಸ್ಯತ್ಯಯಂ ನೂನಮದ್ಯ ಷೋಡಶವಾರ್ಷಿಕಃ ॥೫೭॥

ಆದುದರಿಂದ ಚತುರ್ಮುಖನೇ! ನೀನು ಶಿವಭಕ್ತವರ್ಯನಾಗಿದ್ದೀಯೆ. ನಿನ್ನ ಸಹಾಯದಿಂದಲೇ ಈ ಕಾರ್ಯವು ನಡೆಯಬೇಕಾಗಿರುವುದರಿಂದ ಈ ಬಾಲಕನನ್ನು ವಿವಾಹ ಮಾಡಿಕೊಳ್ಳುವಂತೆ ಬೋಧನೆಮಾಡಿ ಅವನನ್ನೂ ಒಪ್ಪಿಸಬೇಕು. ||೫೫||

ಈಗ ನೀನೇ ಸರ್ವಥಾ ಅನುಗ್ರಹಿಸಬೇಕು. ಈ ಬಾಲಕನು ನೂತನ ತಾರುಣ್ಯಸಂಪನ್ನನಾಗಿ ಈ ಕನ್ಯೆಯನ್ನು ಪ್ರೀತಿಸಬೇಕು. ಹಾಗಾದರೆ ಕೂಡಲೇ ಇವರಿಬ್ಬರಿಗೂ ಪಾಣಿಗ್ರಹಣವೆಂಬ ಶುಭಕರ್ಮವನ್ನು ಮಾಡಬಹುದು. ಹೀಗಾಗಬೇಕೆಂಬುದೇ ನನ್ನ ತೀವ್ರಾಭಿಲಾಷೆ. ಇವರಿಬ್ಬರಿಗೂ ದಾಂಪತ್ಯವೇರ್ಪಟ್ಟರೆ ನನ್ನ ಆಸೆಯು ಕೈಗೂಡುವುದು. ಆದುದರಿಂದ ಚತುರ್ಮುಖನೇ! ಜಾಗ್ರತೆಯಾಗಿ ಈ ಬಾಲಕನನ್ನು ವಿವಾಹಕ್ಕೆ ಸಿದ್ಧಪಡಿಸು. ಈ ಸಮಯವೂ ಕೂಡ ಬಹಳ ಪ್ರಶಸ್ತವಾಗಿರುತ್ತದೆ. ನನ್ನಲ್ಲಿ ಸಕಲ ದ್ರವ್ಯ ಸಂಭಾರಗಳೂ ಸಿದ್ಧವಾಗಿರುವುವು. ಶುಭಸ್ಯ ಶೀಘ್ರಂ ಎಂಬುದಕ್ಕನುಸಾರವಾಗಿ ಕೂಡಲೇ ವಿವಾಹ ಕಾರ್ಯವು ನಡೆಯುವಂತೆ ಮಾಡಿ ನಮ್ಮನ್ನು ಅನುಗ್ರಹಿಸು." ||೫೬||

ಆ ರಾಜನ ಅಭಿಲಾಷೆಯನ್ನು ಲಾಲಿಸಿ ಬ್ರಹ್ಮನು ಅನುಗ್ರಹಿಸುತ್ತಾ ಹೀಗೆ ಹೇಳಿದನು. "ಈ ಬಾಲಕನು ಈಗಲೇ ಪ್ರಾಪ್ತವಯಸ್ಕನಾಗುವನು. ಹದಿನಾರು ವರ್ಷದ ನವತರುಣನಾಗಿ ವಿವಾಹಕ್ಕೆ ತಕ್ಕ ವರನಾಗುವನು. ರಾಜನೇ! ಈ ಕೂಡಲೇ ವಿವಾಹವು ನಡೆಯಲಿ. ಇಲ್ಲೇ ಸುಂದರವಾದ ಶಿವಮಂದಿರದಲ್ಲಿ ಜಾಗ್ರತೆ ಪಾಣಿಗ್ರಹಣ ಮಹೋತ್ಸವಕ್ಕೆ ಸಿದ್ಧಪಡಿಸು. ||೫೭||

ಅಥುನ್ಯೈವ ವಿವಾಹೋಽಸ್ತು ಸುಂದರೇ ಶಿವಮಂದಿರೇ ।
ಶೋಭನದ್ರವ್ಯಸಂವೀತಮಿದಂ ಶಂಕರಮಂದಿರಂ ॥೫೮॥

ಇತಿ ತದ್ವಚನಂ ಶ್ರುತ್ವಾ ರಾಜಾ ಸಂತುಷ್ಟಮಾನಸಃ ।
ನಾಮ್ನಾ ಚಂದ್ರಮುಖೀಂ ಪ್ರಾಹ ತರುಣೀಂ ರಮಣೀಂ ಸ್ವಕಾಂ॥೫೯॥

ಅಯೋನಿಜಾ ಪಾಲಿತೇಯಂ ಕನ್ಯಾ ಕಮಲಲೋಚನಾ ।
ಇಯಂ ತು ಯುವತೀ ಜಾತಾ ಪ್ರಾಯಶಃ ಪತಿಮಿಚ್ಛತಿ ॥೬೦॥

ಅಸ್ಯಾಸ್ತ್ವಯೋನಿಜೋ ಭರ್ತಾ ದುರ್ಲಭಃ ಖಲು ಭೂತಲೇ ।
ದೈವಾದಯಂ ಬಾಲಕೋಽತ್ರ ದೃಷ್ಟಸ್ಸೋಽಯಮಯೋನಿಜಃ ॥೬೧॥

ಅಸ್ಯೈ ಕನ್ಯಾ ಮಯಾ ದೇಯಾ ಶಾಂಭವಾಯ ಮಹಾತ್ಮನೇ ।
ದುರ್ಲಭಶ್ಶಾಂಭವೋ ಲೋಕೇ ದಾನಪಾತ್ರಂ ಸ್ವಭಾವತಃ ॥೬೨॥

ಈ ಶಿವಮಂದಿರವೇ ವಿವಾಹಕ್ಕೆ ಉಚಿತವಾಗಿ ಮಂಗಳಕರವಾದ ಸ್ಥಾನವಾಗಿರುವುದು. ಮುಹೂರ್ತಕ್ಕೆ ಸಕಲ ಮಂಗಳ ದ್ರವ್ಯಗಳನ್ನೂ ತರಿಸಿ ಸಿದ್ಧ ಮಾಡೆಂದು ಬ್ರಹ್ಮನು ಆಶ್ವಾಸನವಿತ್ತೀಯಲು ರಾಜನಿಗೆ ಪರಮಾನಂದವಾಯಿತು. ಆತನು ಅತ್ಯುತ್ಸಾಹದಿಂದ ವಿವಾಹಕ್ಕೆ ತಕ್ಕ ಸಿದ್ಧತೆಗಳನ್ನು ಮಾಡಿಸುತ್ತಾ ತನ್ನ ಪತ್ನಿಯಾದ ಚಂದ್ರಮುಖಿಯನ್ನು ಕುರಿತು ಹೀಗೆಂದನು. ॥೫೮-೫೯॥

ಪ್ರಿಯೆ, ಚಂದ್ರಮುಖಿ ! ಈ ಕನ್ಯೆಯನ್ನು ಈವರೆಗೂ ನಾವು ಕಾಪಾಡಿದೆವು. ಈಕೆಯು ಸಾಮಾನ್ಯಳಲ್ಲ. ಅಯೋನಿಜೆಯು. ಅಲ್ಲದೇ ಈಗ ಯುವತಿಯಾಗಿ ಪರಮಸುಂದರಿಯಾಗಿದ್ದಾಳೆ. ಈ ಹೊಸತಾರುಣ್ಯದಲ್ಲಿ ಬಹುಶಃ ಈಕೆಯು ಸುಖಾನುಭವಕ್ಕಾಗಿ ತನಗೆ ಒಬ್ಬ ವಲ್ಲಭನು ಬೇಕೆಂದು ಅಪೇಕ್ಷಿಸುವಳು. ಸ್ವಾಭಾವಿಕವಾಗಿ ಸಕಲ ಯುವತಿಯರಿಗೂ ತಾರುಣ್ಯದಲ್ಲಿ ಈ ಬಯಕೆಯು ಆಗುವುದಷ್ಟೆ. ಆದುದರಿಂದ ಈಕೆಗೆ ಈಗ ವಿವಾಹವನ್ನು ಮಾಡಲು ನಾನು ಕಲ್ಪಿಸಿದ್ದೇನೆ. ॥೬೦॥

ಈ ಅಯೋನಿಜೆಗೆ ತಕ್ಕ ವರನು ಈ ಪ್ರಪಂಚದಲ್ಲಿ ದೊರೆಯುವುದು ಕಷ್ಟ. ಆದರೆ ಇಂದು ಭಾಗ್ಯವಶಾತ್ ಈ ಬಾಲಕನು ನಮಗೆ ದೊರೆತಿರುವನು. ಪುಣ್ಯದಿಂದ ಈತನು ನಮ್ಮ ಕಣ್ಣಿಗೆ ಬಿದ್ದುದು ಅದೃಷ್ಟವೇ ಸರಿ. ಆದುದರಿಂದ, ॥೬೧॥

ಈ ಅಯೋನಿಜಾತೆಯನ್ನು ಈ ಶಿವಭಕ್ತನಾಗಿಯೂ ಮಹಾತ್ಮನಾಗಿಯೂ ಇರುವ ಅಯೋನಿಜ ಬಾಲಕನಿಗೆ ಕೊಟ್ಟು ವಿವಾಹಮಾಡಲು ನಾನು ಅಪೇಕ್ಷಿಸು

|| ರಾಜ್ಞ್ಯುವಾಚ ||

ಸಾಚೀಕೃತಾನನಾ ನಾರೀ ಸಸ್ಮೇರವಿನಯಾನ್ವಿತಾ ।
ವಿಶೀರ್ಣನೀವಿದೇಶಾ ಸಾ ವಿಭಗ್ನಾಂಗದಕಂಕಣಾ ||೬೩||

ರಾಜನ್ನಭ್ಯುದಯಃ ಪ್ರಿಯಃ ಪರಿಣಯೋ ಯೋಗ್ಯೇನ ಯೋಗ್ಯಾನ್ವಯೇ
ಯೋಗ್ಯಃ ಸ್ಯಾತ್ಪತಿಕಾಮುನಾದ್ಯ ಬಹುಧಾ ತಸ್ಯಾಶ್ಶರೀರಾನ್ವಿತಾ ।
ಸಾ ರಂಭೇವ ವಿಭಾತಿ ನೇತ್ರಯುಗಳಂ ದೃಷ್ಟ್ವೈವ ನೀಲೋತ್ಪಲಂ
ತಸ್ಯಾಃ ಕಜ್ಜಲಮಾವಿವೇಶ ಸಜಲಂ ಕ್ವಾನ್ಯತ್ರ ತದ್ಯಾಸ್ಯತಿ ||೬೪||

ತ್ತೇನೆ. ಪ್ರಪಂಚದಲ್ಲಿ ಶಿವಭಕ್ತರು ವಿರಳರು ತಾನೆ. ದಾನಗಳಿಗೆಲ್ಲಾ ಸದಾ ಶಿವಭಕ್ತರೇ ಶ್ರೇಷ್ಠಪಾತ್ರರಾಗಿದ್ದಾರೆ. ಆದುದರಿಂದ ಈತನಿಗೆ ಕನ್ಯಾದಾನ ಮಾಡಲು ಬಯಸಿದ್ದೇನೆ." ||೬೨||

ಈ ಪ್ರಕಾರವಾಗಿ ರಾಜನು ತನ್ನ ಅಭಿಲಾಷೆಯನ್ನು ತಿಳಿಸುತ್ತಿರಲು ಆ ರಾಣಿಯು ಸಕಲವನ್ನೂ ಲಾಲಿಸಿ ಕೇಳಿದಳು. ಅನಂತರ ಮನಸ್ಸಿನಲ್ಲಿಯೇ ಸ್ವಲ್ಪ ಪರಾಮರ್ಶಿಸಿಕೊಂಡು ಆ ಚಂದ್ರಮುಖಿಯು ವಿನಯನಮ್ರಳಾಗಿ ನಗುನಗುತ್ತಾ ಹೀಗೆ ಹೇಳಿದಳು. ||೬೩||

" ಮಹಾರಾಜನೇ, ವಿವಾಹವೆಂದರೆ ಬಹಳ ಚೆನ್ನಾಗಿ ಸೂಕ್ಷ್ಮವಾಗಿ ವಿಚಾರ ಮಾಡಬೇಕು. ಅವಸರದಿಂದ ನಡೆಸಿದರೆ ಮುಂದೆ ಅನಾನುಕೂಲವಾಗಬಹುದು. ಯೋಗ್ಯನಾದ ವರನಿಗೆ ಕೊಟ್ಟು ಮದುವೆ ಮಾಡಿದರೆ ತಾನೆ ಉತ್ತರೋತ್ತರವಾಗಿ ಸುಖವುಂಟಾಗುವುದು. ಬಹುಶಃ ನೀನು ಹೇಳಿದಂತೆ ಈಕೆಯು ಯುವತಿಯಾಗಿರುವುದರಿಂದ ಪತಿಯನ್ನು ಅಪೇಕ್ಷಿಸುತ್ತಿರಬಹುದು. ಆದರೆ ಈಕೆ ಎಂಥವಳು, ಎಷ್ಟು ಲೋಕೋತ್ತರಳಾಗಿರುವಳು ಎಂಬುದನ್ನು ಸ್ವಲ್ಪ ವಿಚಾರಿಸು. ಈಕೆಯು ಈ ನವ ತಾರುಣ್ಯದಲ್ಲಿ ಸಾಕ್ಷಾತ್ ರಂಭೆಯಂತೆ ಇರುವಳು. ಈಕೆಯ ಪ್ರತಿಯೊಂದು ಅವಯವಗಳೂ ಎಷ್ಟು ಸೌಂದರ್ಯಯುಕ್ತಗಳಾಗಿವೆ ಎಂಬುದನ್ನು ಸ್ವಲ್ಪ ಪರಾಮರ್ಶಿಸು. ಈಕೆಯ ನೇತ್ರದ್ವಂದ್ವದ ಕಾಂತಿಸೊಬಗನ್ನು ಕಂಡು ಕನ್ನೈದಿಲೆಗಳು ನಾಚಿಕೊಂಡು, ಮಹಾ ಪರಾಭವವನ್ನನುಭವಿಸಿ, ಭಯದಿಂದಲೋ ಎಂಬಂತೆ ಆಳವಾಗಿರುವ ನೀರಿನಲ್ಲಿ ಹೋಗಿ ನಿಂತಿವೆ. ||೬೪||

ರಂಭಾಸ್ತಂಭನಿಭೋರುದೇಶಸುಷುಮಾ ಕೇನೋಪಮೇಯಾ ಮಯಾ
ತದ್ಬಾಹುದ್ವಯಕಾಂತಿರಪ್ಯನುಪಮಾ ತದ್ವಕ್ತ್ರಕಾಂತಿಸ್ತಥಾ ।
ತದ್ವೇಣೀಫಣಿಕಾಂತಿರಪ್ಯನುಪಮಾ ವಕ್ಷೋಜಕಾಂತಿಸ್ತಥಾ
ರಾಜನ್ ತಜ್ಜಘನಚ್ಛವಿಃ ಪದರುಚಿರ್ಹಸ್ತಚ್ಛವಿರ್ವಾಗಪಿ ॥೬೫॥

ಸೋಽಯಂ ತಾಪಸ ಏವ ತಾವದಧುನಾ ಮಾತಾ ನ ತಾತೋಽಪಿ ವಾ
ಭ್ರಾತಾ ವಾ ನ ಸಖಾ ನ ಮಿತ್ರಮಥವಾ ಧಾನ್ಯಂ ಧನಂ ವಾ ನೃಪ ।
ಪ್ರೋಷ್ಯಾ ತಾವದಿಯಂ ಕಥಂ ಪರಿಣಯೇ ಯೋಗ್ಯೋ ನ ಜಾನೇ ಮನೋ
ರಾಜನ್ ತದಜ್ಞವರಾಸ್ಯ ಯದ್ರುಚಿಕರಂ ತತ್ತೇ ಕುರುಷ್ವಾದರಾತ್ ॥೬೬॥

ಕುಲಂ ಶೀಲಂ ಮೂಲಂ ಕುಶಲಮತುಲಂ ಕಾಲಮಮಲಂ
ವಿಚಾರ್ಯಾದೌ ಪಶ್ಚಾತ್ಕುಲವಿಹಿತವಿದ್ಯಾಮಪಿ ವಯಃ ।

ರಾಜನೇ, ಇನ್ನೂ ಕೇಳು. ಅವಳ ಅಂಗಾಂಗಸೌಂದರ್ಯವು ಎಷ್ಟು ಉತ್ಕೃಷ್ಟವಾಗಿದೆ? ಆಹಾ! ಆಕೆಯ ಊರುದ್ವಯಗಳು ಬಾಳೆಕಂದುಗಳಂತೆ ವರ್ತುಲವಾಗಿವೆ. ಅವುಗಳ ಕಾಂತಿಗೆ ಯಾವುದರ ಉಪಮಾನವನ್ನು ಕೊಡಲಿ? ಆಕೆಯ ಬಾಹುಗಳ ಕಾಂತಿಯೋ ಅಸ್ವಾದೃಶವಾಗಿದೆ. ಹಾಗೆಯೇ ಆಕೆಯ ಮುಖ ಕಾಂತಿ, ಕೇಶಪಾಶದ ಮಿರುಗು, ಸ್ತನಗಳ ಸೌಂದರ್ಯ, ಜಘನ ಸೌಷ್ಠವ, ಪಾದಗಳ ನಡಗೆ, ಮಾತುಗಳಲ್ಲಿನ ಚಾತುರ್ಯ, ಕೌಶಲ್ಯ ಇವು ಲೋಕೋತ್ತರಗಳಾಗಿವೆ. ಅವುಗಳಿಗೆ ಈ ಪ್ರಪಂಚದಲ್ಲಿಯೇ ಉಪಮಾನವಿರುವುದಿಲ್ಲ. ॥೬೫॥

ಮಹಾರಾಜ, ನೀನು ಇಂಥವಳಿಗೆ ವರನೆಂದು ಹೇಳುವವನಾದರೋ ಕೇವಲ ವಿಲಕ್ಷಣನಾಗಿರುವನು. ಆತನು ಮೊದಲೇ ಸಂನ್ಯಾಸಿಯಾಗಿದ್ದಾನೆ. ತಾಯಿತಂದೆಗಳಿಲ್ಲ. ಸಹೋದರ, ಮಿತ್ರ ಇವರಾರೂ ಇಲ್ಲ. ಧನಧಾನ್ಯಗಳೂ ಕಾಣುವುದಿಲ್ಲ. ಇಂಥವನೊಡನೆ ಮದುವೆಯನ್ನು ನಡೆಸಿದರೆ ಈತನು ನಮ್ಮ ಕನ್ಯೆಕೆಯನ್ನು ಹೇಗೆ ಕಾಪಾಡುವನು? ಆದುದರಿಂದ ಈ ಕಾರ್ಯವು ನನಗೇನೋ ಅಸಮಂಜಸವಾಗಿ ತೋರುತ್ತಿದೆ. ಆದರೆ ನೀನು ಸ್ವತಃ ತಿಳಿದವನಿದ್ದೀಯೆ. ಇನ್ನೂ ಸರಿಯಾಗಿ ವಿಮರ್ಶಿಸಿ ಯೋಗ್ಯವಾಗುವಂತೆ ಮಾಡುವುದೆಂದು ನನ್ನ ಮತ. ॥೬೬॥

ವರನ ಕುಲ, ಶೀಲ, ಕಾರ್ಯದಕ್ಷತೆ, ವಿದ್ಯಾವೈಶದ್ಯ, ವಯಸ್ಸು ಮುಂತಾದವನ್ನೆಲ್ಲಾ ಮೊದಲು ವಿಚಾರಿಸಿ ತಿಳಿದುಕೊಂಡು ಅನುರೂಪನಾಗಿದ್ದರೆ ವಿವಾಹವನ್ನು

ವಿಚಾರ್ಯೋರ್ಯೈರ್ದೇಯಾ ಭವತಿ ಖಲು ಕನ್ಯಾಪ್ಯನುಚಿತಂ
ನ ಯಸ್ಮೈ ಕಸ್ಮೈಚಿದ್ವಿತರಣಮುಷಾಮ್ಯಸ್ಯ ವಸು ನಃ ॥೬೭॥

ರಾಜಾ ಸರಾಜ್ಞೀವಚನೇಷ್ವನಾದರಃ
ತಾಮಾಹ ರಾಜ್ಞೀಂ ವಿಧಿರಾಗತೋಽಸ್ತಿ ।
ಉಲ್ಲಂಘನಂ ತದ್ವಚನಸ್ಯ ನೇಷ್ಟಂ
ಶುಭಾವಹೇ ಕರ್ಮಣಿ ತಸ್ಯ ಶಕ್ತಿಃ ॥೬೮॥

ಯನ್ಮಂಗಲದ್ರವ್ಯಮಿಹಾಸ್ತಿ ಗೇಹೇ
ತಾವತ್ತದಾಸಾದಸಮುಸ್ತು ತೂರ್ಣಂ ।
ಅನ್ಯಚ್ಚವಿಷ್ಯತ್ಯಧುನೇತಿ ಮತ್ವಾ
ಪುನರ್ವಿಧಿಂ ಪ್ರಾಹ ಮನೋತ್ಸವೇನ ॥೬೯॥

ಮಾಡಬೇಕೆಂದು ಹೇಳುವರು. ಕುಲಗೋತ್ರಗಳು ಗೊತ್ತಿಲ್ಲದೇ ಅಪರಿಚಿತನಿಗೆ ಕನ್ಯೆಯನ್ನು ದಾನಮಾಡುವುದು ಅನುಚಿತವಾಗುತ್ತದೆ. ಅಪರಿಚಿತನಿಗೆ ಎಂದೂ ಶ್ರೇಷ್ಠರತ್ನವನ್ನು ಕೊಡಕೂಡದಷ್ಟೆ! ಇದೇ ನನ್ನ ಇಷ್ಟ" ಎಂದು ರಾಣಿಯು ಹೇಳಿದಳು. ॥೬೭॥

ರಾಣಿ ಚಂದ್ರಮುಖಿಯು ಮಾತುಗಳು ಚಿತ್ರರಥನಿಗೆ ಹಿತವೆನಿಸಲಿಲ್ಲ. ಈ ರೀತಿ ಇಲ್ಲದಸಂದೇಹ ಪಡುವುದು ಈಗ ಯೋಗ್ಯವಲ್ಲವೆಂದು ಸಮಾಧಾನ ಮಾಡುತ್ತಾ ಹೇಳಿದನು. ಈಗ ನೋಡು, ಸಾಕ್ಷಾತ್ ಬ್ರಹ್ಮನೇ ಇಲ್ಲಿಗೆ ಬಂದು ಈ ವಿವಾಹವನ್ನು ಮಾಡೆಂದು ಸೂಚಿಸುತ್ತಿದ್ದಾನೆ. ಅವನ ಮಾತನ್ನು ನಿರಾಕರಿಸುವುದು ನಮಗೆ ಹಿತವಾಗಲಾರದು. ಅಲ್ಲದೇ ಸರ್ವಶಕ್ತನಾದ ಆತನೇ ಈ ವಿಚಾರದಲ್ಲಿ ಸಕಲ ಸುಖ, ಶ್ರೇಯಸ್ಸುಗಳೂ ಉಂಟಾಗುವಂತೆ ಅನುಗ್ರಹಿಸಬಲ್ಲವನೂ ಆಗಿದ್ದಾನೆ. ಆದರಿಂದಲೇ ನಾವು ನಿಶ್ಚಿಂತರಾಗಿ ಈ ವಿವಾಹವನ್ನು ಶೀಘ್ರವಾಗಿ ಮಾಡಲೇಬೇಕು. ॥೬೮॥

ಆದುದರಿಂದ ಸಕಲ ಸಂಭಾರಗಳನ್ನೂ ವಿವಾಹಕ್ಕೆ ಅಣಿಮಾಡು. ಅರಮನೆಯಲ್ಲಿರುವ ಮಂಗಲದ್ರವ್ಯಗಳನ್ನು ಜಾಗ್ರತೆಯಾಗಿ ಇಲ್ಲಿಗೆ ತರಿಸು. ಅಲ್ಲದೇ ಮತ್ತೇನೇನು ಬೇಕಾಗುವುದೋ ಅವುಗಳನ್ನೂ ತರಿಸುವುದಕ್ಕೆ ಏರ್ಪಾಡು ಮಾಡು. ಹೀಗೆಂದು ರಾಣಿಯು ಸಂಗಡ ಹೇಳಬೇಕಾದ್ದನ್ನೆಲ್ಲಾ ಹೇಳಿ ಮತ್ತೆಲ್ಲಾ ವಿಚಾರ

ತಸ್ಯೈ ಸ ರಾಜ್ಞೀವಚನಾನಿ ನಾಹ
ಚತುರ್ಮುಖಾಯಾಪಿ ಸ ತದ್ವಿದಿತ್ವಾ ।
ರಾಜಾನಮಾಹ ಪ್ರಿಯವಾಗ್ವಿಧಾತಾ
ಜ್ಞಾತಂ ಚ ರಾಜ್ಞೀವಚನಂ ಮಯೇತಿ ॥೭೦॥

ಪಶ್ಚಾತ್ಸ ರಾಜಾ ನತಕಂಧರೋಽಭೂತ್
ತಮಾಹ ರಾಜಾನಮತಿಪ್ರಿಯೋಕ್ತ್ಯಾ ।
ಅಯಂ ವಿಚಾರೋ ನ ಸುರೇಷು ಯುಕ್ತಃ
ಸೋಽಯಂ ಮನುಷ್ಯೇಷು ಭವಿಷ್ಯತೀತಿ ॥೭೧॥

ಅಯೋನಿಜಾ ಸಾ ಖಲು ಕನ್ಯಕಾಪಿ
ತಸ್ಯಾಃ ಪಿತಾ ನಾಪಿ ನೃಪಾಸ್ತಿ ಮಾತಾ ।

ಗಳನ್ನೂ ನಿಶ್ಚರ್ಯಿಸುವ ಸಲುವಾಗಿ ಬ್ರಹ್ಮನ ಬಳಿಗೆ ಬಂದು ತನ್ನ ಸಂತೋಷವನ್ನು ವ್ಯಕ್ತಪಡಿಸುತ್ತಾ ಮಾತುಕತೆಯಾಡುತ್ತಿದ್ದನು. ॥೬೯॥

ಆದರೆ ರಾಣಿಯು ಹೇಳಿದ ಮಾತೊಂದನ್ನೂ ಬ್ರಹ್ಮನಿಗೆ ಹೇಳಲಿಲ್ಲ. ಬ್ರಹ್ಮನಿಗೆ ಅದು ಹೇಗೋ ತಿಳಿದುಹೋಯಿತು. ಆತನು ವಾಕ್ಚಾತುರ್ಯದಿಂದ ತನಗೆ ರಾಣಿಯ ಅಭಿಪ್ರಾಯವು ತಿಳಿದಿದೆ ಎಂದು ವ್ಯಕ್ತಪಡಿಸಿದನು. ಸಂಪೂರ್ಣವಾಗಿ ಅಭಿಪ್ರಾಯ ಕೊಡದೇ ಈ ಸಂದೇಹವೇಕೆ? ಈ ಅಸಮಂಜಸ ಯೋಚನೆಯೇಕೆ? ವಿವಾಹವನ್ನು ಮಾಡಬೇಕೆಂಬ ಅಪೇಕ್ಷೆ ಇದ್ದರೆ ಸರ್ವರೂ ಒಪ್ಪಲಿ. ಇಲ್ಲದಿದ್ದರೆ ನನ್ನದೇನೂ ಆಗ್ರಹವಿಲ್ಲೆಂದು ಬ್ರಹ್ಮನು ಸ್ಪಷ್ಟವಾಗಿ ಹೇಳಿಬಿಟ್ಟನು. ॥೭೦॥

ಬ್ರಹ್ಮನ ಈ ಖಡಾಖಂಡಿತವಾದ ಮಾತಿನಿಂದ ರಾಜನು ಲಜ್ಜಿತನಾಗಿ ತಲೆ ತಗ್ಗಿಸಿದನು. ರಾಣಿಯ ಅಭಿಪ್ರಾಯವನ್ನೂ ಸಹ ಹಾಗೆಯೇ ತಿಳಿಸಿದನು. ಅದನ್ನು ಕೇಳಿ ಬ್ರಹ್ಮನು ಸಮಾಧಾನ ಹೇಳುತ್ತಾ ಪ್ರಿಯವಾದ ಮಾತುಗಳನ್ನಾಡಿದನು. "ಎಲೈ ರಾಜನೇ, ನಿಮ್ಮ ಸಂಶಯವು ಯಥಾರ್ಥವಾಗಿರುತ್ತದೆ. ಆದರೆ ಈ ವಿಚಾರಗಳನ್ನು ದೇವತೆಗಳ ವಿಷಯದಲ್ಲಿ ಯೋಚಿಸಬೇಕಾದ್ದಿಲ್ಲ. ನೀವು ಹೇಳುವುದು ಕೇವಲ ಮನುಷ್ಯರಿಗೆ ಅನ್ವಯಿಸುವುದು. ॥೭೧॥

ಈಗ ನೀವೇನೂ ಅಸಮಂಜಸಕಾರ್ಯದಲ್ಲಿ ಬೀಳಬೇಕಾದ್ದಿಲ್ಲ. ಏಕೆಂದರೆ ಈ ಕನ್ಯೆಗೂ ತಂದೆತಾಯಿಗಳು ಯಾರೂ ಇರುವುದಿಲ್ಲ. ಇವಳಿಗೆ ತಾನೆ ಯಾವ ಕುಲ

ತಸ್ಯಾಃ ಕುಲಂ ಕಿಂ ನ ವಿಚಾರಣೀಯಂ
ಇದಂ ದ್ವಯೋರಪ್ಯುಪಪನ್ನಮೇವ ॥೭೨॥

ವರಸ್ಯ ತಾವದ್ಗುಣವರ್ಣನಂ ತು
ವರೋಽಯಮುತ್ಕೃಷ್ಟತಮೋ ವಯಸ್ತು ।
ಸದಾಪ್ಯಯಂ ಷೋಡಶವಾರ್ಷಿಕಃ ಸ್ಯಾತ್
ಜರಾವಿಚಾರೋಽಸ್ಯತಿದೂರತೋಽಸ್ತಿ ॥೭೩॥

ಭೂಮಂಡಲಸ್ಯಾಧಿಪತಿಸ್ಸ ಏವ
ಭಾವೀ ಭವಾರಾಧನಸಾಧನಜ್ಞಃ ।
ಭಾವತ್ವಮುತ್ಕೃಷ್ಟಗುಣೋಽಸ್ಯ ಸೋಽಯಂ
ವರೇಷು ತಾವತ್ಖಲು ದುರ್ಲಭೋ ಹಿ ॥೭೪॥

ಇತ್ಯಾಲೋಚನತತ್ಪರೇ ಸತಿ ನೃಪೇ ಬಾಲಃ ಕುಮಾರೋಽಭವತ್
ಪಶ್ಚಾದ್ಯೌವನಮಾಪ ಕಾಮುಸದೃಶಃ ಕಾಮೋಽಪಿ ದೃಷ್ಟ್ವೈವ ತಂ ।

ಗೋತ್ರಗಳೆಂದು ನಿರ್ಣಯಿಸುವುದಕ್ಕೆ ಸಾಧ್ಯ? ಈ ವಿಚಾರದಲ್ಲಿ ವಧೂವರರಿಬ್ಬರೂ ಸಮಾನರೇ ಆಗಿರುವರು. ॥೭೨॥

ಇನ್ನು ವರನ ಗುಣವಿಷಯಗಳನ್ನು ನೋಡಿದರೆ, ಈ ಬಾಲಕನು ರೂಪ ಗುಣಸಂಪನ್ನನಾಗಿರುವುದರಿಂದ ಶ್ರೇಷ್ಠನಾದ ವರನೇ ಆಗಿದ್ದಾನೆ. ಈತನ ವಯಸ್ಸಾದರೋ ಹದಿನಾರುವರ್ಷದ ನವತಾರುಣ್ಯಯುಕ್ತವಾಗಿರುವುದು. ಈತನು ಹೀಗೆಯೇ ಬಹು ಕಾಲದವರೆಗೆ ನವಯುವಕನಾಗಿಯೇ ಇರುತ್ತಾನೆ. ವಾರ್ಧಕ್ಯವು ಇನ್ನೂ ಎಷ್ಟೋ ದೂರದಲ್ಲಿರುವುದು. ಅದಕ್ಕಾಗಿ ಎಂದೂ ಚಿಂತಿಸಬೇಕಾದ್ದಿಲ್ಲ. ॥೭೩॥

ಈ ಬಾಲಕನು ಸದಾ ಶಿವಾರಾಧನೆಯ ಪ್ರಭಾವದಿಂದ ಮುಂದಕ್ಕೆ ಮಹಾರಾಜನೇ ಆಗುವವನಿದ್ದಾನೆ. ಐಶ್ವರ್ಯದ ವಿಚಾರಕ್ಕೇನೂ ಯೋಚಿಸಬೇಕಾಗಿಲ್ಲ. ಈತನಲ್ಲಿ ಶಿವಭಕ್ತತ್ವವೇ ಸರ್ವಮಾನ್ಯನಾದ ಗುಣವಾಗಿರುವುದಷ್ಟೆ! ಇಂಥ ಶಿವಭಕ್ತನಾಗಿರುವ ವರನು ಸಿಕ್ಕುವುದೂ ದುರ್ಲಭವಲ್ಲವೆ! ಆದುದರಿಂದ ಎಲ್ಲಾ ಚಿಂತೆಗಳನ್ನೂ ಬಿಟ್ಟು ವಿವಾಹಮಾಡಬಹುದೆಂದು ಹೇಳು.'' ॥೭೪॥

ಹೀಗೆಂದ ಬ್ರಹ್ಮನ ಮಾತುಗಳನ್ನು ಕೇಳಿ ಆ ರಾಜನು ಮನಸ್ಸಿನಲ್ಲಿಯೇ ವಿಚಾರವಿಮರ್ಶೆ ಮಾಡುತ್ತಿರಲು, ಆ ಬಾಲಕನು ನೋಡುನೋಡುತ್ತಿದ್ದಂತೆಯೇ

ಲಜ್ಜಾಕಜ್ಜಲಮಜ್ಜನೇನ ಮಲಿನಸ್ತಾತಾನುರೂಪೋಽಭವತ್
ತತ್ತಾತೋ ಮಲಿನಸ್ತಮೇವ ತನಯಂ ದೃಷ್ಟ್ವಾ ಪರಂ ಪ್ರಾಯಶಃ ॥೭೫॥

ಯುವಾನಂ ತಂ ದೃಷ್ಟ್ವಾ ನೃಪತಿರತಿಸಂತುಷ್ಟಹೃದಯೋ
ವಿವಾಹೋತ್ಸಾಹೇನ ದ್ರುತಮಖಿಲಮಂತ್ರಿಪ್ರಭುಯುತಃ ।
ಶಿವಂ ನತ್ವಾ ಭೂಯಸ್ಸಕಲಶುಭದಾನವ್ಯಸನಿನಂ
ಪುನಶ್ಚಕ್ರೇ ತಾವದ್ದ್ವಿಜಜನಯುತೋ ಮಂಗಲವಿಧಿಂ ॥೭೬॥

ಯುವತ್ವಂ ಸಂಪ್ರಾಪ್ತಸ್ಸ ಇತಿ ಮಹಿಲಾಸಾಹಸಮಹಾನ್
ಮಹೀಪಾಲಶ್ಶೀಲಂ ಶಿವಭಜನಶೀಲಂ ಚ ಕುಶಲಂ ।

ಹದಿನಾರು ವರ್ಷದ ನವತರುಣನಾಗಿಬಿಟ್ಟನು. ಅಂಗಾಂಗಗಳಲ್ಲಿ ಹೊಸ ತಾರುಣ್ಯವು ತುಂಬಿ ತುಳುಕುತ್ತಿತ್ತು. ಸಾಕ್ಷಾತ್ ಮನ್ಮಥನಂತೆಯೇ ಪರಮ ಸುಂದರನಾಗಿದ್ದನು. ಈ ಕುಮಾರನ ರೂಪಸೌಂದರ್ಯಗಳನ್ನು ನೋಡಿ ಪ್ರಾಯಶಃ ಆ ಮನ್ಮಥನು ಲಜ್ಜೆ ಎಂಬ ಕಾಡಿಗೆಯಲ್ಲಿ ಮುಳುಗಿ ತನ್ನ ತಂದೆಯಂತೆ ಕಪ್ಪಾಗಿಹೋಗಿರಬೇಕು. ಮಗನ ಈ ದುರವಸ್ಥೆಯನ್ನು ನೋಡಿಯೇ ಆತನ ತಂದೆಯೂ (ಶ್ರೀಕೃಷ್ಣನು) ಬಹುಶಃ ವ್ಯಸನದಿಂದ ಕಪ್ಪಾಗಿರಬೇಕು. (ಕೃಷ್ಣನು ನೀಲವರ್ಣನಾಗಿರುವುದನ್ನು ಹೀಗೆ ಉತ್ಪ್ರೇಕ್ಷೆಮಾಡಲಾಗಿದೆ.) ॥೭೫॥

ಸದ್ಯಃ ನವತಾರುಣ್ಯದಿಂದೊಪ್ಪಿದ ಆ ಕುಮಾರನನ್ನು ನೋಡಿ ರಾಜನು ಅತ್ಯಂತ ಸಂತುಷ್ಟನಾದನು. ಎರಡೂ ಕಣ್ಣುಗಳಿಂದ ನೋಡಿ ನೋಡಿ ಆನಂದಪಟ್ಟು ವಿವಾಹವನ್ನು ಮಾಡಲೇಬೇಕೆಂದು ಮನಸ್ಸಿನಲ್ಲಿಯೇ ನಿಶ್ಚಯಿಸಿದನು. ಅನಂತರ ಪಾಣಿಗ್ರಹಣಕ್ಕೆ ಅನುಕೂಲಪಡಿಸಲು, ತನ್ನ ಎಲ್ಲಾ ಪ್ರಧಾನಿ, ಮಂತ್ರಿ ಇವರೊಡನೆ ಮೊದಲು ಮಂಗಲದಾತನಾದ ಶಿವನನ್ನು ನಮಸ್ಕರಿಸಿ, ಸನ್ನದ್ಧನಾದನು. ಹಾಗೆಯೇ ಬ್ರಹ್ಮನೊಡನೆಯೂ ಇತರ ಜನರೊಡನೆಯೂ ಅತ್ಯುತ್ಸಾಹದಿಂದ ವಿವಾಹಾಂಗವಾದ ಮಂಗಲಕಾರ್ಯವನ್ನೂ ಮಾಡಿದನು. ॥೭೬॥

ಆ ಕುಮಾರನು ನವತರುಣನಾದ ಕೂಡಲೇ ಅಲ್ಲಿದ್ದ ಎಲ್ಲಾ ಸ್ತ್ರೀಯರೂ ವಿಸ್ಮಯದಿಂದ ಶ್ಲಾಘಿಸಿದರಲ್ಲದೇ ಎಲ್ಲರೂ ಈ ವಿವಾಹಕ್ಕೆ ಕೂಡಲೇ ತಮ್ಮ ಸಮ್ಮತಿಯನ್ನೂ ಸೂಚಿಸಿದರು. ಈ ಎಲ್ಲಾ ಘಟನೆಗಳನ್ನೂ ರಾಜನು ನೋಡುತ್ತಿದ್ದು

ವಿಚಾರ್ಯರ್ಯಾಂ ಕನ್ಯಾಮಪಿ ತವ ವರೋಽಯಂ ಪರವಶೋ
ಮಹಾವೀರೋ ಹಾರಸ್ಸುರಸದನತೋಽಸ್ಯಾಗತ ಇತಿ ॥೭೭॥

ತತಸ್ಸಾ ಲಜ್ಜಯಾ ನಮ್ರಾ ಚೇಷ್ಟಾಭೇದೈಃ ಪರಂ ನೃಪ ।
ಜ್ಞಾಪಯಾಮಾಸ ಹೃದಯಂ ವರಸ್ಸಂಮತ ಇತ್ಯಪಿ ॥೭೮॥

ತತೋ ಯುವಾನಂ ಸಮುಪೇತ್ಯ ರಾಜಾ
ಚತುರ್ಮುಖೇನಾಪಿ ಸಹಾತಿಹೃಷ್ಟಃ ।
ವಿಜ್ಞಾಪಿತಃ ಸ್ವಾಹ ವಿಧಿಸ್ಸ ರಾಜ್ಞಾ
ವಿವಾಹದೀಕ್ಷಾರ್ಥಮತಿಪ್ರಮೋದೈಃ ॥೭೯॥

ಮತ್ತೆ ಆ ಕುಮಾರನ ರೂಪಗುಣಗಳನ್ನೂ, ಆಚಾರಶೀಲತೆಯನ್ನೂ ಪರ್ಯಾಲೋಚಿಸಿ, ಮೊದಲು ಕನ್ಯೆಯ ಅಭಿಪ್ರಾಯವನ್ನು ತಿಳಿಯುವುದಕ್ಕೋಸ್ಕರ ಆ ಅಯೋನಿಜೆಯನ್ನು ಕುರಿತು, “ವತ್ಸೆ! ಇದೋ ನೋಡು, ಈ ಕುಮಾರನು ನಿನಗೆ ವರನು. ಈತನು ಸಾಮಾನ್ಯನಲ್ಲ. ಮಹಾವೀರನೂ, ಪರಮ ಶಿವಭಕ್ತನೂ, ಸಕಲ ರೂಪಗುಣಸಂಪನ್ನನೂ ಆಗಿರುವುದರಿಂದ ವರಶ್ರೇಷ್ಠನೇ ಆಗಿರುವನು. ಈತನು ಸಾಕ್ಷಾತ್ ಸ್ವರ್ಗಲೋಕದಿಂದ ಬಂದಿರುತ್ತಾನೆ. ಈತನಿಗೆ ನಿನ್ನನ್ನು ಪ್ರದಾನಮಾಡಬೇಕೆಂದು ನನ್ನ ಅಭಿಲಾಷೆ. ನೀನು ಇದಕ್ಕೆ ಒಪ್ಪುವೆಯಾ? ಈ ವರನನ್ನು ನೀನು ಮೆಚ್ಚುವೆಯಾ? ಎಂದು ಕೇಳಿದನು. ॥೭೭॥

ಅನಂತರ ಕುಮಾರಿಯು ಲಜ್ಜೆಯಿಂದ ತಲೆಯನ್ನು ತಗ್ಗಿಸಿ ನಿಂತುಕೊಂಡಳು. ವಿಲಕ್ಷಣವಾದ, ಅಭಿಪ್ರಾಯವನ್ನು ಸೂಚಿಸುವ ಚೇಷ್ಟೆಗಳಿಂದ ವರನು ತನಗೆ ಮೆಚ್ಚುಗೆಯಾಗಿರುವ ತನ್ನ ಮನಸ್ಸಿನ ಭಾವವನ್ನು ತಿಳಿಸಿದಳು. ॥೭೮॥

ಅನಂತರ ರಾಜನು ಈ ವಿಚಾರವನ್ನೆಲ್ಲಾ ಬ್ರಹ್ಮನಿಗೆ ತಿಳಿಸಿದನು. ಈ ಕನ್ಯೆಯ ಒಪ್ಪಿಗೆಯಿಂದ ಇಬ್ಬರಿಗೂ ಅತ್ಯಾನಂದವಾಯಿತು. ಆಗ ರಾಜನ ಪ್ರಾರ್ಥನೆಯ ಮೇರೆಗೆ ಬ್ರಹ್ಮನೇ ಆ ಕುಮಾರನ ಸಂಗಡ ವಿವಾಹದೀಕ್ಷೆಯನ್ನು ಕೈಗೊಳ್ಳೆಂದು ಹೇಳಿ ಎಲ್ಲಾ ವಿಚಾರಗಳನ್ನೂ ಆತನಿಗೆ ತಿಳಿಸಿದನು. ॥೭೯॥

ವಿವಾಹಕಾಲಸ್ತವ ಸೋಽಯಮದ್ಯ
ಕನ್ಯಾ ಮನೋಜ್ಞಾ ಯುವತೀ ನೃಪಸ್ಯ ।
ತ್ವಂ ಮಂಗಲಸ್ನಾನವಿಧಾನಯೋಗ್ಯಃ
ಪ್ರಾಜ್ಞಶ್ಶಿವಾರಾಧನತತ್ಪರೋಽಪಿ ॥೮೦॥

ಇತಿ ತದ್ವಚನಂ ಶ್ರುತ್ವಾ ಸತತಂ ಶಿವತತ್ಪರಃ ।
ಶಿವ ಶಂಭೋ ಮಹೇಶೇತಿ ವದನ್ ರೇವಾಂ ಗತಃ ಪುನಃ ॥೮೧॥

ತತಃಪರಂ ಸ ರಾಜಾಪಿ ವಿಸ್ಮಿತೋ ವಿಧಿನಾ ಸಹ ।
ರೇವಾಂ ಗತೋ ದದರ್ಶಾಥ ತನೋವ ಶಿವಪೂಜಕಂ ॥೮೨॥

"ಎಲೈ ಕುಮಾರನೇ! ನೀನು ಈಗ ಪ್ರಾಪ್ತವಯಸ್ಕನಾಗಿರುವುದರಿಂದ ವಿವಾಹಕ್ಕೆ ಯೋಗ್ಯನಾಗಿದ್ದೀಯೆ. ನೀನು ಶಿವಾರಾಧನೆಯಲ್ಲಿ ತತ್ಪರನಾಗಿದ್ದಾಗ ಸಹಾಯಕ್ಕಾಗಿ ಒಬ್ಬ ಸಹಧರ್ಮಚಾರಿಣಿಯು ಬೇಕು. ಅದೋ ನೋಡು. ಈ ರಾಜನ ಕನ್ಯೆ ಇರುವಳು. ಈಕೆಯು ಯುವತಿಯೂ ನಿನಗೆ ಅನುರೂಪಳೂ ಆಗಿದ್ದಾಳೆ. ವಿವಾಹಕ್ಕೆ ಸಕಲ ಸನ್ನಾಹಗಳೂ ಸಿದ್ಧವಾಗಿರುತ್ತವೆ. ಇನ್ನು ನೀನು ಈ ಶುಭಕಾರ್ಯಕ್ಕೆ ಸಮ್ಮತಿಸಿ ಮಂಗಲ ಸ್ನಾನಕ್ಕೆ ಸಿದ್ಧನಾಗು.'' ಹೀಗೆಂದು ಬ್ರಹ್ಮನು ಹೇಳಿದನು. ॥೮೦॥

ಮೊದಲೇ ಆ ಕುಮಾರನು ಕೇವಲ ಶಿವಾರಾಧನೆಯಲ್ಲಿಯೇ ತತ್ಪರನಾಗಿದ್ದನು. ಆತನಿಗೆ ಈ ಸಂಸಾರ ವಿಚಾರದಲ್ಲಿ ವಿರಕ್ತಿ ಇದ್ದುದರಿಂದ ಬ್ರಹ್ಮನ ಮಾತನ್ನು ಕೇಳಿದ ಕೂಡಲೇ ತಲೆಯನ್ನಲುಗಾಡಿಸಿ, ಶಿವ, ಶಂಭೋ, ಮಹೇಶ, ಎಂದು ಪರಮೇಶ್ವರನನ್ನು ಸ್ಮರಿಸುತ್ತಾ, ಕೂಡಲೇ ರೇವಾನದೀ ತೀರಕ್ಕೆ ಹೊರಟು ಹೋದನು. ॥೮೧॥

ಈರೀತಿ ಜಾಗ್ರತೆ ಆ ಕುಮಾರನು ಹೊರಟುಹೋದದ್ದನ್ನು ನೋಡಿ ರಾಜನಿಗೂ ಬ್ರಹ್ಮನಿಗೂ ವಿಸ್ಮಯವಾಯಿತು. ಪಶ್ಚಾತ್ತಾಪವೂ ಆಯಿತು. ಮತ್ತೊಂದು ಸಂಧಿಯನ್ನು ಸಾಧಿಸಬೇಕೆಂಬ ಅಪೇಕ್ಷೆಯಿಂದ ಆತನು ಬ್ರಹ್ಮನೊಡನೆ ರೇವಾತೀರಕ್ಕೆ ಹೋದನು. ಆ ಕುಮಾರನು ಅಲ್ಲಿ ಯಥಾಪ್ರಕಾರ ಶಿವಾರಾಧನೆಯನ್ನೇ ಮಾಡುತ್ತಿದ್ದನು. ॥೮೨॥

ಸ ತತ್ರೋದ್ಧೂಲ್ಯ ಸರ್ವಾಂಗಂ ಶೀತಲೈರ್ನರ್ಮದಾಜಲೈಃ ।
ಅಭಿಷಿಚ್ಯಾರ್ಚಯಾಮಾಸ ಬಿಲ್ವೈರ್ಲಿಂಗಂ ಮನೋಹರಂ ॥೭೩॥

ತತಃ ಪರಂ ಸ ರಾಜಾಪಿ ವಿಧಿಶ್ಚಾತೀವ ವಿಸ್ಮಿತಃ ।
ವಿಚಾರನಿರತೋ ಜಾತಃ ಕಿಮಸ್ಯತ್ಕಾರ್ಯಮಿತ್ಯಪಿ ॥೭೪॥

ಕಿಂ ಕನ್ಯಕಾಫಾಲವಿಲೇಖನಾನಿ
ದುಃಖಾನ್ಯತೇಷಾಣಿ ನ ಸಂಶಯೋಽತ್ರ ।
ಏತಾದೃಶೋ ದುರ್ಲಭ ಏವ ಲೋಕೇ
ವರೋ ವರಾಣಾಂ ವರ ಏವ ಸೋಽಯಂ ॥೭೫॥

ಉತ್ಸಾಹವೃದ್ಧಿಃ ಕಥಮಸ್ಯ ವೃತ್ತಾ
ಜಾತಾಪಿ ಸಾ ತಾವದಿಹಾತಿತಾಂತಾ ।
ಅಹೋ ಕಥಂ ಲೋಚನಯೋರ್ನ ಭಾಗ್ಯಂ
ತಯೋರ್ವಿವಾಹಾನವಲೋಕನೇನ ॥೭೬॥

ಮೈಗೆಲ್ಲಾ ಭಸ್ಮವನ್ನು ಹಚ್ಚಿಕೊಂಡು ರುದ್ರಾಕ್ಷಿಯನ್ನೂ ಧರಿಸಿಕೊಂಡು ಆತನು ಮನೋಹರವಾದ ಶಿವಲಿಂಗಕ್ಕೆ ರೇವಾಜಲದಿಂದ ಅಭಿಷೇಕ ಮಾಡಿ ಬಿಲ್ವಪತ್ರೆಗಳಿಂದ ಪೂಜಿಸುತ್ತಿದ್ದನು. ॥೭೩॥

ಈ ವಿಲಕ್ಷಣ ಸ್ವಭಾವವನ್ನು ನೋಡಿ ಆ ರಾಜನಿಗೂ ಬ್ರಹ್ಮನಿಗೂ ಅತ್ಯಂತ ಆಶ್ಚರ್ಯವುಂಟಾಯಿತು. ಈಗೇನು ಮಾಡಬೇಕು ? ಹೇಗೆ ಕಾರ್ಯವನ್ನು ಸಾಧಿಸಬೇಕೆಂಬುದೇ ಇಬ್ಬರಿಗೂ ದೊಡ್ಡ ಯೋಚನೆಯಾಯಿತು. ॥೭೪॥

ಏನು ಮಾಡುವುದಕ್ಕಾದೀತು ! ಮುಖ್ಯ ಆ ಕುಮಾರಿಯ ಹಣೆಬರಹವು ಅನುಕೂಲವಾಗಿಲ್ಲ. ಆಕೆಯ ಅದೃಷ್ಟವು ಕೇವಲ ದುಃಖದಾಯಕವಾಗಿಯೇ ಇದೆ ಎಂದು ತೋರುವುದು. ಈತನೋ ಎಷ್ಟು ಉತ್ಕೃಷ್ಟ ವರನಾಗಿದ್ದನು ? ಇಂತಹ ವರನು ಪ್ರಪಂಚದಲ್ಲಿ ದೊರೆಯುವುದು ಕಷ್ಟವಷ್ಟೆ ! ಇಂತಹವನು ನಮಗೆ ದೊರೆಯಲಿಲ್ಲವಲ್ಲ ! ॥೭೫॥

ಈತನನ್ನು ನೋಡಿದಕೂಡಲೇ ಆ ಕುಮಾರಿಯೂ ಮನಸ್ಸಿನಲ್ಲಿ ಸೋತಿದ್ದಳು. ಈತನು ತನಗೆ ವರನಾಗುವನೇ, ಎಂದು ತವಕದಿಂದ ಆಯಾಸಪಟ್ಟಳು. ಆದರೆ ಏನು ಮಾಡುವುದು ! ವಿಧಿಯು ಅನ್ಯಥಾ ಇದ್ದಿತು ! ಇಂಥ ಲೋಕೋತ್ತ

ರತ್ನಸ್ಯ ಕಾರ್ತಸ್ವರಸಂಗಮೇನ
ಭವತ್ಯವಶ್ಯಂ ಸುಷುಮಾ ಪ್ರವೃದ್ಧಾ ।
ತಯೋಃ ಪೃಥಙ್ನಸ್ಥಿತಿರಿಷ್ಟಹೇತುಃ
ಉತ್ಸಾಹಬೀಜಂ ತು ನ ಸರ್ವಥಾಪಿ ॥೮೭॥

ಏತಸ್ಯ ವೈರಾಗ್ಯವಿಶುದ್ಧವೃತ್ತೇಃ
ಕದಾಪಿ ಸಂಸಾರವಿಶೇಷವಾರ್ತಾ ।
ನಾಸೀನ್ನ ಚಾಗ್ರೇಽಪಿ ಭವಿಷ್ಯತೀತಿ
ಸಾ ಕನ್ಯಕಾ ಕಂ ವರಮೇತ್ಯತುಷ್ಟಾ ॥೮೮॥

ತರುಣೀಮಣಿರೇವ ಸಾ ತು ಕನ್ಯಾ
ರಮಣೀನಾಂ ರಮಣೀ ಮನೋಹರೇಣ ।
ವಯಸಾ ರುಚಿರೇಣ ಸಾ ಮನೋಜ್ಞಾ
ಕಮನೀಯಂ ಕಮವಾಪ್ನುಯಾದ್ವರಂ ವಾ ॥೮೯॥

ರರಾದ ವಧೂವರರ ವಿವಾಹವನ್ನು ನೋಡುವ ಭಾಗ್ಯವು ನಮ್ಮ ಕಣ್ಣುಗಳಿಗಿಲ್ಲ. ಅಯ್ಯೋ! ಇವೆಲ್ಲಾ ಮುಖ್ಯವಾಗಿ ನಮ್ಮ ದುರದೃಷ್ಟ. ॥೮೬॥

ರತ್ನಕ್ಕೆ ಸುವರ್ಣದೊಡನೆ ಸಂಯೋಗವು ದೊರೆತರೆ ಅವಶ್ಯವಾಗಿ ಅಪೂರ್ವವಾದ ಕಾಂತಿಯು ಸೂಸುವುದು. ಹಾಗೆಯೇ ಇವರಿಬ್ಬರಿಗೂ ಸಂಯೋಗವಾಗಿದ್ದರೆ ಎಷ್ಟು ಚೆನ್ನಾಗುತ್ತಿತ್ತು? ಈಗಲೂ ಸಹ ಇವರಿಬ್ಬರೂ ಒಂಟೊಂಟಿಯಾಗಿ ಅಗಲಿರುವುದನ್ನು ನೋಡಿಕೊಂಡಿರಲು ಸಾಧ್ಯವಾಗುವುದಿಲ್ಲ. ಆದರೆ ಹೇಗೆ ಮಾಡುವುದು? ಇಬ್ಬರನ್ನೂ ಸೇರಿಸಬಹುದೆಂಬ ಆಸೆಗೂ ಅವಕಾಶವಿದ್ದಂತೆ ತೋರುವುದಿಲ್ಲ? ॥೮೭॥

ಈ ಕುಮಾರನ ಚಿತ್ತವೃತ್ತಿಯು ಸರ್ವಥಾ ವೈರಾಗ್ಯದಿಂದ ಶುದ್ಧವಾಗಿದೆ. ಪಾಪವಾಸನೆಯಾಗಲಿ, ಸಂಸಾರದ ಅಪೇಕ್ಷೆಯಾಗಲಿ ಈತನಿಗೆ ಮೊದಲು ಇರಲಿಲ್ಲ. ಮುಂದಕ್ಕೂ ಅಸಂಭವವೆಂತಲೇ ತೋರುತ್ತಿದೆ. ಹೀಗಿರಲು ಆ ಕುಮಾರಿಕೆಯು ಇಂಥಾ ವರನನ್ನು ನೋಡಿ ಆಸೆಪಟ್ಟು, ಬಳಿಕ ಹೇಗೆ ಇನ್ನೊಬ್ಬನನ್ನು ವರಿಸಿಯಾಳು? ॥೮೮॥

ಆ ಕುಮಾರಿಯಾದರೂ ಏನು ಸಾಮಾನ್ಯಳೇ! ಅತ್ಯಂತ ಸುಂದರಿಯು. ಮೇಲಾಗಿ ನವತರುಣಿಯು. ರಮಣಿಯರಲ್ಲೆಲ್ಲಾ ಶ್ರೇಷ್ಠ ರಮಣಿಯಾಗಿರುವಳು

ಯದಿ ಶಂಕರ ಏವ ಮಾನಸಾಬ್ಜೇ
ಸತತಂ ತಸ್ಯ ಹಿತಾಹಿತಾಯ ವೃತ್ತಃ ।
ಹಿತಮಿತ್ಯವಧಾರ್ಯ ತಂ ಪ್ರವೃತ್ತಂ
ಕುರುತೇ ತರ್ಹಿ ಶುಭೇ ಪ್ರವೃತ್ತ ಏವ ॥೯೦॥

ನ ಮಮಾತ್ರ ಕಿಲಾತಿಚಾತುರೀ
ಚತುರಶ್ಶಂಕರ ಏವ ಸರ್ವಥಾಪಿ ।
ಜಗತಾಮುದಯೇಽಪಿ ರಕ್ಷಣೇ ವಾ
ವಿಲಯೇ ವಾ ಶಿವ ಏವ ಸರ್ವವೇತ್ತಾ ॥೯೧॥

ಯಸ್ಸರ್ವಜ್ಞಶಿರೋಮಣಿರ್ಮುನಿಗಣಾರಾಧ್ಯಃ ಪ್ರಸಾಧ್ಯಾಂಗಕೋ
ನಾಯಂ ತಸ್ಯ ತು ಸಿದ್ಧಮೇವ ಸಕಲಂ ಕಿಂ ದೀಪವದ್ಭಾಸಕಃ ।
ಯದ್ವಾಯಂ ಜನಕಸ್ಸಮಸ್ತಜಗತಾಂ ಸರ್ವಸ್ವತಂತ್ರಸ್ಸದಾ
ಸರ್ವಂ ಕರ್ತುಮಪಿ ಪ್ರವೃತ್ತ ಇತಿ ಮೇ ಬುದ್ಧಿಃ ಪರಂ ಜಾಯತೇ ॥೯೨॥

---

ಈ ಕುಮಾರನನ್ನು ಬಿಟ್ಟು ಮತ್ತೆ ಬೇರೆ ಯಾವ ಸುಂದರನಾಗಿರುವ ವರನನ್ನು ಪಡೆದಾಳು ? ॥೮೯॥

ಒಂದುವೇಳೆ ಈ ಕುಮಾರಕನ ಹೃದಯದಲ್ಲಿಯೇ ಪರಮೇಶ್ವರನು ಆವಾಸ ಮಾಡಿಕೊಂಡಿದ್ದು, ಈತನನ್ನು ಯುಕ್ತಾಯುಕ್ತ ಕಾರ್ಯಗಳಲ್ಲಿ ಪ್ರೇರಿಸುತ್ತಿರಬಹುದು. ಅಥವಾ ಈತನ ಹೃದಯಾಧಿಷ್ಠಿತನಾದ ಆ ಶಂಕರನೇ ಈತನ ಶ್ರೇಯಸ್ಸಿಗಾಗಿ ಈರೀತಿ ಪ್ರಚೋದಿಸುತ್ತಿರಬಹುದು. ಹಾಗಿದ್ದರೆ ಈತನು ಈಗಲೂ ತನ್ನ ಶ್ರೇಯಸ್ಸನ್ನೇ ಬಯಸುತ್ತಿರುವನೆಂದಾಗುವುದು. ॥೯೦॥

ಹಾಗೇನಾದರೂ ಈ ವಿಚಾರದಲ್ಲಿ ಪರಮೇಶ್ವರನ ಹಿಡಿತವೇ ಇದ್ದರೆ ನಮ್ಮ ಕೌಶಲವೇನೂ ನಡೆಯಲಾರದು. ಏಕೆಂದರೆ ಆ ಶಂಕರನು ಪರಮ ಚತುರನಾಗಿರುವನು. ಆತನ ಮುಂದೆ ಯಾರ ಕೈ ಶಕ್ತಿ ತಾನೇ ಸಾಗುವುದು ? ಆತನೇ ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳ ಸಮಸ್ತ ವಿಚಾರಗಳನ್ನೂ ತಿಳಿದಿರುವನು. ॥೯೧॥

ಆ ಪರಮೇಶ್ವರನೇ ಸರ್ವಜ್ಞರಲ್ಲೆಲ್ಲಾ ಶ್ರೇಷ್ಠನೆಂದು ಮುನಿಗಳೆಲ್ಲಾ ಸ್ತುತಿಸುತ್ತಾರೆ. ಹೀಗಿರಲು ನಮ್ಮಂತಹ ಅಲ್ಪಜ್ಞರು ಆತನ ಕಾರ್ಯಭಾರದಲ್ಲಿ ಹಸ್ತನಿಕ್ಷೇಪ

**ಇತಿ ಚಿಂತಾಕುಲೋ ಬ್ರಹ್ಮಾ ರಾಜ್ಞಾ ಸಹ ತಮರ್ಭಕಂ ।**
**ಪ್ರಾಹ ಧೃತ್ವಾ ಕರಂ ತಸ್ಯ ವಿನಯೇನೈವ ಸಾದರಂ ॥೯೩॥**

॥ ಬ್ರಹ್ಮೋವಾಚ ॥

**ಶ್ರೇಷ್ಠೇಯಂ ಕನ್ಯಕಾ ಜಾತ್ಯಾ ಯಸ್ಮಾದಿಯಮಯೋನಿಜಾ ।**
**ಅಯೋನಿಜೋ ವರೋ ಯೋಗ್ಯೋ ಯೋಗ್ಯಂ ಯೋಗ್ಯೇನ ಯುಜ್ಯತೇ ॥೯೪॥**
**ಅತ್ಯುತ್ತಮಾಯಾಃ ಕನ್ಯಾಯಾ ವರಃ ಸ್ಯಾದುತ್ತಮೋತ್ತಮಃ ।**
**ನ ಮಧ್ಯಮೋ ನಾಧಮೋಽಪಿ ನ ಜಾತ್ಯಂತರಸಂಯುತಃ ॥೯೫॥**

ವನ್ನಾಗಲಿ, ಸಹಾಯಕಾರ್ಯವೆಂದಾಗಲಿ, ಏನನ್ನಾದರೂ ಮಾಡಲು ಸಾಧ್ಯವಾಗುವುದೆ? ದೀಪವನ್ನು ನೋಡಲು ಬೇರೊಂದು ಬೆಳಕು ಬೇಕಾಗುತ್ತದೆಯೇ? ಇಲ್ಲ. ಹಾಗೆಯೇ ನಮ್ಮ ನಿರೀಕ್ಷಣೆಯಲ್ಲಿ ಮಾಡಿದ ಯಾವುದೂ ನಡೆಯದೆ ಶಂಕರನು ಚಿಂತಿಸಿದ ಕಾರ್ಯವು ಸಿದ್ಧಿಸಿಯೇ ತೀರುವುದು. ಏಕೆಂದರೆ ಆತನು ಸ್ವಯಂ ಸಿದ್ಧನು. ಸರ್ವ ಸ್ವತಂತ್ರನು ಅಥವಾ ಆತನ ಸಂಕೇತದಿಂದಲೇ ನಾವೂ ಈ ವಿಚಾರದಲ್ಲಿ ಪ್ರವೃತ್ತ ರಾಗಿರಬಹುದೇ? ಏನೋ ಒಂದೂ ನಿರ್ಣಯವಾಗುವುದಿಲ್ಲ. ಅಂತೂ ಆ ಪರಮೇಶ್ವ ರನೇ ಸರ್ವಶಕ್ತನೆಂಬುದಿಷ್ಟು ಮಾತ್ರ ತಿಳಿಯುತ್ತದೆ. ॥೯೨॥

ಇನ್ನೂ ಬಗೆಬಗೆಯಾಗಿ ಬ್ರಹ್ಮನಿಗೆ ಚಿಂತೆಗಳುಂಟಾದುವು. ಅನಂತರ ಸ್ವಲ್ಪ ಮನಸ್ಸನ್ನು ನಿಧಾನಗೊಳಿಸಿ ರಾಜನೊಡನೆ ಆ ಕುಮಾರನ ಬಳಿಗೆ ಹೋಗಿ ಕೈಹಿಡಿದುಕೊಂಡು ವಿನಯದಿಂದ ಹೀಗೆ ಹೇಳಿದನು. ॥೯೩॥

ಕುಮಾರನೇ! ಸ್ವಲ್ಪ ನಾನು ಹೇಳುವುದನ್ನು ಲಾಲಿಸು. ಈ ರಾಜನ ಕುವರಿಯು ಅಯೋನಿಜೆಯಾಗಿರುವಳು. ಆದ್ದರಿಂದಲೇ ಜಾತಿಯಲ್ಲಿಯೂ, ರೂಪಗುಣಗಳಲ್ಲಿಯೂ ಅತಿ ಶ್ರೇಷ್ಠಳಿರುವಳು. ಅಯೋನಿಜ ಕನ್ಯೆಗೆ ಯೋಗ್ಯನಾದ ವನು ಅಯೋನಿಜನೇ ಆಗಬೇಕಷ್ಟೆ. ಏಕೆಂದರೆ ದಾಂಪತ್ಯವು ಯಾವಾಗಲೂ ಅನುರೂಪವಾಗಿದ್ದರೇ ಶೋಭಿಸುವುದು. ॥೯೪॥

ಶ್ರೇಷ್ಠ ಕನ್ಯೆಗೆ ಅವಳಿಗೆ ತಕ್ಕಂತೆ ವರನೂ ಶ್ರೇಷ್ಠನೇ ಆಗಿರಬೇಕು. ಹಾಗಿ ಲ್ಲದೇ ವರನು ಮಧ್ಯಮನೋ, ಅಥವಾ ನೀಚನೋ, ಅನ್ಯಜಾತಿಯಲ್ಲಿ ಹುಟ್ಟಿದ ವನೋ ಆಗಿದ್ದರೆ ಆತನೊಡನೆ ಅಂಥ ಕನ್ಯೆಯ ವಿವಾಹವನ್ನು ಮಾಡುವಹಾಗಿಲ್ಲ. ॥೯೫॥

ವಿವಾಹಾಯ ಪ್ರಯತ್ನೋಽದ್ಯ ಕೃತೋ ಭೂಪತಿನಾ ಖಲು ।
ಅಯಂ ಕಿಲಾತಿಸಂತುಷ್ಟಶ್ಶಿವಪೂಜನತತ್ಪರಃ ॥೯೬॥

ಏತದಾಜ್ಞಾನುಸಾರೇಣ ವರ್ತನಂ ಶಿವಪೂಜನಂ ।
ರೇವಾಲಿಂಗಾರ್ಚನೇನ್ನೈವ ನೀತಮೇತೇನ ಜೀವನಂ ॥೯೭॥

ಮುನೀನಾಮಪಿ ದಾರಾಣಾಮಸ್ತ್ಯೇವ ಹಿ ಪರಿಗ್ರಹಃ ।
ಶಿವಾರ್ಚನಾದಿಧರ್ಮಾಣಾಂ ದಾರಾಸ್ತು ನ ವಿರೋಧಿನಃ ॥೯೮॥

ಹರದಾರಾನುಯೋಗೇನ ಹರಸೇವಾ ಪ್ರವರ್ಧತೇ ।
ಹರೋಪಹಾರಕರಣೇ ದಾರಾಃ ಸ್ಯುರಧಿಕಾರಿಣಃ ॥೯೯॥

ಈ ರಾಜನೂ ಶಿವಭಕ್ತನಾಗಿ ಶಿವಪಕ್ಷಪಾತಿಯಾಗಿರುವುದರಿಂದ ನಿನಗೆ ತನ್ನ ಕುಮಾರಿಯನ್ನು ಕೊಟ್ಟು ವಿವಾಹ ಮಾಡಬೇಕೆಂದು ಪ್ರಯತ್ನಿಸುತ್ತಿದ್ದಾನೆ. ಈ ಕಾರ್ಯವು ನೆರವೇರಿದರೆ ಈತನು ಪರಮ ಸಂತುಷ್ಟನಾಗುವನು. ॥೯೬॥

ಈ ಧರ್ಮಿಷ್ಠನಾದ ರಾಜನ ಆಜ್ಞೆಯಿಂದಲೂ ಪ್ರಚಾರದಿಂದಲೂ ದೇಶವಾದ್ಯಂತದಲ್ಲಿ ಶಿವಾರಾಧನೆಯು ನಡೆಯುತ್ತಿದೆ. ಈತನೂ ಸಹ ಕೇವಲ ನರ್ಮದಾಲಿಂಗದ ಆರಾಧನೆಯಲ್ಲಿಯೇ ತನ್ನ ಆಯುಷ್ಯವನ್ನು ಕಳೆಯುತ್ತಿದ್ದಾನೆ. ಇಂಥ ಪರಮಸಾತ್ವಿಕನ ಅಭಿಲಾಷೆಯನ್ನು ಈಡೇರಿಸುವುದು ದಿವ್ಯವಾದ ಕೆಲಸವಾಗುವುದು. ಈತನಿಗೆ ವ್ಯಥೆಯನ್ನುಂಟುಮಾಡುವುದು ಉಚಿತವಾಗಲಾರದು. ಅಲ್ಲದೇ, ॥೯೭॥

ಋಷಿಗಳೂ ಸಹ ಪಾಣಿಗ್ರಹಣ ಮಾಡಿಕೊಂಡು ಪತ್ನಿಯರನ್ನು ಸಂಗ್ರಹಿಸುತ್ತಾರಷ್ಟೆ! ಶಿವಾರಾಧನಾದಿ ಧರ್ಮಗಳಿಗೆ ಪತ್ನಿಯರೇನೂ ಬಾಧೆಯನ್ನು ಒಡ್ಡುವುದಿಲ್ಲ. ಪ್ರತ್ಯುತ ಅನುರೂಪರಾದ ಪತ್ನಿಯರು ಶಿವಧರ್ಮದಲ್ಲಿ ಸಹಾಯಕರಾಗುತ್ತಾರೆ. ॥೯೮॥

ಶಿವಭಕ್ತರಾದ ಪತ್ನಿಯರ ಸಮಾಗಮ, ಸಹಾಯ ಇವುಗಳಿಂದ ಶಿವಾರಾಧನೆಗೆ ಮತ್ತು ಸಹಾಯವೊದಗಿ, ಧರ್ಮವು ಅಭಿವೃದ್ಧವಾಗುವುದು. ಅಲ್ಲದೇ ಪತ್ನಿಯರಿಗೂ ಶಿವಾರಾಧನೆಯಲ್ಲಿ, ಶಿವಪೂಜೆಯ ಉಪಕರಣಸಂಗ್ರಹ, ಇವುಗಳಲ್ಲಿ ಅಧಿಕಾರವಿರುತ್ತದೆ. ॥೯೯॥

ದಾರೈರ್ಹಾರ್ರಸಮಾಪನ್ನೈಸ್ಸಿತಭೂತಿವಿಭೂಷಣೈಃ ।
ರುದ್ರಾಕ್ಷಮಾಲಾಭರಣಃ ಧೀರಸ್ಸುಖಮನುಕ್ಷಣಂ ॥೧೦೦॥

ಋತುಕಾಲೇಷು ದಾರಾಣಾಂ ಸಂಗೋಽಪಿ ಸುಖದಾಯಕಃ ।
ತತ್ಸುಖಂ ಶಂಕರಾಯೇತಿ ಯನ್ಮನಸ್ಸ ತು ಶಾಂಭವಃ ॥೧೦೧॥

ಲೋಕೇಷು ಕಸ್ಯ ವಾ ನಾಸ್ತಿ ವದ ದಾರಪರಿಗ್ರಹಃ ।
ದೃಶ್ಯಂತೇ ಸಕುಟುಂಬಾಸ್ತೇ ಮುನಯಶ್ಶಿವತತ್ಪರಾಃ ॥೧೦೨॥

ಇಂದ್ರಾದಯಸ್ಸುರಾಸ್ಸರ್ವೇ ಸದಾರಾ ಏವ ಸರ್ವದಾ ।
ಅಹಂ ಸದಾರೋ ವಿಷ್ಣ್ವಾದ್ಯಾಶ್ಶೇಷಾದ್ಯಾಶ್ಚ ಕುಟುಂಬಿನಃ ॥೧೦೩॥

ಕುಮಾರೋ ಗಣನಾಥಶ್ಚ ವೀರಭದ್ರಶ್ಚ ಭೈರವಃ ।
ನಂದಿಕೇಶಶ್ಚ ಭೃಂಗೀ ಚ ತುಂಡಿಶ್ಚ ರಿಟಿರೇವ ಚ ॥೧೦೪॥

ಭಸ್ಮ ರುದ್ರಾಕ್ಷಿಮಾಲೆಗಳಿಂದ ಅಲಂಕೃತರಾಗಿಯೂ ಇರುವ ಕನ್ಯೆಯರಿಂದ ಧೀರರಾದ ಶಿವಪೂಜಕರಿಗೆ ಸದಾ ಸುಖವೇ ದೊರೆಯುವುದು. ॥೧೦೦॥

ಕುಮಾರನೇ, ಪತ್ನಿಯರು ಋತುವಾದಾಗ (೫ನೇ ದಿನದಿಂದ ೧೬ನೇ ದಿವಸದ ವರೆಗಿನ ಕಾಲಕ್ಕೆ ಋತುಕಾಲವೆಂದು ಶಾಸ್ತ್ರದಲ್ಲಿ ಹೇಳಿದೆ) ಅವರ ಸಮಾಗಮವನ್ನು ಮಾಡಿದರೆ ಸುಖವು ದೊರೆಯುವುದು. ಅಂಥ ಸುಖವನ್ನು ಪರಮೇಶ್ವರನಿಗೇ ಅರ್ಪಿಸಿದರೆ ಅದರಿಂದ ಶಿವಧರ್ಮಕ್ಕೇನೂ ಬಾಧಕವಾಗುವುದಿಲ್ಲ. ಹೀಗೆ ಅನಾಸಕ್ತ ರಾದವರೇ ನಿಜವಾದ ಶಿವಧರ್ಮಾನುಯಾಯಿಗಳೆನಿಸುವರು. ॥೧೦೧॥

ಈ ಪ್ರಪಂಚದಲ್ಲಿ ಯಾರುತಾನೆ ವಿವಾಹವನ್ನು ಮಾಡಿಕೊಳ್ಳದೇ ಇರುವರು ? ಅಂತಹ ಶಿವಧರ್ಮಜ್ಞರಾದ ಮಹಾಮಹಾ ಋಷಿಗಳೂ ಸಹ ಪತ್ನಿಯರೊಡನೆ ಸಂಸಾರಮಾಡಿಕೊಂಡಿದ್ದಾರೆ. ಶಿವಾರಾಧನೆಯನ್ನೂ ಮಾಡುತ್ತಿರುತ್ತಾರೆ. ॥೧೦೨॥

ದೇವೇಂದ್ರನೇ ಆದಿಯಾಗಿ ಸಮಸ್ತ ದೇವತೆಗಳೂ ವಿವಾಹಿತರಾಗಿ ಸರ್ವದಾ ತಮ್ಮ ಪತ್ನಿಯರೊಂದಿಗೇ ಇರುವರು. ಹಾಗೆಯೇ ನಾನೂ ವಿಷ್ಣುವೂ ಆದಿಶೇಷನೇ ಮೊದಲಾದ ಸಮಸ್ತರೂ ವಿವಾಹಮಾಡಿಕೊಂಡು ಪತ್ನಿಯರನ್ನು ಪಡೆದಿರುತ್ತೇವೆ. ॥೧೦೩॥

ಹಾಗೆಯೇ ಆಲೋಚಿಸಿ ನೋಡು. ಸಾಕ್ಷಾತ್ ಷಣ್ಮುಖಸ್ವಾಮಿಯು ವಿವಾಹಿತನಾಗಿದ್ದಾನೆ. ಗಣಾಧ್ಯಕ್ಷನಾದ ಗಣಪತಿಯೂ ಪತ್ನಿಯೊಡನಿದ್ದಾನೆ. ಹೀಗೆಯೇ

ರೋಹಿಣೀಪ್ರಮುಖಾಸ್ಸಂತಿ ಚಂದ್ರಸ್ಯ ವನಿತಾಃ ಖಲು ।
ಛಾಯಾ ಸೂರ್ಯಸ್ಯ ರಮಣೀ ವಜ್ರಿಣಸ್ತು ಪುಲೋಮಜಾ ॥೧೦೫॥

ವಾಣೀ ಮೇ ರಮಣೀ ವಿಷ್ಣೋಃ ಕಮಲಾ ರಮಣೀ ಖಲು ।
ಪನ್ನಗೇಂದ್ರಸ್ಯ ಮಹಿಲಾ ಕೇವಲಾ ಖಲು ಸುಂದರೀ ॥೧೦೬॥

ತಸ್ಮಾತ್ತ್ವಮಪಿ ಯತ್ನೇನ ಕುರು ದಾರಪರಿಗ್ರಹಂ ।
ಕುರು ಮದ್ವಾಚಿ ವಿಶ್ವಾಸಮನ್ಯಥಾ ನೋಚ್ಯತೇ ಖಲು ॥೧೦೭॥

ಯಾಗದಾನಾದಯಸ್ಸರ್ವೇ ಧರ್ಮಕಾರ್ಯಾಃ ಪ್ರಯತ್ನತಃ ।
ಭಾರ್ಯಯಾ ಸಹ ಯೋಗೋಽಪಿ ನ ವಿರುದ್ಧಸ್ತಯಾ ಸಹ ೧೦೮॥

ಶಿವಪರಿವಾರದ ವೀರಭದ್ರ, ಭೈರವ, ನಂದಿಕೇಶ, ಭೃಂಗಿ, ತುಂಡಿ, ಮತ್ತು ರಿಟ್ಟಿ, ಮತ್ತು ಸಮಸ್ತರೂ ವಿವಾಹವನ್ನು ಮಾಡಿಕೊಂಡಿರುತ್ತಾರೆ. ||೧೦೪||

ಚಂದ್ರನು ಪತ್ನಿಯರನ್ನಾಗಿ ರೋಹಿಣಿಯೇ ಮೊದಲಾದ ಸುಂದರಿಯರಾದ ವನಿತೆಯರನ್ನು ಸಂಪಾದಿಸಿಕೊಂಡಿದ್ದಾನೆ. ಸೂರ್ಯನು ಪರಮ ಲಾವಣ್ಯಯುಕ್ತಳಾದ ಛಾಯಾದೇವಿಯನ್ನು ಸ್ವೀಕರಿಸಿದ್ದಾನೆ. ದೇವೇಂದ್ರನ ಭಾರ್ಯೆಯು ಶಚಿಯಾಗಿದ್ದಾಳೆ. ||೧೦೫||

ನಾನು ಸರಸ್ವತಿಯನ್ನು ಮದುವೆಯಾಗಿದ್ದೇನೆ. ವಿಷ್ಣುವಿಗೆ ಪರಮ ಸುಂದರಿಯಾದ ಲಕ್ಷ್ಮಿಯು ಪತ್ನಿಯಾಗಿದ್ದಾಳೆ. ಆದಿಶೇಷನಿಗೂ ಸುಂದರಿಯಾದ ಭಾರ್ಯೆ ಇದ್ದಾಳೆ. ಈರೀತಿ ಪ್ರತಿಯೊಬ್ಬರೂ ತಮಗೆ ಮೆಚ್ಚಿದ ವನಿತೆಯರನ್ನು ವಿವಾಹ ಮಾಡಿಕೊಂಡಿದ್ದಾರೆ. ||೧೦೬||

ಆದುದರಿಂದ ಕುಮಾರನೇ! ನೀನೂ ಸಹ ಹಿತವನ್ನು ಪರ್ಯಾಲೋಚಿಸಿಕೊಂಡು ಪತ್ನಿಯನ್ನು ಸ್ವೀಕರಿಸು. ನಾನೀಗ ವಿರುದ್ಧವಾಗಿ ಏನನ್ನೂ ಹೇಳುತ್ತಿಲ್ಲ. ಅಥವಾ ನಿನಗೆ ಕೇಡನ್ನೆಣಿಸುತ್ತಿಲ್ಲ. ನನ್ನ ಮಾತಿನಲ್ಲಿ ವಿಶ್ವಾಸವನ್ನಿಡು. ಬೇರೆ ಏನೂ ಹೇಳಬೇಡ. ||೧೦೭||

ಯಜ್ಞಯಾಗಾದಿಗಳೂ, ದಾನ ಮತ್ತು ವ್ರತ ಮುಂತಾದ ಧರ್ಮಕಾರ್ಯಗಳೂ ಪತ್ನಿಯಿಂದ ಏನೂ ಕೆಟ್ಟುಹೋಗುವುದಿಲ್ಲ. ಅವುಗಳಿಗೇನೂ ವಿರೋಧವುಂಟಾಗುವುದಿಲ್ಲ. ಪ್ರತ್ಯುತ ಪತ್ನಿಯ ಸಹಾಯದಿಂದ ಸಕಲ ಧರ್ಮಗಳಿಗೂ ಸಹಾಯವೊದಗಿ ಅದರಿಂದ ಅವು ಅಭಿವೃದ್ಧವಾಗುತ್ತವೆ. ಹೀಗೆಂದು ನಾನಾ ಬಗೆಯಾಗಿ

ಅಲಂ ದಾರೈರ್ಧೀರ್ಘೈರಲಮಲಮಪಾರೈರಪಿ ಧನೈಃ
ಅಲಂ ದಾನೈರ್ಯಾಗೈರಲಮಲಮಶೇಷಾನುಸರಣೈಃ ।
ಪರಂ ಹಾರಂ ಲಿಂಗಂ ಸಿತಭಸಿತಮಪ್ಯಸ್ಯ ಶರಣಂ
ಪುನಸ್ತಸ್ಮೈ ತಾವಚ್ಛರಣಮಿಹ ತಸ್ಮೇ ಪುನರಪಿ ॥೧೦೯॥

ಮರಣೇ ಸಮುಪಸ್ಥಿತೇ ನ ದಾರೈಃ ।
ನಿಕಟೇऽಪಿ ಸ್ಥಿತಿವಾರಣಂ ಕೃತಂ ಕಿಂ ।
ಕ್ವ ಮಮಾಭರಣಂ ಕ್ವ ಪಟ್ಟಕೂಲಂ ।
ಕ್ವ ಧನಂ ವೇತ್ಯನುಧಾವನಂ ಕೃತಂ ಕಿಂ ॥೧೧೦॥

ಬ್ರಹ್ಮನು ಹೇಳುತ್ತಿರಲು ಮಧ್ಯದಲ್ಲೇ ಆತನ ಮಾತನ್ನು ತಡೆದು ಆ ಬಾಲಕನು ಹೀಗೆ ಹೇಳಿದನು. ||೧೦೮||

" ಬ್ರಹ್ಮದೇವನೇ, ನಾಕು ಸಾಕು. ಆ ಪತ್ನಿಯರ ವಿಚಾರವನ್ನು ಸಾಕು ಮಾಡು. ಆ ಪತ್ನಿಯರಿಂದಾಗಲಿ ವಿಶಾಲವಾದ ಸಂಪತ್ತಿನಿಂದಾಗಲಿ, ನನಗೆ ಆಗ ಬೇಕಾದಕಾರ್ಯವಿಲ್ಲ ನನಗೆ ಅವುಗಳಿಂದೇನೂ ಪ್ರಯೋಜನವಿಲ್ಲ. ನನಗೆ ಆ ಯಜ್ಞ ಯಾಗಾದಿ ಧರ್ಮಗಳೂ ಬೇಡ. ದಾನ ಹೋಮಾದಿಗಳೂ ಬೇಡ. ನಾನೇನೂ ವಿವಾಹಿತರಾದವರನ್ನು ಅನುಸರಿಸಲೂ ಬೇಕಾಗಿಲ್ಲ. ಆದರೆ ನನಗೆ ಬೇಕಾದದ್ದು ಇದೊಂದೇ. ಶಿವಾರಾಧನೆಯೂ ಭಸ್ಮರುದ್ರಾಕ್ಷಿಗಳೂ ಶಿವಲಿಂಗವೂ ನನಗೆ ಬೇಕು. ಆ ಶಿವಲಿಂಗವೇ ನನಗೆ ರಕ್ಷಕ. ಇದಿಷ್ಟು ಇದ್ದರೆ ನನಗೆ ನಾಕು. ಮತ್ತೇನನ್ನೂ ನಾನು ಅಪೇಕ್ಷಿಸುವುದಿಲ್ಲ. ||೧೦೯||

ಮರಣ ಕಾಲವು ಸಮೀಪಿಸಿತೆಂದರೆ ನೀನು ಹೇಳುವ ಆ ಪತ್ನಿಯರ ಸಹಾಯವು ತಿಳಿಯುವುದು. ಅಂಥ ಉತ್ಕಟಕಾಲದಲ್ಲಿ ಅವರು ನಮಗೆ ಸಹಾಯ ಮಾಡುವುದಂತೂ ಇರಲಿ ; ನಮ್ಮನ್ನು ನೋಡಿ ಹೆದರಿಕೊಂಡು ನಮ್ಮ ಹತ್ತಿರಕ್ಕೂ ಸುಳಿಯುವುದಿಲ್ಲ. ದೂರ ಓಡಿಹೋಗುತ್ತಾರೆ. ನಮ್ಮ ದುರವಸ್ಥೆಯು ಈ ಬಗೆ ಇರುವಾಗ ಆ ಪತ್ನಿಯರು ಯೋಚಿಸುವುದೇ ಬೇರೊಂದು ಬಗೆಯಾಗಿರುತ್ತದೆ. ಆಗ ಅವರು ತಮ್ಮ ಆಭರಣವೆಲ್ಲಿ? ಪಟ್ಟವಸ್ತ್ರಗಳೆಲ್ಲಿ? ನನಗೆ ಧನವೆಲ್ಲಿ? ಎಂದು ಹುಡುಕಿಕೊಂಡು ಸಂಗ್ರಹಿಸಿ ಮುಚ್ಚಿಟ್ಟುಕೊಳ್ಳುವುದಕ್ಕಾಗಿ ಓಡಾಡುತ್ತಾರೆ. ಅವರಿಂದ ಕೊನೆಗೂ ಇಷ್ಟೇ ಸಹಾಯವು ದೊರೆಯುವುದು. ||೧೧೦||

ಪೂರ್ವಂ ದಾರಪರಿಗ್ರಹೇಣ ಬಹುಧಾ ದುಃಖಾನಿ ಭುಕ್ತಾನ್ಯಹೋ
ನೀತಂ ಜೀವನಮೇವ ತೈರನುದಿನಂ ಶಕ್ತಿಶ್ಚ ನೀತಾತರಾಂ ।
ಆಯುಃ ಕ್ಷೀಣಮಭೂದ್ವೃಥಾತಿಸುರತೈರ್ದಾರಾದರೈರನ್ವಹಂ
ಮೋಹೇನಾಪಿ ಮುಹುರ್ಮಹೇಶಚರಣಧ್ಯಾನಂ ಕೃತಂ ನೈವ ಹಿ ॥೧೧॥

ನಿತ್ಯಂ ಕುಂಕುಮಕೇಸರಾದಿಸಹಿತೈಃ ಕಸ್ತೂರಿಕಾಕರ್ದಮೈಃ
ಕರ್ಪೂರದ್ರವಸಂಯುತೈರಪಿ ಲಸನ್ನೀಹಾರನೀರೈರಪಿ ।
ಶ್ರೀಖಂಡದ್ರವಸೇಚನೈರಪಿ ಮುಹುರ್ನಾರೀವರೋರೋಜಯೋಃ
ಸೇಕೇನೈವ ಕರಶ್ರಮೋಽಪಿ ಸ ಕರಸ್ತುಂಗೇ ನ ಲಿಂಗೇ ಕೃತಃ ॥೧೨॥

ನಾನು ಆ ಪತ್ನಿಯರಿಂದ ಎಷ್ಟು ಸುಖವು ದೊರೆಯುವುದೆಂದು ತಿಳಿದಿದ್ದೇನೆ. ಅವರಿಂದ ನಮ್ಮ ಶ್ರೇಯಸ್ಸಿಗೆ ಕೇವಲ ಬಾಧೆಯುಂಟಾಗುವುದು ಅಷ್ಟೆ. ಹಿಂದೆ ನಾನು ಅದೇ ಪತ್ನಿಯರ ಮೋಹದಲ್ಲಿ ಬಿದ್ದು ಎಷ್ಟೋ ಕಷ್ಟಗಳನ್ನು ಅನುಭವಿಸಿದ್ದೇನೆ. ಅವರೊಡನೆ ಭೋಗವಿಲಾಸಗಳಲ್ಲಿ ನಿರತನಾಗಿ ಅದೇ ಪರಮ ಸುಖವೆಂದು ಭ್ರಾಂತಿಯಿಂದ ವ್ಯರ್ಥವಾಗಿ ಆಯುಷ್ಯವನ್ನೆಲ್ಲಾ ಕಳೆದುಕೊಂಡೆ. ಅವರ ಸಹವಾಸದಿಂದ ನನಗೆ ಸಂಭವಿಸಿದ ನಷ್ಟವು ಅಷ್ಟಿಷ್ಟಲ್ಲ. ನನ್ನ ಇಂದ್ರಿಯ ಶಕ್ತಿ ಎಲ್ಲವೂ ನಷ್ಟವಾಯಿತು. ನನ್ನ ಆಯುಷ್ಯವು ಮತ್ತು ಅಖಂಡಜೀವನವೇ ನಾಶವಾಗಿ ಹೋಯಿತು. ಅವರ ಆ ಸಹವಾಸದೋಷದಿಂದ ಮೂಢನಾಗಿ ಒಂದು ಸಲವೂ ಆ ಪರಮೇಶ್ವರನ ಪಾದಾರವಿಂದಗಳನ್ನು ಧ್ಯಾನಿಸಲು ನಾನು ಸಮರ್ಥನಾಗಲಿಲ್ಲ. ॥೧೧॥

ನಾನು ಆ ನಾರಿಯರಲ್ಲಿ ಮುಗ್ಧನಾಗಿ ಮಾಡಿದ ಅನ್ಯಾಯವು ಅಷ್ಟಿಷ್ಟಲ್ಲ. ಆ ನಾರಿಯರಸ್ತನಗಳಿಗೆ ಸೇವೆಯನ್ನು ಮಾಡಿದ್ದೂ ಅಷ್ಟಿಷ್ಟಲ್ಲ. ಕುಂಕುಮಕೇಸರಿ, ಕಸ್ತೂರಿ, ಪಚ್ಚಕರ್ಪೂರ, ಹಿಮದಚೂರು ಇವುಗಳನ್ನೆಲ್ಲಾ ಸೇರಿಸಿ ಅಪೂರ್ವವಾದ ಸುಗಂಧದ್ರವ್ಯವನ್ನು ತಯಾರುಮಾಡುತ್ತಿದ್ದೆನು. ಇವುಗಳನ್ನೆಲ್ಲಾ ಆ ನಾರಿಯರ ಸ್ತನಗಳಿಗೆ ಲೇಪಿಸುತ್ತಿದ್ದೆನು. ಹಾಗೆಯೇ ಚಂದನಗಂಧಗಳಿಂದಲೂ ಅವರ ಸ್ತನಗಳಿಗೆ ಉಪಚಾರಮಾಡುತ್ತಿದ್ದೆನು. ನನ್ನ ಕೈಗಳು ಅವಿಚ್ಛಿನ್ನವಾಗಿ ಅವರ ಸ್ತನಗಳ ಮೇಲೆ ಇದ್ದವೇ ವಿನಾ ಉನ್ನತವಾದ ಶಿವಲಿಂಗದ ಮೇಲೆ ಎಂದೂ ಓಡಾಡಲಿಲ್ಲ. ಅಯ್ಯೋ! ಅವರ ಸಹವಾಸದಲ್ಲಿ ಆ ಪರಿಜ್ಞಾನ, ಆ ವಿವೇಕ ಎಲ್ಲಿ ಬಂತು? ॥೧೨॥

ಹಾರೈರಪ್ಯನುಹಾರದಾರಕುಚಯೋರಾವೇಷ್ಟನಂ ಕಲ್ಪಿತಂ
ಮಂದಾರಾಮಲಮಲ್ಲಿಕಾದಿಕುಸುಮಪ್ರಗ್ವೇಷ್ಟಿತೌ ತತ್ಕುಚೌ ।
ದೃಷ್ಟ್ವಾ ತೌ ದುರದೃಷ್ಟತೋ ಮುಹುರಹೋ ದೃಷ್ಟಂ ನ ಲಿಂಗಂ ಮಯಾ
ತುಂಗಂ ನಾರ್ಮದಮದ್ರಿಕುಂದಕುಸುಮೈರ್ಬಿಲ್ವೀದಳೈರರ್ಚಿತಂ ॥೧೧೩॥

ವ್ಯಾಪ್ತಾ ಸಾ ತರುಣೀಗಣೈರ್ಮುಹುರಹೋ ಶಯ್ಯಾ ಮದೀಯಾ ಸದಾ
ತತ್ಸಂಮರ್ದವಶಾತ್ಕಥಂಚಿದಭವಚ್ಛಾಯಾಚಲೇವ ಸ್ಥಿತಿಃ ।
ತಸ್ಮಾದಪ್ಯವನೀತಲೇ ನಿಪತಿತಂ ದಾಸೀಕರಾಘಾತನ್ಯೈಃ
ಸಾಕಂ ಶಂಕರಲಿಂಗಪೀಠನಿಕಟೇ ನೈವಾಭವಲ್ಲುಂಠನಂ ॥೧೧೪॥

ಆಹಾ ಏನು ಅನ್ಯಾಯ ! ಅಜ್ಞಾನದಿಂದ ನಾನು ಆ ನಾರಿಯರ ಸ್ತನಗಳಿಗೆ ಎಷ್ಟು ವಶೀಕೃತನಾಗಿ ಹೋಗಿದ್ದೆ! ನಿತ್ಯವೂ ನೂತನವಾದ ಮಂದಾರ, ಮಲ್ಲಿಗೆ ಮುಂತಾದ ಬಗೆಬಗೆಯಾದ ಪುಷ್ಪಗಳನ್ನು ಶ್ರಮಪಟ್ಟು ತಂದು ಅವುಗಳನ್ನು ಪೋಣಿಸಿ, ಹಾರ ಕಟ್ಟಿ ಅವುಗಳಿಂದ ಆ ನಾರಿಯರ ಸ್ತನಗಳನ್ನು ಅಲಂಕರಿಸಿದೆ. ಅದೇ ಮಹಾಸೌಂದರ್ಯವೆಂದು ತಿಳಿದುಕೊಂಡು ನೋಡುತ್ತ ನಿಂತಿರುತ್ತಿದ್ದೆ. ಅಯ್ಯೋ ದುರದೃಷ್ಟವೇ ! ಆ ಸಮಯದಲ್ಲಿ ಒಂದುಸಲವಾದರೂ ಶಿವನನ್ನು ಆರಾಧಿಸಲಿಲ್ಲವಲ್ಲ. ಆ ಶಿವಸ್ವರೂಪವಾದ ನಾರ್ಮದಲಿಂಗವನ್ನು ಗಿರಿಮಲ್ಲಿಗೆಯಿಂದಾಗಲಿ ಬಿಲ್ವದಳಗಳಿಂದಾಗಲಿ ಪೂಜಿಸಲಿಲ್ಲವಲ್ಲ. ಅದೆಲ್ಲವೂ ನನ್ನ ದೌರ್ಭಾಗ್ಯವಾಗಿದ್ದಿತು. ॥೧೧೩॥

ಆ ನನ್ನ ಹಾಸಿಗೆಗಳ ಪಕ್ಕದಲ್ಲಿ ಸದಾ ಅನೇಕ ತರುಣಿಯರು ಮುತ್ತಿಕೊಂಡಿರುತ್ತಿದ್ದರು. ನಾನು ಅವರನ್ನೇ ಸದಾ ಆಲಂಗಿಸಿಕೊಳ್ಳುವುದರಲ್ಲಿಯೇ ತಲ್ಲೀನನಾಗಿದ್ದು ಅವರ ಒಂದು ನೆರಳಿನ ಮುದ್ದೆಯಂತಿದ್ದೆ. ಒಂದೊಂದುವೇಳೆ ಕಾಮಾಂಧತೆಯಿಂದ ಜ್ಞಾನಶೂನ್ಯನಾಗಿ, ಆ ನಾರಿಯರ ದಾಸಿಯರಿಂದ ತಾಡನ, ಭರ್ತ್ಸನ ಇವುಗಳನ್ನು ಅನುಭವಿಸುತ್ತ ನೆಲದ ಮೇಲೆ (ಬಿದ್ದಿರುತ್ತಿದ್ದೆ) ಹೊರಳಾಡುತ್ತಿದ್ದೆ. ಆದರೆ ಅದೇ ಹೊರಳಾಡುವಿಕೆಯು ಶಿವಲಿಂಗದ ಎದುರಿನಲ್ಲಿ ಒಂದು ಸಲವೂ ಆಗಲಿಲ್ಲವಲ್ಲ. ॥೧೧೪॥

ದುಗ್ಧಂ ಗೋಘೃತಶರ್ಕರಾದಿಸಹಿತಂ ಸೌವರ್ಣಪಾತ್ರಸ್ಥಿತಂ
ಯುನ್ನಾರೀಗಣಪೀತಶಿಷ್ಟಮಭವತ್ತತ್ಪೀತಮುಪ್ಯಾದರಾತ್ ।
ತತ್ರೋಚ್ಛಿಷ್ಟಮತಿಃ ಕದಾಪಿ ನ ಮಮಾಭೂದೇವ ಭೂಯಃ ಪರಂ
ತತ್ಪೀತಂ ನ ತು ಪೀತಮೇವ ಸುಖದಂ ರುದ್ರಾಭಿಷೇಕೋದಕಂ ॥೧೧೫॥

ತನ್ನಾರೀಜಘನೋದರಾಂತರಗತಾವರ್ತೇಽಪಿ ಗರ್ತೇಽಪ್ಯಭೂತ್
ಮನ್ನೇತ್ರಪ್ರಸರಃ ಪುನಃ ಪುನರಹೋ ಪಾಪೈರಪಾರೈಃ ಪರಂ ।
ತುಂಗಂ ಲಿಂಗಮುಮಾಮನೋಹರವರಂ ರೇವಾಜಲಾಲಿಂಗಿತಂ
ಬಿಲ್ವೀಪಲ್ಲವಸಂಕುಲಂ ಚ ನ ಮನಾಗ್ದೃಷ್ಟಂ ಪ್ರಕೃಷ್ಟಂ ಮಯಾ ॥೧೧೬॥

ಹಸುವಿನ ತುಪ್ಪ, ಸಕ್ಕರೆ ಮುಂತಾದ ಉತ್ಕೃಷ್ಟವಾದ ಆಹಾರವಸ್ತುಗಳನ್ನು ಸೇರಿಸಿ ಹೊಸ ಹೊಸ ಬಗೆಯಾಗಿ ಹಾಲನ್ನು ಪರಿಷ್ಕಾರಮಾಡುತ್ತಿದ್ದೆ. ಅದನ್ನು ಸುವರ್ಣಪಾತ್ರೆಯಲ್ಲಿ ತುಂಬಿಕೊಂಡು ಮೊದಲು ಆ ನಾರಿಯರಿಗೆ ಕುಡಿಸುತ್ತಿದ್ದೆ. ಅವರು ಕುಡಿದುಳಿದುದನ್ನು ಆತ್ಯಾದರದಿಂದ ಮಹಾಪ್ರಸಾದವೋ ಎಂಬಂತೆ ನಾನು ಕುಡಿಯುತ್ತಿದ್ದೆ. ಅದರಲ್ಲಿ ನನಗೆ ಆಗ ಎಂಜಲೆಂಬ ಬುದ್ಧಿಯು ಒಂದು ಸಲವೂ ಉಂಟಾಗಲಿಲ್ಲ. ಅಂಥ ಹಾಲನ್ನೇ ಪದೇ ಪದೇ ಅತ್ಯಾಸಕ್ತಿಯಿಂದ ಪಾನಮಾಡುತ್ತಿದ್ದೆ. ಆದರೆ ಆ ಅಪಾಯಕರವಾದ ಸಮಯದಲ್ಲಿ ಶಿವಾಭಿಷಿಕ್ತವಾದ ತೀರ್ಥವನ್ನು ಒಂದು ಸಲವೂ ಕುಡಿಯಲಿಲ್ಲ. ಪರಮಸುಖದಾಯಕವಾದ ಶಿವಲಿಂಗತೀರ್ಥವನ್ನು ಒಂದಾವರ್ತಿಯೂ ಪ್ರಾಶನಮಾಡಲಿಲ್ಲ. ॥೧೧೫॥

ವನಿತೆಯರ ಜಘನಪ್ರದೇಶವೂ, ಆ ಸಂದು ಸುಳಿಗಳೂ ಕೇವಲ ವಿಕಾರವಾದ ಹಸ್ತಶಿಷ್ಟಗಳಂತಿದ್ದರೂ ಅವುಗಳಲ್ಲಿಯೇ ನನ್ನ ಈ ಪಾಪಿನೇತ್ರಗಳು ಸರ್ವದಾ ತಮ್ಮ ನೋಟವನ್ನು ಓಡಾಡಿಸುತ್ತಿದ್ದುವು. ಆದರೆ ಶಿವಲಿಂಗವನ್ನು ಒಂದು ಸಲವೂ ನೋಡಲಿಲ್ಲ. ನರ್ಮದಾ ಜಲದಿಂದ ಅಭಿಷಿಕ್ತವಾಗಿ ಬಿಲ್ವದಳಗಳಿಂದ ಮನೋಹರವಾಗಿ ಅಲಂಕೃತವಾದ ಉನ್ನತ ಶಿವಲಿಂಗವನ್ನು ಒಂದಾವರ್ತಿಯೂ ಸಂದರ್ಶಿಸಲಿಲ್ಲ. ॥೧೧೬॥

ಹಾ ಹಾ ಹಾ ಬಹುಜನ್ಮಸಂಚಿತವಯುಃ ಪುಷ್ಟ್ಯಾಂಗನಾಲಿಂಗನೈಃ ।
ನೀತಂ ಜನ್ಮ ಕದಾಪಿ ಲಿಂಗಮುಸಕೃತ್ತ್ವಂಗಂ ತು ನಾಲಿಂಗಿತಂ ।
ಬಿಲ್ವೀಕೋಮಲಪಲ್ಲವೈಸ್ಸಕುಸುಮೈರ್ನಾಭ್ಯರ್ಚಿತಂ ನ ಸ್ಮೃತಂ ।
ನ ಸ್ಪೃಷ್ಟಂ ನ ವಿಲೋಕಿತಂ ಚ ನ ನತಂ ನಾರಾಧಿತಂ ವಾ ಮಯಾ ॥೧೧೭॥

ಅದ್ಯೇಯಂ ಮತಿರಸ್ಯ ಶಂಕರಕೃಪಾಲೇಶೇನ ಜಾತಾಧುನಾ
ವಿಘ್ನೋ ಮಾಸ್ತು ಮತೇಃ ಪುನಃಪುನರಿಯಂ ವೃದ್ಧಿಂ ಪ್ರಯಾತ್ವನ್ವಹಂ
ಕಸ್ಯ ಸ್ಯಾತ್ಸುಖಸಾಧನಂ ವಿಷಮಿವಾನಂಗಾಂಗನಾಸಂಗಮಃ ।
ತ್ಯಾಜ್ಯೋ ದೂರತ ಏವ ಶಂಕರಪುರೀವಾಸೇನ ನೇಯಂ ವಯಃ ॥೧೧೮॥

ಅಹಹಾ! ಏನು ಅನುಚಿತವನ್ನು ಮಾಡಿದೆ? ಹಿಂದೆಲ್ಲಾ ಅನೇಕ ಜನ್ಮಗಳಲ್ಲಿ ಪುಣ್ಯಸಂಪಾದನೆ ಮಾಡಿಕೊಂಡು ಮನುಷ್ಯ ಜನ್ಮದಲ್ಲಿ ತಕ್ಕಷ್ಟು ಆಯುಷ್ಯವನ್ನೂ ಪಡೆದುಕೊಂಡಿದ್ದೆ. ಅಂಥ ಅಮೋಘವಾದ ಆಯುಸ್ಸನ್ನು ಸದ್ವ್ಯಯಮಾಡಿ ಸಾರ್ಥಕಮಾಡಿಕೊಳ್ಳದೇ, ಅನ್ಯಾಯವಾಗಿ ನಾರಿಯರನ್ನು ಆಲಂಗಿಸಿಕೊಳ್ಳುವುದರಲ್ಲಿಯೇ ವ್ಯರ್ಥವಾಗಿ ಅಪವ್ಯಯಮಾಡಿಕೊಂಡೆ. ಒಂದು ಸಲವೂ ಶಿವಲಿಂಗವನ್ನು ಧ್ಯಾನಿಸಲಿಲ್ಲ. ಸಮಸ್ತ ಉಪಕರಣಗಳಿಂದ ಪೂಜಿಸಲಿಲ್ಲ. ಒಂದು ಸಲವೂ ಭಕ್ತಿಯಿಂದ ಶಿವದರ್ಶನವನ್ನು ಮಾಡಲಿಲ್ಲ. ||೧೧೭||

ಎಲೈ ಚತುರ್ಮುಖನೇ ! ಇಂದು ನಾನು ದುರ್ಲಭವಾದ ಶಿವಾರಾಧನೆಯಲ್ಲಿ ತೊಡಗಿದ್ದೇನೆ. ಆ ಶಂಕರನ ಕೃಪಾಲೇಶಾನುಗ್ರಹದಿಂದ ನನಗೆ ಶಿವಾರ್ಚನೆಯನ್ನು ಮಾಡಬೇಕೆಂಬ ಬುದ್ಧಿಯು ಹುಟ್ಟಿರುವುದು. ಈ ಸದ್ವೃತ್ತಿ ಬುದ್ಧಿಗೆ ಈಗ ವಿಘ್ನವನ್ನು ತಂದೊಡ್ಡಬೇಡ. ಈ ಸದ್ಬುದ್ಧಿಯು ಕ್ರಮೇಣ ಅಭಿವೃದ್ಧಿಯನ್ನೇ ಹೊಂದುವಂತೆ ಹರಸು. ಆ ನಾರಿಯರ ಸಹವಾಸದಿಂದ ಯಾರಿಗೆ ತಾನೆ ಶಾಶ್ವತವಾದ ಅಥವಾ ನಿಜವಾದ ಸುಖವು ದೊರೆತಿದೆ? ನಾರೀ ಸಂಗಮವು ಸಾಕ್ಷಾತ್ ವಿಷದಂತೆಯೇ ಸರಿ. ವಿಷದಿಂದೆಲ್ಲಾದರೂ ಸುಖವುಂಟಾದೀತೆ? ಎಂದೂ ಇಲ್ಲ. ಅದು ಅಸಂಭವ. ಆದುದರಿಂದ ಈ ನಾರಿಯರನ್ನು ದೂರಮಾಡಬೇಕು. ಅವರ ಹತ್ತಿರಕ್ಕೂ ಸುಳಿಯಬಾರದು. ನಮ್ಮ ಆಯುಷ್ಯವನ್ನು ಸದ್ವ್ಯಯಮಾಡಿಕೊಂಡು ಸಾರ್ಥಕಗೊಳಿಸಬೇಕು. ಶಿವಾರಾಧನೆಯನ್ನೇ ಸರ್ವದಾ ಮಾಡಿ ಶಿವನಗರಿಯಲ್ಲಿ ವಾಸಮಾಡುವ ಸುಯೋಗವನ್ನು ಸಂಪಾದಿಸಬೇಕು. ಶಿವರಾಧನೆಯಲ್ಲೇ ಕಾಲವನ್ನು ಕಳೆಯಬೇಕು. ||೧೧೮||

ಭಕ್ತಂ ವಾ ತಮನುಕ್ಷಣಂ ದಧಿಯುತಂ ಕ್ಷೀರಾನ್ನಮತ್ಯಾದರಾತ್
ಭೋಕ್ತುಂ ನೇಚ್ಛತಿ ಮಾನವಃ ಪುನರಪಿ ಪ್ರಾಯಸ್ತಥೈವಾಂಗನಾ ।
ತ್ಯಕ್ತ್ವಾ ತದ್ವಿಷಯಸ್ಪೃಹಾ ತು ನ ಕದಾಪ್ಯನ್ಯೇಷು ವಾಂತೇಷು ಕಿಂ
ವಾಂಛಾ ಸಂಭವತೀತಿ ಬುದ್ಧಿರಸಕೃನ್ಮೂಢಸ್ಯ ವಾ ಕಿಂ ನ ಸಾ ॥೧೧೯॥

ನ ವೋಢಾಂ ಮೂಢೋ ವಾ ದೃಢಮಪಿ ಸಕೃದ್ವಾ ಯದಿ ಮುಹುಃ
ಮುಹುರ್ಭುಕ್ತ್ವಾ ತ್ಯಕ್ತ್ವಾ ಪುನರಪಿ ನ ವಾಂತಾಶನನಿಭಾಂ ।
ಪುನರ್ಭೋಕ್ತುಂ ವಾಂಛತ್ಯಪಿ ಸುಕೃತಪಾಕೇನ ವಿಷಯಃ ।
ಪರಿತ್ಯಾಜ್ಯಃ ಪೂಜ್ಯಃ ಪುನರಪಿ ಮಹೇಶಃ ಪುನರಪಿ ॥೧೨೦॥

ಇತಿ ಶ್ರೀ ಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ
ಅಯೋನಿಜಕನ್ಯಾ ಅಯೋನಿಜವರ ವಿವಾಹ ಪ್ರಸಂಗೇ ಬ್ರಹ್ಮಾದಿ
ಸಂಬೋಧಿತವರವಿವಾಹನೇಚ್ಛಾವರ್ಣನಂ ನಾಮ ಪಂಚಾದಶೋಽಧ್ಯಾಯಃ

ಹಾಲು, ಮೊಸರು, ತುಪ್ಪ ಇವುಗಳಿಂದ ಸಮ್ಮಿಶ್ರವಾದ ಅನ್ನವು ದಿವ್ಯವೇ ಆಗಿರಲಿ ಅದು ಎಂಜಲೆಂದು ಗೊತ್ತಾದರೆ ಅದನ್ನು ಯಾರೂ ತಿನ್ನಲು ಮನಸ್ಸು ಮಾಡುವುದಿಲ್ಲ. ಪುರುಷನೇ ಆಗಲಿ, ಸ್ತ್ರೀಯೇ ಆಗಲಿ, ಒಬ್ಬರೂ ಆ ವಾಂತಿಯನ್ನು ತಿನ್ನುವುದಿಲ್ಲ. ಹಾಗೆಯೇ ವಿಷಯ ಸುಖವನ್ನು ಯಾರೇ ಆಗಲಿ ಬುದ್ಧಿ ಪೂರ್ವಕವಾಗಿ ತ್ಯಾಗ ಮಾಡಿದಮೇಲೆ ಪುನಃ ಅವುಗಳನ್ನು ಬಯಸುವುದಿಲ್ಲ. ಕೇವಲ ಮೂಢರು ವಾಂತಿಯನ್ನು ತಿನ್ನಲು ಬಯಸಿದಂತೆ ವಿರಕ್ತರು ವಿಷಯ ಸುಖದಲ್ಲಿ ಆಸೆಪಡಬಹುದು. ವಿವೇಕಿಗಳಿಂದೂ ಆ ಮೋಹರೂಪವಾದ ಜ್ಞಾನದಲ್ಲಿ ಬೀಳುವುದಿಲ್ಲ. ॥೧೧೯॥

ಮೊದಲೇ ವಿವಾಹ ಬಂಧನದಲ್ಲಿ ಸಿಲುಕಿ ಪತ್ನಿಯೊಡನೆ ಅನೇಕ ಸುಖಗಳನ್ನು ಅನುಭವಿಸಿ, ಅನಂತರ ಅಪರ ತತ್ತ್ವವನ್ನು ತಿಳಿದು ಆ ಸಂಸಾರವನ್ನು ತ್ಯಾಗಮಾಡಿ ಮತ್ತೆ ಆ ಪೂರ್ವಪರಿಗೃಹೀತಳಾದ ಪತ್ನಿಯನ್ನೇ ಪುನಃ ಸೇರುವುದು ವಾಂತಿಯನ್ನು ತಿಂದಂತೆ ಆಗುವುದು. ಅಂದಮೇಲೆ ವಿಷಯವನ್ನು ತಿಳಿದೂ ತಿಳಿದೂ ಈ ಬಂಧನದಲ್ಲಿ ಬೀಳುವುದುಂಟೇ? ಎಂದೂ ಇಲ್ಲ. ಅದರಲ್ಲೂ ವಿಷಯ

ವೈರಾಗ್ಯವು ಮಹೇಶನ ಅನುಗ್ರಹದಿಂದ ಮತ್ತು ಪುಣ್ಯಪರಿಪಾಕದಿಂದ ಉಂಟಾಗುವುದು. ಆದುದರಿಂದ ಅಂತಹ ತ್ಯಾಗವನ್ನು ಸ್ವಪ್ರಯತ್ನದಿಂದ ಮಾಡಿ ಆ ಪರಮೇಶ್ವರನನ್ನೇ ಪದೇ ಪದೇ ಪೂಜಿಸಬೇಕು. ಇದೇ ನನ್ನ ಮತ. ಅಭಿಲಾಷೆಯೂ ಇದೇ." ಎಂದು ಆ ಬಾಲಕನು ಬ್ರಹ್ಮನಿಗೆ ತಿಳಿಯಹೇಳಿದನು. ||೧೨೦||

ಇಲ್ಲಿಗೆ ಶಿವರಹಸ್ಯ ತೃತೀಯಾಂಶ ಉತ್ತರಾರ್ಧದಲ್ಲಿ ಬ್ರಹ್ಮನು, ಅಯೋನಿಜ
ಕನ್ಯಾವರರ ವಿವಾಹದಲ್ಲಿ ಪ್ರಯತ್ನಿಸಿದುದನ್ನು ತಿಳಿಸುವ
ಹದಿನೈದನೆಯ ಅಧ್ಯಾಯವು ಮುಗಿದುದು.

ಶ್ರೀಃ

# ಅಥ ಶ್ರೀಶಿವರಹಸ್ಯೇ

## ತೃತೀಯಾಂಶೇ

## ಉತ್ತರಾರ್ಧೇ

## ಷೋಡಶೋಽಧ್ಯಾಯಃ

|| ಯಾಜ್ಞವಲ್ಕ್ಯ ಉವಾಚ ||

ಇತ್ಯೇತದ್ವಚನಪ್ರವಾಹಜನಿತೋತ್ಸಾಹೋಽಪಿ ತಂ ಕೇವಲಂ ।
ಬ್ರಹ್ಮಾ ದಾರಪರಿಗ್ರಹೋದ್ಯತಮತಿಂ ಕರ್ತುಂ ಪುನರ್ಬಾಲಕಂ ।
ಪ್ರಾಹಾನಂದಜಲಾಕುಲೋತ್ತಮತನುಂ ಲಿಂಗಾರ್ಚನಾಭ್ಯುದ್ಯತಂ
ಬಿಲ್ವೈಃ ಕೋಮಲಪಲ್ಲವೈರಭಿನವೈಃ ಶೀತೈಶ್ಚ ರೇವಾಜಲೈಃ ||೧||

ಯದ್ಯತ್ಸ್ಯಾದನುಕೂಲಮೇವ ಸತತಂ ತತ್ಕಾಲಕಾಲಾರ್ಚನೇ
ಗ್ರಾಹ್ಯಂ ತಸ್ಯ ಪರಿಗ್ರಹೇಽಪ್ಯನುದಿನಂ ತತ್ಸೇವನೇನಾಪಿ ಕಿಂ ।

### ಹದಿನಾರನೆಯ ಅಧ್ಯಾಯ

ಬಳಿಕ ಯಾಜ್ಞವಲ್ಕ್ಯ ಮುನಿಯು ರಾಜನನ್ನು ಕುರಿತು ಇಂತೆಂದನು ! "ಎಲೈ ಭೂಪತಿಯೇ ! ಈ ರೀತಿಯಾಗಿ ಬ್ರಹ್ಮನು ಆ ಬಾಲಕನೊಂದಿಗೆ ಸಂಭಾಷಣೆಯನ್ನು ನಡೆಸುತ್ತಾ, ಉತ್ಸಾಹ ಶಾಲಿಯಾಗಿ ಹೇಗಾದರೂ ಆ ಬಾಲಕನನ್ನೂ ಕುಟುಂಬಿಯನ್ನಾಗಿ ಮಾಡಲು ಇಷ್ಟಪಟ್ಟು, ಬಿಲ್ವಪತ್ರೆಗಳಿಂದಲೂ ಮತ್ತು ರೇವಾ ನದಿಯ ಶುದ್ಧೋದಕದಿಂದಲೂ ಶಿವಲಿಂಗವನ್ನು ಅರ್ಚಿಸುತ್ತಾ, ಆನಂದಾಶ್ರುಗಳನ್ನು ಸುರಿಸುತ್ತಲಿರುವ ಬಾಲಕನೊಡನೆ ಮತ್ತೆ ಹೀಗೆಂದನು. ||೧||

"ಎಲೈ ಬಾಲಕನೇ ! ಮೃತ್ಯುಂಜಯನಾದ ಆ ಪರಶಿವನ ಅರ್ಚನೆಗೆ ಸಹಾಯಕವಾದ ಯಾವ ಸಾಮಗ್ರಿಯನ್ನಾದರೂ ತಿರಸ್ಕರಿಸದೇ ಸಂತೋಷದಿಂದ ಸ್ವೀಕರಿಸ

ತಸ್ಮಾದ್ದಾರಪರಿಗ್ರಹೋಽಪಿ ನ ದುರಾಚಾರಃ ಸದಾರಸ್ಯ ತೇ
ಹಾರಸ್ಯಾಪಿ ದುರಾಗ್ರಹಸ್ತ್ವನುಚಿತೋ ದಾರೇಷು ಧೀರೇಷ್ವಪಿ ॥೨॥

ಇತ್ಯಾಕರ್ಣ್ಯ ವಿಧೇರ್ವಚೋಽಪ್ಯನುಚಿತಂ ಮತ್ವಾಪಿ ನತ್ವಾ ಚ ತಂ ।
ಕೃತ್ವಾ ಚೇತಸಿ ಧೈರ್ಯಮೇವ ಸ ಮುಹುಃ ಹಿತ್ವೈವ ದಾರೇಷಣಾಂ ।
ಹತ್ವಾ ಮೋಹರಿಪುಂ ಪುನಃ ಪುನರಪಿ ಸ್ಮೃತ್ವೈವ ತಾಂ ಯಾತನಾಂ ।
ಮುಕ್ತ್ವಾ ಮುಕ್ತಿವಿರೋಧಿನಂ ಸ್ಮರಹರಂ ಸಸ್ಮಾರ ಹಾರಃ ಪರಂ ॥೩॥

॥ ಬಾಲ ಉವಾಚ ॥

ಗೌರೀಮನೋಹರಪದಾಂಬುಜಮಾದರೇಣ
ವಂದೇ ಮುಕುಂದನಯನಾಂಬುಜಪೂಜಿತಾಂಘ್ರಿಂ ।

---

ಬೇಕು. ಶಿವಾರ್ಚನೆಗೆ ದಾರಪರಿಗ್ರಹವು ದೋಷವಲ್ಲ. ಅದನ್ನು ಪರಿಗ್ರಹಿಸಿ, ಸತತವೂ ಪರಶಿವನಲ್ಲಿಯೇ ಆಸಕ್ತರಾಗಿರುವುದರಿಂದ ಯಾವ ಪ್ರಯೋಜನವು ತಾನೇ ಲಭಿಸಲಾರದು? ಆದುದರಿಂದ ಗೃಹಸ್ಥನಾದ ನಿನಗೆ ವಿವಾಹವು ಅಸಭ್ಯವರ್ತನೆಯಲ್ಲ. ಪತಿಯ ಅಗಲುವಿಕೆಯಿಂದುಂಟಾದ ವಿರಹವನ್ನು ಸಹಿಸಿ ಪತಿಶುಶ್ರೂಷೆಯನ್ನೇ ಮಾಡಬಯಸುವ ಉಚ್ಚವಾದ ಧ್ಯೇಯದಿಂದ ಕೂಡಿರುವ ಧೀರಳಾದ ಪತ್ನಿಯನ್ನು ತಿರಸ್ಕರಿಸುವುದು ಈಶ್ವರಭಕ್ತನಾದ ನಿನಗೆ ಶೋಭಿಸಲಾರದು.'' ॥೨॥

ಹೀಗೆಂದು ಹೇಳಿದ ಆ ಬ್ರಹ್ಮನ ಮಾತನ್ನು ಕೇಳಿ ಬಾಲಕನು ಬ್ರಹ್ಮನ ಆ ವಚನವು ತನಗೆ ಅಹಿತಕರವಾದುದೆಂದು ಭಾವಿಸಿದರೂ, ಅವನಿಗೆ ನಮಸ್ಕರಿಸಿ ಮನಸ್ಸಿನಲ್ಲಿ ಧೈರ್ಯವನ್ನು ಹೊಂದಿ ಪತ್ನೀಪುತ್ರಾದಿ ಪರಿವಾರದಿಂದೊಡಗೂಡಿದ ಸಂಸಾರದಲ್ಲಿ ಎಷ್ಟು ಕಷ್ಟವಿದೆ ಎಂಬುದನ್ನು ಸ್ಮರಿಸಿಕೊಂಡನು ಬಳಿಕ ಬಾರಿ ಬಾರಿಗೂ ತನ್ನನ್ನು ಆವರಿಸುತ್ತಲಿರುವ ಅಜ್ಞಾನವೆಂಬ ಶತ್ರುವನ್ನು ಧ್ವಂಸಗೊಳಿಸಲೆತ್ನಿಸಿದನು. ಪತ್ನೀ ಪುತ್ರಾದಿಗಳ ಅಗಲುವಿಕೆಯಿಂದುಂಟಾದ ಆ ವೇದನೆಯನ್ನು ಯೋಚಿಸಿಕೊಂಡನು. ಜುಗುಪ್ಸೆಯಿಂದ ಅವನ್ನು ದೂರಕಿಸಿ ಮೋಕ್ಷಮಾರ್ಗಕ್ಕೆ ವಿರೋಧಿಯಾದ ಸಂಸಾರ ಸಂಬಂಧವನ್ನು ತಪ್ಪಿಸಿಕೊಳ್ಳಲು ಯತ್ನಿಸಿದನು. ಸರ್ವದಾ ಶಂಕರನನ್ನೇ ಸ್ಮರಿಸಿದನು. ಬಳಿಕ ಪಿತಾಮಹನನ್ನು ಕುರಿತು, ॥೩॥

ಆ ಬಾಲಕನು ಈ ರೀತಿಯಲ್ಲಿ ಪರಶಿವನನ್ನು ಸ್ಮರಿಸುತ್ತಾ ಬ್ರಹ್ಮನನ್ನು ದ್ದೇಶಿಸಿ ಹೀಗೆಂದನು. "ವಿಷ್ಣುವಿನ ನೇತ್ರ ಕಮಲಗಳಿಂದ ಪೂಜಿತವಾದ ಚರಣ

ಆನಂದಸುಂದರಮರಂದವಿನೋದಧಾರಾ
ಧಾರೋ ಧರಾಧರಮಹಂ ಮುಹುರಾಶ್ರಯಾಮಿ ॥೪॥

ಉಮಾಕಟಿತಟಿಸ್ಫುರತ್ಕರಿವರಾನನಾಲೋಕನ
ಪ್ರಸನ್ನಹೃದಯಂ ಧಿಯಾ ಸದಯಮಿಂದುಚೂಡಂ ಮೃಡಂ ।
ಉಮಾಪರಿವೃಢಂ ದೃಢಂ ಭಜನಮಾತ್ರದತ್ತೇಪ್ಸಿತಂ
ಸ್ಮಿತಾನನಮನಾಮಯಂ ಪ್ರಿಯಮುಮಾಸಹಾಯಂ ಮುದಾ ॥೫॥

ಹಾರಾಣಾಮುಪಹಾರಕಃ ಖಲು ಖಲಃ ಕೋ ವಾ ಹರಾರಾಧನ
ಧ್ಯಾನಾನಂದನಿಮಗ್ನಮೇವ ವಿಷಯೈರುದ್ವಿಗ್ನಮಜ್ಞೋऽಗ್ನಿವತ್ ।
ಕರ್ತುಂ ವಾ ಯತತೇ ತತಸ್ತ್ವಮಪಿ ಚೇದ್ಗಂತುಂ ಪ್ರವೃತ್ತಸ್ತದಾ
ಗಂತವ್ಯಂ ಮಮ ತಾವದತ್ರ ವಸತಿರ್ದೇಹಾವಸಾನಾವಧಿ ॥೬॥

ಗಳಿಂದ ಶೋಭಿಸುತ್ತಲಿರುವ ಉಮಾಕಾಂತನಾದ ಆ ಪರಮೇಶ್ವರನ ಅಡಿದಾವರೆಗಳಿಗೆ ಅಕ್ಕರೆಯಿಂದ ನಮಸ್ಕರಿಸುವೆನು. ಭಕ್ತಿ ಪರವಶತೆಯಿಂದ ಮಕರಂದದಂತೆ ಲೀಲೆಯಿಂದ ಸುರಿಯುತ್ತಿರುವ ಆನಂದಾಶ್ರುಗಳ ಧಾರೆಯಿಂದೊಡಗೂಡಿರುವ ನಾನು, ಜಗದೊಡೆಯನಾದ ಶಿವನನ್ನು ಬಾರಿಬಾರಿಗೂ ಆಶ್ರಯಿಸುವೆನು. ॥೪॥

ಗಿರಿಜೆಯ ತೊಡೆಯಮೇಲೆ ವಿರಾಜಮಾನನಾಗಿರುವ ಗಜಾನನನ ಮುಖವನ್ನು ನೋಡುವುದರಿಂದ ಆನಂದತುಂದಿಲನಾದ ಮತ್ತು ಚಂದ್ರಶೇಖರನೆನಿಸಿದ ಶಿವನಿಗೆ ನಮಸ್ಕರಿಸುವೆನು. ಶಂಕರನು ಉಮಾಕಾಂತನೂ, ಶಾಶ್ವತನೂ ಆಗಿ ಭಜಿಸಿದ ಮಾತ್ರದಿಂದಲೇ ಭಕ್ತರಿಗೆಇಷ್ಟಾರ್ಥವನ್ನು ದಯಪಾಲಿಸುವನು. ಇಂತಹ ನಿತ್ಯಾನಂದರೂಪಿಯೂ, ಪಾರ್ವತೀರಮಣನೂ, ನಗುಮುಖನೂ ಆಗಿರುವ ಶಿವನನ್ನು ಭಕ್ತನಾದ ನಾನು ಪ್ರೀತಿಯಿಂದ ನಮಸ್ಕರಿಸುವೆನು. ॥೫॥

ಪಿತಾಮಹನೇ! ಸತತವೂ ಈಶ್ವರನ, ಆರಾಧನ ಧ್ಯಾನಗಳಲ್ಲಿ ನಿರತನಾದವನ ಮನಸ್ಸನ್ನು, ಆಪಾತರಮಣೀಯವಾದ ವಿಷಯಗಳಿಂದ, ಯಾವನು ಅಗ್ನಿಯಂತೆ ಪ್ರಜ್ವಲಗೊಳಿಸಲು ಪ್ರಯತ್ನಿಸುವನೋ, ಅವನು ನಿಜವಾಗಿಯೂ ವಿರಕ್ತರ ಜೀವಿತವನ್ನೇ ನಾಶಮಾಡುವನು. ಹೀಗಿರುವಲ್ಲಿ ನೀನೂ ಸಹ ಅಂತಹ ಕಾರ್ಯಕ್ಕೆ ಪ್ರಯತ್ನಿಸುವುದಾದರೆ, ನಾನು ಏನನ್ನೂ ಹೇಳುವಂತಿಲ್ಲ. ಆದರೆ ನಾನು ಮಾತ್ರ ನಶ್ವರವಾದ ಈ ದೇಹವು ನಷ್ಟವಾಗುವವರೆಗೂ ಇಲ್ಲಿಯೇ ವಾಸಿಸುವೆನು. ॥೬॥

ತುಂಗಾನಿ ಲಿಂಗಾನಿ ಮನೋಹರಾಣಿ
ಹಾರಾಣ್ಯಸಾರಾಣಿ ವಿಹಾಯ ಕೋ ವಾ ।
ದಾರಾದರಃ ಸ್ಯಾದಮರತ್ವವಾಂಛಾಂ
ಜಹಾತಿ ಕಿಂ ಮೃತ್ಯುವಶಃ ಶಿಶುರ್ವಾ ॥೭॥

ಕರತಲಕನಕಾತಿಚಿತ್ರಪಾತ್ರ
ಸ್ಥಿತಮಪಿ ದುಗ್ಧಮುಪಾಸ್ಯ ಧಿಗ್ಧನಾಜ್ಯೈಃ ।
ಅಮಧುರಮತಿದಗ್ಧದುಗ್ಧಬದ್ಧಂ
ಕಥಮಪಿ ಖರ್ಪರಮರ್ಪಯೇನ್ಮುಖೇ ಕಿಂ ॥೮॥

ಕಿಂ ಮುಗ್ಧಾ ಮಧುರಾ ಧರಾಧರಸುಧಾಧಾರಾಧರಾ ಧೀರ ಮೋ
ಸಾ ನಾಸಾವದನಾಂತರಾಳಗರಳಶ್ಲೇಷ್ಮಾಕಪಾಲಾಕುಲಾ ।
ಲಾಲಾ ಸಾ ಕುಧಿಯಾ ಸುಧೇತಿ ವಿದಿತಾ ದಿಗ್ಧಿಗ್ಧಿಗೇಷಾ ವಿಧಿಃ
ಧೀರಾಣಾಮಪಿ ಹಾರನಾಮಸುಸುಧಾಪಾನಾತಿಪೀನಾತ್ಮನಾಂ ॥೯॥

ಅತ್ಯುನ್ನತವಾಗಿಯೂ, ಸುಂದರವಾಗಿಯೂ ಇರುವ ಶಿವಲಿಂಗಗಳ ಆರಾಧನೆಯನ್ನು ಬಿಟ್ಟು ಯಾವನು ತಾನೇ ಸ್ತ್ರೀಲೋಲನಾಗುವನು! ಈ ಸಂಸಾರಸಾಗರದಲ್ಲಿ ಮುಳುಗಿ ಪಾರವನ್ನು ಕಾಣದೇ ಬಾರಿಬಾರಿಗೂ ಮೃತ್ಯುವಿನ ಬಾಯಿಗೆ ತುತ್ತಾಗುವ ವಿವೇಕಜ್ಞಾನವುಳ್ಳ ಶಿಶುವೂ ಸಹ ಶಿವನನ್ನು ಪೂಜಿಸಿ ತಾನು ಅಮರನಾಗಬೇಕೆಂಬ ಇಚ್ಛೆಯನ್ನು ತೊರೆಯುವುದೇ? ಎಂದಿಗೂ ಇಲ್ಲ! ॥೭॥

ಅಂಗೈಯಲ್ಲಿ ಸುವರ್ಣಮಯವಾದ ಪಾತ್ರೆಯಲ್ಲಿರಿಸಿದ, ರುಚಿಕರವಾದ ಮತ್ತು ಘೃತಮಿಶ್ರಿತವಾದ ಹಾಲನ್ನು ಉಪೇಕ್ಷಿಸಿ, ಚಿಂಕಿಯಲ್ಲಿ ಚೆನ್ನಾಗಿ ಕುದಿಸಿ, ಮೃತನ ಕಳೇಬರದ ಕರಟದಲ್ಲಿರಿಸಿರುವ ಮತ್ತು ಸವಿಯಿಲ್ಲದಿರುವ ಹಾಲನ್ನು ಯಾವ ಮೂರ್ಖನಾದರೂ ಕುಡಿಯಲಪೇಕ್ಷಿಸುವನೇ? ॥೮॥

ಎಲೈ ಧೀರನಾದ ಪಿತಾಮಹನೇ, ಜಗದೊಡೆಯನಾದ ಶಿವನ ನಾಮವೆಂಬ ಸುಧೆಯನ್ನು ಪಾನಮಾಡುತ್ತಲಿರುವ ಈ ನನ್ನ ಬುದ್ಧಿಯು ಮೋಹದಿಂದ ಆವೃತವಾಗಿರುವುದೇ! ವಿಷಯಾಸಕ್ತರಾದ ಕಾಮಿಗಳು, ಸ್ತ್ರೀಯರ ಬಾಯಿ, ಮೂಗು, ಕಂಠ ಮುಂತಾದ ಮಲದ್ವಾರಗಳಿಂದ ಉತ್ಪನ್ನವಾಗುವ ಲಾಲಾರಸವನ್ನೇ (ಜೊಲ್ಲು) ಅಮೃತವೆಂದು ಭಾವಿಸಿ ಅವರ ಪ್ರೇಮಪಾಶಕ್ಕೆ ಬಲಿಯಾಗುವರು.

ಪುರಾ ನಾರೀಪೀನಸ್ತನಗಿರಿವಿಹಾರೇಣ ಕುಧಿಯಾ ।
ನ ಹಾರಾಚಾರಾಣಾಮನುಸರಣಮಾರ್ಯೇಣ ನ ಕೃತಂ
ನ ವಾ ತುಂಗಂ ಲಿಂಗಂ ಕಥಮಪಿ ಚ ಶಾಂಗಂ ನವಜಲೈಃ
ನವ್ಯೈಃ ಬಿಲ್ವೈಃ ಪುಷ್ಪೈರಪಿ ಸಕೃದಪಿ ಕೃತಂ ಪೂರಿತಮಹೋ ॥೧೦॥

ಮುಹುಃ ಕೋ ವಾ ವಾಂತಂ ಪುನರಪಿ ಗೃಹಾಣೇತಿ ಕರುಣಾಃ ।
ಪರಿತ್ಯಕ್ತ್ವಾ ವಕ್ತುಂ ಸುಮುಖ ಯತತೇ ದುರ್ಮುಖಮುಖಃ
ಅಯಂ ಕ್ಲೇಶಃ ಸಹ್ಯಃ ಕಥಮಪಿ ವಧೂಸಂಗವಿಮುಖಃ
ಸುಖೀ ಲೋಕೇ ಶೋಕೋ ನ ಖಲು ವೃತದಾರಾಪಸರಣೇ ॥೧೧॥

ಆದರೆ ಶಿವನಾಮವೆಂಬ ರುಚಿಕರವಾದ ಅಮೃತವನ್ನು ಸೇವಿಸಿ ಅದರಿಂದಲೇ ನಿತ್ಯತೃಪ್ತರಾದ ಪರಶಿವಭಕ್ತರು ಕಾಮುಕರಂತೆ ವಿಷಯಾಸಕ್ತರಾಗಿ ಎಂದಿಗಾದರೂ ಮೋಸಹೋಗುವರೇ ! ||೯||

ಮೋಹಪರವಶನಾದ ನಾನು ಪೂರ್ವಜನ್ಮದಲ್ಲಿ ಅವಿವೇಕದಿಂದ ಸ್ತ್ರೀಯರ ಕುಚಗಳೆಂಬ ಪರ್ವತದಲ್ಲಿ ವಿಹರಿಸುತ್ತಾ, ಶಿವನಿಗೆ ಪ್ರೀತಿಕರವಾದ ಅನುಷ್ಠಾನಗಳನ್ನು ಆಚರಿಸಲಿಲ್ಲ. ಒಂದುಬಾರಿಯಾದರೂ ಜಲಾಭಿಷೇಕದಿಂದಲಾಗಲಿ ಪತ್ರಪುಷ್ಪಾದಿಗಳಿಂದಲೇ ಆಗಲಿ ಶಿವಲಿಂಗವನ್ನು ಪೂಜಿಸಲಿಲ್ಲ. ||೧೦||

ಎಲೈ ಸುಮುಖನೇ, ವಮನದಿಂದ ಒಂದುಬಾರಿ ಹೊರಕ್ಕೆ ಬಂದಿರುವ ಪದಾರ್ಥವನ್ನು ಪುನಃ ಸೇವಿಸೆಂದು ಹೇಳಲು ಯಾವ ಮೂರ್ಖನಾದರೂ ಯತ್ನಿಸುವನೇ ? ಅದರಂತೆ ಒಮ್ಮೆ ಸಂಸಾರವನ್ನು ತೊರೆದು ಬಂದಿರುವ ನನ್ನನ್ನು ಕುರಿತು ಪುನಃ ಸಂಸಾರಿಯಾಗೆಂದು ಬೋಧಿಸುವುದು ಯುಕ್ತವೆ ? ಆದುದರಿಂದ ಸ್ತ್ರೀಸಂಗವನ್ನು ಪರಿತ್ಯಜಿಸುವುದರಿಂದುಂಟಾದ ಈ ವಿರಹವೇದನೆಯನ್ನು ಹೇಗಾದರೂ ಸಹಿಸಬಹುದು. ಲೋಕದಲ್ಲಿ ಸ್ತ್ರೀಸಂಗವನ್ನು ಪರಿತ್ಯಜಿಸಿದವನೇ ಸುಖಿಯಾಗುವನು. ಅವನು ಎಂದಿಗೂ ದುಃಖಕ್ಕೆ ಗುರಿಯಾಗಲಾರನು. ಆದರೆ ವಿವಾಹಾನಂತರ ಸ್ತ್ರೀಯನ್ನು ಪರಿತ್ಯಜಿಸುವುದು ಮಾತ್ರ ಹೆಚ್ಚಿನ ದುಃಖಕ್ಕೆ ಕಾರಣವಾದೀತು ? ||೧೧||

ಪುರೀಷಕುಹರಾನ್ವಿತಂ ಯದಿ ನ ಮೂತ್ರಕುಂಡಂ ತದಾ
ಮತಿಃ ಕಿಮಿತಿ ಜಾಯತೇ ಜಗತಿ ನಾನುರಾಗಾನ್ವಿತಾ ।
ಯತಸ್ತದುಭಯಾನ್ವಯಃ ಸಪದಿ ತದ್ವಧೂಸಂಗಮೇ
ಸ ತಾವದತಿಕುತ್ಸಿತೋ ಭವತಿ ಕುತ್ಸಿತಾಭೀಪ್ಸಿತಃ ॥೧೨॥

ಯತೋ ವಧೂನಾಂ ವಿವಿಧಾ ಕಥಾಪಿ
ಮತಾ ನ ಮೇ ತಾವದತಃ ಕಥಂ ವಾ ।
ಮತಿರ್ವಧೂಸಂಗತಿಗೋಚರಾ ಸ್ಯಾತ್
ಇಹಾಪಿ ಹಾರಸ್ಯ ಮಮಾಧುನಾಪಿ ॥೧೩॥

ಲಜ್ಜಾಸಾಗರಮಜ್ಜನೈರಲಮಲಂ ನಾಲಂ ಕಿಮದ್ಯಾಪಿ ಮೇ
ಕುಂಭೀಪಾಕವಿಲೋಕನಾಗತಭಯಾಪಾರಾರ್ಣವಾಸಜ್ಜನೈಃ ।
ತತ್ರಾಂಗಂ ಜನಮಂಜನಾಚಲಭಿಧಧ್ವಾಂತಪ್ರವೇಶೇನ ಮೇ
ಯತ್ತೇನಾಪ್ಯಲಮಪ್ಯಲಂ ಖಲು ಖಲೈರ್ಬಾಲಾಭಿಯೋಗೈರಲಂ ॥೧೪॥

ಸ್ತ್ರೀಯರ ಆ ದೇಹವು ಮಲಮೂತ್ರ ದ್ವಾರಗಳಿಂದ ಸಹಿತವಾಗಿಲ್ಲದಿದ್ದರೆ, ಆಗ ಲೋಕದಲ್ಲಿ ಯಾವನು ತಾನೇ ಅವಳಲ್ಲಿ ಅನುರಕ್ತನಾಗುತ್ತಿದ್ದನು? ಆದರೆ, ಸ್ತ್ರೀಸಂಗಮಾದೊಡನೆಯೇ ಈ ಶರೀರಕ್ಕೆ ಮಲಮೂತ್ರಗಳಿಂದ ತುಂಬಿರುವ ಆ ದ್ವಾರಗಳ ಸಂಬಂಧವು ತಪ್ಪುವುದಿಲ್ಲ. ಹಾಗಿರುವಾಗ ಪುರುಷರಿಗೆ, ಮಲಮೂತ್ರಗಳಿಂದ ತುಂಬಿದ ಹಳ್ಳಗಳಲ್ಲಿ ಏತಕ್ಕೆ ಅನುರಾಗವು ಹುಟ್ಟಿದೋ ನಾನು ಕಾಣೆ? ಆ ಕುಂಡಗಳಲ್ಲಿ ಜನರಿಗೆ ಎಷ್ಟು ಜುಗುಪ್ಸೆಯುಂಟಾಗುವುದೋ, ಅಷ್ಟೇ ಬೇಸರಿಕೆಯು ನನಗೆ ಸ್ತ್ರೀವ್ಯಕ್ತಿಯಲ್ಲಿ ಉದ್ಭವಿಸುತ್ತಿದೆ. ॥೧೨॥

ಸ್ತ್ರೀಯರ ವಿಷಯಕವಾದ ಯಾವ ವಚನಗಳನ್ನೂ ನಾನು ಕೇಳಬಯಸುವುದಿಲ್ಲ. ಹೀಗಿರುವಾಗ ಈಶ್ವರಭಕ್ತರಾದ ನಮಗೆ ಸ್ತ್ರೀಸಂಗವನ್ನು ಮಾಡಬೇಕೆಂಬ ಅಭಿಲಾಷೆಯು ಹುಟ್ಟುವುದು ತಾನೆ ಹೇಗೆ? ॥೧೩॥

ವಿವಾಹದ ನೆವದಲ್ಲಿ ನಾಚಿಕೆಯೆಂಬ ಸಮುದ್ರದಲ್ಲಿ ಮುಳುಗಿ ತೇಲಾಡುವುದೂ, ಪರಮೇಶ್ವರ ಧ್ಯಾನವಿಮುಖನಾಗಿ ಕುಂಭೀಪಾಕ ನರಕದಲ್ಲಿ ಬಿದ್ದು ಹೊರಳುವುದೂ, ನನಗೆ ಬೇಡ. ಅಲ್ಲದೆ ಅಜ್ಞಾನಕೂಪದಲ್ಲಿ ಬಿದ್ದು, ಕಾಡಿಗೆಯ ಬೆಟ್ಟದಂತಿರುವ ಕಗ್ಗತ್ತಲೆಯ ನರಕವನ್ನು ಅನುಭವಿಸುವುದೂ ನನಗೆ ಬೇಡ. ಈ ವಿವಾಹ

ಕಾಲೇ ಕಾಲೇ ಕಾಲಕಾಲಾನುವೇಲಂ
ಲಿಂಗಂ ತುಂಗಂ ಶಾಂಗಮಭ್ಯರ್ಚಯಾಮಿ
ಇತ್ಯೇಷಾ ಮೇ ಬುದ್ಧಿರಸ್ತು ಪ್ರವೃದ್ಧಾ
ಬುದ್ಧಿರ್ನಾರೀಸಂಗಮೇ ಮಾಸ್ತು ಮಾಸ್ತು ॥೧೫॥

ನ ದಾರುದಾರೇಷ್ವಪಿ ಶೈಲದಾರೇಷ್ವ
ಶೈಲದಾರೇಷ್ವಪಿ ದುರ್ಮತಿರ್ಮೇ ।
ಮಾಸ್ತ್ವೇವ ಮಾಸ್ತ್ವೇವ ಪುನಶ್ಚ ಮಾಸ್ತು
ಪುನಶ್ಚ ಮಾಸ್ತ್ವೇವ ಪುನಶ್ಚ ಮಾಸ್ತು ॥೧೬॥

ಕರೋಮಿ ಶಪಥಂ ಪುನಃ ಶಿವಪದಾಂಬುಜೇಽಸ್ಯಂಜಸಾ
ವಧೂಜನಮುದುರ್ಜನೀಜನತಯಾ ವಿಹೀನೇ ವನೇ ।
ನವೇಽಪಿ ನ ಭಜತ್ಯತಃ ಸ್ವಜನತಾಭಿಮಾನೇ ಪುನಃ
ನ ತಾಭಿರನುವರ್ತನಂ ಸಹ ಸಮೃಚ್ಛತಿ ಸ್ವಚ್ಛಧೀಃ ॥೧೭॥

---

ಸಂಬಂಧವೊಂದಿಲ್ಲದಿದ್ದರೆ ನನಗೆ ಮೇಲೆ ಹೇಳಿದ ಯಾವ ದುಃಖವೂ ನನ್ನನ್ನು ಹಿಂಸಿಸಲಾರದು. ॥೧೪॥

ಕಾಲತ್ರಯದಲ್ಲಿಯೂ ಮೃತ್ಯುಂಜಯನಾದ ಆ ಶಿವನ ಶ್ರೇಷ್ಠವಾದ ಲಿಂಗವನ್ನೇ ಆರಾಧಿಸುವೆನು. ಶಿವಲಿಂಗದ ಆರಾಧನೆಗೆ ಅನುಗುಣವಾದ ಸದ್ಬುದ್ಧಿಯೇ ನನ್ನಲ್ಲಿ ಬೇರೂರಲಿ. ಸ್ತ್ರೀಸಂಗವನ್ನು ಬಯಸುವ ದುರ್ಬುದ್ಧಿಯು ನನ್ನಲ್ಲಿ ಎಂದಿಗೂ ಉಂಟಾಗದಿರಲಿ. ॥೧೫॥

ಓ ದೇವನೇ, ಮಣ್ಣು, ಮರ ಮುಂತಾದುವುಗಳಿಂದ ನಿರ್ಮಿಸಲ್ಪಟ್ಟ ಅಚೇತನವಾದ ಸ್ತ್ರೀವಿಗ್ರಹಗಳಲ್ಲಿಯೂ ಸಹ ನನಗೆ ಕಾಮಕಲುಷಿತವಾದ ಬುದ್ಧಿಯು ಉಂಟಾಗದಿರಲಿ. ॥೧೬॥

ಸ್ತ್ರೀಸಂಗವನ್ನು ಎಂದಿಗೂ ಮಾಡಬಯಸುವುದಿಲ್ಲವೆಂದು ಶಿವನ ಅಡಿದಾವರೆಗಳ ಸನ್ನಿಧಿಯಲ್ಲಿ ಮತ್ತೊಮ್ಮೆ ಪ್ರಮಾಣಮಾಡುವೆನು. ವಿವೇಕಿಯಾದವನಿಗೆ ಸ್ವಜನರಲ್ಲಿ ತಮ್ಮವರೆಂಬ ನೂತನವಾದ ಅಭಿಮಾನವು ಅಂಕುರಿಸಿದರೂ ಅವರೊಂದಿಗೆ ಬೆರೆಯುವುದಿಲ್ಲ. ಆದುದರಿಂದಲೇ ಅವನು ಸ್ತ್ರೀಯರನ್ನು ಅನುಸರಿಸುವುದಿಲ್ಲ. ॥೧೭॥

ಭವಂತಿ ಬಹವೋ ಮುಹುರ್ಜಗತಿ ದಾರಭಾರಾದರಾಃ
ಪ್ರಯಾಂತು ಯಮಮಂದಿರಂ ಯಮಭಯಾತಿವಾತಾಹತಾಃ ।
ಸ್ವಕೀಯ ಹಿತಚಿಂತನಂ ವಿಹಿತಮೇವ ಸರ್ವಾತ್ಮನಾ
ತತಸ್ತ್ರಿನಯನಂ ಪರಂ ಪರಮಮುಕ್ತಿದಂ ಪ್ರಾರ್ಥಯೇ ॥೧೮॥

ಅತಃ ಪರಮಹರ್ನಿಶಂ ಗಿರಿಶಮೇವ ಬಿಲ್ವೀದಳೈಃ
ಜಲೈರಪಿ ಸುಶೀತಲೈರಭಿನವೈಃ ಸಮಾರಾಧಯೇ ।
ವಿಮುಕ್ತಿಮಪಿ ಸಾಧಯೇ ಯಮಭಟಾನಪಿ ತ್ರಾಸಯೇ
ವಿಹಾಯ ಯುವತೀಜನಸ್ತನಧನಾಪಹಾರಂ ಪರಂ ॥೧೯॥

ಮಹಾಪ್ರಯಾಣಾವಸರೇಣ ನಾರೀಶರೀರಸಂಗೇನ ಸುಖಾಭಿವೇಶಂ ।
ಉತ್ತುಂಗಶಂಗಾಮಿತಲಿಂಗಸಂಗಾದಾನಂದಸಂಗಾಭಿನವಾಂಗಸಂಗಃ ॥೨೦॥

ಲೋಕದಲ್ಲಿ ಅನೇಕ ಜನರು ಸ್ತ್ರೀಯರ ಮೋಹಪಾಶಕ್ಕೆ ಸಿಲುಕಿ ಅವರೊಡನೆಯೇ ಲೋಲುಪರಾಗಿರುವರು. ಅವರು ಮೃತ್ಯುಭಯವೆಂಬ ಬಿರುಗಾಳಿಗೆ ತುತ್ತಾಗಿ ಯಮಾಲಯಕ್ಕೆ ತೆರಳಲಿ. ಆದರೆ ಸಕಲ ವಿಧಗಳಿಂದಲೂ ಮನುಜನು ತನ್ನ ಹಿತವನ್ನೇ ಚಿಂತಿಸುತ್ತಿರಬೇಕು. ಅದಕ್ಕಾಗಿಯೇ ಹಿತಚಿಂತಕನಾದ ನಾನು ಶಾಶ್ವತವಾದ ಮೋಕ್ಷಸುಖವನ್ನು ನೀಡುವ ಮುಕ್ಕಣ್ಣನನ್ನೇ ಎಡಬಿಡದೇ ಪ್ರಾರ್ಥಿಸುವೆನು. ॥೧೮॥

ಆದುದರಿಂದ ನಿರಂತರವೂ ಬಿಲ್ವದಳಗಳಿಂದಲೂ, ಶೀತಲವಾದ ಜಲಧಾರೆಗಳಿಂದಲೂ ಶಿವನನ್ನೇ ಆರಾಧಿಸುವೆನು. ಯುವತಿಯರ ಕುಚಗಳೆಂಬ ಧನವನ್ನು ಮಾತ್ರ ಅಪಹರಿಸಲಾರೆನು. ಅದನ್ನೊಂದನ್ನು ಪರಿತ್ಯಜಿಸಿ ಮೋಕ್ಷವನ್ನು ಸಾಧಿಸುವೆನು. ಯಮದೂತರನ್ನಾದರೂ ಭಯಗೊಳಿಸುವೆನು. ॥೧೯॥

ಮರಣಕಾಲದಲ್ಲಿ ಸ್ತ್ರೀಸಂಭೋಗದಿಂದುಂಟಾಗುವ ಸುಖಾನುಭವವು ಮನುಷ್ಯನನ್ನು ಎಂದೂ ಹಿಂಬಾಲಿಸಲಾರದು. ಶ್ರೇಷ್ಠನಾದ ಈಶ್ವರಭಕ್ತನ ಮತ್ತು ಈಶ್ವರಲಿಂಗದ ಆಲಿಂಗನದಿಂದ ಉಂಟಾದ ಆನಂದವೇ ಮನುಷ್ಯರನ್ನು ಕೊನೆಯವರೆಗೂ ರಕ್ಷಿಸುವುದು. ॥೨೦॥

ಕ್ವ ಸಂಸಾರಭಾರಾಪಹಾರೋದ್ಯಮೋ ಮೇ ॥
ಕ್ವ ದಾರಾನುರಾಗಾನುಕಾರೋದ್ಯಮಸ್ತೇ ॥
ಕ್ವ ಸರ್ಪಾದಿಭೀತೋಽಪಿ ಸರ್ಪಾನುರಾಗ
ಪ್ರಕಾರೋಪಕಾರಾನುರಕ್ತಾನುರಕ್ತಃ ॥೨೧॥

ಅತ್ಯುಚ್ಚಾತಿಮನೋಜ್ಞರತ್ನರುಚಿರೇ ಸಿಂಹಾಸನೇಧಿಷ್ಠಿತಃ ।
ಕಿಂ ವಾಂಛಾಂ ಕುರುತೇ ಮಲಾಕುಲಜಲಾವರ್ತಾಧಿವಾಸೇ ತತಃ ।
ನೇಚ್ಛಾ ಶಂಕರಪೂಜನೋದ್ಯತಮತೇಃ ದಾರೇಷು ಹಾರೇಷು ವಾ
ತಸ್ಮಾದ್ದಾರವಿಚಾರಚಾತುರ ಚಿರಂ ಕಿಂ ವಂಚಿತಶ್ಚಂಚುರೈಃ ॥೨೨॥

ನ ದಾರವ್ಯಾಹಾರೈರಿದಮಪಿ ವಿನೇಯಂ ಖಲು ವಯಃ ॥
ಮಯಾ ಧ್ಯೇಯಂ ಧ್ಯೇಯಂ ಶಿವಚರಣಪಂಕೇರುಹರಜಃ ।
ಮುಹುರ್ನೇಯಂ ಮೇಯಂ ಮುಹುರಪಿ ಚ ಮೃತ್ಯುಂಜಯಪದಂ ।
ಮದಾಂಧ್ಯೈಃ ಸಿಂಧೂರಪ್ರವರಗತಿನಿಂದಾಕರವರೈಃ ॥೨೩॥

---

ಹೊರಲಸಾಧ್ಯವಾದ ಸಂಸಾರ ಭಾರವನ್ನು ಪರಿಹರಿಸುವ, ನನ್ನ ಈ ಹವಣಿಕೆಯೆಲ್ಲಿ? ಹೆಂಡತಿಯಲ್ಲಿ ಅನುರಾಗವನ್ನುಂಟುಮಾಡಿ ಮತ್ತೆ ಸಂಸಾರಕ್ಕೆ ತಳ್ಳಲು ಪ್ರಯತ್ನಿಸುವ ನಿನ್ನ ಉದ್ಯಮವೆಲ್ಲಿ? ಒಮ್ಮೆ ಸರ್ಪವನ್ನು ನೋಡಿ ಭೀತನಾಗಿ ಓಡಿಬಂದ ಮನುಷ್ಯನಿಗೆ ಪುನಃ ಅದರಲ್ಲಿ ಪ್ರೀತಿಯನ್ನುಂಟುಮಾಡಿಸಿ ಅದನ್ನು ಹಿಂಬಾಲಿಸುವಂತೆ ಮಾಡುವುದು ಯುಕ್ತವೇ? ॥೨೧॥

ಅತ್ಯುನ್ನತವೂ, ಮನೋಹರವೂ, ರತ್ನಗಳಿಂದ ಅಲಂಕೃತವೂ ಆದ ಸಿಂಹಾಸನವನ್ನೇರಿ ವಿರಾಜಮಾನನಾದವನು ಕೊಳಕಾದ ಮತ್ತು ಸುಳಿಯಿಂದ ಕೂಡಿರುವ ಮಡುವಿನಲ್ಲಿ ವಾಸಮಾಡಲು ಬಯಸುವನೆ? ಅದರಂತೆಯೇ ಶಿವಪೂಜೆಯಲ್ಲಿ ಆಸಕ್ತನಾದವನು ವನಿತೆಯರನ್ನಾಗಲಿ ಅಥವಾ ಸ್ರಕ್ಚಂದನಾದಿ ವಿಷಯಗಳನ್ನಾಗಲಿ ಬಯಸುವನೇ? ಎಂದಿಗೂ ಇಲ್ಲ. ಆದುದರಿಂದ ಸ್ತ್ರೀಯರ ಯೋಗಕ್ಷೇಮವನ್ನು ವಿಚಾರಿಸಲು ಚತುರನಾದ ವಿಧಿಯೇ! ನನ್ನೊಂದಿಗೆ ಚಮತ್ಕಾರವಾದ ಮಾತುಗಳನ್ನಾಡಿ ನನ್ನಿಂದೇಕೆ ವೃಥಾ ವಂಚಿತನಾಗುವೆ. ॥೨೨॥

ನಾನು ಈ ಯೌವ್ವನವನ್ನು ಸ್ತ್ರೀಯರ ಸರಸ ಸಲ್ಲಾಪಗಳಿಂದ ಕಳೆಯಲು ಅಪೇಕ್ಷಿಸುವುದಿಲ್ಲ. ಈ ಕಾಲದಲ್ಲಿಯೇ ಶಿವನ ಅಡಿದಾವರೆಗಳ ಧೂಳಿಯನ್ನು ನಾನು ಅಹ

ಪುರಾ ಯದ್ಯದ್ಭುಕ್ತಂ ತದಪಿ ನ ಮಯಾ ವಿಸ್ಮೃತಮಹೋ
ಮಹಾದೇವಧ್ಯಾನಸ್ಮರಣಪರಿಪಾಕೈಃ ಸ್ಮೃತಮಪಿ ।
ಭಯೋದ್ವೇಗಾಯಾಲಂ ಪುನರಪಿ ನ ತದ್ಭೋಗರಚನಾ
ಚಿರಂ ತ್ಯಕ್ತಂ ತ್ಯಕ್ತಂ ಪುನರಪಿ ನ ತತ್ರಾದರಮತಿಃ ॥೨೪॥

ಕೃತೀ ಲೋಕೇ ಕೋಽಪಿ ಪ್ರಭವತಿ ಕೃತಾಂತಾಂತಕಹಿತಃ
ಸ್ಮರಾರಾತಿಧ್ಯಾನಪ್ರವಣಹೃದಯಃ ಪುಣ್ಯನಿಧಯಃ ।
ತವಾರಾಧ್ಯಂ ಮತ್ವಾ ಶಿವಭಜನಚಿಂತಾಮಣಿಧನಾಃ
ಕ್ವಚಿತ್ಸಂತಃ ಸಂತಿ ತ್ರಿನಯನ ವನೇ ಬಿಲ್ವಜವನೇ ॥೨೫॥

ದೂರದೂರ್ವಾಂಕುರಾಹಾರೋ ಹಾರೋ ಧೀರೋ ಮನೋಹರಂ ।
ಹರ ಸ್ಮರಹರೇತ್ಯೇವಂ ಸ್ಮರನ್ ಕಾಲಂ ನಯಾಮ್ಯಹಂ ॥೨೬॥

ರ್ನಿಶವೂ ಧ್ಯಾನಿಸುವೆನು. ಮದ್ದಾನೆಯಂತೆ ಗಂಭೀರ ಸ್ವಭಾವದವರಾದ ಸತ್ಪುರುಷರ ವರ್ತನೆಯನ್ನು ನಿಂದಿಸುವ ದುಷ್ಟರು ಮೃತ್ಯುಂಜಯನಾದ ಆ ಶಿವನ ಪಾದವನ್ನು ಪುನಃ ಪುನಃ ಊಹಿಸಲಿ. ॥೨೩॥

ಪೂರ್ವಜನ್ಮದಲ್ಲಿ ಯಾವ ದುಃಖಗಳನ್ನು ಅನುಭವಿಸಿರುವೆನೋ ಅವುಗಳನ್ನು ಈಗ ಶಿವಧ್ಯಾನದ ಮಹಿಮೆಯಿಂದ ಸ್ಮರಿಸಿಕೊಳ್ಳುತ್ತಿರುವೆನು. ಪೂರ್ವಜನ್ಮದಲ್ಲಿ ಅನುಭವಿಸಿದ ಆ ಫಲವನ್ನು ಸ್ಮರಿಸಿದ ಮಾತ್ರದಿಂದಲೇ ಭಯವೂ ಮತ್ತು ದುಃಖವೂ ಉಂಟಾಗುವುದು. ಇನ್ನಾದರೂ, ಹೇಯವಾದ ಆ ಸುಖದುಃಖಾನುಭವವು ಬರದಿರಲಿ. ಆ ಭೋಗವನ್ನು ಬಹುಕಾಲದಿಂದ ತ್ಯಜಿಸಿರುವೆನು. ಇನ್ನೆಂದಿಗೂ ಅದನ್ನು ಇಚ್ಛಿಸಲಾರೆ. ॥೨೪॥

ಲೋಕದಲ್ಲಿ ಕೋಟ್ಯಂತರ ಜನರಲ್ಲಿ ಶಿವನ ಪ್ರೀತಿಗೆ ಪಾತ್ರನಾಗುವವನೂ, ಸ್ಮರಾರಿಯಾದ ಶಿವನನ್ನೇ ಎಡಬಿಡದೇ ಧ್ಯಾನಮಾಡುವವನೂ ಆದವನು ಎಲ್ಲಿಯೋ ಒಬ್ಬ ಪುಣ್ಯಶಾಲಿಯು ಜನಿಸುವನು. ಸತ್ಪುರುಷರಾದ ಕೆಲವು ಮಂದಿ ಮಾತ್ರ, ನಿನಗೂ ಪೂಜ್ಯನಾದ ಶಂಕರನ ಸ್ವರೂಪವನ್ನು ತಾತ್ತ್ವಿಕವಾಗಿ ತಿಳಿದು, ಆವನ ಭಜನೆಯೇ ಸರ್ವೋತ್ಕೃಷ್ಟವಾದುದೆಂದು ಭಾವಿಸಿ, ಪರಶಿವನಿಗೆ ಪ್ರಿಯವಾದ ಬಿಲ್ವವನದಲ್ಲಿ ವಾಸಿಸುವರು. ॥೨೫॥

ಪರಬ್ರಹ್ಮನೇ, ಇನ್ನುಮೇಲಾದರೂ ನಾನು ಈ ಶಿವಸನ್ನಿಧಿಯಲ್ಲಿಯೇ

ಪುನಃ ಪುನರ್ದಾರಪರಿಗ್ರಹಾಯ
ಮುರಾಗ್ರಹಸ್ತೇಽನುಚಿತೋ ಯತಸ್ತೇ
ನ ವಸ್ತು ಕಸ್ತೂರಿಕಯಾ ಸಮಾನಂ
ಮುಸ್ತಾಪಿ ಶಸ್ತಾಪಿ ನ ತತ್ಸಮಾನಾ ॥೨೭॥

ಅಭಿಮಾನವಿಹೀನಮಾನಸಾನಾಂ
ನ ಜನಾನಾಂ ಜನತಾಪ್ರವೇಶವಾರ್ತಾ ।
ಅತ ಏವ ನಿವೃತ್ತಿರಾರ್ತಿತಃ
ಪರಿವೃತ್ತೇಽಪಿ ನ ದಾರಸಂಗ್ರಹೇ ॥೨೮॥

ಗ್ರಾಹಗ್ರಸ್ತ್ಯೈರ್ವಾತಿಮುಸ್ತರಮಹಾಸಂಸಾರಸಾರಾದರಃ
ದಾರಗ್ರಾಹವಿಮುಕ್ತಿಮಿಚ್ಛತಿ ಪರಂ ಭೂಮಂಡಲೇ ಕೋಽಪ್ಯತಃ ।

ವಾಸವಾಗಿದ್ದು ದೂರ್ವಾಂಕುರಗಳನ್ನು (ಹುಲ್ಲನ್ನು) ಆಹಾರವನ್ನಾಗಿ ಸ್ವೀಕರಿಸುತ್ತಾ ಚಿತ್ತವನ್ನು ಬಿಗಿಹಿಡಿದು ಪರಮಭಕ್ತನಾಗಿ ನಿರಂತರವೂ ಹರ, ಸ್ಮರಹರ ಎಂದು ಶಂಕರನ ನಾಮಗಳನ್ನೇ ಸ್ಮರಿಸುತ್ತಾ ಕಾಲವನ್ನು ಕಳೆಯುವೆನು. ॥೨೬॥

ಎಲೈ ಪಿತಾಮಹನೇ, ಆದುದರಿಂದ ನನ್ನನ್ನು ಪತ್ನಿಯೊಂದಿಗೆ ಸಂಘಟಿಸುವಂತೆ ಮಾಡುವ ನಿನ್ನ ಛಲವನ್ನು ಸಾಕುಮಾಡು. ಇದು ನಿನಗೆ ಉಚಿತವಾದುದಲ್ಲ. ಪರಿಮಳದ್ರವ್ಯಗಳಲ್ಲಿ ಶ್ರೇಷ್ಠವಾದ ಕಸ್ತೂರಿಗೆ ಸದೃಶವಾದ ಮತ್ತೊಂದು ವಸ್ತುವು ಇರುವುದಿಲ್ಲ. ಮುಸ್ತೆಯೆಂಬುದು (ಭದ್ರಮುಸ್ತೆ) ಎಷ್ಟೇ ಶ್ರೇಷ್ಠವಾದರೂ ಅದು ಕಸ್ತೂರಿಗೆ ಸಮನಾದೀತೆ? ॥೨೭॥

ಬಾಹ್ಯ ವಿಷಯಗಳಲ್ಲಿ ಅನುರಾಗವಿಲ್ಲದಿರುವವರು, ಜನ ಸಂದಣಿಯಲ್ಲಿ ಬೆರೆಯುವುದಿಲ್ಲ. ಏಕೆಂದರೆ ಜನಮಧ್ಯೆ ಸೇರಿದಷ್ಟೂ ಹಿಂಸೆಯು ಹೆಚ್ಚು. ಸ್ತ್ರೀ ಸಂಬಂಧವು ಉಂಟಾದರಂತೂ ಅವರ ಮನಃಸಂತಾಪವು ಎಂದಿಗೂ ಶಾಂತವಾಗಲಾರದು. ॥೨೮॥

ಮನುಜನು ಸ್ರಕ್ಚಂದನವನಿತಾದಿ ವಿಷಯಗಳೆಂಬ ಮೊಸಳೆಗಳಿಂದ ಕೂಡಿರುವ ಅಪಾರವಾದ ಈ ಸಂಸಾರಸಾಗರದಲ್ಲಿಯೇ ಬಾರಿಬಾರಿಗೂ ಮುಳುಗುತ್ತಿರುವನು, ಹೀಗಿದ್ದರೂ ಲೋಕದಲ್ಲಿ ವಿವೇಕಿಯಾದವನೊಬ್ಬನು ಮಾತ್ರ ಸ್ತ್ರೀಯೆಂಬ, ಮೊಸಳೆಯಿಂದ ಬಿಡುಗಡೆಯನ್ನು ಹೊಂದಲಪೇಕ್ಷಿಸುವನು. ಅದರಿಂದ ಬಿಡುಗಡೆ

ತಸ್ಮಾತ್ಸುಕ್ಷೇತ್ರಮೇಕ್ಷ್ಯೆತೈವ ಸಹಸಾ ದುಷ್ಟಾತ್ಮನಾಂ ದುರ್ಗತಿಃ
ಕಿಂ ನಾಮೇಧ್ಯವಿಲೋಲಜಂತುಸದೃಶೋ ದಾರಾನುಸಾರೀ ಜನಃ ॥೨೯॥

ದಾರೈರ್ದಾರುಣಯಾತನಾ ಖಲು ಮುಹುರ್ದಾರಾನುಷಂಗೇ ಸುಖಂ
ನ ಸ್ವಪ್ನೇಽಪಿ ಮಹಾಪ್ರಯಾಣಸಮಯೇ ತೇಷಾಂ ನ ವಾರ್ತಾಪ್ಯತಃ ।
ಸಾ ವಾರ್ತಾ ವಿಷವದ್ವಿಭಾತಿ ನ ವಿಷಂ ಪಾತುಂ ಪ್ರವೃತ್ತೋಽಪಿ ಕಿಂ
ಜೀವಾಮೀತಿ ಸದಾಪಿ ದಾರವರಣೇ ಸಾ ಜೀವನಾಶಾ ಕುತಃ ॥೩೦॥

ಯತ್ರ ಕ್ವಾಪಿ ನ ಯಾಮಿ ಜೀವನಮಿದಂ ರೇವಾತಟೇ ಕೇವಲಂ
ಧ್ಯಾಯನ್ ಫಾಲವಿಲೋಚನಂ ಮುಹುರಹಂ ತಂ ಕಾಲಕಾಲಂ ಜಲೈಃ ।
ರುದ್ರಾಧ್ಯಾಯಜಪೇ ನ ಲಿಂಗಮಮಲಂ ಸಂಸೇಚಯನ್ ಕೋಮಲೈ
ರಾರಕ್ತೈರ್ನವಬಿಲ್ವಕೋಮಲದಲೈರಭ್ಯರ್ಚಯನ್ ಶಂಕರಂ ॥೩೧॥

ಯಾಗಬೇಕಾದುದು ಯುಕ್ತವಾದುದೇ ನಿಜ. ಸ್ತ್ರೀಯರಲ್ಲಿ ಅನುರಕ್ತರಾಗಿ ಅವರನ್ನೇ ಅನುಸರಿಸುವ ಜನರು ಅಮೇಧ್ಯದಲ್ಲಿ ವಾಸವಾಗಿರುವ ಕ್ರಿಮಿಯಂತೆ ಕಷ್ಟಪಡುವರಲ್ಲವೇ! ॥೨೯॥

ಹೆಂಡತಿಯಿಂದ ಪುರುಷನಿಗೆ ದಾರುಣವಾದ ವೇದನೆಯುಂಟಾಗುವುದಲ್ಲದೇ, ಅವಳ ಸಂಬಂಧದಿಂದ ಸ್ವಪ್ನದಲ್ಲಿಯೂ ಸುಖವು ಲಭಿಸಲಾರದು. ನಮ್ಮ ನಶ್ವರವಾದ ಈ ದೇಹದಿಂದ ಪ್ರಾಣವಾಯುವು ಚಲಿಸಲು, ಆ ಸ್ತ್ರೀಯರು ನಮ್ಮೊಂದಿಗೆ ಬರುವರೇ! ಮನುಜನು ಮರಣಕಾಲದಲ್ಲಿ, ಅವರ ಸಂಸರ್ಗವನ್ನು ವಿಷದಂತೆ ದೂರೀಕರಿಸುವನು. ಆದುದರಿಂದ ಅಬಲೆಯರ ಬಲೆಗೆ ಸಿಲುಕಿದವನು ವಿಷವನ್ನು ಪಾನ ಮಾಡಲು ಪ್ರವರ್ತಿಸಿದವನಂತೆಯೇ. ಸ್ತ್ರೀಯೆಂಬ ವಿಷವನ್ನು ವರಿಸಿ ಅವಳ ಸಹಾಯದಿಂದ ಜೀವಿಸುವೆನೆಂಬ ಭಾವನೆಯುಳ್ಳವನು ನಿಜವಾಗಿಯೂ ಮೂರ್ಖನಲ್ಲವೇ! ॥೩೦॥

ಪವಿತ್ರವಾದ ಈ ಈಶ್ವರ ಸನ್ನಿಧಿಯನ್ನು ತೊರೆದು ಇನ್ನೆಲ್ಲಿಗೂ ಹೋಗಲಾರೆ. ರೇವಾನದಿಯ ತೀರದಲ್ಲಿಯೇ ವಾಸವಾಗಿದ್ದು, ತ್ರಿನೇತ್ರನ ಧ್ಯಾನಮಾತ್ರದಿಂದ ಈ ಜೀವನವನ್ನು ನೀಗುವೆನು. ಮೃತ್ಯುಂಜಯನಾದ ಶಿವನನ್ನು ರುದ್ರಾಧ್ಯಾಯ ಪೂರ್ವಕವಾಗಿ ಧ್ಯಾನಿಸುತ್ತಾ, ಸ್ವಚ್ಛವಾದ ನದಿಯ ನೀರಿನಿಂದ ಅಭಿಷೇಚಿಸುತ್ತಾ, ಕೋಮಲವಾದ ಬಿಲ್ವ ದಳಗಳಿಂದ ಶಂಕರನನ್ನು ಪೂಜಿಸಿ, ಸುಖದಿಂದ ಇಲ್ಲಿಯೇ ಕಾಲವನ್ನು ಕಳೆಯುವನು. ॥೩೧॥

ಆಯುರ್ನೇಯಂ ಸಾರಮಾರಭ್ಯ ಭೂಯಃ
ಭೂಯೋ ಭೂಯಃ ಪೂಜನೇನೈವ ಶಂಭೋಃ ।
ತಸ್ಮಾದಾಯುರ್ದಾರಭೋಗೈರ್ನ ನೇಯಂ
ತದ್ಭೋಗಾರ್ಥಂ ತದ್ಧಿ ನೋ ನೋಪಯುಕ್ತಂ ॥೩೨॥

ಯಾ ಯಾ ನೇಯಾ ಯಾಮಿನೀನಾಥಚೂಡ
ಧ್ಯಾನೈರ್ನೇಯಾ ಯಾಮಿನೀ ನೇಯಮನ್ಯಾ ।
ನಿಶಾಕಾರಾ ಸಾ ನ ದಾರೋಪಭೋಗೇ
ಯೋಗ್ಯಾ ಯೋಗ್ಯಾ ಶಂಕರಾರಾಧನೇ ಸಾ ॥೩೩॥

ನ ವೃಥಾ ಖಲು ಜನ್ಮಯಾಪನಂ
ಯಮದೂತಾವಸರಾಯ ನಾಯುರಸ್ಯ ।
ನ ಚ ಮೇರುಸಮಾನಮಾಯುರಲ್ಪಂ
ತದಿದಂ ದಾರಪರಿಗ್ರಹೇ ವೃಥಾ ಸ್ಯಾತ್ ॥೩೪॥

ಶಿವನ ಆರಾಧನೆಯಲ್ಲಿಯೇ ಪವಿತ್ರವಾದ ಈ ಜೀವನವನ್ನು ನೀಗಬೇಕಾಗಿದೆ. ಆದುದರಿಂದ ಈ ಜೀವನವನ್ನು ಸ್ತ್ರೀಸುಖಗಳಿಂದ ವ್ಯರ್ಥಗೊಳಿಸಬಾರದು. ಸ್ತ್ರೀ ಸುಖವನ್ನು ಹೊಂದುವುದಕ್ಕೋಸ್ಕರ ಪವಿತ್ರವಾದ ಈ ಜೀವನವು ಸಾಗುವುದು ಅನುಚಿತವಾದುದಲ್ಲವೇ ? ॥೩೨॥

ಚಂದ್ರಶೇಖರನ ಧ್ಯಾನದಿಂದಲೇ ರಾತ್ರಿಯನ್ನು ಕಳೆಯಬೇಕಲ್ಲದೇ ಸ್ತ್ರೀ ಸಂಭೋಗವೇ ಮೊದಲಾದ ದುರ್ವ್ಯಸನಗಳಿಂದ ರಾತ್ರಿಯನ್ನು ಕಳೆಯುವುದು ಸರ್ವಥಾ ಯುಕ್ತವಲ್ಲ. ಅಖಂಡವಾದ ಆ ರಾತ್ರಿಯನ್ನು ಸ್ತ್ರೀಯರ ಉಪಭೋಗದಲ್ಲಿ ಕಳೆಯುವುದು ಎಂದೂ ಯೋಗ್ಯವೆನಿಸಿಕೊಳ್ಳಲಾರದು. ಆದುದರಿಂದ ಪವಿತ್ರವಾದ ರಾತ್ರಿಕಾಲವನ್ನು ಶಿವನ ಧ್ಯಾನದಿಂದಲೇ ಕಳೆಯುವುದು ಉಚಿತ. ॥೩೩॥

ವ್ಯರ್ಥವಾಗಿ ಈ ಜನ್ಮವನ್ನು ಸವೆಸಿ, ಕಡೆಗೆ ಯಮದೂತರ ಬಾಯಿಗೆ ಬಲಿಯಾಗುವುದೂ ಯುಕ್ತವಲ್ಲ. ಈ ಭೂಮಿಯಲ್ಲಿ ಜನ್ಮವನ್ನು ತಾಳಿದ ಪ್ರತಿಯೊಂದು ಜಂತುವಿಗೂ ಶಾಶ್ವತವಾದ ಜೀವಿಕೆಯು ಇರದೆ ಅದು ಅಲ್ಪಕಾಲ ಮಾತ್ರ ಸ್ಫುರಿಸುತ್ತದೆ. ಹೀಗಿರುತ್ತಿರಲು ಆ ಕೊಂಚಕಾಲದಲ್ಲಿ ಸ್ತ್ರೀಯನ್ನು ವರಿಸಿ ಅವಳೊಂದಿಗೆ ಸುಖಾಸಕ್ತನಾದರೆ ಆಗ ಅವನ ಆ ಜನ್ಮವು ವ್ಯರ್ಥವಾಗುವುದಿಲ್ಲವೆ ?

ನ ದಾರೋಪಭೋಗಸಮಯಃ ಪರಿಕಲ್ಪನೀಯಃ
ಕೋ ವಾ ತವಾಭಿಮತ ಇತ್ಯಪಿ ತನ್ನವಿದ್ಮಃ
ಸರ್ವೋಽಪಿ ಶರ್ವಭಜನೇನ ವಿನೇಯ ಏವ ।
ಕಾಲೋಽಯಮಾಯುರಪಿ ತೇನ ವೃಥಾ ನ ಭೂಯಃ ॥೩೫॥

ಯಮಭಟಪಟ್ಟಿದಂಡಭಿಂಡಿವಾಲ
ಜ್ವಲನಕುಲಾಕುಲಚೇತಸಾಂ ಕ್ವ ದಾರಾಃ ।
ಹರ ಹರ ಹರ ಇತ್ಯಪಾರಹಾರ
ವ್ಯತಿಕರನೇಯ ಮಿದಂವಯಃ ಪ್ರಿಯಂ ನೋ ॥೩೬॥

ಮಾಸ್ತು ಮಾಸ್ತು ಮಮ ದಾರಪರಿಗ್ರಹೇಚ್ಛಾ
ಸ್ವೇಚ್ಛಾವಿಹಾರಹರಹಾರಪರಾಕ್ರಮಸ್ಯ ।

ಎಲೈ ಪಿತಾಮಹನೇ, ಸ್ತ್ರೀಸೌಖ್ಯವನ್ನು ಪಡೆಯುವುದಕ್ಕೆಂದು ಕಾಲವನ್ನು ಮೀಸಲಾಗಿರಿಸಬಾರದು. ಸರ್ವ ಸಮಯಗಳನ್ನೂ ಶಿವನ ಭಜನೆಯಲ್ಲಿಯೇ ಕಳೆಯಬೇಕಾಗುತ್ತಿರಲು, ಯಾವ ಕಾಲವನ್ನು ತಾನೇ ಸ್ತ್ರೀಸುಖದಲ್ಲಿ ಸೇರಿ ವಿನಿಯೋಗಿಸಬಹುದು. ಅದನ್ನು ನಾವು ತಿಳಿಯಲಾರದವರಾಗಿರುವೆವು. ಆದುದ ರಿಂದ ಪವಿತ್ರವಾದ ಈ ಆಯುಸ್ಸನ್ನು ಶಿವಧ್ಯಾನದಲ್ಲಿಯೇ ಕಳೆಯಬೇಕಲ್ಲದೇ ಇತರ ದುರ್ವ್ಯಸನಗಳಿಂದ ನಿಜವಾಗಿಯೂ ವ್ಯರ್ಥಗೊಳಿಸಬಾರದು. ॥೩೫॥

ಈ ಲೋಕದಲ್ಲಿ ಮನುಷ್ಯ ಜನ್ಮವನ್ನು ಪಡೆದು, ದೇಹಪಾತವಾಗುವ ವರೆಗೂ ವಿಷಯಸುಖಗಳನ್ನೇ ಅನುಭವಿಸಿ, ಅಂತ್ಯದಲ್ಲಿ ಯಮದೂತರ ದಂಡ, ಖಡ್ಗ ಮುಂತಾದ ಆಯುಧಗಳೆಂಬ ಭಯಂಕರವಾದ ಅಗ್ನಿಯಲ್ಲಿ ಸಿಲುಕಿ, ಬೆಂದು ಹೋಗುವ ಪ್ರಾಣಿಗಳಿಗೆ ಸ್ತ್ರೀಸೌಖ್ಯವೆಂಬುದು ರುಚಿಸುವುದೇ? ಎಂದಿಗೂ ಇಲ್ಲ. ಆದುದರಿಂದ ಹರ, ಹರ ಎಂದು ಎಡಬಿಡದೆ ಶಿವನಾಮಸ್ಮರಣೆಯನ್ನು ಮಾಡುವುದ ರಲ್ಲಿಯೇ ಈ ವಯಸ್ಸನ್ನು ಕಳೆಯುವುದು ನನಗೆ ಪ್ರಿಯತಮವಾಗಿ ಕಾಣುವುದು. ॥೩೬॥

ಸ್ವೇಚ್ಛಾವಿಹಾರಿಯಾದ ಶಿವನಲ್ಲಿಯೇ ಆಸಕ್ತನಾಗಿ ಪರಮಶಿವಭಕ್ತನಾಗಿರುವ ನನಗೆ ತುಚ್ಛವಾದ ಸ್ತ್ರೀಸುಖವು ಬೇಕಾಗಿರುವುದಿಲ್ಲ. ಅಯಾಚಿತವಾಗಿ ಪ್ರಾಪ್ತವಾ

ಕೋ ವಾ ಸುಧಾಮಪಿ ವಿಹಾಯ ಮಲಾಶನೇಚ್ಛಾಂ
ಸ್ವಚ್ಛಂದವೃತ್ತಿರಪಿ ಸೂಕರಧಾರವೃತ್ತಿಃ ॥೩೭॥

ಆಕಂಠಂ ಯದಮೇಧ್ಯಮಾತ್ರಮಶನಂ ವಾಂತಂ ಪುನಸ್ತತ್ಪುನಃ
ಸ್ವೀಕೃತ್ಯೋದರದುರ್ವಿಕಾರಭರಣಂ ಕರ್ತುಂ ಪ್ರವೃತ್ತಃ ಸುಧೀಃ ।
ಕೋ ವಾ ತಂ ವದ ದಾರಹಾರನಿಕರವ್ಯಾಪಾರಧೀರಃ ಪರಂ
ಹಾರೋ ವಾಂಛತಿ ಚಂಚುರಃ ಪರಮತೋ ಹಾರೇ ಮಮಾಸ್ತ್ವಾದರಃ॥೩೮॥

ದಾರವ್ಯಾಹಾರವೀರಾಃ ಕತಿಚನ ಕತಿಚಿನ್ಮಾರಸಂಹಾರ
ಹಾರವ್ಯಾಹಾರಾಸಾರಸಾರಪ್ರಚುರಚಿರಕಥಾಮಾತ್ರಚಿತ್ತಾಃ ಪವಿತ್ರಾಃ ।
ತತ್ರಾದ್ಯೇಽಸ ಪ್ರವೇಶೋ ಮಮ ಭವತು ತಥಾ ತ್ವಗ್ರಭಾಗೇ ಪ್ರವೇಶೋ
ತೇನಾಶೋಕೋ ನ ನಾಶೋಽಪ್ಯನುದಿನಮಿತಿ ಮೇ ಶಂಕರಾರಾಧನೇಚ್ಛಾ
॥೩೯॥

ಗಿರುವ ಅಮೃತವನ್ನು ತೊರೆದು ಯಾವನಾದರೂ ಹಂದಿಯಂತೆ ಅಶುದ್ಧವಾದ ಪುರೀಷಾದಿಪದಾರ್ಥಗಳನ್ನು ಸೇವಿಸಬಯಸುವನೇ? ॥೩೭॥

ಒಬ್ಬನಾದರೂ ಒಮ್ಮೆ ಕಂಠಪರ್ಯಂತವಾಗಿ ಅಮೇಧ್ಯವನ್ನು ಭಕ್ಷಿಸಿ ಅದನ್ನು ವಮನ ಮಾಡಿ ಪುನಃ ಆ ವಸ್ತುವನ್ನೇ ಭಕ್ಷಿಸಲು ಉದ್ಯುಕ್ತನಾಗುವನೇ! ಅಥವಾ ವಿಷಯೋಪಭೋಗ ಮತ್ತು ಶಿವಧ್ಯಾನಗಳೆಂಬ ಈ ಎರಡು ವ್ಯಾಪಾರ ಗಳನ್ನೂ ಒಂದೇ ಕಾಲದಲ್ಲಿ ನೆರವೇರಿಸುವ ಧೀರನಾವನಾದರೂ ಲೋಕದಲ್ಲಿರು ವನೇ? ಪರಶಿವಭಕ್ತನು ಪರಶಿವನನ್ನೇ ಪೂಜಿಸುವನಲ್ಲದೇ, ಇತರ ವ್ಯಾಪಾರಗಳಲ್ಲಿ ಆಸಕ್ತನಾಗುವುದಿಲ್ಲ. ಆದುದರಿಂದ ನಾನು ಶಾಂಭವನನ್ನೇ ಪೂಜಿಸುವೆನಲ್ಲದೇ ಇತರ ಯಾವ ಕಾರ್ಯಗಳನ್ನೂ ಮಾಡಬಯಸುವುದಿಲ್ಲ. ॥೩೮॥

ಲೋಕದಲ್ಲಿ ಕೆಲವರು ಮನ್ಮಥನ ಪಾಶಕ್ಕೆ ವಶರಾಗಿ ಸ್ತ್ರೀಯರ ಸರಸ ಸಲ್ಲಾಪಗಳಲ್ಲಿಯೇ ಆಸಕ್ತರಾಗಿರುವರು. ಇನ್ನು ಕೆಲವರು ಕಾಮರಿಪುವಾದ ಶಿವನ ನಾಮಗಳನ್ನೇ ಸತತವೂ ಉಚ್ಚರಿಸುತ್ತಾ, ಶಿವಕಥಾಮೃತವನ್ನು ಕೇಳುವುದ ರಲ್ಲಿಯೇ ವ್ಯಗ್ರಚಿತ್ತರಾಗುವರು. ಇವರಿಬ್ಬರ ನಡುವೆ ಮೊದಲನೆಯದಾದ ಕಾಮುಕರ ಪಂಗಡದಲ್ಲಿ ನನಗೆ ಪ್ರವೇಶವು ಲಭಿಸದೇ ಎರಡನೆಯ ಪಂಗಡದಲ್ಲಿಯೇ ಅವಕಾಶವು ಲಭಿಸಲಿ. ಅದರಿಂದ ಶೋಕಮೋಹಗಳು ಸಂಭವಿಸಲಾರವು. ಪರಂತು ಶಿವಾರಾಧನೆಯಲ್ಲಿಯೇ ಇಚ್ಛೆಯುಂಟಾಗುವುದು. ॥೩೯॥

ಇಚ್ಛಾ ಶಂಕರಪೂಜನೇ ಯದಿ ತದಾ ಧನ್ಯಂ ತದಾಯುಃ ಪರಂ
ನೀಹಾರಾಚಲಕನ್ಯಕಾಪತಿಪದಾಂಭೋಜಾರ್ಚನಂ ಜೀವನಂ ।
ಯೇಷಾಂ ತತ್ಪದಪೂಜನೇನ ಚ ಮಯಾ ನೇಯಂ ದಿನಂ ಸಾದರಂ
ತತ್ತದ್ದುರ್ದಿನಮಿತ್ಯವೈಮಿ ಬಹುಧಾ ಯಸ್ಮಿನ್ನ ತಚ್ಚಿಂತನಂ ॥೪೦॥

ಕೋ ವಾ ಸಂತತಮಂತಕಾಂತಕಪದಾಂಭೋಜಾರ್ಚನಂ ತ್ವಾದರಾತ್
ಕರ್ತುಂ ವಾಂಛತಿ ಸಂಚಿತಾಘನಿಲಯೇ ತಾವತ್ತದಿಚ್ಛಾ ಭವೇತ್ ।
ಅಸ್ಮಾಕಂ ದುರದೃಷ್ಟಕಷ್ಟನಿಲಯಸ್ಯೇದಂ ಪರಂ ಸಾದರಂ
ಯದ್ರೇವಾತಟತುಂಗಲಿಂಗಭಜನಂ ಬಿಲ್ವೀಜಲೈರ್ವಾ ದಳೈಃ ॥೪೧॥

ಸುಧಾಪಾನೈಃ ಪೀನಃ ಪುನರಪಿ ಸುಧಾಮೇವ ಕಲಯನ್
ಪರಂ ಕ್ಷಾರಂ ನೀರಂ ಪರಿಹರತಿ ದಾರಾನಪಿ ತಥಾ ।

ಶಿವನ ಆರಾಧನೆಯಲ್ಲಿಯೇ ಇಚ್ಛೆಯು ಉಂಟಾದರೆ, ಆಗಲೇ ಜೀವಿಕೆಯು ಕೃತಾರ್ಥವಾದುದೆಂದು ಭಾವಿಸುತ್ತೇನೆ. ಯಾರು, ಪಾರ್ವತೀ ಪತಿಯಾದ ಆ ಶಿವನ ಅಡಿದಾವರೆಗಳನ್ನು ಅರ್ಚಿಸುವುದರಲ್ಲಿಯೇ ತಮ್ಮ ಜೀವನವನ್ನು ಸಾರ್ಥಕಗೊಳಿಸುವರೋ ಅವರೇ ಧನ್ಯರು. ನಾನಾದರೋ, ಶಿವನಾದ ಸೇವೆಯಿಂದಲೇ ದಿನಗಳನ್ನು ಕಳೆಯುವುದು ಉಚಿತವೆಂದು ಭಾವಿಸಿರುವೆನು. ಯಾವ ದಿನದಲ್ಲಿ ಶಿವನನ್ನು ಧ್ಯಾನಿಸುವುದಿಲ್ಲವೋ ಆದಿನವು ದುರ್ದಿನವೆಂದೇ ತಿಳಿಯುವೆನು. ॥೪೦॥

ಲೋಕದಲ್ಲಿ ಯಾವ ಮನುಜನು ತಾನೇ ನಿರಂತರವೂ, ಮೃತ್ಯುಂಜಯನಾದ ಆ ಶಿವನ ಅಡಿದಾವರೆಗಳನ್ನು ಶ್ರದ್ಧಾಭಕ್ತಿಪುರಃಸರನಾಗಿ ಆರಾಧಿಸಲಿಚ್ಛಿಸುವನು? ಪೂರ್ವಜನ್ಮದಲ್ಲಿ ಸಂಚಿತವಾದ ಪಾಪರಾಶಿಗಳು ಭೋಗದಿಂದ ಕ್ಷಯವಾಗಲು ಆಗ ಶಿವನನ್ನು ಆರಾಧಿಸಬೇಕೆಂಬ ಸದಿಚ್ಛೆಯುಂಟಾಗುವುದು. ನಮ್ಮ ಪೂರ್ವಜನ್ಮಾರ್ಜಿತವಾದ ಪಾಪಸಮೂಹವು ಕ್ಷಯಿಸಿರುವುದರಿಂದಲೇ, ನಮಗೀಗ ಈ ರೇವಾನದಿಯ ದಡದಲ್ಲಿರುವ ಪವಿತ್ರವಾದ ಶಿವಲಿಂಗಗಳನ್ನು ಕೋಮಲವಾದ ಬಿಲ್ವಪತ್ರೆಗಳಿಂದ ಅರ್ಚಿಸುವ ಸುಯೋಗವು ಲಭಿಸಿರುವುದು. ॥೪೧॥

ಅಮೃತವನ್ನು ಪಾನಮಾಡಿ ಅದರಿಂದ ದೇಹಪುಷ್ಟಿಯನ್ನು ಹೊಂದಿರುವವನು ಪುನಃ ಅದನ್ನೇ ಸೇವಿಸಲು ಉದ್ಯುಕ್ತನಾಗಿ ನೀರಸವಾದ ಲವಣೋದಕವನ್ನು ಪರಿವರ್ಜಿಸುವನು. ಅದರಂತೆ ಅಮೃತತುಲ್ಯವಾದ ಮತ್ತು ಶಾಶ್ವತವಾದ

ಕಥಂ ವಾರಂ ವಾರಂ ಪರಿಹರತಿ ಹಾರೋಽಪಿ ನ ಮುಹುಃ
ಮಹಾದೇವಂ ಧ್ಯಾಯನ್ ಮುಹುರಮೃತರೂಪಂ ಮುಹುರಪಿ ॥೪೨॥

ಚಿತ್ತಂ ತಾವದುಮಾಸಹಾಯಚರಣಧ್ಯಾನಾಯ ಯತ್ಕಲ್ಪಿತಂ
ತತ್ಕಿಂ ಧಾವತಿ ಧೂರ್ತದುರ್ಜನವಧೂತುಂಗಾಂಗಸಂಗೇಚ್ಛಯಾ ।
ನಾಯಂ ಕ್ವಾಪಿ ಸುಧಾಕರೋ ವಿಷಕರಶ್ಚಿತ್ತಂ ತಥಾ ಶಂಕರ
ಧ್ಯಾನಾರಾಧನಸಾಧನಪ್ರವಣಮಪ್ಯೇತಸ್ಯ ದಾರಾರತಿಃ ॥೪೩॥

ದಾರಾರತೇರ್ದಾರುಣತಾಯನಾಯಾಸ್ತಾವನ್ನ ಕಿಂ ಸ್ಯಾದ್ವಿನಿವಾರಣಾಯ
ಕ್ವ ನಾಂಧಕಾರಾಪಗಮೋಽಪಿ ಚಕ್ಷುಃ ನ ಭಾನುಭಾನುಗ್ರಹಣಾಯ ಶಕ್ತಂ
॥೪೪॥

ಮೋಕ್ಷಸುಖವನ್ನುಂಟು ಮಾಡುವ ಶಿವನನ್ನು ಆರಾಧಿಸುವ ಶಿವಭಕ್ತಾಗ್ರಣಿಯು, ಶಿವಕಥಾಮೃತದ ಸವಿಯನ್ನು ಪುನಃ ಅನುಭವಿಸುವನಲ್ಲದೆ ಕ್ಷಣಿಕವಾದ ಸ್ತ್ರೀಸುಖವನ್ನು ಎಂದಿಗೂ ಅನುಭವಿಸಬಯಸುವುದಿಲ್ಲ. ॥೪೨॥

ಉಮಾರಮಣನಾದ ಶಿವನ ಅಡಿದಾವರೆಗಳನ್ನೇ ಧ್ಯಾನಿಸುವುದರಲ್ಲಿ ಆಸಕ್ತವಾದ ಚಿತ್ತವು, ಧೂರ್ತರೂ, ಕಪಟಿಗಳೂ, ಆದ ಅಬಲೆಯರ ಉನ್ನತವಾದ ವಕ್ಷಃಸ್ಥಳವನ್ನು ಆಲಂಗಿಸುವ ಇಚ್ಛೆಯಿಂದ ಅವರಿದ್ದಲ್ಲಿಗೆ ಹೋಗಬಯಸುವುದೇ ? ಸುಧಾಕರನೆಂದೆನಿಸಿಕೊಳ್ಳುವ ಚಂದ್ರನು ಎಂದಿಗೂ ವಿಷಕರನಾಗಲಾರನಷ್ಟೆ ? ಹಾಗೆಯೇ, ಶಿವನ ಧ್ಯಾನಾರಾಧನೆಗಳಲ್ಲಿ ತಲ್ಲೀನನಾದ ಈ ನನ್ನ ಚಿತ್ತವೂ ಸಹ ತುಚ್ಛವಾದ ಸ್ತ್ರೀಸೌಖ್ಯವನ್ನು ಎಂದಿಗೂ ಇಚ್ಛಿಸಲಾರದು. ॥೪೩॥

ಅಂತ್ಯದಲ್ಲಿ ದಾರುಣವಾದ ವೇದನೆಯನ್ನುಂಟುಮಾಡುವ ಸ್ತ್ರೀಯ ಪ್ರೇಮಪಾಶವನ್ನು ಹರಿದು ಹೋಗಲಾಡಿಸುವ, ಯಾವ ವಸ್ತುವಾದರೂ ಲೋಕದಲ್ಲಿ ಇರುವುದೇ ? ಇಲ್ಲ, ಎಂದಿಗೂ ಇಲ್ಲ! ಚಕ್ಷುರಿಂದ್ರಿಯವು, ಸುತ್ತಲೂ ಇರುವ ಅಂಧಕಾರವು ನಾಶವಾಗಲು ಬೆಳಕನ್ನು ಕಾಣಲು ಸಮರ್ಥವಾಗುವುದು. ಆದರೆ, ಪ್ರಬಲವಾದ ಕಿರಣಗಳಿಂದ ಶೋಭಿಸುತ್ತಲಿರುವ ಸೂರ್ಯನನ್ನು ದಿಟ್ಟಿಸಿ ನೋಡಲು ಸಮರ್ಥವಾದೀತೆ ? ॥೪೪॥

ದಾರೇಷಣಾ ಮಾಸ್ತು ಧನೇಷಣಾಪಿ ಶಿವೇಷಣಾ ತಾವದನಂತರಾಯು
ಸ್ಯಾದಸ್ಯ ತೇನಾಸ್ಯ ಶಿವಂ ಶಿವಾನಿ ಶಿವೋऽಪಿ ದಾಸ್ಯತ್ಯನುವಾರಮೇವ ॥೪೫॥

ಚಿರಂ ಹರ ಹರೇತಿ ಮೇ ಮನಸಿ ಹಾರನಾಮಾಮೃತಂ
ಮಹೇಶ್ವರಕಥಾರಸಪ್ರಸವಸಿದ್ಧಿವೃದ್ಧೇಃ ಪದಂ ।
ಪದಂ ನ ವಿಪದಾಮಿದಂ ಭವತಿ ಸಂಪದಾಂ ತತ್ಪದಂ
ತದೇವ ಮುಹುರಾದರಾತ್ಪಿಬ ಪಿಬಾಮ್ಯಹಂ ಸಾದರಂ ॥೪೬॥

ವೃಥಾ ಕಿಮಿತಿ ನೀಯತೇ ವದ ವಯಃ ಪ್ರಿಯಂತೇ ವಯಃ
ಕಿಯತ್ಕಿಮಪಿ ತೇನ ವಾ ನಕೃತಮೇವ ಪುಣ್ಯಂ ಮುಹುಃ ।
ನ ತೇನ ಮಹನೀಯತಾ ತ್ವಯಿ ಕೃತಾ ವೃಥಾ ಜಲ್ಪನಂ
ಕೃತಂ ಕೃತಮತಃ ಪರಂ ಕುರು ಮಹೇಶವಾರ್ತಾಂ ವಿಧೇ ॥೪೭॥

---

ನನಗೆ ಹೆಂಡತಿಯಲ್ಲಿಯೂ ಮತ್ತು ಧನಕನಕಾದಿಗಳಲ್ಲಿಯೂ ಅಪೇಕ್ಷೆಯು ಉಂಟಾಗದಿರಲಿ. ಆದರೆ ಶಂಕರನ ಧ್ಯಾನದಲ್ಲಿ ಮಾತ್ರ ಇಚ್ಛೆಯು ತಪ್ಪದಿರಲಿ. ಅದರಿಂದಲೇ ನನಗೆ ಕಲ್ಯಾಣವಾಗುವುದು. ಧ್ಯಾನದಿಂದ ಸಂತುಷ್ಟನಾದ ಶಿವನೂ ಸಹ ಭಕ್ತನಾದ ನನಗೆ ಅಪಾರವಾದ ಕಲ್ಯಾಣಗಳನ್ನುಂಟು ಮಾಡುವನು. ॥೪೫॥

ನನ್ನ ಮನಸ್ಸಿನಲ್ಲಿ ಬಹುಕಾಲದಿಂದ ಹರಹರ ಎಂಬ ಹರನಾಮದ ಉಚ್ಚಾರಣೆಯೆಂಬ ಅಮೃತವು ಶಿವಕಥಾಕರ್ಣನದಿಂದುಂಟಾದ ಭಕ್ತಿರಸಾನುಭವದ ಪರಾಕಾಷ್ಠತೆಯನ್ನು ಹೊಂದಿಸುವುದಾಗಿರುತ್ತದೆ. ಶಿವನಾಮಾಮೃತವೆಂಬ ಆ ವಸ್ತುವು, ಎಂದೂ ವಿಪತ್ತುಗಳಿಗೆ ಕಾರಣವಾಗದು. ಐಶ್ವರ್ಯಗಳನ್ನೇ ಉಂಟುಮಾಡುವುದು. ಎಲೈ, ಚಿತ್ತವೇ! ಆದುದರಿಂದ ಶಿವನಾಮಾಮೃತವನ್ನೇ ಸದಾ ಪ್ರೀತಿಯಿಂದ ಪಾನ ಮಾಡು. ॥೪೬॥

ಎಲೈ ಸೃಷ್ಟಿಕರ್ತನೇ! ನಿನ್ನ ಪವಿತ್ರವಾದ ಈ ವಯಸ್ಸನ್ನು ವ್ಯರ್ಥವಾಗಿ ಏಕೆ ಕಳೆಯುವೆ? ಈ ವಯಸ್ಸಿನಲ್ಲಿ ನೀನು ಪುಣ್ಯಕರ್ಮವನ್ನು ಏಕೆ ಆಚರಿಸಿರುವುದಿಲ್ಲ? ಈ ಕಾಲದಲ್ಲಿ, ನಿನ್ನಲ್ಲಿ ಯಾವ ಪೂಜ್ಯತೆಯೂ ತೋರುವುದಿಲ್ಲ. ಹೀಗಿರುವಲ್ಲಿ ಏಕೆ ವೃಥಾ ನಿರರ್ಥಕವಾದ ಮಾತುಗಳನ್ನಾಡುವೆ? ನಿಸ್ಸಾರವಾದ ಈ ಮಾತುಗಳನ್ನು ಸಾಕುಮಾಡು. ಇನ್ನಾದರೂ ಶಿವಸ್ಮರಣೆಯಲ್ಲಿ ಆಸಕ್ತನಾಗು. ॥೪೭॥

ನ ವಾಣೀವಾಣೀನಾಂ ಸ್ಮರಣಮುಚಿತಂ ತೇ ಶ್ರವಣವು
ಪ್ಯತಸ್ತಾವಪ್ಗಾರೀರಮಣಚರಣಾಂಭೋಜಭಜನಂ ।
ಧನಂ ಯಾವಜ್ಜೀವಂ ಶಿವ ಶಿವ ಮಹೇಶೇತಿ ವಿಲಪನ್
ವರೇ ರೇವಾತೀರೇ ಚರ ಚರ ವಿಚಾರ್ಯೈರಲಮಲಂ ॥೪೮॥

ಅಕಸ್ಮಾದೇತಸ್ಮಿನ್ ಪತತಿ ಚ ಶರೀರೇ ಪುನರಿದಂ
ಕ್ವ ವಾ ರೇವಾಲಿಂಗಂ ಭಸಿತಮಪಿ ಬಿಲ್ವೀದಳಮಪಿ ।
ಕ್ವ ವಾಯಂ ವ್ಯಾಹಾರೋ ಹರ ಹರ ಮಹೇಶೇತ್ಯಪಿ ವೃಥಾ
ತತೋಽಮುಂ ವ್ಯಾಹಾರಂ ಪರಿಹರ ಹರಾರಾಧಕ, ವಿಧೇ ॥೪೯॥

ವಿಧೇರಪಿ ವಿಧಿಂ ವಿನಾ ವಿವಿಧಶಂಕರಾರಾಧನಂ
ಪ್ರಸಾಧನಸಮಾಧಯಃ ಪ್ರಭವಿತುಂ ಸಮರ್ಥಾ ಅಪಿ ।

ಎಲೈ ವಿಧಿಯೇ! ಸಂಸಾರಿಯಾಗಿ ನಿನ್ನ ಪ್ರೇಯಸಿಯಾದ ಸರಸ್ವತಿಯ ಸರಸಸಲ್ಲಾಪಗಳನ್ನು ಲಾಲಿಸುತ್ತಾ ಕಾಲವನ್ನು ಕಳೆಯುವುದು ನಿನಗೆ ಉಚಿತವಾಗಿರುವುದಿಲ್ಲ. ಪ್ರಿಯತಮೆಯ ಸರಸಸಲ್ಲಾಪಗಳ ಸ್ಮರಣೆಯೂ ಸಹ ಮಹಾ ಪಾಪಕ್ಕೆ ಕಾರಣವಾಗಿರುವುದು. ಆದುದರಿಂದ ಉಮಾರಮಣನಾದ ಶಿವನ ಅಡಿದಾವರೆಗಳ ಸೇವೆಯೇ ನಿನ್ನ ಧನವಾಗಿರುವುದು. ಇನ್ನಾದರೂ ಶಿವಶಿವ ಎಂದು ಶಿವನಾಮ ಸ್ಮರಣೆಯನ್ನು ಮಾಡುತ್ತಾ ಈ ರೇವಾನದಿಯ ದಡದಲ್ಲಿ ವಾಸವಾಗಿರು. ವಿಷಯ ಸುಖಾಲೋಚನೆಯನ್ನು ಸಾಕುಮಾಡು. ॥೪೮॥

ನಶ್ವರವಾದ ಈ ದೇಹವು ಒಂದಾನೊಂದು ಕಾಲದಲ್ಲಿ ಪತಿತವಾದರೆ ಆಗ ಭಸ್ಮೀಭೂತವಾದ ಈ ಶಿವಲಿಂಗದ ದರ್ಶನವೆಲ್ಲಿಂದ ಬಂತು? ಅಥವಾ ಶಿವಲಿಂಗ ಪೂಜೆಗೆ ಸಾಧನವಾದ ಬಿಲ್ವಪತ್ರೆಯ ದಳಗಳು ತಾನೇ ಎಲ್ಲಿಂದ ಲಭಿಸುವುವು? ಈ ದೇಹವು ನಶಿಸಿ ಹೋಗಲು ಹರ, ಹರ, ಮಹೇಶ ಎಂಬ ಈ ಶಿವನಾಮಗಳನ್ನು ಉಚ್ಚರಿಸುವ ಸುಯೋಗವು ತಾನೇ ಹೇಗೆ ಸಂಭವಿಸುವುದು? ಎಲೈ ವಿಧಿಯೇ, ಆದುದರಿಂದ ವ್ಯರ್ಥವಾದ ಈ ಸಂಭಾಷಣೆಗಳನ್ನು ಬಿಟ್ಟು, ಶಿವಧ್ಯಾನದಲ್ಲಿ ತತ್ಪರನಾಗು. ॥೪೯॥

ನಾನಾವಿಧದಿಂದ ಶಂಕರನನ್ನು ಆರಾಧಿಸುವುದು, ತೃಪ್ತಿಗೊಳಿಸುವುದು, ಮತ್ತು ಅವನಲ್ಲಿ ಚಿತ್ತೈಕಾಗ್ರ್ಯವನ್ನಿಡುವುದು, ಇವೆಲ್ಲವೂ ಸೃಷ್ಟಿಕರ್ತನಾದ

ಅಹೋ ಕಿಮಿದಮಂಬಿಕಾರಮಣಚೇಷ್ಟಿತೈರ್ವೇಷ್ಟಿತಂ
ಮನಃ ಶರಣಮಂಬಿಕಾರಮಣಪಾದಪದ್ಮಂ ಮಮ ॥೫೦॥

ವನೇ ವನಹುತಾಶನಪ್ರಭವಭೂತಿಭೂಷಾಶ್ರಿಯಾ
ವಿರಾಜಿತತನುಃ ಶನೈರನಶನೈರಹಂ ಶರ್ವರೀಂ ।
ನಯಾಮಿ ಶಿವಪೂಜಯಾ ಶಮನದೂತಭೀತೋ ಮುಹುಃ
ಮುಹುರ್ಮುಹುರನುಕ್ಷಣಂ ಭವತಿ ತೇನ ನಾಯುಃ ಕ್ಷಯಃ ॥೫೧॥

ಕ್ಷಣಾರ್ಧಮಪಿ ಶರ್ವರೀರಮಣಖಂಡಚೂಡಾಮಣಿಂ
ನಿಧಾಯ ಹೃದಯಾಂಬುಜೇ ಭಜ ಭಜಾದ್ಯ ಮೃತ್ಯುಂಜಯಂ ।
ಹರ ಸ್ಮರಹರಾಮರಪ್ರವರಶಂಕರೇತಿ ಸ್ಮರನ್
ಜಪನ್ನಪಿ ಮುಹುರ್ಮುಹುಃ ಕಲಯ ಕಾಲಕಾಲಂ ವಿಧೇ ॥೫೨॥

ಬ್ರಹ್ಮನಿಗೂ ಸಹ ಲಲಾಟದಲ್ಲಿ ಭಾಗ್ಯರೇಖೆಯೊಂದಿಲ್ಲದಿದ್ದರೆ ಎಂದಿಗೂ ಸಂಭವಿಸಲಾರದು. ಅಯ್ಯೋ, ಇದೇನಾಶ್ಚರ್ಯ! ನನ್ನ ಈ ಚಿತ್ತವು ಉಮಾಕಾಂತನಾದ ಈಶ್ವರನ ಧ್ಯಾನದಲ್ಲಿಯೇ ತಲ್ಲೀನವಾಗಿ, ಅವನ ಅಡಿದಾವರೆಯನ್ನೇ ಆಶ್ರಯಿಸುತ್ತಿರುವುದಲ್ಲ! ॥೫೦॥

ಏಕಾಂತವಾದ ಈ ವನದಲ್ಲಿ ನಿರಾಹಾರನಾಗಿ ಕಾಲವನ್ನು ಕಳೆಯುತ್ತಿದ್ದರೂ ಸಹ ಕಾಡುಕಿಚ್ಚಿನಿಂದುಂಟಾದ ಭಸ್ಮದಿಂದ ಭೂಷಿತವಾದ ಈ ನನ್ನ ಶರೀರವು ಕಾಂತಿಯಿಂದ ಥಳಥಳಿಸುತ್ತಿರುವುದಲ್ಲ. ಇದೇನು ಆಶ್ಚರ್ಯ! ಯಮದೂತರಿಗೆ ಹೆದರಿ ಎಡಬಿಡದೆ ಶಿವಪೂಜೆಯಲ್ಲಿಯೇ ರಾತ್ರಿಗಳನ್ನು ಕಳೆಯುವೆನು. ಇದರಿಂದ ನನ್ನ ಆಯುಷ್ಯವು ಕ್ಷಯಿಸಿದಂತಾಗುವುದಿಲ್ಲ. ॥೫೧॥

ಎಲೈ ಸೃಷ್ಟಿಕರ್ತನೇ! ಚಂದ್ರಶೇಖರನೂ ಮೃತ್ಯುಂಜಯನೂ ಆದ ಆ ಶಿವನನ್ನು ಕ್ಷಣಕಾಲವಾದರೂ ನಿನ್ನ ಹೃದಯಕಮಲದಲ್ಲಿರಿಸಿ ಭಜಿಸುವವನಾಗು! ಹರ, ಸ್ಮರಹರ, ಅಮರಪ್ರವರ, ಶಂಕರ ಎಂಬ ಈ ಪವಿತ್ರವಾದ ನಾಮಧೇಯಗಳನ್ನು ಸ್ಮರಿಸುತ್ತಾ ಮೃತ್ಯುಂಜಯನಾದ ಶಿವನನ್ನು ಜಪಿಸುವವನಾಗು ॥೫೨॥

ಕಲ್ಯಾಣಾರ್ಣವ ಏವ ಶಂಕರ ಇತಿ ಜ್ಞೇಯಃ ಸ ಕಲ್ಯಾಣದಃ
ಕಲ್ಯಾಣೀರಮಣೋಽಪಿ ಪುಣ್ಯಕರುಣಾಕಲ್ಲೋಲಪೂರ್ಣಾರ್ಣವಃ
ತಸ್ಮಿಂಶ್ಚೇತಸಿ ಸಂಸ್ಥಿತೇ ಸ್ಮರಹರೇ ನ ಸ್ಮಾರವಾರ್ತಾದರಃ
ದಾರಾಣಾಂ ತು ಕಥಾ ತು ದೂರತ ಇತಿ ಜ್ಞಾತ್ವಾ ತಮಾರಾಧಯ ॥೫೩॥

ನೇಯಂ ದಾರಕಥಾ ಮಹೇಶ್ವರಕಥಾ ಯದ್ವಾ ಶಿವಾರಾಧನಂ
ಯದ್ವಾ ಪನ್ನಗಭೂಷಣಸ್ಮರಣಮಪ್ಯರ್ಧೇಂದುಚೂಡಾರ್ಚನಂ ।
ಯದ್ವಾ ಶಂಕರಪತ್ತನಸ್ಥಿತಿರತಸ್ತ್ಯಾಜ್ಯಾ ವೃಥಾ ಸಾ ಕಥಾ
ನಿರ್ವೈರಂ ಭಜ ಶಂಕರಂ ಕರುಣಯಾ ದೇವಾಧಿದೇವಂ ಪರಂ ॥೫೪॥

ಹಾ ಹಾ ಜನ್ಮ ವೃಥಾ ಗತಃ ಬಹುವಿಧೈಃ ಫುಲ್ಲೈಃ ಪ್ರಸೂನೈರ್ನವೈಃ
ಬಿಲ್ವೀಕೋಮಲಪಲ್ಲವೈರಪಿ ಶಿವೋ ನಾರಾಧಿತೋ ನ ಸ್ಮೃತಃ

ಶಂಕರನು ಕಲ್ಯಾಣಗಳಿಗೆ ನಿಧಿಯಂತಿರುವನೆಂದು ಭಾವಿಸಬೇಕು. ಅವನೇ ಭಕ್ತರಿಗೆ ಸಿಖಿಲಕಲ್ಯಾಣಗಳನ್ನೂ ಉಂಟುಮಾಡುವವನಾಗಿರುವನು. ಸರ್ವಮಂಗಳೆಯಾದ ಗಿರಿಜೆಯ ಒಡೆಯನಾದ ಅವನು ಕರುಣಾಸಾಗರನೆನಿಸಿರುವನು. ಮನ್ಮಥಶತ್ರುವಾದ ಅವನನ್ನು ಧ್ಯಾನಿಸಲು, ಕಾಮವಿಕಾರದ ಲೇಶವೂ ಸಂಭವಿಸಲಾರದು. ಹೀಗಿರುವಲ್ಲಿ ಸ್ತ್ರೀವಿಷಯಕವಾದ ಅನುರಾಗವಾದರೋ ಹೇಗೆ ತಾನೇ ಸಂಭವಿಸುವುದು? ಹೀಗೆಂದು ತಿಳಿದು ಶಿವನನ್ನು ಆರಾಧಿಸು. ॥೫೩॥

ಸ್ತ್ರೀ ವಿಷಯಕವಾದ ವಚನಗಳನ್ನೇ ಉಚ್ಚರಿಸುವುದು ಉಚಿತವಾಗಿರದೆ ಮಹಾ ಪಾಪಕರವಾಗಿರುವುದು. ನಿರಂತರವೂ ಶಿವಕಥಾಮೃತವನ್ನು ಲಾಲಿಸಬೇಕು. ಅಥವಾ ಅವನನ್ನು ಭಜಿಸಬೇಕು. ಅದಿಲ್ಲದಿದ್ದರೆ, ಚಂದ್ರಶೇಖರನಾದ ಅವನನ್ನು ಪತ್ರ ಪುಷ್ಪಾದಿಗಳಿಂದ ಪೂಜಿಸಬೇಕು. ಅದೂ ಸಾಧ್ಯವಿಲ್ಲದಿದ್ದರೆ, ಸದಾ ಶಿವನನ್ನು ಸ್ಮರಿಸುತ್ತಿರಬೇಕು. ಸ್ಮರಣೆಯೂ ಅಶಕ್ಯವಾದರೆ ಶಿವನು ನೆಲಸಿರುವ ಪ್ರದೇಶದಲ್ಲಾದರೂ ವಾಸಮಾಡಬೇಕು. ಅಂತೂ ಸ್ತ್ರೀಕಥೆಯನ್ನು ತ್ಯಜಿಸಲೇ ಬೇಕು. ಅದು ನಿರರ್ಥಕವಾದುದಾಗಿರುತ್ತದೆ. ಆದುದರಿಂದ ರಾಗದ್ವೇಷಾದಿಗಳನ್ನು ಬದಿಗೊತ್ತಿ ಭಕ್ತಿ ಶ್ರದ್ಧೆಗಳಿಂದ ಶಂಕರನನ್ನು ಆರಾಧಿಸುವವನಾಗು. ॥೫೪॥

ಅಯ್ಯೋ, ಈ ಜನ್ಮವು ವ್ಯರ್ಥವಾಗಿ ಗತಿಸುವುದಲ್ಲ! ವಿವಿಧವಾದ ಹೂವುಗಳಿಂದಲೂ ಮತ್ತು ಮೃದುವಾದ ಬಿಲ್ವಪತ್ರೆಗಳಿಂದಲೂ ಶಿವನನ್ನು ಪೂಜಿಸಲಿಲ್ಲ,

ರೇವಾತೀರವನೇ ವನ್ಯೈಃ ಸಪವನ್ಯೈಃ ಯಾತ್ಯಾಯುರಾಯಾತಿ ಕಿಂ ।
ದುಷ್ಟಂ ಫಾಲವಿಲೇಖನಂ ಭವಹರೋ ಭಾವ್ಯೋಽಪಿ ನಾಲೋಕಿತಃ ॥೫೫॥

ದುರಾಲಾಪಃ ಪ್ರಾಯಃ ಪ್ರಚುರತರದಾರಾದಿವಿಷಯಃ
ವಿಷಪ್ರಾಯಃ ಪ್ರಾಯಃ ಕಥಮಪಿ ನ ಚಿತ್ತಂ ವ್ಯಥಯತಿ ।
ಕಥಂ ಮೋಹೋ ವೃತ್ತೋ ಮಯಿ ನಿರಪರಾಧೇ ಸತಿ ಮುದಾ
ವೃಥಾರೋಪಂ ಕರ್ತುಂ ಕಥಮಿಹ ಸಮಭ್ಯಾಗತ ಇತಿ ॥೫೬॥

ಅತಃ ಪರಂ ಕಿಂ ನ ಭವಂ ಭಜಾಮಃ
ನಿಶಾವಸಾನೇ ಸ್ಮರಶಾಸನಾಯ ।
ಪೂಜಾ ವಿಧೇಯಾ ವಿವಿಧೋಪಚಾರೈಃ
ಬಿಲ್ವೀದಲೈರ್ವಾ ವಿಮಲೈರ್ಜಲೈರ್ವಾ ॥೫೭॥

ಸ್ಮರಿಸಲೂ ಇಲ್ಲ. ರೇವಾನದಿಯ ತೀರದಲ್ಲಿರುವ ಈ ಅರಣ್ಯದಲ್ಲಿ ವಾಸವಾಗಿದ್ದು, ನದಿಯ ಜಲವನ್ನು ಮತ್ತು ಶೀತಲವಾದ ವಾಯುವನ್ನೂ ಸೇವಿಸುವುದರಿಂದ ಈ ಜೀವನವು ಅತಿಕ್ರಮಿಸುತ್ತಿರುವುದು. ಆದರೂ ಇದುವರೆಗೂ ಶಿವನ ನಿಜಸ್ವರೂಪವನ್ನು ಒಂದು ಬಾರಿಯೂ ನೋಡಿರುವುದಿಲ್ಲ. ವಿಧಿನಿರ್ಮಿತವಾದ ಆ ಹಣೆಯ ಬರಹವನ್ನು ಮೀರಲು ಸಾಧ್ಯವೇ ! ॥೫೫॥

ನಿರಂತರವೂ, ಸ್ತ್ರೀಯರ ವಿಷಯವನ್ನಧಿಕರಿಸಿ ಮಾತನಾಡುವುದು ಅತಿನಿಂದ್ಯವಾಗಿರುತ್ತದೆ. ಸ್ತ್ರೀ ಕಥೆಯು ವಿಷದಂತೆ ಅತಿಕಠೋರವಾದುದಾಗಿರುವುದು. ನಿರಪರಾಧಿಯಾದ ನನ್ನನ್ನು ಮೋಹವು ಹೇಗೆ ಆವರಿಸಿತು ? ನೀನೇಕೆ ನಿರಪರಾಧಿಯಾದ ನನ್ನನ್ನು ವ್ಯರ್ಥವಾಗಿ ಲಲನೆಯರ ಪಾಶದಲ್ಲಿ ಸಿಲುಕುವಂತೆ ಮಾಡಲು ಇಲ್ಲಿಗೆ ಬಂದಿರುವೆ ? ॥೫೬॥

ಇನ್ನು ಮುಂದೆ ಎಂದಿಗೂ ಸಂಸಾರಿಯಾಗಲಾರೆನು. ಬೆಳಗಾಗಲು ಮನ್ಮಥಾರಿಯಾದ ಈಶ್ವರನನ್ನು ಉದಕಗಳಿಂದಲೂ, ಬಿಲ್ವಪತ್ರೆಗಳಿಂದಲೂ ಇನ್ನಿತರ ವಿವಿಧವಾದ ಉಪಚಾರಗಳಿಂದಲೂ ಪೂಜಿಸಬೇಕಾಗಿದೆ. ॥೫೭॥

ಗತಾ ರಾತ್ರಿರ್ವ್ಯರ್ಥಾ ವ್ಯಥಯತಿ ಮನೋ ಮೇ ಪೃಥಗಯಂ
ವಿಧಿರ್ಲಗ್ನೋ ಭೂಯೋ ವಿಧಿರಪಿ ವಿಧಿಜ್ಞೋ ವ್ಯಥಯತಿ ।
ಕಥಂ ವಾ ದೌರ್ಭಾಗ್ಯಂ ಭವತಿ ಪುರುಷಾಯುಃ ಕ್ಷಣಮಪಿ
ಪ್ರಯಾತ್ಯೇತತ್ತಾವದ್ಗಿರಿಶಭಜನೇನಾಭವದಹೋ ॥೫೮॥

ಅಹಂಕಾರಃ ಕೋ ವಾ ಗಿರಿಶಭಜನಧ್ಯಾನವಿಧಿಭಿಃ
ಪ್ರವೃತ್ತಸ್ಯಾಸ್ಯಾಪಿ ಕ್ಷಣಮಪಿ ನ ಭಾಲೇಕ್ಷಣಕಥಾ ।
ನ ವಾ ತುಂಗೇ ಲಿಂಗೇ ನವಕಮಲಬಿಲ್ವೀನವದಳೈ
ರಖಂಡೈರಭ್ಯರ್ಚಾ ಬತ ಬತ ವಯಃ ಕ್ಷೀಣಮಧುನಾ ॥೫೯॥

ಮಹಾಮೃತ್ಯುಃ ಪಶ್ಯತ್ಯಯಮನಿಶಮಿಶಾರ್ಚನರತಃ
ನ ಜಾತೋ ನ ಧ್ಯಾತಂ ಶಿವಚರಣಪಂಕೇರುಹರಜಃ ।
ಅನೇನೇತಿ ಪ್ರಾಯಃ ಕ್ವ ಗತಿರಹಹಾಹಾ ಹತ ಇತಿ
ವ್ಯಥಾ ಚಿತ್ತಾರೂಢಾ ಕಥಮಪಿ ನಮೋಢಾಮವಸಿ ಮೇ ॥೬೦॥

ರಾತ್ರಿಯು ವ್ಯರ್ಥವಾಗಿ ಅತಿಕ್ರಮಿಸಿತು. ಇತ್ತ ವಿಧಿಯು ನನ್ನ ಭವಿತವ್ಯವನ್ನು ತಿಳಿದವನಾದರೂ ಸಹ ವೃಥಾ ನನ್ನನ್ನು ಪೀಡಿಸುತ್ತಿರುವನು. ಅಯ್ಯೋ, ಪುರುಷನ ಪವಿತ್ರವಾದ ಈ ಜೀವಿತವು ವೃಥಾ ದುರ್ದೆಶೆಯನ್ನು ಹೊಂದಿ ಅಂತ್ಯದಲ್ಲಿ ಕ್ಷಯಿಸುವುದಲ್ಲ! ಆದರೂ ಅದು ಪಶುಪತಿಯಾದ ಶಿವನನ್ನು ಭಜಿಸಲಿಲ್ಲ. ॥೫೮॥

ಶಿವನ ಧ್ಯಾನಾರಾಧನೆಗಳಲ್ಲಿ ಪ್ರವೃತ್ತನಾದ ಈ ನನಗೆ " ನಾನು, ನನ್ನದು " ಎಂಬ ಮಮತೆ ಇನ್ನೂ ಇರುವುದಿಲ್ಲ. ಕ್ಷಣಕಾಲವಾದರೂ ನಿರಹಂಕಾರಬುದ್ಧಿಯಿಂದ ಶಿವಕಥಾಮೃತವನ್ನು ಲಾಲಿಸುವ ಸುಯೋಗವು ಲಭಿಸಬಾರದೇ? ಅಯ್ಯೋ, ಇದುವರೆಗೆ ಕ್ಷಣಕಾಲವಾದರೂ ಕಮಲಪುಷ್ಪಗಳಿಂದಾಗಲಿ ಅಥವಾ ಬಿಲ್ವದಳಗಳಿಂದಲಾಗಲಿ, ಶಿವನನ್ನು ಪೂಜಿಸದೇ ಜೀವಿತವು ವೃಥಾ ಕ್ಷಯಿಸುತ್ತಿರುವುದಲ್ಲ! ॥೫೯॥

' ಈ ಮನುಜನು ಶಿವಪೂಜೆಯನ್ನು ಕೈಗೊಳ್ಳಲಿಲ್ಲ. ಅಥವಾ ಶಿವನ ಅಡಿದಾವರೆಗಳ ಧೂಳನ್ನಾದರೂ ಧ್ಯಾನಿಸಲಿಲ್ಲ,' ಎಂದು ಮೃತ್ಯುವು ನೋಡುವನು. ಮುಂದೆ ಇನ್ನೇನು ಗತಿ. ಅಯ್ಯೋ! ವ್ಯರ್ಥವಾಗಿ ಪಾಪಕರ್ಮಗಳಿಂದ ಹತನಾಗಿರುವೆನು. ಎಂಬ ಈ ವ್ಯಥೆಯು ನನ್ನ ಮನಸ್ಸಿನಲ್ಲಿ ಬೇರೂರಿರುವುದು. ಇದನ್ನು ಹೋಗಲಾಡಿಸಿ ನಮ್ಮನ್ನು ಕಾಪಾಡುವವನಾರು? ॥೬೦॥

ಮಹಾಮೋಹಸ್ಯಾಯಂ ಕಥಮಪಿ ನ ಕಾಲಸ್ಮರಹರೋ
ಹರಃ ಸ್ಮರ್ತವ್ಯೋ ಮೇ ಯಮಭಟವಿಭೀತಸ್ಯ ನ ನಿಶಾ ।
ಪ್ರಗೇ ತುಂಗಂ ಲಿಂಗಂ ಸ್ಮೃತಮಪಿ ಮಹಾಪಾತಕಹರಂ
ಸಹಾರಂ ದೃಷ್ಟಂ ಚೇತ್ಸಕಲದುರದೃಷ್ಟಕ್ಷಯಕರಂ ॥೬೧॥

ಕರೋಮಿ ಕರವೀರಜಪ್ರಸವಮಲ್ಲಿಕಾಮಾಲಯಾ
ನ ಲಿಂಗಪರಿವೇಷ್ಟನಂ ಕಮಲಕುಂದಮಂದಾರಜೈಃ ।
ಅಮಂದಜಲಧಾರಯಾಪ್ಯನುಲವಂ ಕಿಮಾಶಾಪಟಿಃ
ಪಟುರ್ಭಸಿತಭೂಷಿತೋ ವಿಗತಪಾಪತಾಪೋಽಧುನಾ ॥೬೨॥

ಗಂತವ್ಯಂ ವಿಪಿನೇ ನವಾಂಬುಜದಲಾನ್ಯಾನೀಯ ಲಿಂಗಂ ಮುದಾ
ತೈರಾಪೂರ್ಯ ಪುನಃ ಪುನಶ್ಚ ಭಸಿತೈರ್ಭಾಲಂ ವಿಲಸ್ಯಾಮಲಂ ।

ಅಜ್ಞಾನಿಗಳನ್ನು ಆವರಿಸಿರುವ ಘೋರವಾದ ಮಾಯೆಯನ್ನು ನಾಶಮಾಡುವ ಮೃತ್ಯುಂಜಯನನ್ನು ಯಾವ ವಿಧದಿಂದಲೂ ಸ್ಮರಿಸಿರುವುದಿಲ್ಲ. ಹೀಗಿರುವಲ್ಲಿ ಯಮದೂತರಿಂದ ಭೀತನಾದ ನನಗೆ ರಾತ್ರಿಯನ್ನು ನಿರಾಲೋಚನೆಯಿಂದ ಕಳೆಯು ವುದೇ ಅಶಕ್ಯವಾಗಿರುವುದು. ಪ್ರಾತಃಕಾಲದಲ್ಲಿ ಪವಿತ್ರವಾದ ಶಿವಲಿಂಗವನ್ನು ಸ್ಮರಿಸುವ ಮಾತ್ರದಿಂದಲೇ ಸಕಲ ಪಾಪಗಳು ಕ್ಷಯಿಸುವುವು. ಭಕ್ತರಿಂದ ಸುತ್ತು ವರಿಯಲ್ಪಟ್ಟ ಶಿವಲಿಂಗವನ್ನು ಸಂದರ್ಶಿಸಿದ ಮಾತ್ರದಿಂದಲೇ ಸಕಲ ದುರ್ಭಾಗ್ಯ ಗಳೂ ನಶಿಸುವುವು. ॥೬೧॥

ಕರವೀರ (ಕಣಿಗಲು) ಪುಷ್ಪಗಳ ಮತ್ತು ಮಲ್ಲಿಗೆಯ ಹೂವುಗಳ ಮಾಲಿಕೆ ಯಿಂದ ಶಿವಲಿಂಗವನ್ನು ಎಂದೂ ಅಲಂಕರಿಸಲಿಲ್ಲ. ಕಮಲಪುಷ್ಪಗಳಿಂದಲೂ ಮಾಗಿಯಮಲ್ಲಿಗೆಹೂಗಳಿಂದಲೂ ಮತ್ತು ಮಂದಾರ ಕುಸುಮಗಳಿಂದಲೂ ಶಿವಲಿಂಗ ವನ್ನು ಅರ್ಚಿಸಲಿಲ್ಲ. ದಿಗಂಬರನೆನಿಸಿದ, ಭಸ್ಮಭೂಷಿತನಾದ ಶಂಕರನು ಅವಿಚ್ಛಿನ್ನ ವಾದ ಜಲಧಾರೆಯಿಂದ ನಮ್ಮ ಪಾಪಗಳನ್ನೆಲ್ಲಾ ನಿವಾರಿಸುವನು. ನಾನು ಅದನ್ನೂ ಮಾಡಲಿಲ್ಲ. ॥೬೨॥

ಇನ್ನು ಮುಂದೆ ಅರಣ್ಯಕ್ಕೆ ಹೋಗಿ ಆಗತಾನೆ ಅರಳಿರುವ ಕಮಲಪುಷ್ಪಗಳ ದಳಗಳನ್ನು ತಂದು, ಅವುಗಳಿಂದ ಶಿವಲಿಂಗವನ್ನು ಅಲಂಕರಿಸಿ, ಲಿಂಗದ ಪವಿತ್ರ

ಕೃತ್ವಾ ನಾಟ್ಯಮಹೋತ್ಸವಂ ಚ ಗಿರಿಶಂ ನತ್ವಾತಿಭಕ್ತ್ಯಾ ಮುಹುಃ
ಭೋ ಶಂಭೋ ಭಗವನ್ ಭವೇತಿ ಬಹುಧಾ ಕಾಲಂ ನಯಾಮ್ಯಾದರಾತ್
॥೬೩॥

ಕಂದರ್ಪಾದ್ಭುತಸರ್ಪದರ್ಪದಳನೋಪಾಯೋ ಮಯಾಲಂಕೃತಃ
ಯೋಽಯಂ ಚೇತಸಿ ಶಂಕರಃ ಸ್ಮರರಿಪುಃ ಪಾಪಾಪಹಾರಃ ಸ್ಮೃತಃ ।
ತಸ್ಮಿಂಶ್ಚೇತಸಿ ತಿಷ್ಠತಿ ಸ್ಮರಕಥಾ ಕಾ ಕಾ ಕಥಾ ವಾ ವಧೂ
ಪೀನೋತ್ತುಂಗಕುಚಾಂತರಾಳಸುರತಃ ಸ್ವೇದಾಪಹಾರಸ್ಯ ಚ ॥೬೪॥

ನಾರೀಕುಚೋರುಗಿರಿಜೇಶ್ವರಹೀರಹಾರ
ಭಾರಾಪಹಾರಚತುರೋಽಪಿ ಕರೋಮಮಾಭೂತ್ ।
ತೇನಾನುವೇಲಮನಲಾಚಲಕೂಟಪಾತ
ಭೀತೋಽನುಭೂತವಿಷಯೋ ವಿಗತಸ್ಪೃಹೋಽದ್ಯ ॥೬೫॥

---

ವಾದ ಲಲಾಟವನ್ನು ಸುಗಂಧದಿಂದ ಲೇಪಿಸಿ ನಾಟ್ಯವನ್ನು ಅಭಿನಯಿಸಿ, ಭಕ್ತಿಯಿಂದ ಶಿವಲಿಂಗವನ್ನು ನಮಸ್ಕರಿಸಿ, ಬಳಿಕ ಶಿವ ಶಿವ ಎಂದು ಶಿವನಾಮಧೇಯಗಳನ್ನು ಚ್ಚರಿಸುತ್ತಾ ಕಾಲವನ್ನು ಕಳೆಯುವೆನು. ॥೬೩॥

ಮನ್ಮಥನೆಂಬ ದುಷ್ಟಸರ್ಪವನ್ನು ನಿಗ್ರಹಿಸುವುದರಲ್ಲಿ ಸಮರ್ಥನಾದ ಆ ಶಿವನನ್ನು ನಾನು ಅಲಂಕರಿಸುವೆನು. ಯಾವ ಶಂಕರನು ಸ್ಮರರಿಪುವೆಂಬ ಅನ್ವರ್ಥ ಸಂಜ್ಞೆಯನ್ನು ಹೊಂದಿರುವನೋ ಆ ಪಾಪನಾಶಕನಾದ ಶಿವನನ್ನೇ ನಾನು ಚಿತ್ತದಲ್ಲಿ ನಿಲ್ಲಿಸಿಕೊಳ್ಳುವೆನು. ಮನ್ಮಥಶತ್ರುವಾದ ಶಿವನು ನನ್ನ ಹೃದಯದಲ್ಲಿ ನೆಲಸಿರಲು, ಕಾಮವಿಕಾರವು ಹೇಗೆತಾನೇ ಸಂಭವಿಸುವುದು! ಅಥವಾ ಸ್ತ್ರೀಯ ವಿಶಾಲವಾದ ವಕ್ಷಸ್ಥಳವನ್ನು ಆಲಿಂಗಿಸುವ ವಾರ್ತೆಯಾದರೂ ಮತ್ತೆ ಇರುವುದೇ? ಸುರತಾಯಾಸವಾದರೂ ತೋರಿಬಂದೀತೆ? ॥೬೪॥

ಹಿಂದೆ ನನ್ನ ಭಾಗಕ್ಕೆ ಸ್ತ್ರೀಯರ ಗುರುಕುಚಗಳೇ ಶಿವಲಿಂಗಗಳಾಗಿದ್ದುವು. ಅಂತಹ ಸ್ತನಗಳ ಮೇಲಿರುವ ರತ್ನಹಾರಗಳ ಭಾರವನ್ನು ಹೊರುವುದರಲ್ಲಿಯೇ ನನ್ನ ಕೈಗಳು ಆಯಾಸಪಟ್ಟವು. ಅದರ ಪರಿಣಾಮವಾಗಿ ನಾನು ಅಗ್ನಿಪರ್ವತದ ತುದಿಯಿಂದ ಬಿದ್ದು, ಆ ಸಂಬಂಧವಾದ ದುಃಖಗಳನ್ನೆಲ್ಲಾ ಅನುಭವಿಸಿದೆನು. ಅದರಿಂದಲೇ ನಾನೀಗ ಆ ಆಸೆಯನ್ನೆಲ್ಲಾ ತೊರೆದು ವೈರಾಗ್ಯಶಾಲಿಯಾಗಿರುವೆನು. ॥೬೫॥

ಮುಗ್ಧಾಧರಾಮೃತರಸಪ್ರತಿಲೋಭಮೂಢಃ
ಗಾಢಾಂಧಕಾರಕುಹರಾನಲಜ್ವಾಲಯಾಽಹಂ ।
ತಪ್ತಃ ಪುನಃ ಪುನರತೋಽಸ್ಯ ನ ತತ್ರ ವಾಂಛಾ
ಕಿಂ ತ್ವೀಶಪಾದಕಮಲಸ್ಮರಣೇಽಸ್ತಿ ವಾಂಛಾ ॥೬೬॥

ನಾರೀಘನಸ್ತನನಿಪೀಡನತಾಡನಾದ್ಯೈಃ
ಸಾಂಗಾರಲೋಹರಮಣೀಸ್ತನಪೀಡನಾಯ ।
ಸಂತಾಡಿತೋಽಹಮಸಕೃದ್ಯಮದಂಡಚಂಡಾ
ಜ್ವಾಲಾಕುಲೈರಿತಿ ನ ತತ್ರ ಮಮಾಸ್ತಿ ವಾಂಛಾ ॥೬೭॥

ರಂಭಾಸ್ತಂಭಲಗದ್ದಮುಂಡಸನಮುಖಿಚ್ಛಾಯಾಚ್ಛವೀ ಲೋಚನೇ
ನೇಚ್ಛಾ ಕಸ್ಯ ಕಥಾಪಿ ಸಾ ಯಮಭಟೀಬೋಧಾಟನೈಸ್ತ್ಯಜ್ಯತೇ ।
ಆಕಲ್ಪಂ ಖಲು ಯಾತನಾ ಖಲಜನಸ್ಯಾತಃ ಕ್ಷಣಾರ್ಧಂ ಸುಖಂ
ತದ್ದೃಷ್ಟ್ವಾಪಿ ಕಟಾಕ್ಷವಹ್ನಿನಿಕಟೇ ಲೋಕೋಽಟತಿ ವ್ಯಾಕುಲಃ ॥೬೮॥

---

ಮುಗ್ಧೆಯರ, ಅಧರ ರಸವನ್ನು ಪಾನಮಾಡಿದ ನಾನು, ಅಜ್ಞಾನವೆಂಬ ಅಗ್ನಿಯ ಜ್ವಾಲೆಗಳಿಂದ ದಹಿಸಲ್ಪಟ್ಟವನಾಗಿರುವೆನು. ಆದುದರಿಂದಲೇ ಈಗ ನನಗೆ ಅಬಲೆಯರ ಅಧರವನ್ನು ಪಾನಮಾಡುವುದರಲ್ಲಿ ಅಭಿಲಾಷೆಯು ಇರದೇ ಶಿವನ ಅಡಿದಾವರೆಗಳ ಸ್ಮರಣೆಯಲ್ಲಿ ಆಸಕ್ತಿಯುಂಟಾಗಿರುವುದು. ||೬೬||

ಸ್ತ್ರೀಯ ನಿಬಿಡವಾದ ಸ್ತನಗಳನ್ನು ಮರ್ದಿಸಿದುದರಿಂದ, ನನ್ನನ್ನು ಯಮಲೋಕದಲ್ಲಿ ಕಾದು ಕೆಂಪಾಗಿರುವ ಕಬ್ಬಿಣದಿಂದ ನಿರ್ಮಿಸಿದ ಸ್ತ್ರೀವಿಗ್ರಹದ ಸ್ತನಗಳನ್ನು ಮರ್ದಿಸುವುದಕ್ಕೋಸ್ಕರ, ದಾರುಣವಾದ ಹಿಂಸೆಗೆ ಗುರಿಯಾಗಿ ಮಾಡಿದರು. ಅನೇಕ ಬಾರಿ ಕಾಲದಂಡದಿಂದುಂಟಾದ ದಾರುಣವಾದ ಅಗ್ನಿಜ್ವಾಲೆಗಳಿಂದ ಪೀಡಿಸಲ್ಪಟ್ಟಿರುವೆನು. ಆದುದರಿಂದ ಈಗ ನನಗೆ ಸ್ತ್ರೀಸುಖದಲ್ಲಿ ಅಭಿಲಾಷೆಯೇ ಉಂಟಾಗುವುದಿಲ್ಲ. ||೬೭||

ಕಾಮಿನಿಯರ ಮೃದುವಾದ ಕಪೋಲಗಳನ್ನೂ, ಆಹ್ಲಾದಕರವಾದ ಮುಖವನ್ನೂ ಮತ್ತು ಆಕರ್ಷಕವಾದ ಕಣ್ಣುಗಳನ್ನೂ ನೋಡಿ ಅವಳಲ್ಲಿ ಯಾವನು ತಾನೇ ಅನುರಕ್ತನಾಗಲಾರನು ? ಆದರೆ ಅವನು ಯಮದೂತರ ಹಿಂಸೆಯ ಭಯದಿಂದ ಅವಳಲ್ಲಿ ಉಂಟಾಗಿರುವ ಆ ಅನುರಾಗವನ್ನು ಮರೆಯುವನು. ಮತ್ತರಾದ

ಕಾ ಬಾಲಾ ನೀಜಲೀಲಯಾ ನ ಕುರುತೇ ಸ್ವಾಧೀನಮೇನಾಧುನಾ
ಲೋಕೇ ತೇನ ನ ಪಾರವಶ್ಯಮಹಿತಂ ತಾವತ್ಸ್ವತಂತ್ರಸ್ಯ ಕಿಂ ।
ತಸ್ಮಾದ್ದೂರತ ಏವ ತತ್ಪರಿಣಯಾಪೇಕ್ಷಾ ವಿರೂಪಾಕ್ಷ ಮೇ
ರುದ್ರಾಕ್ಷಾಭರಣಸ್ಯ ದಕ್ಷತನಯಾನಾಥಾಂಘ್ರಿಪದ್ಮಸ್ಮೃತೇಃ ॥೬೯॥

ಪಿಕಾಲಾಪಪ್ರಾಯೈಸ್ತರುಣತರುಣೀಗಾನನಿನದೈಃ
ವಯೋ ನೀತಂ ನೀತಂ ಧನಮಪಿ ಧನೇಚ್ಛಾ ಧನಮಪಿ ।
ಮುಹುರ್ಧ್ಯಾತಂ ಧ್ಯಾತಂ ನ ಪದಮಸಕೃಚ್ಛೈಲತನಯಾ
ಪತೇರ್ಭೂತಂ ಭೂತಂ ಪುನರಪಿ ನ ತತ್ರಾಸ್ಯ ತು ಮನಃ ॥೭೦॥

ಆರಕ್ತಾಮಲಬಾಲವಿದ್ರುಮಲತಾಬಾಲಾಧರೇ ನಾದರಃ
ತೇನ ಸ್ಯಾದವಶೋ ವಶೋಽಪ್ಯಯಶಸಾಂ ರಾಶಿರ್ವಶೀ ವಾ ವಶೀ ।

ಯಮದೂತರ ದಾರುಣವಾದ ಹಿಂಸೆಯಿಂದುಟಾದ ವೇದನೆಯು ಕಲ್ಪಾಂತ್ಯದವರೆಗೂ ಸ್ಥಿರವಾಗಿರುವುದು. ಹೀಗಿದ್ದರೂ ಸಹ ಅನೇಕ ಜನರು ಪಾಪಕೃತ್ಯಗಳನ್ನೆಸಗಿ ಕಾದಿರುವ ಕೊಪ್ಪರಿಗೆಯ ಮುಂದೆ ನಿಲ್ಲುವರು. ||೬೮||

ಈ ಲೋಕದಲ್ಲಿ ಯಾವ ತರುಣಿಯು ತಾನೇ ತನ್ನ ಹಾವಭಾಗಳಿಂದ ಪುರುಷನನ್ನು ವಶಪಡಿಸಿಕೊಳ್ಳುವುದಿಲ್ಲ? ಅವಳು ಈ ರೀತಿಯಲ್ಲಿ ಸ್ವತಂತ್ರನಾದ ಪುರುಷನನ್ನು ವಶಪಡಿಸಿಕೊಳ್ಳಲು, ಸ್ವತಂತ್ರನಾಗಿದ್ದ ಅವನಿಗೆ ಪಾರತಂತ್ರ್ಯಕ್ಕಿಂತಲೂ ಅಹಿತವಾದದ್ದು ಮತ್ತೊಂದಿರುವುದೇ? ಆದುದರಿಂದ ಅವಳನ್ನು ವರಿಸುವ ಇಚ್ಛೆಯೇ ಉಂಟಾಗದಿರಲಿ. ಓ ಮುಕ್ಕಣ್ಣನೇ, ರುದ್ರಾಕ್ಷಿಯನ್ನು ಧರಿಸಿ, ಗಿರಿಜಾ ರಮಣನಾದ ನಿನ್ನನ್ನು ಸ್ಮರಿಸುತ್ತಿರುವ ನನಗೆ ಸ್ತ್ರೀವಿಷಯಕವಾದ ಇಚ್ಛೆಯೇ ಉಂಟಾಗದಿರಲಿ. ||೬೯||

ಕೋಗಿಲೆಯ ಧ್ವನಿಯಂತೆ ಮಧುರವಾದ ಧ್ವನಿಯ ತರುಣಿಯರ ಗಾನ ವನ್ನು ಕೇಳುವುದರಿಂದಲೇ ವಯಸ್ಸು ಅತಿಕ್ರಮಿಸಿತು. ಸಂಪಾದಿಸಿದ ಹಣವೆಲ್ಲವೂ ವ್ಯರ್ಥವಾಗಿ ವಿನಿಯೋಗಿಸಲ್ಪಟ್ಟಿತು. ಒಮ್ಮೆಯಾದರೂ ಗಿರಿಜಾರಮಣನಾದ ಶಿವನ ನಾಮವನ್ನು ಉಚ್ಚರಿಸಿ ಅವನನ್ನು ಧ್ಯಾನಿಸಲಿಲ್ಲ. ಆದುದರಿಂದ ಇನ್ನಾದರೂ ನನ್ನ ಮನಸ್ಸು, ಲಲನೆಯರಿದ್ದಲ್ಲಿಗೆ ಹೋಗಲು ಇಚ್ಛಿಸದಿರಲಿ. ||೭೦||

ಎಲೈ ವಿಧಿಯೇ! ಎಳೆಯದಾದ ಹವಳದ ಬಳ್ಳಿಯಂತೆ ಕೋಮಲವಾಗಿರುವ ತರುಣಿಯರ, ಕೆಂಪಾಗಿರುವ ತುಟಿಗಳಲ್ಲಿ, ಈಗ ನನಗೆ ಆದರವಿಲ್ಲ. ಆದರಿಂದ

ತಸ್ಮಾತ್ತತ್ಪರಿಹಾರ ಏವ ವರಮಿತ್ಯಸ್ಮಾ ತು ಮೇ ಧೀರ್ವಿಧೇ
ಸಾ ಧೀಸ್ತಾವದಿಹಾಧುನಾ ವಿಧಿವಶಾಜ್ಜ್ಞಾತಾತು ಜಾತಾ ತು ನ ॥೭೦॥

ಕಾಂಚೀ ಕಾಂತಿವಿಜೃಂಭಿತತ್ರಿವಳಿಕಾ ಸಂಖ್ಯಾಪನ್ನೈರ್ಜೀವನಂ
ನೀತಂ ತೇನ ತು ಯಾತನಾ ತನುರಭೂತ್ ತಾವತ್ತನುಸ್ತಾಪತಃ ।
ತತ್ಪಾಪೋಪಶಮಾಯ ಕಾಯಮುಸಕೃತ್ಸಾಪಾಯಮೇವಾಮುಯೈಃ
ಮುಕ್ತ್ವಾ ಶಂಕರಪೂಜನೋತ್ತರಮುಹಂ ತ್ಯಕ್ಷ್ಯೇ ಶಿವೇತ್ಯುಚ್ಚರನ್ ॥೭೨॥

ಯಾ ಯಾ ಪೂರ್ವಭವೇಷು ದೋಷವಿಷಯೈರೇಣೀದೃಶಾ ದುರ್ದಶಾ
ಭುಕ್ತ್ವಾ ಸಾ ತು ನ ಗೋಚರಾಪಿ ವಚಸಾ ಲಜ್ಜಾನುವಾದೇನ ಮೇ ।
ತದ್ವೇಣೀಫಣಿಬಂಧನೇನ ಬಹುಧಾ ನಿರ್ಬಂಧ ಏವಾಭವತ್
ತತ್ಕಾಲೇ ಖಲು ಕಾಲಕಾಲಕಲನಾ ನಾಸೀನ್ಮನಾಙ್ಮಾನಸಂ ॥೭೩॥

ಇವನು ಪರತಂತ್ರನಾಗುವನಲ್ಲದೇ, ಮಹತ್ತರವಾದ ಅಪಕೀರ್ತಿಯೂ ಸಂಭವಿಸುವುದು. ಆದುದರಿಂದ ಅದನ್ನು ತಿರಸ್ಕರಿಸುವುದೇ ಶ್ರೇಯಸ್ಕರವೆಂದು ನನಗೆ ತೋರುವುದು. ಈಗ ನನಗೆ ನನ್ನ ಭಾಗ್ಯವಿಶೇಷದಿಂದ ಅಂತಹ ಸದ್ಬುದ್ಧಿಯು ಉಂಟಾಗಿರುವುದು. ॥೭೧॥

ಕಾಂಚಿಯ (ಕಾಂಚಿ-ಪಟ್ಟಿ-ಉಡ್ಯಾಣ) ಕಾಂತಿಯಿಂದ ಪ್ರಕಾಶಿಸುತ್ತಿರುವ ತ್ರಿವಳಿಗಳಿಂದ ಕೂಡಿರುವ ತರುಣಿಯರೊಂದಿಗೆ ಕ್ರೀಡಿಸಿ, ಈ ಜೀವನವನ್ನು ಕಳೆದಿರುವೆನು. ಅದರಿಂದ ನನ್ನ ಶರೀರದಲ್ಲಿ, ಅಸಹ್ಯವಾದ ವೇದನೆಯು ಉಂಟಾಗಿರುವುದು. ಆ ಪಾಪಕೃತ್ಯದಿಂದ ದೇಹವು ರೋಗಗಳಿಂದ ವ್ಯಾಪ್ತವಾಗಿರುವುದು. ಆದುದರಿಂದ ಇನ್ನಾದರೂ ಒಂದು ಬಾರಿ ಶಂಕರನನ್ನು ಆರಾಧಿಸಿ ಬಳಿಕ ಈ ಪಾಪಗಳನ್ನು ಕಳೆದುಕೊಳ್ಳುವೆನು. ॥೭೨॥

ಪೂರ್ವಜನ್ಮದಲ್ಲಿ, ಸ್ತ್ರೀಯರ ಹಾವಭಾವಕ್ಕೆ ಮನಸೋತು ಅವರಿಗೆ ಅಧೀನನಾಗಿ, ಅನುಭವಿಸಿದ ಆ ವಿಪನ್ನಾವಸ್ಥೆಯನ್ನು ಹೇಳಿಕೊಳ್ಳಲು ನಾಚಿಕೆಯಾಗುವುದು. ಅವಳ ಕೇಶಪಾಶಗಳ ಬಂಧನದಿಂದ ಅತ್ಯಂತ ಅಸ್ವತಂತ್ರನಾದೆನು. ಆ ಕಾಲದಲ್ಲಿ ಮೃತ್ಯುಂಜಯನಾದ ಶಿವನನ್ನು ಮನಸ್ಸಿನಲ್ಲಿಯೂ ಸ್ಮರಿಸಲಿಲ್ಲ. ॥೭೩॥

ಹೇ ಮತ್ತೇಭಮರಾಳರಾಜಗಮನೇ ಹೇ ಚಂದ್ರಬಿಂಬಾನನೇ
ಹೇ ನೀಲೋತ್ಪಲಲೋಚನೇ ವಿವಸನೇ ಪಶ್ಯೇತಿ ನೀತಂ ವಯಃ ।
ತೇನಾತಪ್ತಮಹಾಸಿನೋಽಪಿ ರಸನಾ ಛಿನ್ನೇತಿ ಹೇ ಶಂಕರ
ಶ್ರೀ ವಿಶ್ವೇಶ್ವರ ಪಾಹಿ ಮಾಮಿತಿ ಜಪ್ಯೈಃ ಕಾಲಂ ನಯಾಮಃ ಕದಾ ॥೭೪॥

ಅಮಂದಾನಂದಾ ವಾ ಮದನಕದನೇ ಕಾಪಿ ತರುಣೀ
ಮೃಣಾಳಾಂತಸ್ತಂತುಪ್ರಮಯವಸನನಾಸಾಪಿ ರಮಣೀ ।
ಮುಹುರ್ದೃಷ್ಟಾ ಸ್ಪೃಷ್ಟಾ ಕಿಮಿತಿ ಬಹುಕಷ್ಟಾನುಭವತಃ
ಪ್ರನಷ್ಟಾ ಸಂತುಷ್ಟಾ ಕಥಮಿಹ ಪುನಃ ಸನ್ಮನಸಿ ಚೇತ್ ॥೭೫॥

ವಿಷಪ್ರಾಯಾ ಪ್ರಾಯೋ ಭವತಿ ಯುವತೀ ಕಾಪಿ ಯುವತೀ
ಸುಧಾಪ್ರಾಯಾತ್ವಾದ್ಯಾ ಶಿವಭಜನಹೀನಾನುಸರಣಾ ।

ಯೌವನ ಕಾಲದಲ್ಲಿ ಪ್ರೇಯಸಿಯನ್ನು ಕುರಿತು, ಎಲೌ, ಹಂಸಗಮನೆಯೇ, ಎಲೌ, ಚಂದ್ರಮುಖಿಯೇ! ಎಲೌ, ಕಮಲನೇತ್ರೆಯೇ! ಇಗೋ ಇತ್ತ ನೋಡು ಪವಳಾಗು, ಎಂಬಿವೇ ಮೊದಲಾದ ಪ್ರೇಮಪೂರಿತವಾದ ವಚನಗಳಿಂದ ಜೀವಿತವು ಕಳೆಯಲ್ಪಟ್ಟಿತು. ಅವಳೊಂದಿಗೆ ಸರಸವಾದ ಮಾತುಗಳನ್ನಾಡುವುದರಿಂದ ನನ್ನ ಈ ನಾಲಿಗೆಯು ಕಾದ ಖಡ್ಗದಿಂದ ಕತ್ತರಿಸಲ್ಪಟ್ಟಂತಿರುವುದು. ಹೀಗಿರಲು ಓ, ಶಿವನೇ! ಓ, ಜಗನ್ನಾಥನೇ ನನ್ನನ್ನು ಕಾಪಾಡು, ನನ್ನನ್ನು ಉದ್ಧರಿಸು ಎಂದು ಹೇಳುತ್ತಾ ಆ ಶಿವನಾಮ ಜಪಿಸುವ ಕಾಲವು ಹೇಗೆ ತಾನೇ ದೊರಕೀತು? ॥೭೪॥

ಹಂಸಗಮನೆಯಾದ ತರುಣಿಯು ತಾವರೆಯ ದಂಟಿನಲ್ಲಿರುವ ಸೂಕ್ಷ್ಮವಾದ ನೂಲಿನಂತೆ ಮೃದುವಾಗಿರುವ ಬಟ್ಟೆಗಳನ್ನು ಧರಿಸಿ, ಸಂಪಿಗೆಯ ಮೊಗ್ಗಿನಂತಿರುವ ನಾಸಿಕದಿಂದ ಶೋಭಿಸುತ್ತಾ, ರತಿಕ್ರೀಡೆಯನ್ನಾಡಿ ಆನಂದತುಂದಿಲಳಾದಳು. ಮನ್ಮಥ ಕ್ರೀಡೆಯಿಂದ ಆಯಾಸಗೊಂಡಿರುವ ಅವಳನ್ನು ನಾನು ನೋಡಿ, ಅವಳೊಂದಿಗೆ ಮಾತನಾಡಿರುವೆನು. ಆದರೆ ಅಷ್ಟೊಂದು ಶ್ರಮವಹಿಸಿ ಸುಖವನ್ನು ಪಡೆಯುವು ದರಿಂದ ಯಾವ ಪ್ರಯೋಜನವು ತಾನೇ ಇರುವುದು? ಆದುದರಿಂದ ಈಗಲಾದರೂ ನಾನು ಅವಳನ್ನು ಮನಸ್ಸಿನಲ್ಲಿ ಸ್ಮರಿಸಲಾರೆ ॥೭೫॥

ಶಿವದ್ವೇಷಕರಾದವರನ್ನು ಅನುಸರಿಸುವ ಸ್ವಭಾವವುಳ್ಳ, ತರುಣಿಯು ರತಿಕಾಲದಲ್ಲಿ ಸುಧಾಪ್ರಾಯಳಾಗಿ ತೃಪ್ತಿಯನ್ನುಂಟುಮಾಡಿ ಸಂತೋಷಗೊಳಿಸುವಳು.

ದ್ವಿತೀಯಾ ಸಾ ಗೌರೀರಮಣಚರಣಾಂಭೋಜಭಜನ
ಪ್ರವೀಣಾ ಸಾ ಪುಣ್ಯೈರಮಲತಟಿನೀ ವಾ ವಿಹರಣೇ ॥೭೬॥

ಕಾ ವಾ ಸ್ಯಾದ್ಗಿರಿಶೋಪಹಾರಕರಣವ್ಯಾಪಾರಮಾತ್ರಾದರಾ
ಹಾರತ್ವಂ ಸಮುಪೇತ್ಯ ಹಾರವಿಮುಖಾ ನೀಹಾರಹಾರಾದರಾ ।
ರುದ್ರಾಕ್ಷೈರಪಿ ಭಸ್ಮನಾ ವಿಲಸಿತಾ ಭಸ್ಮತ್ರಿಪುಂಡ್ರಾಂಕಿತಾ
ಸಾ ಲೋಕೇ ಖಲು ದುರ್ಲಭೈವ ತರುಣೀ ಕಾಮ್ಯೈರ ಕಾಮಂ ಪ್ರಿಯಾ॥೭೭॥

ಕಾ ವಾ ಲೋಚನಗೋಚರಾ ನ ತರುಣೀ ಕಾಮಾತುರಾ ಕಾಮಿನೀ
ನಿಷ್ಕಾಮಾನಪಿ ಕಾಮಸಾಯಕಕರಾ ಕಾಮಾತುರಾನ್ ಕಾತರಾನ್ ।
ಕರ್ತುಂ ವಾಂಛತಿ ಪಂಚಬಾಣರಮಣೀ ತತ್ಪ್ರಾಣಸಂರಕ್ಷಣೇ
ತಾವತ್ಸಾತಿವಿಚಕ್ಷಣೇವ ಕರುಣಾ ಕಾ ತತ್ರ ತಸ್ಯಾ ಪ್ರಿಯಾ ॥೭೮॥

ಆದರೂ ಅವಳು ಅಂತ್ಯದಲ್ಲಿ ವಿಷದಂತೆ ಘೋರವಾದ ಬಾಧೆಯಲ್ಲಿ ನಮ್ಮನ್ನು ದೂಡುವಳು. ಆದರೆ, ಉಮಾರಮಣನಾದ ಶಿವನ ಪಾದಾರವಿಂದಗಳನ್ನು ಆರಾಧಿಸುವ ಸ್ವಭಾವವುಳ್ಳ ತರುಣಿಯು, ಪೂರ್ವಜನ್ಮದ ಸುಕೃತವಿಶೇಷದಿಂದಲೇ ಲಭಿಸುವುಳಲ್ಲದೇ ಅನ್ಯಥಾ ಸಿಗಲಾರಳು. ಅವಳು ದೇವಗಂಗೆಯಂತೆ ಪವಿತ್ರಳೆನಿಸಿ ನಮ್ಮನ್ನು ಆನಂದಗೊಳಿಸುವಳು. ॥೭೬॥

ಲೋಕದಲ್ಲಿ, ಶಿವಪೂಜೆಯಲ್ಲಿ ಆಸಕ್ತಳಾಗಿ, ಶಿವಪೂಜೆಗೆ ಅಪೇಕ್ಷಿತ ಸಾಮಗ್ರಿಗಳನ್ನು ಸಂಗ್ರಹಿಸುವುದರಲ್ಲಿ ಉತ್ಸಾಹಭರಿತಳಾಗಿ, ಶಿವನಿಗೆ ಪ್ರಿಯವಾದ ರುದ್ರಾಕ್ಷಿ, ಭಸ್ಮತ್ರಿಪುಂಡ್ರ ಮುಂತಾದ ಚಿಹ್ನೆಗಳನ್ನು ಧರಿಸಿ ಸದಾ ಶಿವನನ್ನೇ ಧ್ಯಾನಿಸುವ ತರುಣಿಯೇ ಅತ್ಯಂತ ದುರ್ಲಭಳು. ॥೭೭॥

ಮನ್ಮಥ ವಿಕಾರಕ್ಕೆ ಗುರಿಯಾಗದ ಯಾವ ತರುಣಿಯು ತಾನೇ ದೃಷ್ಟಿಪಥವನ್ನೇರುವಳು? ಕಾಮಾತುರಳಾದ ಅವಳು ಕಾಮಬಾಣಗಳನ್ನು ಕೈಯಲ್ಲಿ ಹಿಡಿದುಕೊಂಡು ನಿಷ್ಕಾಮಿಗಳಾದ ಪುರುಷರಲ್ಲಿಯೂ ಮನ್ಮಥವಿಕಾರವನ್ನುಂಟು ಮಾಡಲು ಇಚ್ಛಿಸುವಳು. ಆದರೆ ಅವರ ಪ್ರಾಣಗಳನ್ನು ಸಂರಕ್ಷಿಸುವದರಲ್ಲಿ ಅವಳು ಚತುರಳಾಗಿಯೇ ಇರುವಳು. ಅಂತಹ ಕಾಮಿನಿಗೆ ಕರುಣೆಯೆಂಬುದೇ ಇಲ್ಲ. ಅವಳಿಗೆ ಪ್ರಿಯವಾದ ವಸ್ತುವೂ ಕಾಣುವುದಿಲ್ಲ. ॥೭೮॥

ದೂರೇ ಸಾ ತರುಣೀ ವನೇಽಪಿ ತರುಣೀವಾರ್ತಾ ನ ಮೇ ರೋಚತೇ
ಸಾ ನಾರೀ ಶಬರೀ ನರಾಧಮಮೃಗವ್ಯಾಧಸ್ಯ ಸಾ ಸ್ಯಾತ್ಪ್ರಿಯಾ ।
ನಾರೀ ಚಾರುಗಿರಾ ನರೋಽಪಿ ನಿರಯಂ ತದ್ಘೋರವಂ ಯಾತ್ಯತಃ
ಸಾ ತಸ್ಮಿನ್ನಧಮತ್ವಮೇವ ಕುರುತೇ ತಸ್ಯಾಃ ಸ್ವಭಾವಾಸ್ತಥಾ ॥೭೯॥

ಸುಧಾಕರಕರಾಕರಂ ಯದಿ ನ ಮಂದಿರಂ ಸುಂದರಂ
ಜಟಾ ತು ರಮಣೀಮಣಿಶ್ಚರಣತಾಡನಾಪೀಡಿತಂ ।
ಕರೋತಿ ರಮಣಂ ತತಃ ಪರಿಣಯೇಽಪಿ ನ ಪ್ರಾಣಿನಾಂ
ಸುಖಂ ಕ್ಷಣಮಪೀತಿ ಮೇ ಮರಣಮೇವ ತತ್ತಾಡನೈಃ ॥೮೦॥

ಅಮಂದಮದನವ್ಯಥಾ ನ ಗಿರಿಕಂಧರಾವಾಸಿನಾಂ
ಅಸಾರಕಣಭಕ್ಷಣೈರುಪಲರಾಜಿಶಯ್ಯಾಸನೈಃ ।
ಅತಃ ಕಥಮನುಕ್ಷಣಂ ಸ್ಮರಹರಾರ್ಚನಾರಾಧನೈಃ
ನಯಾಮಿ ನ ಮುದಾ ವಯೋ ಮುಹುರುಮಾಸಹಾಯಾಶ್ರಯೇ ॥೮೧॥

---

ತರುಣಿಯು ದೂರದಲ್ಲಿಯೇ ಇರಲಿ. ಈ ವನದಲ್ಲಿ ನನಗೆ ತರುಣಿಯ ವಾರ್ತೆಯೇ ರುಚಿಸುವುದಿಲ್ಲ. ಆ ಸ್ತ್ರೀಯು ಬೇಡಿತಿಯಂತೆ, ನರಾಧಮರೆಂಬ ಮೃಗಗಳನ್ನು ಬೇಟೆಯಾಡುವ ಮನುಷ್ಯನಿಗೆ ಪತ್ನಿಯಾಗಿರಲಿ. ಸ್ತ್ರೀಯರ ಮನೋಜ್ಞವಾದ ಮಾತುಗಳನ್ನು ಕೇಳಿ ಪುರುಷನು ಘೋರವಾದ ನರಕವನ್ನು ಹೊಂದುವನು. ಸ್ತ್ರೀಯರಿಂದ ಪುರುಷರು ಸದಾ ಅಧೋಗತಿಯನ್ನೇ ಹೊಂದುವರು. ಇದು ಅವರ ಸ್ವಭಾವಸಿದ್ಧವಾದ ಗುಣವಾಗಿರುತ್ತದೆ. ॥೭೯॥

ಚಂದ್ರಮುಖಿಯರಾದ ಸ್ತ್ರೀಯರಿಲ್ಲದಿರುವ ಮನೆಯೇ ಶೋಭಿಸದು. ಹೆಂಗಸರ ಪಾದಾಘಾತಪಡೆಯದ ಪುರುಷರ ತಲೆಯು ಅಷ್ಟು ಮಂಡಿಸದು. ಹೀಗೆಂದು ಸಂಭ್ರಮದಿಂದ ಅಂತಹ ಸುಂದರಿಯರನ್ನು ವಿವಾಹವಾಗುವಾಗಲೂ, ಪತಿಗೆ ಸುಖವು ಲಭಿಸುವುದಿಲ್ಲ. ಆದುದರಿಂದ ಸ್ತ್ರೀ ಸಂಬಂಧವು ಎಂದಿಗೂ ಸುಖಕರವಲ್ಲ. ಅವರ ಕಾಲಿನ ಹೊಡೆತಕ್ಕಿಂತ ಮರಣವೇ ಲೇಸಲ್ಲವೇ ! ॥೮೦॥

ಬೆಟ್ಟದ ಗುಹೆಗಳಲ್ಲಿ ನೆಲೆಸಿ, ನಿಸ್ಸಾರವಾದ ಕಂದಮೂಲಗಳನ್ನು ಭಕ್ಷಿಸುತ್ತಾ, ಕಲ್ಲಿನ ಮೇಲೆ ಮಲಗಿ ಮನ್ಮಥಾರಿಯಾದ ಪರಶಿವನನ್ನೇ ಅರ್ಚಿಸುತ್ತಾ ಕಾಲ ಕಳೆಯುವವರಿಗೆ ಅತಿಶಯವಾದ ಕಾಮವ್ಯಥೆಯಿರುವುದಿಲ್ಲ. ಆದ್ದರಿಂದ ನಾನು ಇನ್ನು ಮುಂದೆ ಅದೇರೀತಿಯಿಂದಲೇ ಪರಶಿವನನ್ನು ಆಶ್ರಯಿಸಿ ಬಾಳುವೆನು. ॥೮೧॥

ಕರ್ಣಾಂತದೀರ್ಘನಯನಾಸುವಿಲೋಕನೇನ
ನೀಲೋತ್ಪಲಾಂಚಿತಕಪೋಲತಲೋಪಧಾನೈಃ ।
ನೀತಂ ವಯಃ ಕಿಯದತಃ ಪರಮಿಂದುಮೌಳಿ
ಲಿಂಗೋಪಧಾನರಚನೇನ ನಯಾಮಿ ಕಾಲಂ ॥೮೨॥

ಕಃ ಕಾಲೋಽಪಿ ವರಾಕ ಇತ್ಯಪಿ ಮನಃ ಕಾಲಾಂತಕಾರಾಧನೈಃ
ನೂನಂ ಮೇ ಭವತೀತಿ ನಿಶ್ಚಿತಮತಃ ಪಂಕೇರುಹೈಃ ಶಂಕರಂ ।
ನಿಶ್ಶಂಕಂ ಸಮುಪಾಸ್ಮಹೇ ಮುಹುರುಮಾಕಾಂತಾಭಿಧಾನಾಮೃತಂ
ಪೀತ್ವಾ ಪೀನರಿಪುಃ ಸ್ಮೃತಾಂತಕರಿಪುಃ ತ್ಯಕ್ತ್ವೇವ ನಾರೀಸ್ಪೃಹಾಂ ॥೮೩॥

ನಾರೀ ಮಾರಮನೋಹರೇತಿ ಚತುರೋ ಹಾರೋ ನ ತಸ್ಯಾಂ ರತಃ ।
ಯಸ್ಮಾನ್ಮಾರರಿಪುಃ ಪ್ರಕುಪ್ಯತಿ ರಿಪುಃ ಪ್ರೇಮಾಸ್ಪದಾನಾಸ್ಪದಂ
ಪ್ರೀತಿಸ್ತದ್ರಿಪುಪುಂಗವಸ್ಯ ಚ ತತೋ ನಾರೀ ನ ಮೇ ರೋಚತೇ ।
ಹಾರಸ್ಯೇತಿ ವಿಚಾರಿತಂ ಪುನರಿದಂ ಕಿಂ ವಾ ವಿಚಾರಾಸ್ಪದಂ ॥೮೪॥

ಕರ್ಣಾಂತದವರೆಗೆ ಪ್ರಸರಿಸಿರುವ ವಿಶಾಲವಾದ ನೇತ್ರಗಳಿಂದ ಶೋಭಿತರಾದ ಸುಂದರಿಯರನ್ನು ಎವೆಯಿಕ್ಕದೆ ನೋಡುವುದರಿಂದಲೂ, ಮತ್ತು ಕನ್ನೈದಿಲೆಯಂತೆ ಮೃದುವಾದ ಅವರ ಕಪೋಲಗಳ ಮೇಲೆ ತಲೆಯನ್ನೂರಿ ಮಲಗುವುದರಿಂದಲೂ, ಈ ವಯಸ್ಸು ಇದುವರೆಗೂ ಅತಿಕ್ರಮಿಸಿತು. ಆದುದರಿಂದಲೂ ಈಗ ಚಂದ್ರಶೇಖರನಾದ ಶಿವನ ಲಿಂಗವನ್ನೇ ಆಲಿಂಗಿಸುತ್ತಾ ಕಾಲವನ್ನು ನೀಗುವೆನು. ॥೮೨॥

ಕಾಲಾಂತಕನಾದ ಶಂಕರನ ಆರಾಧನೆಯಿಂದ ನನಗೆ ಯಮನು ಅತ್ಯಲ್ಪನು ಎಂಬ ಭಾವನೆಯೊದಗುವುದು ಎಂಬುದು ನಿಜ. ಆದುದರಿಂದ ಅನವರತವೂ ಕಮಲ ಪುಷ್ಪಗಳಿಂದ, ಶಿವನನ್ನು ಪೂಜಿಸುತ್ತಾ ಸ್ತ್ರೀವ್ಯಾಮೋಹವನ್ನು ತೊರೆದು ಶಿವನಾಮಾಮೃತ ಪಾನಮಾಡಿ ಅದರಿಂದಲೇ ತೃಪ್ತನಾಗುವೆನು. ॥೮೩॥

ಸ್ತ್ರೀಯು ಮನ್ಮಥನಿಗೆ ಪ್ರಿಯಳಾದುದರಿಂದ ಶಿವಭಕ್ತನಾದವನು, ಅವಳಲ್ಲಿ ಅನುರಕ್ತನಾಗಬಾರದು. ಆದರಿಂದ ಅವರು ಕಾಮನಿಗೆ ಪ್ರಿಯರಾದ ಅವರನ್ನು ಪ್ರೀತಿಸಿ, ಕಾಮವೈರಿಯಾದ ಶಿವನ ಕೋಪಕ್ಕೆ ಪಾತ್ರರಾಗುವರು. ಯಾವನು ಕಾಮನನ್ನು ದ್ವೇಷಿಸುವನೋ ಅವನೇ ಶಿವನ ಪ್ರೀತಿಗೆ ಪಾತ್ರನಾಗುವನು. ಆದುದರಿಂದ ಕೇವಲ ಪರಶಿವಭಕ್ತನಾದ ನಾನು ಸ್ತ್ರೀಯರನ್ನು ಎಂದೂ

ವಿತಾನಂ ಯತ್ರಾಸೀದಮೃತಕರರೂಪಾಂ ದಿಗಬಲಾ
ಶಿಲಾ ಶಯ್ಯಾ ರೇವಾಜಲವಿಮಲಮೂಲಾತಿವಿಪುಲಾ
ಇದಂ ತುಂಗಂ ಲಿಂಗಂ ವಿವಿಧಮುಪಧಾನಂ ಧನಮಿದಂ
ಕರಾದಿಃ ಸೇವಾಯ್ಯೆ ಮಮ ಭವತಿ ಭಾಗ್ಯೈರಹ ವಿಧೇ ॥೪೫॥

ಅಧುನಾಪಿ ವಧೂಜನಾವಿರೋಧೇ
ಸದನೇ ತದ್ವದ ನಾನುಲೋಕನೇನ
ನ ಕಿಮಸ್ಯ ವಯೋಽಪಿ ಯಾತಿ ವಹ್ನೌ ।
ಪತಿತಂ ನೀರಪೃಷತ್ಕವದ್ವೃಥಾಹೋ ॥೪೬॥

ಅಹೋ ನೀರಾಹಾರೋ ಮಿಹಿರಕರತಪ್ತಃ ಪ್ರತಿದಿನಂ
ಪ್ರತಪ್ತಃ ಪಾಪೌಘಸ್ಮರಣದಹನೇನಾಪ್ಯನುದಿನಂ ।
ಶರೀರತ್ಯಾಗೇನಾಪ್ಯಚಿರರುಚಿಧಾರಾತಿರುಚಿರಾಂ
ವರಾಂ ನಾರೀಂ ಧೀರಾಂ ಕಥಮಪಿ ನ ಪಶ್ಯಾಮಿ ಮನಸಾ ॥೪೭॥

ಬಹುವಾಗಿ ಪ್ರೀತಿಸಲಾರೆ. ಶಿವಭಕ್ತನು ಎಂದಿಗೂ ಸ್ತ್ರೀಯರಿಗೆ ವಶವರ್ತಿಯಲ್ಲವೆಂಬುದು ಪ್ರಕಟವಾಗಿರುವುದು. ॥೪೪॥

ಎಲೈ ಬ್ರಹ್ಮನೇ! ಈ ಅರಣ್ಯದಲ್ಲಿ ವಾಸವಾಗಿರುವ ನನಗೆ ಚಂದ್ರನ ಅಮೃತಮಯವಾದ ಕಿರಣಗಳೇ ಮೇಲ್ಕಟ್ಟು. ದಿಕ್ಕು ಎಂಬುದೇ ಪತ್ನಿಯು. ರೇವಾನದಿಯ ದಡದಲ್ಲಿರುವ ವಿಶಾಲವಾದ ಬಂಡೆಯೇ ಹಾಸಿಗೆ. ಉನ್ನತವಾದ ಈ ಶಿವಲಿಂಗವೇ ನನ್ನ ತಲೆದಿಂಬು. ಇದೇ ನನ್ನ ನಿಧಿಯೆನಿಸಿದೆ. ಪೂರ್ವಜನ್ಮದ ಸುಕೃತ ವಿಶೇಷಗಳಿಂದ ಶಿವನನ್ನು ಸೇವಿಸುವುದಕ್ಕೋಸ್ಕರ ಈ ಕೈಗಳು ನನಗೆ ಸಾಧನವಾಗಿರುವುವು. ॥೪೫॥

ಬ್ರಹ್ಮನೇ, ಈಗ ನಾನು ಸ್ತ್ರೀಜನರಿಂದ ಯುಕ್ತವಾದ ಗೃಹವನ್ನು ಪ್ರವೇಶಿಸಿ ಅಲ್ಲಿ ಅವರ ಮುಖಾವಲೋಕನದಿಂದ ಕಾಲಕಳೆಯುವೆನಾದರೆ ಅಂತಹ ನಾನು ಬೆಂಕಿಯಲ್ಲಿ ಬಿದ್ದ ನೀರಿನ ಹನಿಯಂತೆ ಇಂಗಿಹೋಗುವೆನಲ್ಲವೆ! ॥೪೬॥

ಅಯ್ಯೋ! ನೀರನ್ನೇ ಆಹಾರವಾಗಿ ಸೇವಿಸುತ್ತಾ, ಸೂರ್ಯನ ಪ್ರಖರವಾದ ಕಿರಣಗಳಿಂದುಂಟಾದ ತಾಪವನ್ನು ಸಹಿಸುತ್ತಾ, ಪ್ರತಿ ನಿತ್ಯವೂ, ಈ ಹಿಂದೆ ಎಸಗಿದ ಪಾಪಕೃತ್ಯಗಳನ್ನು ಸ್ಮರಿಸುತ್ತಾ, ಅವುಗಳನ್ನು ಕಳೆದುಕೊಳ್ಳುವ ಕಾರ್ಯದಲ್ಲಿಯೇ

ಸಂಸಾರಾಗ್ನಿಕದರ್ಥಿತಃ ಕಥಮುಮಾಕಾಂತಾರ್ಚನಾರಾಧನಾ
ಧಾರಾಧಾರಹರಾನುರಕ್ತಮನಸಾಂ ಸಂಗೈರಭಂಗೈಃ ಪುನಃ ।
ಲಿಂಗಾರಾಧನಮೇವ ತಾವದಧುನಾ ಕರ್ತುಂ ಪ್ರವೃತ್ತೋ ಮುಹುಃ
ನಾನಂಗಜ್ವರಸಾರಕಾತರತರಾಂ ನಾರೀಂ ಸ ಪಶ್ಯಾಮ್ಯಪಿ ||೮೮||

ನಾರೀತುಂಗತರಂಗಲೋಚನಚಮತ್ಕಾರಾಕರಾಪೇಕ್ಷಣಂ
ಕ್ಷೀಣಂ ತಾವದಹೋ ವಯಃ ಕಿಯದಪಿ ಪ್ರೋತ್ಸಾಹಕಾಲೋಕನೈಃ ।
ಆಲೋಕೇಷ್ವಪಿ ತದ್ವಿಲೋಕನಮತಿರ್ನ್ಯೂನಾ ನ ನೂನಂ ಮುಹುಃ ।
ನೇಹೋದ್ಧೂತವಿಭೂತಿಭೂಷಿತವಪುಃ ಭೂಯೋಽಪಿ ಭೂಯೋ ಭುವಿ ||೮೯||

ಕಾಲಕಳೆಯುವೆನು. ಇಂತಹ ಕಷ್ಟಪರಂಪರೆಗಳನ್ನು ಸಹಿಸಿ, ಶರೀರವನ್ನು ತ್ಯಜಿಸಿದರೂ ಧೂರ್ತಳಾದ ಸ್ತ್ರೀಯ ಮುಖವನ್ನು ಮಾತ್ರ ಎಂದಿಗೂ ನೋಡಲಾರೆನು. ||೮೭||

ನಾನೀಗ ಸಂಸಾರವೆಂಬ, ಅಸಹ್ಯವಾದ ಅಗ್ನಿಯಲ್ಲಿ ಬಿದ್ದು, ಬೆಂದು ಹೋಗಿರುವೆನು. ಅದಕ್ಕಾಗಿ ಉಮಾರಮಣನಾದ ಆ ಪರಮೇಶ್ವರ ಧ್ಯಾನದಲ್ಲಿ ಆಸಕ್ತರಾಗಿ ಸದಾ ಶಿವನನ್ನೇ ಆರಾಧಿಸುತ್ತಲಿರುವ ಶಿವಭಕ್ತಾಗ್ರೇಸರರ ಸಹವಾಸದಿಂದ ಈಗ ಶಿವಲಿಂಗವನ್ನೇ ಅನನ್ಯಭಕ್ತಿಯಿಂದ ಆರಾಧಿಸತೊಡಗಿರುವೆನು. ಆದರಿಂದ ನಿಜವಾಗಿ ಮನ್ಮಥ ಜ್ವರದಿಂದ ಸಂತಪ್ತರಾಗಿರುವ ತರುಣಿಯರನ್ನು ಎಂದಿಗೂ ನೋಡಲಾರೆನು. ||೮೮||

ಸಮುದ್ರದ ಅಲೆಗಳಂತೆ ಚಂಚಲವಾಗಿರುವ ಸ್ತ್ರೀಯರ ಚಪಲ ನೇತ್ರಗಳನ್ನು ನೋಡುವುದರಿಂದಲೇ ನನ್ನ ಆಯುಸ್ಸು ಕಳೆದು ಹೋಗಿರುವುದು. ಆದರೂ ಪ್ರಾಯಶಃ ಜನರಲ್ಲಿ, ಚಪಲಾಕ್ಷಿಯರಾದ ತರುಣಿಯರನ್ನು ನೋಡಬೇಕೆಂಬ ಕುತೂಹಲವು ಮಾಯವಾಗುವುದಿಲ್ಲ. ಆದರೆ ಶಿವನಿಗೆ ಪ್ರಿಯವಾದ ವಿಭೂತಿಯೇ ಮುಂತಾದ ಶೈವಚಿಹ್ನೆಗಳನ್ನು ಧರಿಸಿರುವ ನನ್ನಂತಹ ಭಕ್ತನು ಎಂದಿಗೂ ತರುಣಿಯರನ್ನು ನೋಡಬಯಸುವುದಿಲ್ಲ. ||೮೯||

ಪ್ರಾಸಾದವಾತಾಯನವಾತಪ್ರೋತ
ನೀಶೋತ್ತರೀಯೋನ್ನತನೀವಿಬಂಧಾಃ ।
ಬಂಧಾಯ ಜಾತಾಃ ಖಲು ವೃಷ್ಟಿಬಂಧ್ಯೈಃ
ಯಮಾಲಯೇ ತಾಭಿರತಃ ಪರಂ ಕಿಂ ॥೯೦॥

ವಾರಂ ವಾರಂ ವಾರನಾರೀವಿಹಾರೈಃ
ಮಾರಾಪಾರಾಸಾರರೂಪೈಃ ಸಪಾಪೈಃ ।
ನೀತಃ ಕಾಲಃ ಕಾಲಕಾಲಾನುವೇಲಂ
ಕಾಲೇ ಕಾಲೇ ನಾರ್ಚಿತಃ ಕಾಲಭೀತ್ಯೈಃ ॥೯೧॥

ನ ವಾತಪ್ರೋತಾನಪಿ ಜಾತು ಸುಂದರೀ
ಘನಸ್ತನಾಂತಃಪತಿತಾನುಪೇತಾನ್ ।

ಧೂರ್ತರಾದ ಆ ತರುಣಿಯರು ಮನೆಯ ಮಹಡಿಯ ಮೇಲೆ ನಿಂತು ಮಂದವಾಗಿ ಬೀಸುತ್ತಿರುವ ಬಾಲಮಾರುತದ ಸಹಾಯದಿಂದ, ತಮ್ಮ ವಸ್ತ್ರಗಳನ್ನು ಮೇಲಕ್ಕೆತ್ತಿ, ನೀವಿಯನ್ನು (ಸೊಂಟದಲ್ಲಿ ಬಿಗಿದು ಕಟ್ಟಿದ ವಸ್ತ್ರದ ಗಂಟು.) ಸಡಿಲಿಸಿ ಓರೆಯಾದ ನೋಟದಿಂದ ತಮ್ಮ ವೃಷ್ಟಿಯನ್ನು ಪುರುಷರ ಕಡೆಗೆ ಬೀರಿ, ಇನ್ನೂ ವಿಧವಿಧವಾದ, ಹಾವಭಾವಗಳಿಂದ, ಪುರುಷರನ್ನು ತಮ್ಮ ಬಲೆಗೆ ಬೀಳುವಂತೆ ಮಾಡುವರು. ತರುಣಿಯರಾದ ಅವರ ಕಟಾಕ್ಷವೀಕ್ಷಣದಿಂದ ಮೋಹಗೊಂಡ ಪುರುಷರು, ನಾನಾ ವಿಧವಾದ ಅನರ್ಥಪರಂಪರೆಗೆ ಗುರಿಯಾಗಿ, ಅಂತ್ಯದಲ್ಲಿ ಯಮಾಲಯವೆಂಬ ಕಾರಾಗೃಹದಲ್ಲಿ ಬಂಧಿತರಾಗಿ, ಅಲ್ಲಿ ದಾರುಣವಾದ ವೇದನೆಯನ್ನು ಅನುಭವಿಸುವವರಾಗುವರು. ಇದಕ್ಕೆಲ್ಲಾ ಸ್ತ್ರೀಯರೇ ಮೂಲಕಾರಣರಾಗಿರುವರಲ್ಲವೇ? ॥೯೦॥

ಪಾಪಿಗಳಾದ ಜನರು, ಮನ್ಮಥನ ಅಪರಾವತಾರವನ್ನು ತಾಳಿದವರೋ, ಎಂಬಂತೆ ಸುಂದರಿಯರಂತೆ ಕಾಣಿಸಿಕೊಳ್ಳುವ, ಪಾಪಕೂಪಗಳಂತಿರುವ ವೇಶ್ಯೆಯರೊಂದಿಗೆ ವಿಹರಿಸಿ, ತಮ್ಮ ಜೀವಿತವನ್ನು ಕಳೆಯುವರು. ಕ್ರೂರಜನರಾದ ಅವರು ಒಂದು ಬಾರಿಯೂ ಸಕಾಲದಲ್ಲಿ ಕಾಮರಿಪುವಾದ ಆ ಪರಮೇಶ್ವರನನ್ನು ಆರಾಧಿಸುವುದಿಲ್ಲ. ॥೯೧॥

ಪವಿತ್ರವಾದ ಗಂಗಾನದಿಯ ಮೇಲೆ ಬೀಸಿಬರುವ ಬಾಲಮಾರುತದ ಸ್ಪರ್ಶಸುಖವನ್ನು ಅನುಭವಿಸಿ, ಆನಂದಿಸುತ್ತಿರುವ ಈ ನನ್ನ ಸ್ಥಿರಚಿತ್ತವು, ಸ್ತ್ರೀಯರ

ಮನೋ ನ ಮೇ ವಾಂಛತಿ ತುಂಗ ಗಂಗಾ
ತರಂಗಲಿಂಗಾನಿಲಬಾಲಲೋಲಂ ॥೯೨॥

ರೇವಾತೀರಸಮೀರನೀರತರುಜಾಪಾರಪ್ರಸೂನಾರ್ಚಿತಂ
ತುಂಗಂ ಲಿಂಗಮಮಂಗಲಾನಿ ಹರತೀತ್ಯತ್ರಾಂಗನಾಂಗಾನಿಲಃ ।
ನಾಯಾತೀತಿ ಮುಹುರ್ಮುಹುರ್ಹರಮಹಾದೇವೇತಿ ಕಾಲಂ ನಯನ್
ಅತ್ರಾಪ್ಯಾವಧಿಕಾಲಕಾಲಕಲನಂ ಮನ್ಯೇ ಧನಂ ಜೀವನಂ ॥೯೩॥

ಅನಲ್ಪಸಂಕಲ್ಪವಿಕಲ್ಪನೈರ್ವಾ ಕುಲೀಲಯಾಲಂ ಕಮಲಾವಿಲಾಸೈಃ ।
ವಾರಾಂಗನಾಪಾಂಗತರಂಗಸಂಗೈರನಂಗಮಾತಂಗಹರಂ ಭಜಾಮಃ ॥೯೪॥

ಅಭ್ಯರ್ಣೇ ಮರಣಕ್ಷಣೇ ತು ರಮಣೀನಿರ್ವಾಣವರ್ಣಾರ್ಪಣಂ
ಶರ್ವಾಣೀರಮಣಾನುವರ್ಣನಮುದಾ ಕರ್ಣೇ ಕರೋತ್ಯೇವ ನ ।

ನಿಬಿಡವಾದ ವಕ್ಷಃಸ್ಥಲದ ಮೇಲೆ ಬೀಸಿ ಬಂದ ಬಾಲಮಾರುತದ ಸ್ಪರ್ಶವನ್ನು ಸಹ ಬಯಸುವುದಿಲ್ಲ ||೯೨||

ರೇವಾನದಿಯ ದಡದಲ್ಲಿರುವ ಬಾಲಮಾರುತದಿಂದಲೂ, ನದಿಯ ಶುದ್ಧವಾದ ನೀರಿನಿಂದಲೂ, ಸುಗಂಧವನ್ನು ಬೀರುತ್ತಿರುವ ಹೂವುಗಳಿಂದಲೂ, ಪೂಜಿಸಲ್ಪಡುವ ಶ್ರೇಷ್ಠವಾದ ಈ ಶಿವಲಿಂಗವು ಸಕಲ ಪಾಪಗಳನ್ನು ನಾಶಮಾಡುವುದಾಗಿರುತ್ತದೆ. ಇಲ್ಲಿ ಸ್ತ್ರೀಯರ ಮೇಲೆ ಬೀಸುವ ಮಾರುತವೂ ಸಹ ಸುಳಿಯಲಾರದೆಂದು ತಿಳಿದು, ಮಹಾದೇವನನ್ನು ಸ್ಮರಿಸುತ್ತಾ ಇದುವರೆಗೂ ಕಾಲವನ್ನು ಕಳೆಯುತ್ತಿರುವೆನು. ಮೃತ್ಯುಂಜಯನಾದ ಆ ಪರಶಿವನ ಧ್ಯಾನವೇ ನನ್ನ ಜೀವಿತದ ಸರ್ವಸ್ವವೆಂದೂ ತಿಳಿದಿರುವೆನು. ||೯೩||

ಕಾಮಿನಿಯರ ಹಾವಭಾವಗಳಿಂದ ಉಂಟಾಗುವ, ವಿವಿಧ ಆಶಾಪರಂಪರೆಗಳೂ, ಮತ್ತು ಆಲೋಚನಾತರಂಗಗಳೂ ದೂರವಾಗಿರಲಿ. ದುಷ್ಟವಾದ ಮನ್ಮಥ ಚೇಷ್ಟೆಗಳು ನನ್ನಲ್ಲಿ ಉಂಟಾಗದಿರಲಿ. ನನ್ನ ಈ ಚಿತ್ತವು ವೇಶ್ಯೆಯರ ಕಡೆಗಣ್ಣಿನ ನೋಟಗಳಿಗೆ ಮರುಳಾಗದಿರಲಿ. ಮನ್ಮಥನೆಂಬ ಮದಿಸಿದ ಆನೆಯನ್ನು ಸಂಹರಿಸುವ ಪರಶಿವನಲ್ಲಿ ಸ್ಥಿರವಾದ ಭಕ್ತಿಯಿರಲಿ. ಅದಕ್ಕಾಗಿಯೇ ನಾನು ಸರ್ವದಾ ಮಹಾದೇವನನ್ನು ಭಜಿಸುವೆನು. ||೯೪||

ಅಂತ್ಯಕಾಲವು ಸಮೀಪಿಸುವವರೆಗೂ, ಸ್ತ್ರೀಯರ ಸುಂದರವಾದ ಶರೀರವನ್ನು

ನೈವಾಂಗೇ ಭಸಿತಂ ಕರೋತಿ ನ ಮನಾಗ್ರುದ್ರಾಕ್ಷಮಾಲಾಂ ಗಲೇ
ಲಿಂಗಂ ಮಂಗಲದಾಯಕಂ ನ ಹೃದಯೇ ಬಿಲ್ವಾನಿ ವಾ ಕಿಂ ತಯಾ ॥೯೫॥

ದೂರೇ ದೇವ ಪತಿಂ ವಿಲೋಕ್ಯ ಪತಿತಂ ದೈವಾನ್ಮೃತಂ ಚಾವೃತಂ
ದೂತೈರ್ನೇತುಮುಪಾಗತೈಸ್ತು ಸುರತಾಭಾವಾನುಲಾಪೇ ರತಾ ।
ಪಶ್ಚಾತ್ಕಾಮಶರಾಕರಾಕುಲವಧೂಃ ಸಂಗುಪ್ತತದ್ರೋದನಾ
ತದ್ಭಿನ್ನಾ ಜರಯಾಪಿ ಪೀಡಿತತನುಃ ಜಾರಂ ಪರಂ ಪಶ್ಯತಿ ॥೯೬॥

ಉಮಾಸಹಾಯಃ ಶಿವಪೂಜನಂ ಚ
ಭೂತಿಶ್ಚ ರುದ್ರಾಕ್ಷವಿಭೂಷಿತಂ ಚ ।
ಯಥಾ ಹಿತಾಯಾಸ್ಯ ತಥಾಹಿತಾಯ
ಮಾತಾ ನ ತಾತೋ ನ ವರಾಂಗನಾಪಿ ॥೯೭॥

ನೋಡುವುದರಲ್ಲಿಯೇ ಆಸಕ್ತನಾಗಿದ್ದರೆ, ಮನುಷ್ಯನು ಮರಣಕಾಲದಲ್ಲಿಯೂ ಶಿವ ಕಥಾಮೃತವನ್ನು ಕೇಳಲು ಇಚ್ಛಿಸುವುದಿಲ್ಲ. ತನ್ನ ದೇಹಕ್ಕೆ ವಿಭೂತಿಯನ್ನು ಧರಿಸುವುದಿಲ್ಲ. ಕಂಠದಲ್ಲಿ ರುದ್ರಾಕ್ಷಿಗಳ ಮಾಲೆಯನ್ನು ಹಾಕಲಾರನು. ಹಾಗೆಯೇ ಪರಮಪೂಜ್ಯವಾದ ಶಿವಲಿಂಗವನ್ನೂ ತನ್ನ ಹೃದಯದಲ್ಲಿ ಧ್ಯಾನಿಸುವುದಿಲ್ಲ. ಹೀಗಿರು ತ್ತಿರುವಾಗ ಪಾಪಿಷ್ಠರಾದ ಆ ಸ್ತ್ರೀಯರಿಂದುಂಟಾಗುವ ಪ್ರಯೋಜನವಾದರೂ ಏನಿರುವುದು ? ॥೯೫॥

ಪತಿದೇವನು ದೇಶಾಂತರಕ್ಕೆ ಹೋದರೆ, ಅಥವಾ ಮೃತನಾದರೆ, ಅವನನ್ನು ಯಮಲೋಕಕ್ಕೆ ಕರೆದುಕೊಂಡು ಹೋಗಲು ಯಮದೂತರು ಸುತ್ತುವರೆದಿದ್ದರೂ ಆಗ ಸ್ತ್ರೀಯರು ಪತಿಯ ಸುರತಸೌಖ್ಯವನ್ನು ಸ್ಮರಿಸುತ್ತಾ, ವಿರಹವೇದನೆಯನ್ನು ತೋರ್ಪಡಿಸುವರು. ಅನಂತರ ಕಾಮಪರವಶರಾಗಿ ತನಗುಂಟಾಗಿರುವ ಕಾಮ ವಿಕಾರವನ್ನು ಗುಪ್ತವಾಗಿರಿಸಿ, ವಾರ್ಧಕ್ಯಾವಸ್ಥೆಯನ್ನು ಹೊಂದಿದ್ದರೂ ಸಹ, ಪರ ಪುರುಷನನ್ನು ಕಾಮಿಸುವರು. ॥೯೬॥

ನಿಜವಾಗಿ ಈಶ್ವರನಲ್ಲಿ ಭಕ್ತಿಯುಳ್ಳವನಿಗೆ ಉಮಾಕಾಂತನಾದ ಶಿವನೂ, ಶಿವಪೂಜೆಯೂ, ವಿಭೂತಿಧಾರಣೆಯೂ, ಇವೆಲ್ಲವೂ ಹೇಗೆ ಹಿತವನ್ನುಂಟುಮಾಡು ವುವೋ, ಅಷ್ಟು ಹಿತದಾಯಕರು ತಾಯಿ, ತಂದೆ, ಹೆಂಡತಿ ಮುಂತಾದ ಯಾವ ಬಂಧುವರ್ಗವೂ ಆಗಲಾರರು. ॥೯೭॥

ಮುಹುರ್ಮುಹುಃ ಕುಂಕುಮಪಂಕಗೌರ
ಗುರುಸ್ತನಾಂತರ್ಗತಹಾರಭಾರಃ ।
ವಿಲೋಕಿತೋ ಮಾರವಿಹಾರಕಾಲೇ
ಕರ್ಪೂರಗೌರೋ ನ ಹರಃ ಸ್ಮೃತೋಽಪಿ ॥೯೮॥

ಉನ್ಮತ್ತೋಽಪಿ ಕರೀ ಕರೇಣ ವಿಮಲೇ ಕುಂಭಸ್ಥಲೇಽಲಂಕೃತೇ
ಮುಕ್ತಾಜಾಲಕಕಲ್ಪನೇನ ತರುಣೀವಕ್ಷೋಜತುಲ್ಯೇ ಮುಹುಃ ।
ಧೂಲಿಂ ಪ್ರಕ್ಷಿಪತಿ ಕ್ಷಣೇನ ಚರಣೈಃ ಹಾರಾನ್ ಕ್ಷಿಣೋತ್ಯಾಹತಾನ್ ।
ಆಕ್ರೋಶತ್ಯಪಿ ಹಾ ಹತೋಽಹಮಿತಿ ಕಿಂ ಲಜ್ಜಾ ನ ತೇನಾಪಿ ಮೇ ॥೯೯॥

ಪುರಾ ನಾರೀತುಂಗಸ್ತನಭರಕರಾಘಾತನಫಲಂ
ಗಜತ್ವಂ ಸಂಪ್ರಾಪ್ತಂ ಪುನರಪಿ ಕುಚಾಭೇನ ಶಿರಸಾ ।
ಮುಹುರ್ದುಃಖಂ ಕಿಂ ನೇತ್ಯಪಿ ಶಿರಸಿ ಧೂಲಿಂ ಕ್ಷಿಪತಿ ಕಿಂ
ತತೋ ನಾರೀದೂರೇ ವಿಹರತು ಮನೋ ಮೇ ಶಿವಶಿವೇ ॥೧೦೦॥

ಸುರತಸಮಯದಲ್ಲಿ ಅನೇಕವೇಳೆ ಕುಂಕುಮಕೇಸರಿಯಿಂದ ರಂಜಿಸುವ ವಕ್ಷಃಸ್ಥಳದಲ್ಲಿ, ಚಂಚಲವಾಗಿ ಹೊಳೆಯುವ ಶುಭ್ರವಾದ ಮುಕ್ತಾಹಾರವನ್ನು ನೋಡಿದೆನು. ಆದರೆ ಒಂದು ಬಾರಿಯಾದರೂ ಕರ್ಪೂರದಂತೆ ಗೌರವರ್ಣವುಳ್ಳ ಶಿವನಸ್ವರೂಪವನ್ನು ಸ್ಮರಿಸಲಿಲ್ಲ. ॥೯೮॥

ಮದಿಸಿದ ಆನೆಯೂ ಸಹ ಹಾರಗಳಿಂದ ಅಲಂಕೃತವಾಗಿಯೂ, ಸ್ತ್ರೀಯರ ಕುಚಗಳಂತೆ ದುಂಡಾಗಿಯೂ ಇರುವ ತನ್ನ ಕುಂಭಸ್ಥಳಕ್ಕೆ ಸೊಂಡಿಲಿನಿಂದ ಧೂಳನ್ನು ತೆಗೆದು ಎರಚುವುದು ಮತ್ತು ಕೊರಳಿನಲ್ಲಿ ಕಟ್ಟಿರುವ ಮಾಲಿಕೆಯನ್ನು ಕಿತ್ತು ಎಸೆಯುವುದು, ಬಳಿಕ ಘೀಂಕರಿಸುವುದು. ಅದನ್ನು ಸ್ಮರಿಸಿದರೆ ಆನೆಗಳಿಗಿರುವ ವೈರಾಗ್ಯವೂ ನಮ್ಮಲ್ಲಿರುವಂತೆ ಕಾಣುವುದಿಲ್ಲ. ಅದಕ್ಕೆ ವಿರುದ್ಧವಾಗಿ ನಾವು ಸ್ತ್ರೀಸುಖಕ್ಕಾಗಿ ಹಾತೊರೆಯುವೆವು. ಹೀಗಿದ್ದರೂ ನಮಗೆ ವಿವೇಕವುಂಟಾಗುವುದಿಲ್ಲವಲ್ಲಾ ! ॥೯೯॥

ಪೂರ್ವಜನ್ಮದಲ್ಲಿ ಸ್ತ್ರೀಯರ ಉನ್ನತವಾದ ಸ್ತನಗಳನ್ನು ಮರ್ದಿಸಿದುದರಿಂದಲೇ ಕುಚಗಳಂತೆಯೇ ಕಾಣಿಸಿಕೊಳ್ಳುವ ಕುಂಭಸ್ಥಳಗಳಿಂದ ಕೂಡಿದ ಈ ಆನೆಯ ಜನ್ಮವು ನಮಗೆ ಪ್ರಾಪ್ತವಾಯಿತು ಎಂದು ಆನೆಗಳು ತನ್ನ ಹಿಂದಿನ

ಉಮಾಕಾಂತಾಸಂತಾನ್ಯಪಿ ಮಮ ದುರಂತಾನ್ಯಘಕುಲಾ
ನ್ಯಪಾರಬ್ರಹ್ಮಾಂಡಪ್ರಲಯಸಮಕಾಲಾನ್ಯಪಿ ಮುಹುಃ ।
ವಿನಷ್ಟಾನ್ಯೇವಾದ್ಯ ಸ್ಮರಹರವಿಹಾರಾಕರವರೇ
ವರೇ ರೇವಾತೀರೇ ಸ್ಥಿರಮತಿ ಮಹಾಹಾರನಿಕರೇ ॥೧೦೧॥

ಶಿವ ಶಿವ ಶಿವ ಶಂಭೋ ಚಂದ್ರಮೌಳೇ ಸ್ಮರಾರೇ
ಹರ ಹರ ಹರ ಘೋರಾಪಾರಸಂಸಾರಭಾರಂ ।
ಪರಿಹರ ಪರನಾರೀಸಂಗಮಂಗಾರಭಂಗಂ
ವ್ಯತಿಕರವರರೂಪಂ ಪಾಹಿ ಪಾಹಿ ಸ್ಮರಾರೇ ॥೧೦೨॥

ಶಂಭೋ ಮಾಮಕತಾಮತಿಸ್ತವ ಸದಾ ಮಯ್ಯಸ್ತು ಕಾ ತಾವತಾ
ಹಾನಿಃ ಸ್ಯಾದನುವಾರಮೇತದಧುನಾ ಸಂಪ್ರಾರ್ಥನೀಯಂ ಮಮ ।
ಕಿಂ ಚಾದೇಯಮುಮಾಸಹಾಯ ತವ ಕಿಂ ಸರ್ವಾಮರಾಧೀಶ್ವರಃ
ದಾತಾಪೀತಿ ಪುನಃ ಪುನರ್ಮಮ ಮನಸ್ತ್ವಯ್ಯೇವ ಗೌರೀಪತೇ ॥೧೦೩॥

ಜನ್ಮದಲ್ಲಿ ಒದಗಿದ ಪಾಪವನ್ನು ಸ್ಮರಿಸಿ ದುಃಖದಿಂದ ತಮ್ಮ ಕುಂಭಸ್ಥಳಗಳ ಮೇಲೆ ಧೂಳನ್ನು ಎರಚುತ್ತಿರುವುವೋ ಎಂಬಂತೆ ತೋರುವುದು. ಆದುದರಿಂದ ನನ್ನ ಈ ಚಿತ್ತವು ಸ್ತ್ರೀಯರಿಂದ ದೂರವಾಗಿದ್ದು, ಶಂಕರನೊಡನೆಯೇ ಸದಾ ವಿಹರಿಸಲಿ. ॥೧೦೦॥

ಉಮಾರಮಣನೇ, ನಿನ್ನ ವಿಹಾರಭೂಮಿಯಾದ ಈ ರೇವಾನದಿಯ ದಡದಲ್ಲಿ ಶಾಂಭವರೊಂದಿಗೆ ವಾಸಮಾಡುವುದರಿಂದ ಅನೇಕ ಬ್ರಹ್ಮಾಂಡಗಳು ಪ್ರಲಯವಾಗುವವರೆಗೂ ಕ್ಷಯಿಸದಿರುವ ನನ್ನ ಈ ಅನಂತವಾದ ಪಾಪರಾಶಿಗಳು ಈ ದಿವಸ ನಾಶವಾಗುವುವು. ॥೧೦೧॥

ಶಿವನೇ, ಶಂಭುವೇ, ಚಂದ್ರಶೇಖರನೇ, ಕಾಮರಿಪುವೇ, ಪಾಪಹರನೇ, ಭಯಂಕರನಾದ ಈ ಸಂಸಾರವೆಂಬ ಭಾರವನ್ನು ಹೋಗಲಾಡಿಸು. ಕೆಂಪಾಗಿ ಕಾದ ಕೆಂಡದಂತೆ ಅನರ್ಥಕರವಾದ ಸ್ತ್ರೀಸಂಗವನ್ನು ದೂರಮಾಡಿಸು. ನನ್ನನ್ನು ರಕ್ಷಿಸು! ಮನ್ಮಥಾರಿಯೇ ನನ್ನನ್ನು ಕಾಪಾಡು. ॥೧೦೨॥

ಶಂಭುವೇ, ನಿನಗೆ ನನ್ನ ವಿಷಯದಲ್ಲಿ ತನ್ನವನೆಂಬ ಭಾವನೆಯುಂಟಾದ ಮಾತ್ರದಿಂದಲೇ ನನಗಾವ ತೊಂದರೆಯೂ ಇರುವುದಿಲ್ಲ. ನಾನು ನಿನ್ನಲ್ಲಿ ಅದನ್ನೇ

**ಭೂತಿಃ ಫಾಲತಲೇ ಸಿತಾತಿವಿಮಲೇ ರುದ್ರಾಕ್ಷಮಾಲಾ ಗಲೇ**
**ಜಿಹ್ವಾಯಾಂ ಶಿವನಾಮ ಚೇತಸಿ ಶಿವಧ್ಯಾನಂ ಶಿವಾಚಿಂತನಂ ।**
**ಭಕ್ತಿಶ್ಚಾವ್ಯಭಿಚಾರಿಣೀ ತ್ವಯಿ ಮಹಾದೇವೇ ನಿವಾಸಃ ಕದಾ**
**ಕಾಶ್ಯಾಂ ಶಂಕರಲಿಂಗಪೂಜನಮತಿರ್ಭೂಯಾನ್ಮಮ ಶ್ರೇಯಸೇ ॥೧೦೪॥**

**ಇತಿ ಶ್ರೀ ಶಿವರಹಸ್ಯೇ ಹರಾಖ್ಯೇ ತೃತೀಯಾಂಶೇ ಉತ್ತರಾರ್ಧೇ**
**ಅಯೋನಿಜಬಾಲಕಸ್ಯ ವಿರಕ್ತಿಪೂರ್ವಕ ಶಿವಭಕ್ತಿವರ್ಣನಂ ನಾಮ**
**ಷೋಡಶೋಽಧ್ಯಾಯಃ**

ಬಾರಿಬಾರಿಗೂ ಪ್ರಾರ್ಥಿಸುವೆನು. ದೇವತೆಗಳಿಗೂ ಒಡೆಯನಾದ ನೀನೇ ಸಕಲರಿಗೂ, ಸಕಲ ಅಭೀಷ್ಟಗಳನ್ನೂ ಕೊಡುವವನಾಗಿರುತ್ತಿರಲು, ನಿನಗೆ ನಾನು ಏನನ್ನು ತಾನೇ ಸಮರ್ಪಿಸಲಿ! ಎಲ್ಲವೂ ನಿನ್ನ ಅಧೀನವಲ್ಲಿಯೇ ಇರುವುದು. ನನ್ನ ಚಿತ್ತವು ಮಾತ್ರ ಸದಾ ನಿನ್ನಲ್ಲಿಯೇ ಲೀನವಾಗಿರಲಿ. ॥೧೦೩॥

ಶಂಕರನೇ! ನನ್ನ ಹಣೆಯಲ್ಲಿ ಸ್ವಚ್ಛವಾದ ವಿಭೂತಿಯೂ, ಕಂಠದಲ್ಲಿ ರುದ್ರಾಕ್ಷಿಮಾಲೆಯೂ, ನಾಲಿಗೆಯಲ್ಲಿ ಶಿವನಾಮವೂ, ಚಿತ್ತದಲ್ಲಿ ಶಿವಧ್ಯಾನವೂ ಮತ್ತು ದೇವಿಯಾದ ಭವಾನಿಯ ಸ್ಮರಣೆಯೂ, ಮಹಾದೇವನಾದ ನಿನ್ನಲ್ಲಿ ಅನನ್ಯವಾದ ಭಕ್ತಿಯೂ ಉಂಟಾಗುವಂತೆ ನನಗೆ ಕರುಣಿಸು. ಶಂಕರನೇ, ನಾನು ಯಾವಾಗ ಕಾಶೀಕ್ಷೇತ್ರದಲ್ಲಿ ನೆಲಸಿ ನಿನ್ನನ್ನು ಆರಾಧಿಸುವುದು? ನಿನ್ನ ಲಿಂಗವನ್ನು ಪೂಜಿಸಬೇಕೆಂಬ ಬುದ್ಧಿಯೇ ನನಗೆ ಶ್ರೇಯಸ್ಕರವಾಗಿರುವಂತೆ ತೋರುವುದು. ಆ ಬುದ್ಧಿಯನ್ನು ನನಗೆ ಸದಾ ಅನುಗ್ರಹಿಸುತ್ತಿರು. ॥೧೦೪॥

ಇಲ್ಲಿಗೆ ಶಿವರಹಸ್ಯದ ಮೂರನೆಯ ಅಂಶದ ಉತ್ತರಾರ್ಧದಲ್ಲಿ ಅಯೋನಿಜಬಾಲಕನ ವಿರಕ್ತಿಪೂರ್ವಕವಾದ ಶಿವಭಕ್ತಿಯ ವರ್ಣನೆಯೆಂಬ ಹದಿನಾರನೆಯ ಅಧ್ಯಾಯವು ಸಮಾಪ್ತವಾದುದು.

॥ ಶ್ರೀ ಶಿವಾಭ್ಯಾಂ ನಮಃ ॥